# ಛಾಂದೋಗ್ಯೋಪನ್ಯಾಸಮಂಜರಿ

ಲೇಖಕರು :
ವೇ॥ ಬ್ರ॥ ಶ್ರೀ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು



ಸಂಸ್ಥಾಪಕರು




ಅಧ್ಯಾತ್ಮಪ್ರಕಾಶ ಕಾರ್ಯಾಲಯ
ಹೊಳೆನರಸೀಪುರ - 573 211
www.adhyatmaprakasha.org
2010

## ಉಪನಿಷತ್ತುಗಳ ಅಭಿಪ್ರಾಯವನ್ನು ಸರಳವಾದ ತಿಳಿಗನ್ನಡದಲ್ಲಿ ವಿವರಿಸುವ ಮಂಜರಿಗಳು

1. **ಈಶಾವಾಸ್ಯೋಪನ್ಯಾಸಮಂಜರಿ:** ಶ್ರೀಶ್ರೀಗಳವರು 1938ನೆಯ ಸೆಪ್ಟೆಂಬರ್‌ನಿಂದ 1939ನೆಯ ಆಗಸ್ಟ್‌ವರೆಗೆ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ 'ಉಪನಿಷದ್ವಾಕ್ಯ'ಗಳೆಂಬ ಹೆಸರಿನಲ್ಲಿ ಬರೆದಿರುವ ಲೇಖನಗಳನ್ನು ಪರಿಷ್ಕರಿಸಿ ಗ್ರಂಥರೂಪವಾದ ಮಂಜರಿಯಾಗಿ ಹೊರತಂದಿದೆ. ಮೂಲಮಂತ್ರಗಳನ್ನು ಕನ್ನಡದಲ್ಲಿ ಮುದ್ರಿಸಿ ತತ್ತ್ವವನ್ನು ಭಾಷ್ಯಾನುಸಾರವಾಗಿ ಪ್ರತಿಪಾದಿಸಿದೆ. ಈ ಗ್ರಂಥವನ್ನು ಓದಿ ಆಚಾರ್ಯಮುಖೇನ ಮೂಲಭಾಷ್ಯವನ್ನು ಅಧ್ಯಯನ ಮಾಡಿದರೆ ಹೆಚ್ಚು ಪ್ರಯೋಜನವನ್ನು ಪಡೆಯಬಹುದು.
**(ಎರಡನೆಯ ಮುದ್ರಣ: 2001, ಪು. ಡೆಮ್ಮಿ 36)**

2. **ಕೇನೋಪನ್ಯಾಸಮಂಜರಿ:** ಉಪನಿಷತ್ತಿನ ಸಾರವನ್ನು ಸುಲಭವಾಗಿ ತಿಳಿಯ ಬೇಕೆನ್ನುವವರಿಗೆ ಮೊದಲು ಮಂಜರಿಯನ್ನು ಓದಿ ಭಾಷ್ಯಾಧ್ಯಯನ ಮಾಡಿದರೆ ಹೆಚ್ಚಿನ ಪ್ರಯೋಜನವಾಗುವುದು. ಕನ್ನಡದಲ್ಲಿ ಮೂಲಮಂತ್ರಗಳನ್ನು ಕೊಟ್ಟು ಭಾಷ್ಯಾನುಸಾರವಾಗಿ ತಾತ್ಪರ್ಯವನ್ನು ರೂಪಿಸಿದೆ. **(ನಾಲ್ಕನೆಯ ಮುದ್ರಣ: 2005, ಪು. ಡೆಮ್ಮಿ 54)**

3. **ಕಾಠಕೋಪನ್ಯಾಸಮಂಜರಿ:** ಕಾಠಕೋಪನಿಷತ್ತಿನ ವಿವರಣೆಯನ್ನು ಭಾಷ್ಯಾನುಸಾರವಾಗಿ ತಿಳಿಗನ್ನಡದಲ್ಲಿ ಉಪನ್ಯಾಸರೂಪವಾಗಿ ವಿವರಿಸಿದೆ. ಯಮನು ನಚಿಕೇತನಿಗೆ ಉಪದೇಶಿಸಿದ ಆತ್ಮಸ್ವರೂಪ, ಅಧ್ಯಾತ್ಮಯೋಗ – ಇವುಗಳ ಮರ್ಮವನ್ನು ಸುಲಭ ರೀತಿಯಲ್ಲಿ ವರ್ಣಿಸಿದೆ.
**(ಮೂರನೆಯ ಮುದ್ರಣ: 2002, ಪು. ಡೆಮ್ಮಿ 280)**

4. **ಮುಂಡಕೋಪನ್ಯಾಸಮಂಜರಿ:** ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರು ಉಪನಿಷತ್ ಭಾಷ್ಯಗಳನ್ನೆಲ್ಲ ಕನ್ನಡಿಸಿ ಪ್ರಕಟಿಸಿದ ಮೇಲೂ ತೃಪ್ತರಾಗದೆ ಜಿಜ್ಞಾಸುಗಳಿಗೆ ಶಾಸ್ತ್ರಾರ್ಥ ವಾದವಿವಾದಗಳು, ಖಂಡನಮಂಡನಗಳ ಗಡಿಬಿಡಿಯಿಲ್ಲದೆ ತಿಳಿಯಾದ ಭಾಷೆಯಲ್ಲಿ ಉಪನಿಷತ್ತಗುಳ ಸಾರವನ್ನು ತಿಳಿಯಿಸಬೇಕೆಂದು ಮಂಜರಿ ಎಂಬ ಹೆಸರಿನ ವಿವರಣರೂಪವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಜಿಜ್ಞಾಸುಗಳು ಶ್ರೀ ಶಂಕರಭಾಷ್ಯವನ್ನು ಓದುವ ಮೊದಲು ಅಥವಾ ಅಧ್ಯಯನ ಮಾಡಿದ ಮೇಲೂ ಉಪನಿಷತ್ತಿನ ತಾತ್ಪರ್ಯವನ್ನು ಗ್ರಹಿಸಲು ಈ ಗ್ರಂಥ ಬಹಳ ಸಹಾಯಕವಾಗುತ್ತದೆ. **(ಮೂರನೆಯ ಮುದ್ರಣ: 1998, ಪು. ಡೆಮ್ಮಿ 92)**

5. **ಪ್ರಶ್ನೋಪನ್ಯಾಸಮಂಜರಿ:** ಮುಂಡಕೋಪನಿಷತ್ತಿನ ವಿವರವೆಂದು ಈ ಉಪನಿಷತ್ತನ್ನು ಆಚಾರ್ಯರು ವರ್ಣಿಸಿದ್ದಾರೆ. ಇದರಲ್ಲಿ ಗುರುಶಿಷ್ಯಸಂವಾದರೂಪದಲ್ಲಿ ಪ್ರಾಣನಸ್ವರೂಪ, ಅವತಾರ – ಉತ್ಪತ್ತ್ಯಾದಿಗಳು, ಓಂಕಾರೋಪಾಸನೆ, ಷೋಡಶಕಲಪುರುಷನ ಜ್ಞಾನ – ಇವುಗಳನ್ನು ಬಹಳ ಚೆನ್ನಾಗಿ ವರ್ಣಿಸಿದೆ. ಶ್ರೀಗಳವರು ತಮ್ಮ ಉಪನ್ಯಾಸ ವಿವರಣೆಯಲ್ಲಿ ಗ್ರಂಥಿಗಳನ್ನೆಲ್ಲ ಬಿಡಿಸಿ ತಿಳಿಸಿದ್ದಾರೆ. **(ಎರಡನೆಯ ಮುದ್ರಣ: 1997, ಪು. ಡೆಮ್ಮಿ 97)**

6. **ಮಾಂಡೂಕ್ಯೋಪನ್ಯಾಸಮಂಜರಿ:** ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು 1955ನೇ ಇಸವಿಯಲ್ಲಿ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಸಂದೇಶರೂಪವಾಗಿ ಬರೆದಿದ್ದ ಹನ್ನೆರಡು ಲೇಖನಗಳ ಸಂಗ್ರಹವನ್ನು ಪರಿಷ್ಕರಿಸಿ ಮಂಜರಿಯಾಗಿ ಹೊರತಂದಿದೆ. ಇದರಲ್ಲಿ ಅಡಕವಾಗಿರುವ ಅವಸ್ಥಾತ್ರಯ ಪ್ರಕ್ರಿಯೆಯ ರಹಸ್ಯವು ಸಾಮಾನ್ಯ ಜಿಜ್ಞಾಸುಗಳಿಗೆ ಸರಳವಾಗಿಯೂ, ಶಾಸ್ತ್ರೀಯವಾಗಿಯೂ ಅನುಭವಗಮ್ಯವಾಗಿಯೂ ಪ್ರತಿಪಾದಿಸಿದೆ. ಬಹಳ ಅತ್ಯುತ್ತಮವಾದ ವಿಷಯಗಳನ್ನು ಹೊಂದಿದೆ. **(ಮೂರನೆಯ ಮುದ್ರಣ: 2005, ಪು. ಡೆಮ್ಮಿ 106)**

**ರಕ್ಷಾಕವಚದ 3ನೇ ಪುಟದಲ್ಲಿ ಮುಂದುವರಿದಿದೆ.**

ಅಧ್ಯಾತ್ಮಗ್ರಂಥಾವಳಿ

# ಛಾಂದೋಗ್ಯೋಪನ್ಯಾಸಮಂಜರಿ

(ಛಾಂದೋಗ್ಯೋಪನಿಷತ್ತಿನ
ಶಂಕರಭಾಷ್ಯಾನುಸಾರವಾದ ಸಾರಸಂಗ್ರಹ)

ಬರೆದವರು :
ಅಧ್ಯಾತ್ಮವಿದ್ಯಾಪ್ರವೀಣ, ವೇದವಿದ್ಯಾಭೂಷಣ
ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ

ಕ್ರಮಾಂಕ : 210

ಪ್ರಕಾಶಕರು :
ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ- 573211
www.adhyatmaprakasha.Org
2010

**CHANDOGYOPANYASA MANJARI -**
Written by **Vidwan H.S. LAKSHMINARASIHMA MURTHY**
Published by Adhyatma Prakasha Karyalaya (Public CharitableTrust),
Holenarasipur - 573211(INDIA)
Phone : 08175-273820 website : www adhyatmaprakasha.org.

| | | |
|---|---|---|
| ಮೊದಲನೆಯ ಮುದ್ರಣ | 1999 | (1000 ಪ್ರತಿಗಳು) |
| Ist Edition | 1999 | (1000 copies) |
| ಎರಡನೆಯ ಮುದ್ರಣ | 2010 | (1000 ಪ್ರತಿಗಳು) |
| IInd Edition | 2010 | (1000 copies) |

ಪುಟಗಳು : 8 + 340

**ಬೆಲೆ : ರೂ. 75/-**



**ಅಕ್ಷರ ಜೋಡಣೆ :**
ಪ್ರಶಾಂತ್ ಎಂಟರ್‌ಪ್ರೈಸಸ್
ನಂ. 45, 3ನೇ ಮುಖ್ಯರಸ್ತೆ ಟಿ.ಆರ್.ನಗರ ಅಂಚೆ
ನಾಗಸಂದ್ರ, ಬೆಂಗಳೂರು - 28
ದೂರವಾಣಿ : 26761529

**ಮುದ್ರಣಸ್ಥಾನ :**
ಶ್ರೀರಾಮ ಪ್ರಿಂಟರ್ಸ್
ನಂ. 25, 15ನೇ ಅಡ್ಡರಸ್ತೆ, 5ನೇ ಮುಖ್ಯರಸ್ತೆ
ಶ್ರೀನಿಧಿ ಬಡಾವಣೆ, ಬೆಂಗಳೂರು - 560 062
ದೂ. 98453 46197

# ಪೀಠಿಕೆ

ಸುಪ್ರಸಿದ್ಧವಾದ ದಶೋಪನಿಷತ್ತುಗಳಲ್ಲಿ (1) ಛಾಂದೋಗ್ಯ (2) ಬೃಹದಾರಣ್ಯಕಗಳು ಉಳಿದ ಉಪನಿಷತ್ತುಗಳಿಗಿಂತ ದೊಡ್ಡವು. ಶ್ರೀಶಂಕರಭಗವತ್ಪಾದರು ಇವೆರಡಕ್ಕೂ ವಿಸ್ತಾರವಾಗಿ ತಮ್ಮ ಭಾಷ್ಯವನ್ನು ಬರೆದಿದ್ದಾರೆ. ಅದರಲ್ಲಿ ಸಂದರ್ಭಾನುಗುಣವಾಗಿ ಕೆಲವು ಪ್ರಾಚೀನ ವೇದಾಂತಿಗಳ ಹಾಗೂ ಕೆಲವು ದರ್ಶನಕಾರರ ಮತಗಳನ್ನು ಖಂಡಿಸಿ ವೇದಾಂತಸಿದ್ಧಾಂತವನ್ನು ಸುದೃಢವಾಗಿ ಸ್ಥಾಪಿಸಿದ್ದಾರೆ. ಆದರೆ ಈ ಭಾಷ್ಯಗಳನ್ನು ಗುರುಮುಖದಿಂದ ಅಧ್ಯಯನ ಮಾಡಿಯೇ ವೇದಾಂತಸಿದ್ಧಾಂತದ ಪರಾಕಾಷ್ಠೆಯನ್ನು ಅರಿತುಕೊಳ್ಳಬೇಕಾಗಿದೆ. ಈ ಪ್ರಯತ್ನವು ಜಿಜ್ಞಾಸುಗಳೆಲ್ಲರಿಗೂ ಸಾಧ್ಯವಾಗುವಂತೆ ಇಲ್ಲವಾದ್ದರಿಂದ ಮಂಜರಿಗಳೆಂಬ ಅಡಕವಾದ ವಿವರಣಗ್ರಂಥಗಳು ಹೊರಬಂದವು. ಇವು ಜಿಜ್ಞಾಸುಗಳಿಗೆ ಉಪಕಾರಕವೂ ಸಹಾಯಕವೂ ಆದವು. ಆದರೆ ಈ ಮಂಜರಿಗಳ ಮಾಲೆಯು ಇನ್ನೂ ಕೆಲವು ಪ್ರಕಟನೆಗಳಿಂದ ಪೂರ್ಣವಾಗಬೇಕಾಗಿತ್ತು. ಆದ್ದರಿಂದ ಈಗ ಬೃಹದಾರಣ್ಯಕ-ಛಾಂದೋಗ್ಯ ಉಪನಿಷತ್ತುಗಳ ಮಂಜರಿಗಳನ್ನೂ ಪ್ರಕಟಿಸಿ ಮಹಾಜನರಿಗೆ ಸಮರ್ಪಿಸಲಾಗಿದೆ.

'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯ ಸಂಪಾದಕತ್ವವನ್ನು 1975ನೆಯ ಸೆಪ್ಟೆಂಬರ್‌ನಿಂದ ವಹಿಸಿಕೊಂಡ ನಾನು ಪತ್ರಿಕೆಯ 'ಅಧ್ಯಾತ್ಮಸಂದೇಶ' ಲೇಖನಗಳಿಗೆ ಆಧಾರವಾಗಿ ಮೊದಲು ಬೃಹದಾರಣ್ಯಕೋಪನಿಷತ್ತನ್ನೂ ಅನಂತರ 1981ನೇ ಸೆಪ್ಟೆಂಬರ್‌ನಿಂದ ಛಾಂದೋಗ್ಯ ಉಪನಿಷತ್ತನ್ನೂ ಆಧಾರವಾಗಿಟ್ಟುಕೊಂಡು 1987ನೇ ಆಗಸ್ಟ್ ಪೂರ ಬರೆದಿರುವ ಲೇಖನಗಳನ್ನು ಒಂದುಗೂಡಿಸಿ ಕೆಲವು ಸೂಕ್ತಮಾರ್ಪಾಡುಗಳನ್ನು ಮಾಡಿ ಈಗ (1) ಛಾಂದೋಗ್ಯೋಪನ್ಯಾಸ ಮಂಜರಿ (2) ಬೃಹದಾರಣ್ಯಕೋಪನ್ಯಾಸಮಂಜರಿ ಎಂಬ ಎರಡು ಗ್ರಂಥಗಳನ್ನು ಸಿದ್ಧಗೊಳಿಸಿ ಅಧ್ಯಾತ್ಮಜಿಜ್ಞಾಸುಗಳಾದ ವಾಚಕರಿಗೆ ಸಮರ್ಪಿಸಿರುತ್ತೇನೆ. ಈ ಸೇವೆಯನ್ನು ಸಲ್ಲಿಸಲು ನನಗೆ ಅಂತಃಪ್ರೇರಣೆಯನ್ನೂ ಬರಹಕೌಶಲ್ಯವನ್ನೂ ದಯಪಾಲಿಸಿ ಅನುಗ್ರಹಿಸಿರುವ ನನ್ನ ಅಂತರಾತ್ಮಸ್ವರೂಪರಾದ ಸದ್ಗುರು ಬಚ್ಚೀಭೂತ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾ ಸ್ವಾಮಿಗಳವರ ದಿವ್ಯಚರಣಾರವಿಂದಗಳಿಗೆ ನಮಿಸುತ್ತಾ ಈ ಪೀಠಿಕೆಯನ್ನು ಪೂರ್ಣಗೊಳಿಸುತ್ತೇನೆ.

ಇತಿ – ಸಜ್ಜನ ವಿಧೇಯ,
ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ
ಪಂಡಿತ

ಅ.ಪ್ರ.ಕಾ. ಹೊಳೆನರಸೀಪುರ
ತಾ. 9–8–1999

# ಮೊದಲನೆಯ ಮುದ್ರಣಕ್ಕೆ ಮುನ್ನುಡಿ

ಅಧ್ಯಾತ್ಮಪ್ರಕಾಶಕಾರ್ಯಾಲಯದ ಸಂಸ್ಥಾಪಕರಾದ ಬ್ರಹ್ಮೀಭೂತ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀ ಮಹಾಸ್ವಾಮಿಗಳು ಶ್ರೀಶಂಕರಭಗವತ್ಪಾದರ ಪ್ರಸ್ಥಾನತ್ರಯ ಭಾಷ್ಯಗಳನ್ನೆಲ್ಲ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ ಮಹಾಮಹಿಮರು. ಅವರಿಗೆ ಶಂಕರ ವೇದಾಂತದ ಪ್ರಚಾರದಲ್ಲಿ ಇದ್ದ ಆಸಕ್ತಿಯು ಅಪರಿಮಿತವಾದುದು. ಆದ್ದರಿಂದಲೇ ಅವರು ತಮ್ಮ ಜೀವಿತಕಾಲದಲ್ಲಿ ಶಂಕರ ವೇದಾಂತದ ಪ್ರಚಾರಕ್ಕಾಗಿ ನೂರಾರು ಕನ್ನಡ ಗ್ರಂಥಗಳನ್ನು ಬರೆದು ಪ್ರಕಟಿಸಿ ಶಂಕರ ವೇದಾಂತ ಜಿಜ್ಞಾಸುಗಳಿಗೆ ಪರಮೋಪಕಾರವನ್ನು ಮಾಡಿದ್ದಾರೆ.

ಪೂಜ್ಯಶ್ರೀಗಳವರು ಶ್ರೀಶಂಕರಭಗವತ್ಪಾದರ ಭಾಷ್ಯಗ್ರಂಥಗಳ ಕನ್ನಡ ಅನುವಾದಗಳನ್ನು ಪ್ರಕಟಿಸಿದ ಮೇಲೂ ಜಿಜ್ಞಾಸುಗಳ ಉಪಕಾರಕ್ಕಾಗಿ ಉಪನಿಷತ್ತುಗಳಿಗೆ ಚರ್ಚೆಗಳ ಗಡಿಬಿಡಿಯಿಲ್ಲದ ಸರಳವಾದ ಹಾಗೂ ಭಾಷ್ಯಾನುಗುಣವಾದ ವಿವರಣೆಗಳನ್ನು ಬರೆದು "ಮಂಜರಿಗಳು" ಎಂಬ ಹೆಸರಿನಿಂದ ಪ್ರಕಟಿಸಿದರು. ಈ ಮಾಲೆಯಲ್ಲಿ ದಶೋಪನಿಷತ್ತುಗಳ ಪೈಕಿ (1) ಬೃಹದಾರಣ್ಯಕ (2) ಛಾಂದೋಗ್ಯ (3) ಐತರೇಯ (4) ತೈತ್ತಿರೀಯ – ಈ ಉಪನಿಷತ್ತುಗಳನ್ನು ಬಿಟ್ಟು ಉಳಿದೆಲ್ಲ ಉಪನಿಷತ್ತುಗಳಿಗೂ 'ಮಂಜರಿ'ಗಳನ್ನು ಬರೆದು ಪ್ರಕಟಿಸಿ ಜಿಜ್ಞಾಸುಗಳಿಗೆ ಮಾರ್ಗದರ್ಶನವನ್ನೂ ಮಾಡಿರುತ್ತಾರೆ.

ಶ್ರೀಶ್ರೀಗಳವರು ಬ್ರಹ್ಮೀಭೂತರಾದ ಮೇಲೆ ಅವರ ಬರವಣಿಗೆ ಹಾಗೂ ಪಾಠ ಪ್ರವಚನೋಪನ್ಯಾಸಗಳು ಹಾಗೂ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯ ಪ್ರಕಟನೆಗಳ ಜವಾಬ್ದಾರಿಯನ್ನೂ ವಹಿಸಿಕೊಂಡ ಶ್ರೀಶ್ರೀಗಳವರ ಸಾಕ್ಷಾತ್ ಶಿಷ್ಯರಾದ ಅಧ್ಯಾತ್ಮವಿದ್ಯಾ ಪ್ರವೀಣ ವೇ|| ಬ್ರ|| ಶ್ರೀ || ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳವರು ಅಧ್ಯಾತ್ಮಗ್ರಂಥಗಳ ಪುನರ್ಮುದ್ರಣಾದಿಗಳನ್ನೂ ಕೆಲವು ಜನೋಪಯೋಗಿ ಅಧ್ಯಾತ್ಮ ಗ್ರಂಥಗಳನ್ನು ಬರೆದು ಕಾರ್ಯಾಲಯದ ಮೂಲಕ ಪ್ರಕಟಿಸಿದ್ದಾರೆ. ಮಹಾಜನರ ಸಲಹೆಯಂತೆ ಈಗ 'ಮಂಜರಿ'ಗಳ ಪಂಕ್ತಿಯಲ್ಲಿ ಕೊರತೆಯಾಗಿದ್ದ (1) ಬೃಹದಾರಣ್ಯಕೋಪನ್ಯಾಸಮಂಜರಿ (2) ಛಾಂದೋಗ್ಯೋಪನ್ಯಾಸ ಮಂಜರಿ–ಇವುಗಳನ್ನು ಬರೆದು ಸಿದ್ಧಗೊಳಿಸಿ ಪ್ರಕಟಿಸಿರುತ್ತಾರೆ. ಈ ಎರಡು ಗ್ರಂಥಗಳೂ ಶ್ರೀಶ್ರೀಗಳವರ 25ನೆಯ ರಜತಾರಾಧನೋತ್ಸವದ ಸಂದರ್ಭದಲ್ಲಿ ಬಿಡುಗಡೆಯಾಗಿ ಮಹಾಜನರಿಗೆ ಸಮರ್ಪಿತವಾಗುತ್ತಿವೆ. ಈ ಕಾರ್ಯದಲ್ಲಿ ಕಾರ್ಯಾಲಯದ ಟ್ರಸ್ಟ್ ಕಮಿಟಿ ಅಧ್ಯಕ್ಷರಾದ ಶ್ರೀ ಹೆಚ್. ವೆಂಕಟನರಸಪ್ಪನವರು ವಿಶೇಷವಾಗಿ ಸೇವೆಸಲ್ಲಿಸಿದ್ದಾರೆ. ಅಚ್ಚಿನ ಕರಡುಗಳನ್ನು ತಿದ್ದಿ ಮುದ್ರಣಕ್ಕೆ ಸಜ್ಜುಗೊಳಿಸುವುದರಲ್ಲಿ ಬೆಂಗಳೂರಿನಲ್ಲಿರುವ (1) ಶ್ರೀ ಹೆಚ್.ಎನ್. ರಂಗಸ್ವಾಮಿಗಳು (2) ಶ್ರೀ ಬಿ.ಆರ್. ಸತ್ಯನಾರಾಯಣ (3) ಶ್ರೀ ಎಸ್.ಆರ್. ರಾಮಚಂದ್ರ ಅಯ್ಯರ್ ಮತ್ತು (4) ಶ್ರೀ ಸಿ.ಎ. ಸಂಜೀವಮೂರ್ತಿ ಇವರುಗಳು ವಿಶೇಷವಾಗಿ ಶ್ರಮಿಸಿರುತ್ತಾರೆ. ಇವರೆಲ್ಲರಿಗೂ ನಮ್ಮ ಕೃತಜ್ಞತೆಗಳು. ಮಹಾಜನರು ಈ ಗ್ರಂಥಗಳನ್ನು ಓದಿ ಸದುಪಯೋಗಪಡಿಸಿಕೊಳ್ಳಬೇಕಾಗಿ ಕೋರಿದೆ.

ಅ|| ಪ್ರ|| ಕಾರ್ಯಾಲಯ — ಇತಿ ತಮ್ಮ ವಿಶ್ವಾಸಿ

ಹೊಳೆನರಸೀಪುರ — **ಅರಕಲಗೂಡು ತಾಂಡವೇಶ್ವರ**

ತಾ|| 9–8–1999 — ಅಧ್ಯಕ್ಷರು

# ಎರಡನೆಯ ಮುದ್ರಣಕ್ಕೆ ಪ್ರಕಾಶಕರ ಬಿನ್ನಹ

1999ರಲ್ಲಿ ಮೊದಲನೆಯ ಬಾರಿಗೆ ಪ್ರಕಟಿತಗೊಂಡಿದ್ದ ಪ್ರತಿಗಳೆಲ್ಲ ಮಾರಾಟವಾಗಿ ಬಿಟ್ಟಿದ್ದರಿಂದ , ತಪ್ಪುಗಳನ್ನೆಲ್ಲಾ ತಿದ್ದಿ, ಮುದ್ರಣ ದೋಷಗಳನ್ನು ಸರಿಪಡಿಸಿ ಗ್ರಂಥ ಶರೀರದಲ್ಲಿ ಯಾವ ಬದಲಾವಣೆಯು ಇಲ್ಲದೆ ಪುಸ್ತಕವನ್ನು ಈಗ ಎರಡನಯ ಬಾರಿಗೆ ಹೊರತರಲಾಗಿದೆ.

ಶಂಕರಭಗವತ್ಪಾದರು ಬರೆದಿರುವ ದಶೋಪನಿಷತ್ ಭಾಷ್ಯಗಳಿಗೂ ಮತ್ತು ಶ್ವೇತಾಶ್ವತರ ಉಪನಿಷತ್ತಿಗೂ, ಒಟ್ಟು 11 ಉಪನಿಷತ್ತುಗಳಿಗೆ ಮಂಜರಿಗಳು ಕಾರ್ಯಾಲಯದಲ್ಲಿ ದೊರಕುತ್ತವೆ. ಈ ಮಂಜರಿಗಳು ಉಪನಿಷತ್ತಿನ ಒಟ್ಟರ್ಥವನ್ನು ತಿಳಿಯುವುದಕ್ಕೆ ತುಂಬಾ ಸಹಾಯಕವಾಗಿವೆ. ಮೊದಲು ಈ ಗ್ರಂಥಗಳನ್ನು ಓದಿ ತರುವಾಯ ಉಪನಿಷತ್ತಿನ ಮೂಲ ಭಾಷ್ಯವನ್ನು ಅಧ್ಯಯನ ಮಾಡಿದರೆ ಅನೇಕ ವಿಷಯಗಳು ಸುಲಭವಾಗಿ ತಿಳಿಯಲು ಅನುಕೂಲವಾಗುವದು. ವಾಚಕರು ಎಂದಿನಂತೆ ಈ ಪುಸ್ತಕವನ್ನು ಬರಮಾಡಿಕೊಂಡು ಕಾರ್ಯಾಲಯದ ಅಧ್ಯಾತ್ಮಚಿಂತನೆಯ ಜಿಜ್ಞಾಸುಗಳಿಗೆ ಪುಸ್ತಕಗಳು ಸುಲಭ ಬೆಲೆಯಲ್ಲಿ ದೊರಕುವಂತೆ ಗ್ರಂಥಪ್ರಕಟನೆಗೆ ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

ವಿಕೃತಿ ಸಂವತ್ಸರ

ವೈಶಾಖ ಶುದ್ಧ ದ್ವಾದಶಿ, ಭಾನುವಾರ — ಪ್ರಕಾಶಕರು

ತಾ. 23–4–2010

# ವಿಷಯಾನುಕ್ರಮಣಿಕೆ

## ಮೊದಲನೆಯ ಅಧ್ಯಾಯ

## (ಓಂಕಾರ–ಸ್ತೋಭಗಳ ಉಪಾಸನೆ)



## ಎರಡನೆಯ ಅಧ್ಯಾಯ

## (ಸಾಮ– ಪ್ರಣವೋಪಾಸನೆಗಳು)



## ಮೂರನೆಯ ಅಧ್ಯಾಯ

## (ಕರ್ಮ ಫಲವಾದ ಆದಿತ್ಯೋಪಾಸನೆ–ಶಾಂಡಿಲ್ಯವಿದ್ಯೆ)

## ಏಳನೆಯ ಅಧ್ಯಾಯ

## ನಾರದ –ಸನತ್ಕುಮಾರ ಸಂವಾದ



## ಎಂಟನೆಯ ಅಧ್ಯಾಯ

## (ದಹರವಿದ್ಯೆ–ಅವಸ್ಥಾತ್ರಯ ನಿರೂಪಣ)

॥ಓಂ॥

# ಛಾಂದೋಗ್ಯೋಪನ್ಯಾಸಮಂಜರಿ

## ಮೊಲನೆಯ ಅಧ್ಯಾಯ

## (ಓಂಕಾರ–ಸ್ತೋಭಗಳ ಉಪಾಸನೆ)

## ಓಂಕಾರೋಪಾಸನೆ

**ಓಮ್॥ ಓಮಿತ್ಯೇತದಕ್ಷರಮುದ್ಗೀಥಮುಪಾಸೀತ । ಓಮಿತಿ ಹ್ಯುದ್ಗಾಯತಿ ತಸ್ಯೋಪವ್ಯಾಖ್ಯಾನಮ್ ॥1॥** 1–1–1.

ಭಾವಾರ್ಥಃ– ಓಂ ಎಂಬೀ ಅಕ್ಷರವಾದ ಉದ್ಗೀಥವನ್ನು ಉಪಾಸನೆಮಾಡಬೇಕು. ಏಕೆಂದರೆ ಓಂ ಎಂದೇ ಉದ್ಗಾನಮಾಡುತ್ತಾನೆ. ಅದರ ವಿವರಣೆಯು (ಈಗ ಆರಂಭವಾಗಿದೆ).

(ಪರಮಾತ್ಮನನ್ನು ಉಪಾಸನೆಮಾಡುವಾಗ ಓಂಕಾರದ ಮೂಲಕವೇ ಮಾಡಬೇಕು. ಏಕೆಂದರೆ ಓಂ ಎಂಬುದು ಉದ್ಗೀಥವು–ಎಂದರೆ ಶ್ರೇಷ್ಠವು. ಅದು ಭಗವಂತನಿಗೆ ಪ್ರಿಯವಾದ ಹೆಸರು. ಅದರ ಉಚ್ಚಾರಣಮಾತ್ರದಿಂದ ಆತನು ಪ್ರಸನ್ನನಾಗುವನು–ಎಂದಭಿಪ್ರಾಯ.)

## 1. ಪ್ರಣವಚಿಂತನ ವಿಧಿ

ಛಾಂದೋಗ್ಯೋಪನಿಷತ್ತಿನ ಮಂತ್ರಗಳನ್ನು ವಿವರಿಸಲು ಪ್ರಾರಂಭಿಸಿದೆ. ಈ ಉಪನಿಷತ್ತಿಗೂ ಬ್ರಹ್ಮೀಭೂತ ಪೂಜ್ಯ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಮಹಾಸ್ವಾಮಿಗಳವರು ರಚಿಸಿರುವ ಕನ್ನಡ ಶಾಂಕರಭಾಷ್ಯಾನುವಾದವು ಟಿಪ್ಪಣಿಗಳೊಡನೆ ಸಿದ್ಧವಾಗಿದೆ. ಆದ್ದರಿಂದ ಪೂಜ್ಯ ಶ್ರೀಗಳವರ ವಿವರಣಾನುಸಾರವಾಗಿ ಹಾಗೂ ಕೆಲವು ಸಂದರ್ಭಗಳಲ್ಲಿ ಅತ್ಯಗತ್ಯವೆನಿಸಿದ ಪ್ರಾಸಂಗಿಕವಿವರಣೆಗಳೊಡನೆ ಉಪನಿಷತ್ತಿನ ಸಾರವನ್ನು ಬರೆಯಲುಪಕ್ರಮಿಸುವೆನು.

ಛಾಂದೋಗ್ಯೋಪನಿಷತ್ತು ಸಾಮವೇದಕ್ಕೆ ಸೇರಿದ್ದು ಎಂಟು ಅಧ್ಯಾಯಗಳುಳ್ಳದ್ದಾಗಿದೆ. ಸುಪ್ರಸಿದ್ಧಮಹಾವಾಕ್ಯವೆನಿಸಿರುವ 'ತತ್ತ್ವಮಸಿ'ಯು ಇದೇ ಉಪನಿಷತ್ತಿಗೆ ಸೇರಿದ್ದಾಗಿದೆ. ಶ್ರೀಶಂಕರಭಗವತ್ಪೂಜ್ಯಪಾದಾಚಾರ್ಯರು ಈ ಉಪನಿಷತ್ತಿನ ಎಂಟು ಅಧ್ಯಾಯಗಳಿಗೂ ತಮ್ಮ ಭಾಷ್ಯವನ್ನು ರಚಿಸಿದ್ದಾರೆ. ಮತ್ತು ಬಾದರಾಯಣಸೂತ್ರಗಳಿಗೆ ಭಾಷ್ಯವನ್ನು ರಚಿಸುವಾಗ ಹೆಚ್ಚಿನ ವಿಷಯವಾಕ್ಯಗಳನ್ನು ಛಾಂದೋಗ್ಯೋಪನಿಷತ್ತಿನಿಂದಲೇ ಆರಿಸಿರುತ್ತಾರೆ. ಆದ್ದರಿಂದ ಬ್ರಹ್ಮಸೂತ್ರಭಾಷ್ಯವನ್ನು

ಅಧ್ಯಯನಮಾಡುವವರಿಗೆ ಈ ಉಪನಿಷತ್ತಿನ ಪೂರ್ಣಪರಿಚಯವು ತೀರ ಅಗತ್ಯವಾಗಿದೆ. ಹೀಗಿದ್ದರೂ ಈಗಿನ ಕೆಲವು ಪಾಠಶಾಲೆಗಳ ಪಠ್ಯಕ್ರಮಗಳಲ್ಲಿ ಈ ಉಪನಿಷತ್ತಿನ ಮೊದಲನೆಯ ಐದು ಅಧ್ಯಾಯಗಳನ್ನು ಕೈಬಿಟ್ಟು ಆರರಿಂದ ಮಾತ್ರ ಅಭ್ಯಾಸಕ್ಕೆ ಗೊತ್ತುಮಾಡಿದ್ದಾರೆ. ಅವರ ಉದ್ದೇಶವು ಈ ಉಪನಿಷತ್ತಿನ ಪ್ರಾರಂಭದ ಐದು ಅಧ್ಯಾಯಗಳು ಕೇವಲ ಉಪಾಸನಾಭಾಗವಾದ್ದರಿಂದ ಬೇಕಿಲ್ಲವೆಂದಿರಬಹುದು. ಆದರೆ ಈ ಅಭಿಪ್ರಾಯವು ಸರಿಯಲ್ಲ. ಜ್ಞಾನಕಾಂಡದಲ್ಲಿಯೂ ಕೆಲವು ಉಪಾಸನೆಗಳನ್ನು ಚಿತ್ತಶುದ್ಧಿಗಾಗಿ ವಿಧಿಸಲಾಗಿದೆ. ಆಚಾರ್ಯರು ಇಂಥ ಸಂದರ್ಭಗಳಲ್ಲಿ ಬ್ರಹ್ಮವಿಜ್ಞಾನವಾಗುವದಕ್ಕೆ ಮುಂಚೆ ಈ ಉಪಾಸನೆಗಳನ್ನು ನಿಯಮದಿಂದ ಮಾಡಬೇಕೆಂದೂ ತಿಳಿಸಿದ್ದಾರೆ. ಆದ್ದರಿಂದ ಉಪಾಸನಾಭಾಗವೆಂತ ತಿರಸ್ಕರಿಸದೆ ಇಡಿಯ ಉಪನಿಷತ್ತನ್ನೇ ಶಾಂಕರಭಾಷ್ಯಾನುಗುಣವಾಗಿ ಜಿಜ್ಞಾಸುಗಳು ಅಧ್ಯಯನಮಾಡಬೇಕಾಗಿದೆ. ಈ ದಿಸೆಯಲ್ಲಿ ಕೆಲವು ಮುಖ್ಯ ಮಂತ್ರಗಳ ವಿವರಣೆಯ ಮೂಲಕ ಕ್ರಮವಾಗಿ ಈ ಉಪನಿಷತ್ತಿನ ಪರಿಚಯವನ್ನು ವಾಚಕರಿಗೆ ಅಲ್ಪರೀತಿಯಿಂದ ಮಾಡಿಕೊಡಲಾಗುವದು. ಹೆಚ್ಚಿನ ವಿಷಯಗಳಿಗೆ ಪೂರ್ಣ ಉಪನಿಷತ್ತನ್ನೇ ಸಾಧಕರು ಅಭ್ಯಾಸಮಾಡಬೇಕು.

ವೇದಗಳಲ್ಲಿ ಸಾಮವೇದವು ಗಾನರೂಪವಾದದ್ದು. ಇಂಥ ಗಾನದಲ್ಲಿ ಉದ್ಗೀಥವೆಂಬ ಒಂದು ವಿಭಾಗವಿರುವದು. ಇದು ಸಾಮವೇದದ ತಿರುಳೆಂದು ಹೊಗಳಲ್ಪಟ್ಟಿದೆ. ಯಜ್ಞಗಳಲ್ಲಿ ಸಾಮಗಾನಮಾಡುವವನನ್ನು 'ಉದ್ಗಾತೃ'ವೆಂದೇ ಹೆಸರಿಸಲಾಗಿದೆ. ಈ ಉದ್ಗಾತೃವು ಗಾನಮಾಡುವ ಪ್ರಶಸ್ತವಾದ ಭಾಗಕ್ಕೆ ಉದ್ಗೀಥವೆನ್ನುವರು. ಈ ಉಪನಿಷತ್ತಿನಲ್ಲಿ ಮುಂದೆ ಬ್ರಹ್ಮಜ್ಞಾನವನ್ನು ವಿವರಿಸಲಿರುವದರಿಂದ ಅದಕ್ಕೆ ಸಿದ್ಧತೆಯಾಗಿ ಮೊದಲು ಉಪಾಸನೆಗಳನ್ನು ಪ್ರಸ್ತಾಪಿಸಲಾಗಿದೆ. ಹಾಗೆ ಪ್ರಸ್ತಾಪಿಸುವಾಗ ಉದ್ಗೀಥೋಪಾಸನೆಯನ್ನು ಪ್ರಸಿದ್ಧವಾಗಿದೆಯೆಂಬ ಕಾರಣದಿಂದ ಮೊದಲು ವಿವರಿಸಿದೆ. ಈಗಿನ ನಮ್ಮ ಪರಿಸ್ಥಿತಿಯ ದೃಷ್ಟಿಯಿಂದ ಇದು ಅಪ್ರಸಿದ್ಧವೆಂದೇ ಹೇಳಬೇಕಾಗಿದೆ. ಏಕೆಂದರೆ ವೇದಗಳ ಪೂರ್ಣವಾದ ಅಧ್ಯಯನವಾಗಲಿ ಯಜ್ಞಾನುಷ್ಠಾನಗಳಾಗಲಿ ಈಗ ಪ್ರಚುರವಾಗಿಲ್ಲ. ಇನ್ನು ವೇದೋಕ್ತ ಉಪಾಸನೆಗಳಂತೂ ಜನರ ಕಿವಿಗೇ ಬೀಳುವಂತಿಲ್ಲ. ಇರಲಿ. ಮುಖ್ಯವಾಗಿ ಉದ್ಗೀಥೋಪಾಸನೆಯ ಪರಿಚಯದ ಮೂಲಕವೇ ನಾವು ಈಗ ಈ ಉಪನಿಷತ್ತಿನ ಅರ್ಥವಿಚಾರಕ್ಕೆ ಪ್ರವೇಶಿಸೋಣ. ನಾವು ಯಾವದನ್ನಾದರೂ ಗೊತ್ತಿಲ್ಲ–ಎಂದೋ, ಕಷ್ಟ–ಎಂದೋ ಹೇಳಿಕೊಳ್ಳುತ್ತಾ ಕುಳಿತಿದ್ದರೆ ನೂರು ವರ್ಷವಾದರೂ ಅದು ಹಾಗೇ ಉಳಿದುಕೊಳ್ಳುತ್ತದೆ. ಉದಾಹರಣೆಗೆ: ಈಗ ಭೌತಿಕವಿಜ್ಞಾನವು ಹಿಂದಿಗಿಂತ ನೂರುಪಟ್ಟು ಬೆಳೆದಿದೆ. ಹಿಂದಿನ ಕಾಲದ ವಿಜ್ಞಾನಾಭ್ಯಾಸವೇ ಕಷ್ಟ–ಎಂದು ಒಬ್ಬ ವಿದ್ಯಾರ್ಥಿಯು ಕುಳಿತರೆ ಹೊಸದನ್ನು ಅವನು ತಿಳಿಯುವದು ಯಾವಾಗ? ಹೇಗೆ? ವಿಜ್ಞಾನವು ಬೆಳೆದಂತೆ

ನಾವೂ ವಿಚಾರಶಕ್ತಿಯನ್ನು ಬೆಳೆಸಿಕೊಳ್ಳಬೇಡವೆ? ಕಠಿನವೆಂಬ ನೆಪವನ್ನೊಡ್ಡಿದರೆ ಪಾಶ್ಚಾತ್ತ್ಯರಿಗೂ ನಮಗೂ ಅಂತರವು ಇನ್ನೂ ಬೆಳೆಯುತ್ತಲೇ ಹೋಗುವದಿಲ್ಲವೆ? ಹಾಗೆಯೇ ಅಧ್ಯಾತ್ಮವಿದ್ಯೆಯ ವಿಷಯಕ್ಕೂ ತಿಳಿಯಬೇಕು. ಋಷಿಗಳ ಕಾಲದ ಅಧ್ಯಾತ್ಮವಿಜ್ಞಾನವು ಈಗಿನ ನಾಗರಿಕಸಮಾಜದಲ್ಲಿ ಸಾಧಿಸಲಾರದ, ಕಷ್ಟವಾದ ವಿಷಯವೆಂದು ಕುಳಿತರೆ ಕಡೆಗೆ ನಮಗೆ ಅದು ದಕ್ಕುವದೇ ಇಲ್ಲ. ಆದ್ದರಿಂದ ಆದಷ್ಟುಮಟ್ಟಿಗೂ ಮನುಷ್ಯನು ಬಿಡುವುಮಾಡಿಕೊಂಡು ಜ್ಞಾನ–ಉಪಾಸನೆ–ಕರ್ಮಾದಿಗಳ ರಹಸ್ಯವನ್ನು ಚೆನ್ನಾಗಿ ವಿಚಾರಮಾಡಿ ಮುಕ್ತಿಗೆ ಪ್ರಯತ್ನಮಾಡಲೇಬೇಕು. ಸಾಧಕನ ಶಬ್ದಭಂಡಾರದಲ್ಲಿ 'ಕಷ್ಟ'ವೆಂಬ ಪದವು ಇರಬೇಕಾಗಿಯೇ ಇಲ್ಲ. ಅದನ್ನು ಮನ್ನಾಮಾಡಿದರೂ ಸಂತೋಷವೇ. ಪ್ರಕೃತ ಉದ್ಗೀಥದ ವಿವರವನ್ನು ನೋಡೋಣ. ಉತ್–ಗೀಥ ಎಂದರೆ ಗಟ್ಟಿಯಾಗಿ ಸ್ವರಬದ್ಧವಾಗಿ ರಾಗವಾಗಿ ಗಾನಮಾಡುವದೇ ಉದ್ಗೀಥವೆಂದು ಅವಯವಾರ್ಥವನ್ನೂ ಮಾಡಬಹುದು. ವೇದದಲ್ಲಿರುವ ದೇವತಾಸ್ತುತಿರೂಪವಾದ ಋಕ್ಕನ್ನು ಉದ್ಗಾನಮಾಡಿದರೆ ಆ ದೇವತೆಯು ಒಲಿಯುವದು. ಯಜ್ಞದಲ್ಲಿ ಆಹುತಿಯನ್ನು ಸ್ವೀಕರಿಸಲು ಆಹ್ವಾನಿಸಲ್ಪಟ್ಟ ದೇವತೆಯನ್ನು ಉದ್ಗಾತೃವು ಇಂಪಾಗಿ ಸ್ತುತಿಮಾಡಬೇಕು. ಆದ್ದರಿಂದ ಸಾಮವೇದದ ಸಾರವೇ ಉದ್ಗೀಥವು. ಇಂಥ ಉದ್ಗೀಥದ ಸಾರವೇ ಓಂಕಾರವು. ಇದು ಹೇಗೆಂಬುದನ್ನು ನೋಡೋಣ.

ಉಪನಿಷತ್ತಿನಲ್ಲಿ ಓಂಕಾರವು ಉದ್ಗೀಥದ ಸಾರವೆಂಬುದಕ್ಕೆ ಒಂದು ವಿವರಣೆಯನ್ನು ಕೊಟ್ಟಿದೆ. ಏನೆಂದರೆ 'ಈ ಸೃಷ್ಟಿಯಲ್ಲಿ ಅಚೇತನಗಳಿಗಿಂತಲೂ ಚೇತನಪ್ರಾಣಿಗಳು ಶ್ರೇಷ್ಠರು. ಅಥವಾ ಸಾರಭೂತರು. ಆದರೆ ಭೂಮಿಯ ಆಶ್ರಯವಿಲ್ಲದೆ ಅವರು ಇರಲಾರರು. ಆದ್ದರಿಂದ ಭೂತಗಳ ಸಾರವೆಂದರೆ ಪೃಥಿವಿಯು. ಹೀಗೆಯೇ ವಿಚಾರ ಮಾಡುತ್ತಾಹೋದರೆ ಪೃಥಿವಿಯ ಸಾರವು ಜಲವು. ಅದರ ಸಾರವೇ ಸಸ್ಯಗಳು. ಅವುಗಳ ಸಾರವೇ ಮನುಷ್ಯನು. ಅವನ ಸಾರವೇ ವಾಕ್ಕು(ಮಾತು). ಅದರ ಸಾರವೇ ಋಗ್ವೇದವು. ಅದರ ಸಾರವು ಸಾಮವು. ಅದರ ಸಾರವು ಉದ್ಗೀಥವು. ಇಲ್ಲಿ ಉದ್ಗೀಥವು ಋಕ್ ಹಾಗೂ ಸಾಮಗಳ ಜೋಡಿಯಿಂದಾದದ್ದಾಗಿದೆ. ಇಂಥ ರಸತಮವಾದ ಉದ್ಗೀಥಕ್ಕೂ ಹೆಚ್ಚಿನ ರಸತಮವಾದುದೇ ಓಂಕಾರವು'–ಎಂದು ತಿಳಿಸಲಾಗಿದೆ. ಈ ವಿಚಾರದಿಂದ ಸಿದ್ಧವಾಗುವದೇನೆಂದರೆ: ಓಂ ಎಂಬ ವಾಕ್ಕು ಇಡಿಯ ಶಬ್ದಪ್ರಪಂಚದಲ್ಲೆಲ್ಲ ಅತ್ಯಂತ ಪ್ರಶಸ್ತವಾದದ್ದು. ಏಕೆಂದರೆ ಅದು ಋಕ್ಸಾಮಮಿಥುನದಿಂದ ಉಂಟಾಗಿರುತ್ತದೆ. ಯಾವದೇ ವೇದಭಾಗವನ್ನು ಉಚ್ಚರಿಸಬೇಕಾದರೂ ಓಂ ಎಂಬೀ ಅಕ್ಷರದಿಂದಲೇ ಆರಂಭಿಸುವರು. ಅನಂತರ ಆಯಾ ವೇದಭಾಗವನ್ನು ಪಠಿಸಿ ಓಂ ಎಂದೇ ಪೂರೈಸುವರು. ಇಷ್ಟೇ ಅಲ್ಲ, ಯಜ್ಞಗಳಲ್ಲಿ ಋತ್ವಿಜರೆಲ್ಲರೂ ಓಂ ಎಂದೇ ಕರ್ಮಕಾಲಕ್ಕೆ ವ್ಯವಹರಿಸುವರು. ಹೇಗೆಂದರೆ ಹವಿಸ್ಸನ್ನು ಕೊಡೋಣವೆ? ಎಂದು ಅಧ್ವರ್ಯುವು

ಕೇಳಿದರೆ ಓಂ ಎಂದೇ ಬ್ರಹ್ಮನು ಉತ್ತರಿಸುವನು. ಇತ್ಯಾದಿ. ಈಗ ಲೌಕಿಕವ್ಯವಹಾರಭಾಷೆಯಲ್ಲಿ (ಕನ್ನಡದಲ್ಲಿ) ಯಾರಾದರೂ ಏನಾದರೂ ಹೇಳಿದಾಗ ನಮಗೆ ಇಷ್ಟವಾದರೆ ಹೂ–ಎನ್ನುವದು ಪ್ರಸಿದ್ಧವಾಗಿದೆ. ಕಥೆ ಹೇಳುವಾಗ ಮಕ್ಕಳು ಹೂಗುಟ್ಟುವದು ಎಲ್ಲರಿಗೂ ತಿಳಿದಿದೆ. ಹಾಗೆಯೇ ಯಾರಾದರೂ ನಮ್ಮನ್ನು ಕರೆದರೆ 'ಓ' ಗೊಡುವೆವು. ಈ ಎಲ್ಲಾ ಸಂಜ್ಞೆಗಳೂ ಓಂಕಾರದ ವಿಕಾರಗಳೇ ಆಗಿವೆ. ಆದ್ದರಿಂದ ಲೌಕಿಕವೈದಿಕವ್ಯವಹಾರಗಳಲ್ಲೆಲ್ಲ ಓಂಕಾರವೇ ಅನುಸ್ಯೂತವಾಗಿ ಹೆಣೆದು ಕೊಂಡೇಬಿಟ್ಟಿದೆ. ನಮಗೆ ಮಾತ್ರ 'ಇದು ರಸತಮವಾದ ಓಂಕಾರದ ಪುರಶ್ಚರಣೆ' ಎಂಬ ಜ್ಞಾನವಿರುವದಿಲ್ಲ. ಈ ದೃಷ್ಟಿಯಿಂದ ಓಂಕಾರೋಪಾಸನೆಯು ಕಷ್ಟವೆನಿಸುವದೇ ಇಲ್ಲ ; ಏಕೆಂದರೆ ಮತ್ತೆ ಮತ್ತೆ ನಾವು ಅದನ್ನು ರೂಪಾಂತರದಿಂದ ಉಚ್ಚರಿಸುತ್ತಲೇ ಇರುವೆವು. ಇದೇ ಓಂಕಾರೋಪಾಸನೆಯ ತತ್ತ್ವವು.

ಈಗ ಓಂಕಾರವನ್ನು ಉದ್ಗೀಥಾವಯವವಾಗಿ ಚಿಂತಿಸಬೇಕೆಂದು ಹೇಳಿರುವ ವಿಷಯವನ್ನು ವಿಚಾರಮಾಡೋಣ. ಉದ್ಗೀಥದ ವಿಚಾರವಾಗಿ ಈ ಉಪನಿಷತ್ತಿನ ಒಂದನೆಯ ಅಧ್ಯಾಯದಲ್ಲಿ ಇನ್ನೂ ಕೆಲವು ವಿವರಣೆಗಳಿವೆ. ಅವುಗಳನ್ನು ಮುಂದಿನ ಸಂದರ್ಭಗಳಲ್ಲಿ ಪ್ರಸ್ತಾಪಿಸಲಾಗುವದು. ಪ್ರಕೃತ–ಉದ್ಗೀಥವು ಒಂದು ಕರ್ಮಾಂಗವೆನಿಸಿರುವದು. ಅದರ ಅವಯವವಾಗಿ ಓಂಕಾರವು ಇದ್ದುಕೊಂಡಿರುವದು. ಈ ಓಂ ಎಂಬ ವರ್ಣವನ್ನೇ ಉದ್ಗೀಥದೃಷ್ಟಿಯಿಂದ ಚಿಂತಿಸಬೇಕು. ಏಕೆಂದರೆ ಇದೊಂದು ಸ್ವತಂತ್ರವಾದ ಉಪಾಸನೆಯಾಗಿದೆ. ಈ ಓಂಕಾರವು ರಸತಮವಾಗಿರುವದರಿಂದ ಇದರಲ್ಲಿ ಉದ್ಗೀಥದೃಷ್ಟಿಯನ್ನು ಮಾಡಬೇಕು–ಎಂದು ಶ್ರುತಿಯ ಅಭಿಪ್ರಾಯ. ಹೇಗೆ ಒಬ್ಬ ಬ್ರಾಹ್ಮಣನನ್ನು ವಿಷ್ಣುವೆಂದು ಚಿಂತಿಸಬೇಕು–ಎಂದು ಹೇಳಿದರೆ ಅದೊಂದು ಉಪಾಸನೆಯಾಗುವದೋ ಹಾಗೆ ಓಂಕಾರವನ್ನು ಉದ್ಗೀಥವೆಂದು ಚಿಂತಿಸಬೇಕೆಂದು ತಿಳಿಸಿದೆ. ಹೀಗೆ ಚಿಂತಿಸುವಾಗ ಈ ಓಂಕಾರವು ರಸತಮತ್ವ, ಆಪ್ತಿ, ಸಮೃದ್ಧಿ ಎಂಬ ಗುಣಗಳುಳ್ಳದ್ದಾಗಿಯೂ ಪರಮ, ಪರಾರ್ಧ್ಯ, ವೈದಿಕಕರ್ಮಪ್ರವರ್ತಕತ್ವ ಎಂಬ ವಿಭೂತಿಗಳುಳ್ಳದ್ದಾಗಿಯೂ ಸರ್ವಕಾಮಾವಾಪ್ತಿ ಎಂಬ ಫಲವುಳ್ಳದ್ದಾಗಿಯೂ ಇದೆ–ಎಂದೂ ಚಿಂತಿಸಬೇಕು. ಈ ಗುಣಗಳನ್ನೆಲ್ಲ ಶ್ರುತಿಯೇ ನಮಗೆ ತಿಳಿಸಿಕೊಟ್ಟಿದೆ. ಇನ್ನೂ ಹೆಚ್ಚಿನದಾಗಿ ಈ ಓಂಕಾರವು ಪರಬ್ರಹ್ಮದ ಪ್ರಿಯವಾದ ಹೆಸರೂ ಆಗಿದೆ. ಏಕೆಂದರೆ ಓಂ ಎಂದುಚ್ಚರಿಸಿದರೆ ಆ ಭಗವಂತನು ಸಂತೋಷಪಡುತ್ತಾನೆ. ಆತನಿಗೆ ನೂರಾರು ಸಹಸ್ರನಾಮಗಳಿದ್ದರೂ ಪ್ರತಿಯೊಂದು ನಾಮದ ಆರಂಭದಲ್ಲಿಯೂ ಓಂ ಎಂದು ಸೇರಿಸಿಕೊಂಡೇ ಬಲ್ಲವರು ಉಚ್ಚರಿಸುವರು. ಏಕೆಂದರೆ ಭಗವಂತನ ಯಾವ ನಾಮವೇ ಆಗಲಿ, ಓಂಕಾರದಲ್ಲಿ ಪೂರ್ಣವಾಗಿ ಅಡಕವಾಗಿರುತ್ತದೆ. ಒಂದು ರೀತಿಯಲ್ಲಿ ಇಡಿಯ ವೇದವೇ ಈ ಪ್ರಣವಾಂತರ್ಗತವಾಗಿರುವದು. ಆದ್ದರಿಂದಲೇ ಸಂನ್ಯಾಸಿಗಳು

ವೇದಗಳನ್ನೆಲ್ಲ ಈ ಓಂಕಾರದಲ್ಲಿ ಪ್ರವೇಶಮಾಡಿಸಿ ಇದೊಂದನ್ನು ಮಾತ್ರ ಜಪಕ್ಕೆ ಇಟ್ಟುಕೊಂಡಿರುತ್ತಾರೆ. ಹೀಗೆ ಓಂಕಾರವನ್ನು ಉದ್ಗೀಥವೆಂಬ ವೈದಿಕನಾಮಧೇಯದಿಂದ ಹಿಂದೆ ಹೇಳಿದ ಗುಣಗಳಿಂದ ವಿಶಿಷ್ಟವಾಗಿ ಚಿಂತಿಸಬೇಕು–ಎಂದು ಓಂಕಾರೋಪಾಸನೆಯನ್ನು ಇಲ್ಲಿ ತಿಳಿಸಿರುತ್ತದೆ.

ಈಗ ಈ ಉಪಾಸನೆಯ ಫಲವನ್ನು ಕುರಿತು ವಿಚಾರಿಸೋಣ. ಹೀಗೆ ಯಾವನು ಓಂಕಾರವನ್ನು ಚಿಂತಿಸುವನೋ ಅವನಿಗೆ ಸರ್ವಕಾಮಗಳೂ ದೊರಕುವವು. ಅಂಥವನು ಸಮೃದ್ಧಿಗುಣವುಳ್ಳವನೂ ಆಗುವನು–ಎಂದು ತಿಳಿಸಿದೆ. ಸರ್ವಕಾಮಾವಾಪ್ತಿಯು ನಿಜವಾಗಿ ದೊರಕಬೇಕಾದರೆ ಸಾಧಕನು ಪರಿಪೂರ್ಣಕಾಮನಾದ ಭಗವಂತನನ್ನು ಪಡೆದಾಗ ಮಾತ್ರವೇ ಸಾಧ್ಯ. ಇಲ್ಲಿ ಉಪಾಸನಾಸ್ತುತಿಗಾಗಿ ಹಾಗೆ ಹೇಳಿದೆ. ಹಾಗೆಂದ ಮಾತ್ರಕ್ಕೆ ಇದೇನೂ ಮಿಥ್ಯಾಸ್ತುತಿಯಲ್ಲ. ಉಪಾಸಕನು ಬಯಸುವ ಎಲ್ಲಾ ಕಾಮಗಳೂ ಅವನಿಗೆ ದೊರಕುತ್ತವೆ ಎಂದೇ ಅಭಿಪ್ರಾಯ. ಮತ್ತು ಸಮೃದ್ಧಿ ಎಂಬುದು ಎಲ್ಲ ರೀತಿಯ ಕಾಮಸಮೃದ್ಧಿಗಳಿಗೂ ಸೂಚಕವು. ಓಂಕಾರಚಿಂತಕನಿಗೆ ಎಲ್ಲಾ ಇಷ್ಟಾರ್ಥಗಳೂ ಸಮೃದ್ಧವಾಗಿರುವವು. ಕೊರತೆಗಳಿರುವದಿಲ್ಲ–ಎಂದರ್ಥ. ಆಯುಷ್ಯ, ಬಲ, ಆರೋಗ್ಯ, ಪುಷ್ಟಿ, ತುಷ್ಟಿ, ಶಾಂತಿ, ದಾಂತ್ಯಾದಿಗುಣಗಳ ಸಮೃದ್ಧಿಯು ಉಂಟಾಗಿ ಅಂಥ ಸಾಧಕನು ಮುಂದೆ ಬ್ರಹ್ಮಜ್ಞಾನಕ್ಕೆ ತಕ್ಕವನಾಗುವನು–ಎಂದಭಿಪ್ರಾಯ. ಇಂಥ ಕಾಮಧೇನುವಿನಂತಿರುವ ಓಂಕಾರದ ಉಪಾಸನೆಯನ್ನು ಅಧಿಕಾರಿಗಳೆಲ್ಲರೂ ಮಾಡಬಹುದಾಗಿದೆ.

## ಕರ್ಮವು ವೀರ್ಯವತ್ತರವಾಗುವಿಕೆ

ಓಮ್॥ ಯದೇವ ವಿದ್ಯಯಾ ಕರೋತಿ ಶ್ರದ್ಧಯಾ ಉಪನಿಷದಾ ತದೇವ ವೀರ್ಯವತ್ತರಂ ಭವತೀತಿ ॥ 1–1–10.

ಭಾವಾರ್ಥಃ–ಯಾವದನ್ನು ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಉಪನಿಷತ್ತಿನಿಂದಲೂ ಮಾಡುವನೋ ಅದೇ ವೀರ್ಯವತ್ತರವಾಗಿರುತ್ತದೆ.

(ವಿದ್ಯೆ ಎಂದರೆ ತಿಳಿವಳಿಕೆ. ಶ್ರದ್ಧೆ ಎಂದರೆ ಕರ್ಮದಲ್ಲಿ ಆಸಕ್ತಿ. ಉಪನಿಷತ್ತು–ಎಂದರೆ ಯೋಗ–ಅಥವಾ ಉಪಾಯ. ಹೀಗೆ ಯಾವ ಕೆಲಸವನ್ನಾದರೂ ಚೆನ್ನಾಗಿ ಅರಿತು ಶ್ರದ್ಧೆಯಿಂದ ಫಲವು ದಕ್ಕುವಂತೆ ಕರ್ಮವನ್ನು ಹೊಂದಿಸಿಕೊಂಡು ಮಾಡಿದರೆ ಅದು ಸಾಮಾನ್ಯವಾಗಿ ಮಾಡಿದ್ದಕ್ಕಿಂತ ಹೆಚ್ಚಿನ ಫಲವನ್ನು ಕೊಡುವದು–ಎಂದಭಿಪ್ರಾಯ.)

## 2. ವಿದ್ಯಾಕರ್ಮಗಳ ಸಮುಚ್ಚಯರಹಸ್ಯ

ಛಾಂದೋಗ್ಯೋಪನಿಷತ್ತಿನ ಪ್ರಾರಂಭದಲ್ಲಿ ತಿಳಿಸಿರುವ ಓಂಕಾರೋಪಾಸನೆಯ ವಿಷಯವಾಗಿ ಈಗಾಗಲೇ ಪ್ರಸ್ತಾಪಿಸಲಾಗಿದೆ. ಉದ್ಗೀಥಶಬ್ದವಾಚ್ಯವೆಂದು ಓಂಕಾರವನ್ನು ಚಿಂತಿಸುವದು ಆಪ್ತಿ, ಸಮೃದ್ಧಿ-ಮುಂತಾದ ಗುಣಗಳನ್ನು ಉಂಟುಮಾಡುತ್ತದೆ-ಎಂದೂ ತಿಳಿಸಲಾಗಿದೆ. ಹಾಗೆಯೇ ಮುಂದುವರಿದು ಉದ್ಗೀಥದ ಉಪಾಸನೆಗಳನ್ನು ಬೇರೆಬೇರೆಯ ದೃಷ್ಟಿಗಳಿಂದ ವಿವರಿಸಿರುತ್ತದೆ. ಇದಕ್ಕೆ ಮುಂಚೆ ಓಂಕಾರೋಪಾಸನೆಯ ವಿಷಯವನ್ನು ಸ್ತುತಿಪೂರ್ವಕವಾಗಿ ಉಪಸಂಹಾರಮಾಡಿದೆ. ಅದು ಹೇಗೆಂಬುದನ್ನು ಈಗ ವಿಚಾರ ಮಾಡೋಣ.

ಈ ಉಪನಿಷತ್ತು ಸಾಮವೇದಕ್ಕೆ ಸೇರಿರುವದರಿಂದ ಉದ್ಗೀಥೋಪಾಸನೆಯನ್ನು ಇಲ್ಲಿ ಪ್ರಧಾನವಾಗಿ ಹೇಳಿರುತ್ತದೆ. ಓಂಕಾರದಲ್ಲಿ ಪರಮಾತ್ಮದೃಷ್ಟಿಯನ್ನು ಹೇಳಿರುವದು ಓಂಕಾರದ ಸ್ತುತಿರೂಪವಾಗಿದೆ. ಆದರೆ ಉದ್ಗೀಥವೆಂಬುದು ಕರ್ಮಾಂಗವಾದ ಒಂದು ಸಾಮವಿಶೇಷವಾಗಿರುವದರಿಂದ ಒಂದು ವೇಳೆ ಓಂಕಾರೋಪಾಸನೆಯಿಲ್ಲದಿದ್ದರೂ ಉದ್ಗೀಥಕರ್ಮಾನುಷ್ಠಾನಕ್ಕೇನೂ ಅಡ್ಡಿಯಾಗುವದಿಲ್ಲ. ಆದರೆ ಉದ್ಗಾತೃವು ಓಂಕಾರೋಪಾಸಕನೂ ಆಗಿದ್ದಲ್ಲಿ ಇನ್ನೂ ಹೆಚ್ಚಿನ ಫಲವಾಗುತ್ತದೆ- ಎಂಬಿದು ಇಲ್ಲಿ ವಿವಕ್ಷಿತವಾಗಿದೆ. ಹೇಗೆ ಗುರುವಾಗುವವನು ಬ್ರಹ್ಮನಿಷ್ಠನಾಗಿರಬೇಕೋ ಹಾಗೆ ಉದ್ಗಾತೃವೆನಿಸುವವನು ಉದ್ಗೀಥವನ್ನರಿತವನಾಗಿರಬೇಕು. ಆದರೆ ಬ್ರಹ್ಮನಿಷ್ಠನಾದ ಗುರುವು ಶೋತ್ರಿಯನೂ ಆಗಿದ್ದರೆ ಹೇಗೆ ಸದ್ಗುರುವೆನಿಸಿ ವಿಶಿಷ್ಟಸ್ವರೂಪವುಳ್ಳವ ನಾಗುವನೋ ಹಾಗೆ ಉದ್ಗೀಥವನ್ನು ಬಲ್ಲ ಸಾಮಗಾನಮಾಡುವ ಋತ್ವಿಜನು ಓಂಕಾರೋಪಾಸಕನೂ ಆಗಿದ್ದಲ್ಲಿ ಕರ್ಮವು ಇನ್ನೂ ವೀರ್ಯವತ್ತರವಾಗುವದು-ಎಂದು ತಿಳಿಸಿದೆ. ಇಲ್ಲಿ ವಿದ್ಯೆ ಎಂದರೆ ಉಪಾಸನೆ ಎಂದರ್ಥ. ಉಪಾಸನೆಯೂ ಕರ್ಮವೂ ಸಮುಚ್ಚಯವನ್ನು ಹೊಂದಬಹುದಾಗಿದೆ. ಶಾರೀರಕವಾಗಿ ನಿರ್ವಹಿಸುವದನ್ನು ಕರ್ಮವೆಂದೂ ಮಾನಸಿಕವಾಗಿ ಮಾಡುವ (ಕರ್ಮ)ವನ್ನು ಉಪಾಸನೆಯೆಂದೂ ಕರೆಯುವರು. ಈ ಮಾನಸಿಕಕರ್ಮವಾದ ಉಪಾಸನೆಯೂ ಪುರುಷತಂತ್ರವೇ ಆಗಿರುವದರಿಂದ ಕರ್ಮದೊಡನೆ ಸಮುಚ್ಚಯವನ್ನು ಹೊಂದಬಹುದಾಗಿದೆ. ಆದರೆ ಮಾನಸಿಕವಾಗಿರುವದರಿಂದ ಮುಂದೆ ಇದು ಜ್ಞಾನಕ್ಕೆ ಉಪಾಯವಾಗಿಯೂ ಆಗಲಿದೆ. ಮನಸ್ಸಿನ ಪರಿಪಾಕ, ಏಕಾಗ್ರತೆ-ಮುಂತಾದ ಗುಣಗಳು ಉಪಾಸನೆಯ ಫಲವಾಗಿ ದೊರೆತಲ್ಲಿ ಜ್ಞಾನಕ್ಕೆ ಹೆಚ್ಚಿನ ಸಹಾಯವಾಗಲಿದೆ. ಆದ್ದರಿಂದಲೇ ಉಪನಿಷತ್ತುಗಳಲ್ಲಿ ಜ್ಞಾನಪ್ರಕರಣದಲ್ಲಿಯೂ ಉಪಾಸನೆಗಳನ್ನು ಪ್ರಸ್ತಾಪಿಸಿರುತ್ತದೆ.

ಈಗ ಓಂಕಾರಸ್ತುತಿಯನ್ನು ವಿಚಾರಮಾಡೋಣ. ಓಂಕಾರದ ಮೂಲಕವೇ ತ್ರಯೀವಿದ್ಯೆಯು ಪ್ರವರ್ತಿತವಾಗಿರುತ್ತದೆ; ಎಂದರೆ ತ್ರಯೀವಿದ್ಯಾವಿಹಿತವಾದ ವೈದಿಕ

ಕರ್ಮವು ಹುಟ್ಟಿರುವದು—ಎಂದರ್ಥ. ಏಕೆಂದರೆ ಶ್ರೌತಕರ್ಮವಾದ ಸೋಮಯಾಗದಲ್ಲಿ ಉದ್ಗಾತೃ, ಹೋತೃ, ಅಧ್ವರ್ಯುಗಳೆಂಬ ಋತ್ವಿಜರು ಸೇರಿರುತ್ತಾರೆ. ಅವರೆಲ್ಲರೂ ತಮ್ಮ ತಮ್ಮ ಕರ್ಮಗಳನ್ನು ಓಂಕಾರದಿಂದಲೇ ಆರಂಭಿಸುತ್ತಾರೆ. ಅಷ್ಟೇ ಅಲ್ಲ, ಅವರೆಲ್ಲರೂ ಸೇರಿ ಸಾಂಗೋಪಾಂಗವಾಗಿ ಅನುಷ್ಠಾನಮಾಡುವ ಯಾಗಕರ್ಮವೂ ಒಂದು ದೇವತಾರಾಧನೆಯೇ ಆಗಿದ್ದು ಆ ದೇವತೆಯು ಓಂಕಾರವಾಚ್ಯವಾದ ಪರಬ್ರಹ್ಮವೇ ಆಗಿದೆ—ಎಂದು ತಿಳಿದುಬರುತ್ತದೆ. ತ್ರಯೀ ಎಂದರೆ ಋಗ್ಯಜುಸ್ಸಾಮ ವೇದಗಳೆಂದರ್ಥ. ಆದ್ದರಿಂದ ವೇದಗಳ ಸಾರವೆಲ್ಲ ಓಂಕಾರವೆಂದಾಯಿತು. ಇಲ್ಲಿ ವೇದಗಳೆಂದರೆ ಬರಿಯ ಮಂತ್ರಗಳಲ್ಲ. ಏಕೆಂದರೆ ಕೇವಲ ಮಂತ್ರಗಳಿಂದ ಸ್ವರ್ಗಾದಿಪುರುಷಾರ್ಥವು ದೊರಕುವದಿಲ್ಲ. ಆ ಮಂತ್ರಗಳನ್ನು ಪ್ರಯೋಗಿಸಿ ಯಜ್ಞವನ್ನು ಮಾಡಿದಾಗ ಮಾತ್ರ ಫಲವಾಗುತ್ತದೆ. ಹೀಗೆ ವೈದಿಕಕರ್ಮವು ಋತ್ವಿಜರ ಸಹಕಾರದಿಂದ ಅನುಷ್ಠಿಸಲ್ಪಟ್ಟು ಯಜಮಾನನಿಗೆ ಸ್ವರ್ಗಾದಿಫಲಗಳನ್ನುಂಟುಮಾಡುವದು. ಇಲ್ಲಿಯೂ ಯಜ್ಞಪತಿಯಾದ ಭಗವಂತನೇ ಯಜಮಾನನಿಗೆ ಫಲಪ್ರದನಾಗಿರುವನು. ಕೇವಲ ಕರ್ಮವು ಜಡವಾದ್ದರಿಂದ ಫಲವನ್ನು ಕೊಡಲಾರದಾಗಿದೆ. ಆದ್ದರಿಂದ ನಿಜವಾಗಿ ನೋಡಿದರೆ ಯಜ್ಞದಿಂದ ಆರಾಧಿಸಲ್ಪಟ್ಟವನು ಓಂಕಾರವಾಚ್ಯನಾದ ಪರಮಾತ್ಮನೆಂದೇ ಆಯಿತು. ಆ ಭಗವಂತನ ಸಂಪರ್ಕದಿಂದಲೇ ಉದ್ಗೀಥಾದಿಕರ್ಮಾವಯವಗಳಿಗೂ ಶ್ರೇಷ್ಠತೆಯುಂಟಾಯಿತು. ಹೀಗೆ ವೇದಗಳು, ವೇದೋಕ್ತಕರ್ಮಗಳು, ಕರ್ಮಾಂಗಗಳಾದ ಉದ್ಗೀಥಾದಿಗಳು, ದ್ರವ್ಯಗಳು—ಎಲ್ಲವೂ ಪರಬ್ರಹ್ಮವೆಂದೇ ಚಿಂತಿಸಬೇಕು. ಕಡೆಯಲ್ಲಿ ಎಲ್ಲ ಸಿದ್ಧಿಗಳೂ ಆ ಬ್ರಹ್ಮದ ಪ್ರಸಾದದಿಂದಲೇ ಸಾಧಕನಿಗೆ ಲಭಿಸುವವು. ತನ್ನ ತನ್ನ ಕರ್ಮಗಳನ್ನು ಈಶ್ವರಾರ್ಚನೆ—ಎಂಬ ಭಾವನೆಯಿಂದ ಮಾಡಿದರೆ ಮಾನವನು ಸಿದ್ಧಿಯನ್ನು ಪಡೆಯುವನೆಂದು ಗೀತೆಯಲ್ಲಿಯೂ ಹೇಳಿದೆ. ಹೀಗೆ ಓಂಕಾರೋಪಾಸನೆಯು ಉದ್ಗೀಥಕರ್ಮದ ಮೂಲಕ ಯಜ್ಞಕರ್ಮಕ್ಕೆ ಹೆಚ್ಚಿನ ಫಲವನ್ನುಂಟುಮಾಡುತ್ತದೆ—ಎಂದು ಗೊತ್ತಾಗುವದು. ಆದರೆ ಉದ್ಗೀಥಕರ್ಮಕ್ಕೆ ನಿಯಮಿತನಾದ ಋತ್ವಿಜನು ಓಂಕಾರೋಪಾಸಕನಾಗಿರಬೇಕು. ಆಗಲೇ ಅದು ವೀರ್ಯವತ್ತರವಾಗುವದು.

ಈಗ ಉಪನಿಷತ್ತು ಪ್ರಾಸಂಗಿಕವಾಗಿ ಕರ್ಮವು ವೀರ್ಯವತ್ತರವಾಗುವ ವಿಷಯವನ್ನು ವಿವರಿಸುತ್ತದೆ. ಹೇಗೆಂದರೆ: ಕರ್ಮವನ್ನೇನೊ, ಅದರ ಅಂಗೋಪಾಂಗಗಳನ್ನು ಬಲ್ಲವನು ಮಾಡಿಬಿಡಬಹುದು. ಆದರೆ ಅದು ಹೆಚ್ಚಿನ ಶಕ್ತಿವಿಶಿಷ್ಟವಾಗಬೇಕಾದರೆ ಉಪಾಸನೆಯೂ ಸೇರಬೇಕು. ಬರಿಯ ಹಾಲನ್ನು ಅಮೃತವೆಂದು ಭಾವಿಸಿ ದೇವರಿಗೆ ಅಭಿಷೇಕಮಾಡಬಹುದು. ಆದರೆ ಪಂಚಾಮೃತವಾಗಬೇಕಾದರೆ ಮೊಸರು, ತುಪ್ಪ, ಜೇನು, ಸಕ್ಕರೆಗಳೂ ಹೇಗೆ ಸೇರಬೇಕೋ ಹಾಗೆ ಕರ್ಮಜ್ಞನಾದ ಋತ್ವಿಜನು ಉಪಾಸಕನೂ ಆಗಿದ್ದಲ್ಲಿ ಕರ್ಮವು ವೀರ್ಯವತ್ತರವಾಗುವದು. ಸಾಮಾನ್ಯವಾಗಿ ಋತ್ವಿಜನೆಂದರೆ ವೇದಮಂತ್ರಗಳನ್ನು

ಅಧ್ಯಯನಮಾಡಿದವನೇ ಆಗಿರುತ್ತಾನೆ. (ಈಗಿನ ಕಾಲದಲ್ಲಿ ಇದೂ ದುರ್ಲಭವಾಗಿದ್ದು ಕೆಲವು ಸ್ಥಳಗಳಲ್ಲಿ ಮಂತ್ರಜ್ಞರಲ್ಲದವರೂ ಹೋಮಾದಿಗಳನ್ನು ಮಾಡಲು ಸೇರುತ್ತಾರೆ. ಇದು ಹಾಗಿರಲಿ). ಆ ಋತ್ವಿಜನು ಓಂಕಾರೋಪಾಸನೆಯ ತತ್ತ್ವವನ್ನೂ ಬಲ್ಲವನಾಗಿದ್ದರೆ ಅದನ್ನು ಚಿಂತಿಸುತ್ತಾ ಗಾನಮಾಡಿದರೆ ಕರ್ಮವು ಹೆಚ್ಚಿನ ಶಕ್ತಿಯುಳ್ಳದ್ದಾಗುವದು. ಇದಕ್ಕೇ ವಿದ್ಯಾಕರ್ಮಸಮುಚ್ಚಯವೆನ್ನುವರು. ಹೀಗೆಯೇ ಕರ್ಮವನ್ನು ಅರ್ಥಾನುಸಂಧಾನ ಪೂರ್ವಕವಾಗಿಯೂ ಮಾಡಿದರೆ ಅದು ಹೆಚ್ಚು ಶಕ್ತಿಯುತವಾಗುತ್ತದೆ–ಎಂಬಿದನ್ನು ಹೇಳತಕ್ಕದ್ದೇನಿದೆ?

ಇಲ್ಲಿ ಒಂದು ಆಕ್ಷೇಪವನ್ನು ಭಾಷ್ಯಕಾರರು ಎತ್ತಿ ಉತ್ತರಿಸಿದ್ದಾರೆ. ಏನೆಂದರೆ 'ಕರ್ಮವನ್ನು ನಿರ್ವಹಿಸುವವನಿಗೆ ಅಷ್ಟುಮಟ್ಟಿನ ತಿಳಿವಳಿಕೆ ಸಾಕು. ಕರ್ಮವನ್ನು ಮಾಡಿದ್ದರಿಂದಲೇ ಫಲವು ಬರಬೇಕಲ್ಲವೆ? ದೇವತಾಜ್ಞಾನವೇಕೆ ಬೇಕು? ಹೇಗೆ ಅಳಲೆಕಾಯಿಯನ್ನು ತಿಂದವನಿಗೆ ಅದು ಭೇದಿಮಾಡಿಸುವ ಗುಣವುಳ್ಳದ್ದೆಂದು ತಿಳಿಯದೆ ಇದ್ದರೂ ಭೇದಿಯಾಗುವದು ಕಂಡಿದೆಯಲ್ಲವೆ'? ಇದಕ್ಕೆ ಪರಿಹಾರವೇನೆಂದರೆ: ಹಾಗಲ್ಲ; ಅಳಲೆಕಾಯಿ ತಿನ್ನುವವನಿಗೆ ಅದರ ಗುಣಗಳ ತಿಳಿವಳಿಕೆಯೇನೂ ಬೇಕಿರುವದಿಲ್ಲ. ತಿನ್ನುವದಕ್ಕೆ ಬಾಯಿದ್ದರೆ ಸಾಕು. ಎಲ್ಲವನ್ನೂ ತಿನ್ನುವಂತೆ ಇದನ್ನೂ ತಿನ್ನಬಹುದಾಗಿದೆ. ಆದರೆ ಅಳಲೆಕಾಯಿಯು ಭೇದಿಗೆ ಕಾರಣವಾದ ಗುಣವುಳ್ಳದ್ದಾಗಿದೆ–ಎಂಬ ತಿಳಿವಳಿಕೆಯು ತಿನ್ನುವಿಕೆಗಿಂತ ಬೇರೆಯೇ ಆಗಿದೆ. ಆದ್ದರಿಂದ ಅದರ ಫಲವೂ ಬೇರೆಯೇ ಆಗಿದೆ. ಹೇಗೆಂದರೆ: ತಿಳಿವಳಿಕೆ ಇರುವಿಕೆ, ಇಲ್ಲದಿರುವಿಕೆಗಳಿಂದಾದ ಫಲದ ವ್ಯತ್ಯಾಸಕ್ಕೆ ಒಂದು ದೃಷ್ಟಾಂತವನ್ನು ಕೇಳಿರಿ. ಒಬ್ಬ ರತ್ನಪಡಿವ್ಯಾಪಾರಿಗೂ ಒಬ್ಬ ಬೇಡರವನಿಗೂ ಸಮಾನವಾಗಿಯೇ ಒಂದೊಂದು ರತ್ನವು ದೊರಕುತ್ತದೆ–ಎಂದಿಟ್ಟುಕೊಳ್ಳೋಣ. ಬೇಡರವನಿಗೆ ಆ ರತ್ನದ ಬೆಲೆ ತಿಳಿಯದ್ದರಿಂದ ಅದನ್ನು ಮಾರಿದಾಗ ಕೇವಲ ಕೆಲವೇ ನಾಣ್ಯಗಳ ಪ್ರಾಪ್ತಿಯಾಗುತ್ತದೆ. ಆದರೆ ವ್ಯಾಪಾರಿಗೆ ಆ ರತ್ನದ ಪೂರ್ಣ ತಿಳಿವಳಿಕೆಯಿರುವದರಿಂದ, ಅದರ ಪೂರ್ಣಬೆಲೆಯಾದ ಸಾವಿರಾರು ರೂಪಾಯಿ ಗಳನ್ನು ಅವನು ಪಡೆದುಕೊಳ್ಳುತ್ತಾನಲ್ಲವೆ? ಇಲ್ಲಿ ಉಂಟಾದ ಲಾಭದ ವ್ಯತ್ಯಾಸಕ್ಕೆ ತಿಳಿವಳಿಕೆಯೇ ಕಾರಣವಲ್ಲವೆ? ಹಾಗೆಯೇ ಇಲ್ಲಿಯೂ ತಿಳಿಯಬೇಕು' ಎಂದು ವಿವರಿಸಿರುತ್ತಾರೆ. ಯಾವನು ತಿಳಿವಳಿಕೆ, ಶ್ರದ್ಧೆ, ಯೋಗ–ಗಳಿಂದ ಕೂಡಿ ಕರ್ಮವನ್ನು ಮಾಡುವನೋ ಅವನ ಕರ್ಮವು ವೀರ್ಯವತ್ತರವಾಗುವದು–ಎಂದರೆ ಹೆಚ್ಚಿನ ಫಲವುಳ್ಳದ್ದಾಗುವದು. ಆದ್ದರಿಂದ ನಾವು ಬರಿಯ ಕರ್ಮವನ್ನು ಕುರುಡುಕುರುಡಾಗಿ ಮಾಡುವದಕ್ಕಿಂತಲೂ ವಿದ್ಯೆಯೊಡನೆ ಎಂದರೆ ಕರ್ಮದ ಅರ್ಥವನ್ನು ತಿಳಿದು ಅನುಷ್ಠಿಸುವದರ ಮೂಲಕ ಪೂರ್ಣವಾದ ಪ್ರಯೋಜನವನ್ನು ಹೊಂದಬೇಕಾಗಿದೆ.

ಈ ತತ್ತ್ವವನ್ನು ನಾವು ಈಗ ಇನ್ನಷ್ಟು ಮನನಮಾಡೋಣ. ಲೋಕದಲ್ಲಿ ನಾವು

ಮಾಡುವ ಪ್ರತಿಯೊಂದು ಕರ್ಮದಲ್ಲಿಯೂ ವಿದ್ಯೆಯ ಹಿನ್ನೆಲೆಯಿದ್ದೇ ಇರುತ್ತದೆ. ಆ ಹಿನ್ನಲೆಯು ತಿಳಿಯದವನಿಗೆ ಕರ್ಮವನ್ನು ಮಾಡಲು ಬರುವದೇ ಇಲ್ಲ. ಒಂದು ವೇಳೆ ಮಾಡಿದರೂ ಆ ಕೆಲಸವು ಅಪೂರ್ಣವಾಗುತ್ತದೆ ಅಥವಾ ಕೆಟ್ಟುಹೋಗುತ್ತದೆ. ಉದಾಹರಣೆಗೆ: ವಿದ್ಯುಚ್ಛಕ್ತಿಯ ವಿಜ್ಞಾನವಿಲ್ಲದವನು ತಂತಿಗಳನ್ನು ಗೊತ್ತಿಲ್ಲದೆ ಒಂದಕ್ಕೊಂದು ಸೇರಿಸಿದರೆ ಅಪಾಯವೇ ಆದೀತು. ಆದರೆ ತಿಳಿದವನೇ ಜೋಡಿಸಿದರೆ ದೀಪಮಾಲೆಗಳನ್ನು ಮಾಡಬಹುದು. ಯಂತ್ರಗಳನ್ನೂ ಓಡಿಸಬಹುದು. ಹಾಗೆಯೇ ಸಾರಥ್ಯವಿಜ್ಞಾನವಿಲ್ಲವದವನು ಮೋಟಾರನ್ನು ಓಡಿಸಿದರೆ ಅದು ಅಪಘಾತಕ್ಕೀಡಾಗುವದೇ ಸರಿ. ಹೀಗೆ ಎಲ್ಲೆಲ್ಲಿಯೂ ವಿದ್ಯೆಗೇ ಅಗ್ರಸ್ಥಾನವಿದೆ. ವಿದ್ಯಾವಿಶಿಷ್ಟನಾದ ಕರ್ಮಿಯೇ ಕುಶಲಕರ್ಮಿಯು. ಉಳಿದವರು ಕೇವಲ ಶ್ರಮಜೀವಿಗಳು ಮಾತ್ರ. ಫಲದಲ್ಲಿಯೂ ಇವರಿಬ್ಬರಿಗೂ ವ್ಯತ್ಯಾಸವಿದ್ದೇ ಇದೆ. ಇನ್ನು ಅಧ್ಯಾತ್ಮಮಾರ್ಗದಲ್ಲಿಯಂತೂ ವಿದ್ಯೆಯ ಸಹಾಯವು ತೀರ ಅಗತ್ಯವಾಗಿದೆ. ಹೇಗೆಂದರೆ: ನಾವು ಮಾಡುತ್ತಿರುವ ಶ್ರೌತಸ್ಮಾರ್ತ ಕರ್ಮಗಳ ಅರ್ಥವನ್ನು ತಿಳಿದು ಮಾಡಿದರೆ ನಿಜವಾಗಿಯೂ ಅಂತಃಕರಣಕ್ಕೆ ಸಂಸ್ಕಾರವಾಗುತ್ತದೆ. ಹಾಗಿಲ್ಲದೆ ಕುರುಡುಕುರುಡಾಗಿ ಮಾಡುತ್ತಿರುವದರಿಂದಲೇ 'ಮೌಢ್ಯ'ವೆಂಬ ಅಪಕೀರ್ತಿಗೆ ಇವು ಪಾತ್ರವಾಗಿವೆ. ಆದರೆ ಇದು ಕರ್ಮಗಳ ತಪ್ಪಲ್ಲ. ಮಾಡುವವನ ಅಥವಾ ಮಾಡಿಸುವವನ ಅಜ್ಞಾನದ ತಪ್ಪಾಗಿದೆ. ಯಾರೇ ಆಗಲಿ; ಇಂಥ ಕರ್ಮವನ್ನು ಮಾಡುವದರಿಂದ ಇಂಥ ಫಲವಿದೆ–ಎಂದು ತಿಳಿದರೆ ಎಂದಿಗೂ ಕರ್ಮಭ್ರಷ್ಟರಾಗುವದಿಲ್ಲ. ಉದಾಹರಣೆಗೆ: ಲೌಕಿಕಕರ್ಮಗಳಲ್ಲಿ ಎಷ್ಟೇ ಶ್ರಮವುಂಟಾಗಲಿ, ಕಾಲವ್ಯಯವಾಗಲಿ, ಜನರಿಗೆ ಅದರಿಂದ ಫಲವುಂಟೆಂದು ಗೊತ್ತಿರುವದರಿಂದ ಸಹಿಸಿಕೊಂಡು ಮಾಡಿಯೇ ತೀರುತ್ತಾರೆ. ಇದೇ ವಿದ್ಯೆಯ ಪ್ರಯೋಜನವು. ಹಾಗೆಯೇ ಶಾಸ್ತ್ರೀಯಕರ್ಮಗಳಿಗೂ ಸರಿಯಾದ ಅರ್ಥವನ್ನೂ ವಿವರಣೆಯನ್ನೂ ಕೊಟ್ಟು ಪ್ರಯೋಜನವನ್ನೂ ತಿಳಿಯಹೇಳಿದರೆ ಬಹಳ ಜನರು ಸ್ವಕರ್ಮನಿಷ್ಠರಾಗುವದರಲ್ಲಿ ಸಂಶಯವಿಲ್ಲ. ಇನ್ನು ಸೋಮಾರಿಗಳಿಗೋ–ಎಂದರೆ ಅವರಿಗೆ ಇಹಪರಗಳೆರಡೂ ದಕ್ಕುವದಿಲ್ಲವೆಂಬುದು ಸಿದ್ಧವಾಗಿಯೇ ಇದೆ. ಅಂಥವರು ವಿಚಾರಣೀಯರಲ್ಲ.

ಆದ್ದರಿಂದ ವಾಚಕರೆ, ಇನ್ನು ಮುಂದಾದರೂ ನೀವು ಮಾಡುವ ಕರ್ಮಗಳ ಅರ್ಥವೇನೆಂದು ತಿಳಿಯುವ ಪ್ರಯತ್ನಮಾಡಿರಿ. ಅರ್ಥವಿಲ್ಲದ ನಿಷ್ಪ್ರಯೋಜನವಾದ ಕರ್ಮಗಳಿಗೆ ಆಯುಸ್ಸನ್ನು ವ್ಯಯಮಾಡಬೇಡಿರಿ. ವಯಸ್ಸಾದಂತೆಲ್ಲ ಸಾಧ್ಯವಾದಷ್ಟೂ ಕರ್ಮದ ಎಲ್ಲೆಕಟ್ಟನ್ನು ಮೀರಿ ವಿದ್ಯೆ (ಉಪಾಸನೆ) ಯ ಅವಲಂಬನೆಯನ್ನು ಅಭ್ಯಾಸಮಾಡಿಕೊಳ್ಳಿರಿ. ಉಪಾಸನೆಯು ನಿಮಗೆ ಕರ್ಮದಿಂದಾಗುತ್ತಿದ್ದ ಆಯಾಸವನ್ನು ಪರಿಹರಿಸುವದಲ್ಲದೆ ಮನಶ್ಶಾಂತಿಯನ್ನೂ ನೀಡಲಿದೆ. ವಿದ್ಯಾಕರ್ಮಗಳು ನಿಮ್ಮನ್ನು ಕಾಪಾಡಲಿ!

-----

## ಪ್ರಾಣದೃಷ್ಟಿಯಿಂದ ಓಂಕಾರೋಪಾಸನೆ

**ಓಮ್॥ ಅಥ ಹ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥ – ಮುಪಾಸಾಂಚಕ್ರಿರೇ ತಗ್ಂ ಹಾಸುರಾ ಋತ್ವಾ ವಿದಧ್ವಂಸುರ್ಯಥಾಶ್ಮಾನ– ಮಾಖಣಮೃತ್ವಾ ವಿಧ್ವಗ್ಂಸೇತೈವಮ್ ॥**
**1–2–7**

ಭಾವಾರ್ಥ:– ಇನ್ನು ಈ ಮುಖ್ಯಪ್ರಾಣನಿದಾನಲ್ಲ, ಅವನೆಂದೇ ಉದ್ಗೀಥವನ್ನು ಉಪಾಸನೆಮಾಡಿದರು. ಅವನನ್ನು ಸೇರಿ–ಅಸುರರು ಹೇಗೆ ಬಂಡೆಗೆ ಬಡಿದ ಮಣ್ಣು ಹೆಂಟೆಯು ನಾಶವಾಗುವದೋ ಹಾಗೆ–ನಾಶವಾದರು.

(ಓಂಕಾರವನ್ನು ಪ್ರಾಣನೆಂದು ಚಿಂತಿಸಬೇಕೆಂದೂ ಆ ಮುಖ್ಯಪ್ರಾಣನು ಪರಿಶುದ್ಧನಾಗಿರುವದರಿಂದ 'ಸಂಗ'ವೆಂಬ ಅಸುರರು ಅವನಲ್ಲಿ ಕೂಡಿದಾಗ ತಮ್ಮತನವನ್ನು ಕಳೆದುಕೊಳ್ಳುವರೆಂದೂ ತಿಳಿಸಿದೆ. ಜೀವರುಗಳು ಜೀವೋತ್ತಮನಾದ ವಾಯುವಿನ ಚಿಂತನೆಯಿಂದ ಉತ್ಕರ್ಷವನ್ನು ಹೊಂದುವರು. ಅವನೆಂದೇ ಓಂಕಾರವನ್ನು ಉಪಾಸನೆಮಾಡಬೇಕೆಂದು ಅಭಿಪ್ರಾಯ.)

## 3. ಮುಖ್ಯಪ್ರಾಣನೂ ಓಂಕಾರತತ್ತ್ವವೂ

ಛಾಂದೋಗ್ಯೋಪನಿಷತ್ತಿನಲ್ಲಿ ಆರನೆಯ ಅಧ್ಯಾಯವು ಪ್ರಾರಂಭವಾಗುವವರೆಗೆ ನಾನಾ ವಿಧವಾದ ಉಪಾಸನೆಗಳನ್ನು ವಿವರಿಸಿರುತ್ತದೆ. ಇವುಗಳು ಬಹಳ ಮಟ್ಟಿಗೆ ವೇದಾಂತವಿದ್ವಾಂಸರಿಗೇ ಅಪರಿಚಿತವಾಗಿರುತ್ತವೆ. ಹೀಗಿರುವಲ್ಲಿ ಸಾಮಾನ್ಯರ ವಿಷಯಕ್ಕೆ ಹೇಳಬೇಕಾದದ್ದೇ ಇಲ್ಲ. ಆದರೆ ಇಲ್ಲಿರುವ ಉಪಾಸನೆಗಳನ್ನು ಚೆನ್ನಾಗಿ ಮನದಂದರೆ ಎಂಥ ಸಾಮಾನ್ಯಸಾಧಕರು ಕೂಡ ಯಾವ ಖರ್ಚುವೆಚ್ಚಗಳಿಗೂ ಅವಕಾಶವಿಲ್ಲದಂತೆ ಉಪಾಸನೆಗಳನ್ನು ಕೈಗೊಂಡು ಶ್ರೇಷ್ಠವಾದ ಫಲಗಳನ್ನು ಹೊಂದಬಹುದಾಗಿದೆ– ಎಂದೆನಿಸುವದರಲ್ಲಿ ಆಶ್ಚರ್ಯವಿಲ್ಲ. ಈಗ ಲೋಕದಲ್ಲಿ ನಾವು ಕೇಳಿರುವಂತೆ ಆಂಜನೇಯ, ಲಲಿತಾ, ಚಾಮುಂಡೇಶ್ವರಿ, ಕಾಳಿ, ಸುದರ್ಶನ, ಗಣೇಶ–ಮುಂತಾದ ದೇವತೆಗಳ ಚಿಂತಕರೂ ಆಯಾ ದೇವತೆಯ ಪ್ರಸಾದದಿಂದ ಭಕ್ತರಿಗೆ ಇಷ್ಟಪ್ರಾಪ್ತಿ– ಅನಿಷ್ಟಪರಿಹಾರಗಳನ್ನು ದೊರಕಿಸಿಕೊಡುವವರೂ ವಿಶೇಷವಾಗಿ ಕಂಡುಬರುತ್ತಾರೆ. ಇದೊಂದು ರೀತಿಯಿಂದ ಲೋಕೋಪಕಾರವೆನಿಸಿದರೂ ಮಾನವನಿಗೆ ಇಷ್ಟಾನಿಷ್ಟಗಳ ಕಾಟವೇ ಒದಗದಂತೆ ಮಾಡುವದು ಈ ಉಪಾಸನೆಗಳಿಂದ ಸಾಧ್ಯವಿಲ್ಲ. ಏಕೆಂದರೆ ಇವೆಲ್ಲ ಕಾಮ್ಯೋಪಾಸನೆಗಳಾಗಿವೆ. ವೇದಾಂತೋಕ್ತವಾದ ತತ್ತ್ವಜ್ಞಾನದಿಂದ

ಪಡೆಯಬೇಕಾಗಿರುವ ಮೋಕ್ಷವೆಂಬ ಪರಮಪುರುಷಾರ್ಥಕ್ಕೆ ಕಾಮ್ಯೋಪಾಸನೆಗಳಿಂದ ಯಾವ ಪ್ರಯೋಜನವೂ ಆಗುವಂತಿಲ್ಲ. ಆದ್ದರಿಂದ ಮಾನವನು ಒಂದಲ್ಲ–ಒಂದು ದಿನ ಮುಮುಕ್ಷುವಾಗಲೇಬೇಕಾಗಿರುವದೂ ಆಗ ಜ್ಞಾನಸಾಧನಗಳಾದ ಉಪಾಸನೆಗಳನ್ನೇ ಕೈಗೊಳ್ಳಬೇಕಾಗಿಬರುವದೂ ಅನಿವಾರ್ಯವಾಗಿರುತ್ತದೆ.

ಪ್ರಕೃತ–ವೈದಿಕೋಪಾಸನೆಗಳು ವ್ಯವಹಾರದೃಷ್ಟಿಯಿಂದಲೂ ಸುಲಭವಾಗಿದ್ದು ಯಾವದೇ ವಿಶೇಷಸೌಕರ್ಯಗಳ ಅಪೇಕ್ಷೆಯಿಲ್ಲದೆ ಮಾಡಲು ಬರುವಂಥವಾಗಿವೆ. ಉದಾಹರಣೆಗೆ ಈಗ ಪ್ರಸ್ತಾಪಿಸಲಿರುವ ಪ್ರಾಣೋಪಾಸನೆಯನ್ನೇ ತೆಗೆದುಕೊಳ್ಳೋಣ. ಪ್ರತಿಯೊಬ್ಬನೂ ಉಸಿರಾಡುವದು ಅನಿವಾರ್ಯವು. ಹಾಗೆ ಉಸಿರಾಡುವದರ ಜೊತೆಗೆ ಅದೇ ಪ್ರಾಣಬಲದಿಂದ ನೋಡುವದು, ಕೇಳುವದು, ಮುಟ್ಟುವದು–ಮುಂತಾದ ವ್ಯವಹಾರಗಳನ್ನೆಲ್ಲ ನಾವು ಪ್ರತಿದಿನವೂ ಮಾಡುತ್ತಲೇ ಇದ್ದೇವೆ. ಈ ಸಂದರ್ಭದಲ್ಲಿ ಕಣ್ಣಿನ ಮೂಲಕ ನೋಡುವ ಶಕ್ತಿಯನ್ನು ಚಾಕ್ಷುಷಪ್ರಾಣನೆಂದೂ ಮೂಗಿನ ಮೂಲಕ ಮೂಸುವ ಶಕ್ತಿಯನ್ನು ಘ್ರಾಣಪ್ರಾಣನೆಂದೂ ಕರೆಯುತ್ತಾರೆಂಬುದೂ ನಮಗೆ ಗೊತ್ತು. ಆಯಾ ಇಂದ್ರಿಯಸ್ಥಾನಗಳ ಉಪಾಧಿಯುಳ್ಳ ಎಲ್ಲಾ ಪ್ರಾಣಗಳಿಗೂ ಮೂಲವಾಗಿರುವದೇ ಮುಖ್ಯಪ್ರಾಣವು. ಹೀಗೆಂತ ತಿಳಿದುಕೊಳ್ಳುವದಕ್ಕಾಗಲಿ, ಅನಂತರ ಮುಖ್ಯಪ್ರಾಣನ ಗುಣಗಳನ್ನೂ ಶ್ರೇಷ್ಠತೆಯನ್ನೂ ಮನಸ್ಸಿನಲ್ಲಿ ಹೊರಳಾಡಿಸುವದಕ್ಕಾಗಲಿ ಯಾವ ವಿಶೇಷಸೌಕರ್ಯಗಳೂ ಬೇಕಿಲ್ಲವಷ್ಟೆ!

ಈಗ ಮುಖ್ಯಪ್ರಾಣನ ಗುಣಗಳನ್ನೂ ಮಹಿಮೆಯನ್ನೂ ತಿಳಿಯೋಣ. ಇದಕ್ಕಾಗಿ ಒಂದು ಕಥೆಯನ್ನೇ ಉಪನಿಷತ್ತಿನಲ್ಲಿ ಹೇಳಿದಿದ್ದಾರೆ. ಇದೇ ಕಥೆಯೇ ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ಇದೆ. ಅದು ಹಾಗಿರಲಿ, ನಾವು ಮೂಗಿನಿಂದ ಮೂಸುವಾಗ ಒಳ್ಳೆಯ ವಾಸನೆಯನ್ನೂ ಕೆಟ್ಟವಾಸನೆಯನ್ನೂ ಅನಿವಾರ್ಯವಾಗಿ ಸ್ವೀಕರಿಸಬೇಕಾಗಿದೆ. ಬಸ್‌ನಲ್ಲಿ ಪ್ರಯಾಣಮಾಡುವಾಗ ಪಕ್ಕದ ಸೀಟಿನಲ್ಲಿರುವ ಪ್ರಯಾಣಿಕನು ಧೂಮಪಾನಮಾಡಿದಾಗ–ಅದು ಅಭ್ಯಾಸವಿಲ್ಲದವರಿಗೆ ಹಿಂಸೆಯಾಗುವದು ಎಲ್ಲರಿಗೂ ಗೊತ್ತು. ಇದಕ್ಕೆ ಕಾರಣವೇನೆಂದರೆ ನಮ್ಮ ಮೂಗಿಗೆ ಒಳ್ಳೆಯ ವಾಸನೆಯನ್ನು ಮಾತ್ರ ಸ್ವೀಕರಿಸಿ ಕೆಟ್ಟದ್ದನ್ನು ಬಿಡಲು ಬಾರದಿರುವದು. ಈ ದೌರ್ಬಲ್ಯವನ್ನೇ 'ಸಂಗ'ವೆಂದೂ ಇದಕ್ಕೆ 'ಅಸುರರ ಹಾವಳಿ'ಯೇ ಕಾರಣವೆಂದೂ ಉಪನಿಷತ್ತು ತಿಳಿಸುತ್ತಿದೆ. ಅಸು–ಎಂದರೆ ಪ್ರಾಣದಲ್ಲಿಯೇ ರ– ಎಂದರೆ ರಮಣಮಾಡುವ ಬುದ್ಧಿಯುಳ್ಳವನು. ಮಾನವನಿಗೆ ಎಲ್ಲಾ ಪದಾರ್ಥಗಳಿಗಿಂತ ತನ್ನ ಪ್ರಾಣದಲ್ಲಿ–ಆದರಲ್ಲಿಯೂ ಈ ಪಾಂಚಭೌತಿಕದೇಹದಲ್ಲಿ ನೆಲಸಿರುವ ಪ್ರಾಣದಲ್ಲಿ ಅತಿ ಪ್ರೀತಿಯಿರುತ್ತದೆ. ಮತ್ತು ಇದೇ ಪ್ರಾಣವು ವಾಗಾದಿಗಳ ಮೂಲಕ ವ್ಯಾಪಾರಮಾಡುವಾಗ ತಾನು ವಾಗ್ಮಿಯೆಂದೂ, ಸೂಕ್ಷ್ಮಶ್ರವಣವುಳ್ಳವನೆಂದೂ, ಸೂಕ್ಷ್ಮದೃಷ್ಟಿಯ ಪರೀಕ್ಷಕನೆಂದೂ, ವೇಗದ

ಓಟಗಾರನೆಂದೂ, ಸುಂದರಬರಹಗಾರನೆಂದೂ–ಇತ್ಯಾದಿ ಅಭಿಮಾನವು ತುಂಬಿತುಳುಕುತ್ತಿರುತ್ತದೆ. ಈ ಅಭಿಮಾನವನ್ನೇ 'ಅಸುರಪಾಪ್ಮ'ವೆನ್ನುವರು. ಇದರ ಫಲವಾಗಿ ಮಾನವನಿಗೆ ಸೋಲು ನಿಶ್ಚಿತ. ಅದನ್ನು 'ಅಸುರರ ಜಯ'ವೆಂದೂ ಕರೆಯಲಾಗಿದೆ. ಹೀಗೆ ಇಂದ್ರಿಯಗಳನ್ನು ಆಶ್ರಯಿಸಿರುವ ಪಾಪವು ಆಯಾ ಪ್ರಾಣಗಳನ್ನು ದೋಷಯುಕ್ತರನ್ನಾಗಿ ಮಾಡಿರುವದೇ ನಮ್ಮ ಇಂದ್ರಿಯ ದೌರ್ಬಲ್ಯಗಳ ಕುರುಹಾಗಿರುತ್ತದೆ. ಈ ತತ್ತ್ವವನ್ನು ಕಥೆಯ ರೂಪದಿಂದ ಉಪನಿಷತ್ತಿನಲ್ಲಿ ಹೇಳುತ್ತಾ ವಾಗಾದಿ ಪ್ರಾಣಗಳನ್ನು ಶ್ರೇಷ್ಠವೆಂದು ಚಿಂತಿಸಿದಾಗಲೆಲ್ಲ ಅಸುರರು ಮಾಡಿದ ಧಾಳಿಯ ಫಲವಾಗಿ ಆ ದೇವತೆಗಳೆಲ್ಲರೂ ಹಿಮ್ಮೆಟ್ಟಿದರು. ಆದರೆ ಪ್ರಾಣನನ್ನು ಮಾತ್ರ ಅಸುರರು ಹಾಗೆ ಹಿಮ್ಮೆಟ್ಟಿಸಲಾಗಲಿಲ್ಲ. ಏಕೆಂದರೆ ಪ್ರಾಣನು ನಿರಭಿಮಾನಿಯಾಗಿದ್ದನು. ಅವನು ಅಸಂಗನೂ ಆಗಿದ್ದನು–ಎಂದರೆ ಯಾವ ಇಂದ್ರಿಯಗಳನ್ನೂ ತಾನು ತನ್ನದೆಂದುಕೊಳ್ಳಲಿಲ್ಲ. ಈ ಪರಿಶುದ್ಧತೆಯ ಫಲವಾಗಿ ಸಂಗರೂಪರಾದ ಅಸುರರು ಪ್ರಾಣನೊಡನೆ ಸೆಣೆಸಿ ಸೋತರು. ಆದ್ದರಿಂದ ಮುಖ್ಯಪ್ರಾಣನನ್ನು ಪರಿಶುದ್ಧನೆಂದೂ ಶ್ರೇಷ್ಠನೆಂದೂ ಚಿಂತಿಸುವವನು ಈ ಅಸುರರಿಂದ ಬಿಡುಗಡೆಯನ್ನು ಹೊಂದುತ್ತಾನೆ–ಎಂದು ತಿಳಿಸಲಾಗಿದೆ. ಇಲ್ಲಿ ಉಪಾಸನೆಯನ್ನು ಕೈಗೊಳ್ಳುವದು ಹೇಗೆಂದರೆ: ಮೊದಲು ನಾನು ಅಂಥವನು, ಇಂಥವನು–ಎಂದು ಕೊಚ್ಚಿಕೊಳ್ಳುವದನ್ನು ಕೈಬಿಡುವದಾಗಬೇಕು. ಅನಂತರ 'ಪ್ರಾಣ' ತತ್ತ್ವದ ಅರಿವನ್ನು ಮನಸ್ಸಿಗೆ ದೃಢಪಡಿಸಿಕೊಳ್ಳಬೇಕು. ಇಂದ್ರಿಯಗಳ ಹಂಗಿಲ್ಲದ ಪ್ರಾಣನು ಹೇಗಿರುವನು? ಎಂಬಿದನ್ನು ಅನುಸಂಧಾನಮಾಡಬೇಕು. ಸುಷುಪ್ತಿಯ ಅನುಭವಬಲದಿಂದ ಪ್ರಾಣನೊಬ್ಬನೇ ಎಚ್ಚರವಾಗಿರುವಂಥ ಸ್ಥಿತಿಯನ್ನು ಮನದಂದು ಆ ಪ್ರಾಣನ ಸ್ವರೂಪವನ್ನು ಮೆಲುಕುಹಾಕಬೇಕು. ಇದೇ ಪ್ರಾಣೋಪಾಸನೆಯು.

ಈಗ ಅಸುರರ ಹಾವಳಿಯ ವಿಚಾರವಾಗಿ ಮನನಮಾಡೋಣ. ಈ ವಿಷಯಗಳೆಲ್ಲ ತನ್ನೊಳಗೇ ಚಿಂತಿಸುವವನಿಗೆ ಮಾತ್ರ ಅರ್ಥವಾಗಬಲ್ಲದೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ವಾಗಾದಿಗಳಲ್ಲಿ ಅಡಗಿರುವ ಅಸುರರು ನಾನಾ ರೂಪರಾಗಿರುತ್ತಾರೆ. ವ್ಯವಹಾರಮಾಡುವಾಗ ಇಂದ್ರಿಯಗಳನ್ನು ನಾನು–ನನ್ನದೆಂದು ಕೊಳ್ಳುವದು ಅನಿವಾರ್ಯವಾದರೂ ಇದು 'ಅಧ್ಯಾಸ' ಎಂಬಿದನ್ನು ಮರೆಯಬಾರದು. ಇದರ ಅನುಭವವೂ ವ್ಯವಹಾರಕಾಲದಲ್ಲಿಯೇ ನಮಗೆ ಮನದಟ್ಟಾಗಬೇಕಾಗಿದೆ. ಹೇಗೆಂದರೆ: ಒಬ್ಬನು ತಾನು ಬಹಳ ಚೆನ್ನಾಗಿ ಪ್ರವಚನಮಾಡಿ ಜನಗಳನ್ನೆಲ್ಲ ಮೆಚ್ಚಿಸಿದೆನು–ಎಂಬ ಅಭಿಮಾನಕ್ಕೆ ವಶನಾಗಿರುವನೆಂದಿಟ್ಟುಕೊಳ್ಳೋಣ. ನಿಜವಾಗಿ ಪ್ರವಚನವು ಮುಖ್ಯಪ್ರಾಣನ ಅನುಗ್ರಹದಿಂದಲೇ ಆಗಿರುತ್ತದೆ. ಆದರೆ ನಾವು ಆತನಿಗೆ ಸೊನ್ನೆಹಾಕಿ ವಾಕ್ಕಿನಲ್ಲಿ ಪ್ರವಹಿಸಿದ ಪ್ರಾಣನನ್ನು ಎತ್ತಿಹಿಡಿದು ತಾನು 'ಅಚ್ಚುಮೆಚ್ಚಿನ ಉಪನ್ಯಾಸಕನು' ಎಂಬ ಅಭಿಮಾನಕ್ಕೆ ವಶರಾಗಿರುತ್ತೇವೆ. ಆ ಅಭಿಮಾನವು ಏಕೆ

ಬೇಕಾಗಿದೆ? ಅದಿಲ್ಲದಿದ್ದರೂ ಉಪನ್ಯಾಸಮಾಡಲಾಗುವದಿಲ್ಲವೆ? ಎಂದು ಪರೀಕ್ಷಿಸಿ ಕೊಳ್ಳಿರಿ. ಟೇಪ್ ರೆಕಾರ್ಡರ್ ಎಂಬ ಯಂತ್ರವು ಹೇಗೆ ಉಪನ್ಯಾಸಕನ ಅಧೀನವಾಗಿದ್ದು ಅವನು ಹೇಳಿದ್ದನ್ನೇ ಮತ್ತೆ ಹೇಳಬಲ್ಲದೋ ಆದರೆ ಅದಕ್ಕೆ ತಾನು ಉಪನ್ಯಾಸಮಾಡುತ್ತಿದ್ದೇನೆಂಬ ಅಭಿಮಾನವು ಇಲ್ಲವೋ ಹಾಗೆ ನಾವು ಕೂಡ 'ನಮ್ಮ ವಾಗಿಂದ್ರಿಯವು ಟೇಪ್ ರೆಕಾರ್ಡರ್ ಇದ್ದ ಹಾಗೆ. ಇದು ನಾನಲ್ಲ. ನಾನು ಪ್ರಾಣ. ನನ್ನ ಸನ್ನಿಧಿಯಿಂದ ಅದು ವ್ಯಾಪಾರಮಾಡುತ್ತಿದೆ. ನಾನೇಕೆ ಅದರ ನಿಮಿತ್ತವಾದ ಅಭಿಮಾನಕ್ಕೂ ಸುಖದುಃಖಗಳಿಗೂ ವಶನಾಗಬೇಕು?' ಎಂದೇಕೆ ತಿಳಿಯಬಾರದು? ಇದೇ ನಿಜವಾದ ಶೋಧನವು. ಇಂಥ ಪ್ರಯತ್ನದಿಂದ ಅಭಿಮಾನವನ್ನು ಹಿಮ್ಮೆಟ್ಟಿಸಿದರೆ ಅಸುರರನ್ನು ಗೆದ್ದಂತಾಗುವದು. ಈ ಗೆಲುವನ್ನು ಮುಂದುಮಾಡಿಕೊಂಡೇ ಪ್ರಾಣನ ಚಿಂತನೆಗೆ ನಾವು ಸಿದ್ಧರಾಗಬೇಕು. ಉದಾಹರಣೆಗಾಗಿ ತಿಳಿಸಿರುವ ವಾಗಿಂದ್ರಿಯದಂತೆಯೇ ಎಲ್ಲಾ ಇಂದ್ರಿಯಾಭಿಮಾನಗಳಿಂದಲೂ ಹಿಮ್ಮೆಟ್ಟುವ ಪ್ರಯತ್ನವು ನಮ್ಮಲ್ಲಿ ಸದಾ ನಡೆಯುತ್ತಲೇ ಇರಬೇಕು. ಆಗಲೇ ನಾವು ಪ್ರಾಣೋಪಾಸಕರಾಗಲು ಸಾಧ್ಯವಾದೀತು.

ಈ ಪರಿಸ್ಥಿತಿಯಲ್ಲಿ ಶ್ರುತಿಯು ನಮಗೆ ಪ್ರಾಣನನ್ನು ಗುರುತಿಸಿ ಅವನನ್ನು 'ಓಂ' ಎಂದೇ ಚಿಂತಿಸುವಂತೆ ಆದೇಶವನ್ನು ನೀಡುತ್ತಿದೆ. ಏಕೆಂದರೆ ನಮ್ಮ ಅಭಿಮಾನವು ಎಂಥ ಮಹತ್ತಾದ ವಸ್ತುವನ್ನಾದರೂ ತನ್ನ ಮಟ್ಟಕ್ಕೆ ಇಳಿಸಿಕೊಂಡು ಬಿಡುತ್ತದೆ. ಹೇಗೆಂದರೆ ಮಂತ್ರಿಯಾಗಿ ಉನ್ನತಸ್ಥಾನದಲ್ಲಿರುವವನನ್ನು ಕೂಡ 'ಆತನು ನಮ್ಮ ಪಟೇಲರ ಮಗ' ಎಂದೇ ಪರಿಚಯಮಾಡಿಕೊಡುವದುಂಟು. ತ್ರೈಲೋಕ್ಯಾಧಿಪತಿಯಾದ ಮಹಾವಿಷ್ಣುವಿನ ಅವತಾರರೂಪನಾದ ರಾಮನನ್ನು ವಸಿಷ್ಠಾದಿಗಳು ಬ್ರಹ್ಮಸ್ವರೂಪನೆಂದು ತಿಳಿದಿದ್ದರೆ ಸೀತೆಯ ಸ್ನೇಹಿತೆಯರು 'ನಮ್ಮ ಸೀತುವಿನ ಗಂಡ' (ಸೀತಾಯಾಃ ಪತಯೇ ನಮಃ) ಎಂದೇ ಕರೆಯುತ್ತಿದ್ದರಂತೆ. ಹಾಗೆ ನಮ್ಮ ದೇಹದಲ್ಲಿರುವ ಪ್ರಾಣನನ್ನು ನಾವು ಪರಿಚ್ಛಿನ್ನನನ್ನಾಗಿಯೇ ಭಾವಿಸುತ್ತೇವಾದ್ದರಿಂದ ಅದನ್ನು ಪರಿಹರಿಸಿ ಓಂಕಾರನೆಂದು ಚಿಂತಿಸುವಂತೆ ಶ್ರುತಿಯಲ್ಲಿ ತಿಳಿಸಿದೆ.

ಈಗ ಪ್ರಾಣೋಪಾಸನೆಗೂ ಓಂಕಾರಕ್ಕೂ ಇರುವ ಸಂಬಂಧವೇನೆಂದು ತಿಳಿಯೋಣ. ಓಂಕಾರವು ಪರಮಾತ್ಮನ ಪ್ರಿಯವಾದ ಹೆಸರೆಂದು ಈಗಾಗಲೆ ಹೇಳಿದೆ. ಹಾಗೂ ಅದರಲ್ಲಿ ಉದ್ಗೀಥದೃಷ್ಟಿಯನ್ನಿಡಬೇಕೆಂಬುದೂ ನಮಗೆ ತಿಳಿದಿದೆ. ಇಂಥ ಪವಿತ್ರವಾದ ಮಹಿಮಾಯುಕ್ತವಾದ ಓಂಕಾರವನ್ನು ಚಿಂತಿಸುವವನು ತನ್ನ ಪ್ರಾಣವನ್ನು ಅದರೊಡನೆ ಒಂದುಗೂಡಿಸಿದರೆ ಪ್ರಾಣನ ವಿಷಯಕ್ಕೆ ನಮಗಿರುವ ಅಲ್ಪಭಾವವು ಹೋಗಿಬಿಡುವದು. ಉಪಾಸಕನು ತನ್ನ ಪ್ರಾಣವು ಪರಿಚ್ಛಿನ್ನವಲ್ಲವೆಂದೂ ಅದು ಆಧಿ ದೈವಿಕವಾಗಿ ವಾಯುವೇ ಆಗಿದ್ದು ಇಡಿಯ ಜಗತ್ತಿನ ಸೂತ್ರಾತ್ಮನಾಗಿದೆ–ಎಂದೂ

ಭಾವಿಸಿದಾಗ ಪ್ರಾಣಸಾಯುಜ್ಯವೇ ದೊರಕಲಿದೆ. ಈ ಪ್ರಯತ್ನಕ್ಕೆ ಓಂಕಾರಾಲಂಬನವು ಅವಶ್ಯವಾಗಿದೆ. ಆದ್ದರಿಂದಲೇ ಎಲ್ಲಾ ಉಪಾಸನೆಗಳನ್ನೂ ಓಂಕಾರಾವಲಂಬನೆಯಿಂದಲೇ ಮಾಡುವುದು ಸೂಕ್ತವೆಂತ ಶಾಸ್ತ್ರಗಳಲ್ಲಿ ತಿಳಿಸಿರುತ್ತದೆ. ಆಗ ಓಂಕಾರವೆಂಬುದು ನಿಜವಾಗಿ ಪರಮಾತ್ಮನ ಸಮೀಪಸ್ಥವಾದ ಉಪಾಧಿಯೆಂದು ಸಿದ್ಧವಾಗುವದು. ಹೀಗೆ ಓಂಕಾರವನ್ನು ಮುಖ್ಯಪ್ರಾಣನ ದೃಷ್ಟಿಯಿಂದ ಚಿಂತಿಸುತ್ತಾ ವಿಶುದ್ಧ್ಯಾದಿಗುಣಗಳನ್ನೂ ಅಳವಡಿಸಿಕೊಂಡು ಅನುಸಂಧಾನಮಾಡುವವನಿಗೆ ಮುಂದೆ ಕ್ರಮಮುಕ್ತಿಗೆ ಅನುಕೂಲವಾಗುವದು.

ಆದರೆ ಈಗ ವರ್ಣಿಸಿರುವ ರೀತಿಯಿಂದ ಪ್ರಾಣೋಪಾಸನೆಯನ್ನು ಕೈಗೊಳ್ಳುವದೂ ಅನೇಕರಿಗೆ ಕಷ್ಟವಾಗಿರುತ್ತದೆ ಎಂಬಿದು ನಿಜ. ಹೊಸದರಲ್ಲಿ ಯಾವದೂ ಕಷ್ಟವೇ ಸರಿ. ಆದ್ದರಿಂದ ಈವರೆಗೆ ಯಾರು ಉಪಾಸನಾಮಾರ್ಗದಲ್ಲಿ ಪಳಗಿರುತ್ತಾರೋ ಅಂಥವರಾದರೂ ಈ ಅಧ್ಯಾತ್ಮೋಪಾಸನೆಗಳ ಕಡೆಗೆ ದೃಷ್ಟಿಯನ್ನು ಹಾಯಿಸುವದು ಅಗತ್ಯವಾಗಿರುತ್ತದೆ. ಅಂಥವರು ತಮ್ಮ ಉಪಾಸ್ಯದೇವತೆಯನ್ನೇ ಪ್ರಾಣನ ಸ್ವರೂಪದಲ್ಲಿ ಅಡಕವಾಡಿ ಚಿಂತಿಸಿದಲ್ಲಿ ಮತ್ತೂ ಒಳ್ಳೆಯದು. ಭಗವದ್ಗೀತೆಯಲ್ಲಿರುವ ಓಂಕಾರೋಪಾಸನೆಯ ವಿಷಯವನ್ನು ಈ ಸಂದರ್ಭದಲ್ಲಿ ಮನದಂದು ಕೊಳ್ಳುವದರಿಂದ ಲಾಭವಿದೆ. ಅಲ್ಲಿ ತಿಳಿಸಿರುವಂತೆ–''ಎಲ್ಲಾ ಇಂದ್ರಿಯದ್ವಾರಗಳನ್ನೂ ಬಿಗಿಹಿಡಿದು, ಮನಸ್ಸನ್ನು ಹೃದಯದಲ್ಲಿ ಕಟ್ಟಿಹಾಕಿ, ಪ್ರಾಣವನ್ನು ಬ್ರಹ್ಮರಂಧ್ರದ ಮೂಲಕ ನೆತ್ತಿಯಲ್ಲಿ ಅಳವಡಿಸಿಕೊಂಡು ಯೋಗಧಾರಣಾಕ್ರಮದಿಂದ ಓಂ ಎಂಬ ಏಕಾಕ್ಷರಬ್ರಹ್ಮವನ್ನು ಗಟ್ಟಿಯಾಗಿ ಉಚ್ಚರಿಸುತ್ತಾನನ್ನನ್ನೇ ಚಿಂತಿಸುತ್ತಾ ಯಾವನು ಈ ಶರೀರವನ್ನು ಬಿಡುವನೋ ಅವನು ಪರಮಗತಿಯನ್ನೈದುವನು'' ಎಂದು ವರ್ಣಿಸಿರುವದು ಉಪಾಸಕರಿಗೆ ದೀಪದಂತೆ ಮಾರ್ಗದರ್ಶಕವಾಗಿರುತ್ತದೆ. ಅಂತೂ ಉಪಾಸನೆಯು ಕೂಡ ಸುಲಭವೆಂದೇನೂ ಹೇಳಲಾಗುವದಿಲ್ಲ. ಆದರೆ ಅಭ್ಯಾಸಶೀಲರಿಗೆ ಇಂಥ ಉಪಾಸನೆಗಳು ಒಂದಲ್ಲ ಒಂದು ಬಾರಿಗೆ ವಶವಾಗುವದರಲ್ಲಿ ಸಂಶಯವಿಲ್ಲ. ಪ್ರಾಣಿಗಳಾಗಿರುವ ನಾವೆಲ್ಲರೂ ಕೇವಲ ಉಸಿರಾಟಮಾತ್ರದಿಂದ ಜೀವನವನ್ನು ವ್ಯರ್ಥಮಾಡಿಕೊಳ್ಳದೆ ಪ್ರಾಣೋಪಾಸಕರಾಗಲು ಪ್ರಯತ್ನಿಸಬೇಕಾಗಿದೆ.

----------

## ಆದಿತ್ಯದೃಷ್ಟಿಯಿಂದ ಉದ್ಗೀಥೋಪಾಸನೆ

ಓಮ್॥ ಯ ಏವಾಸೌ ತಪತಿ ತಮುದ್ಗೀಥಮುಪಾಸೀತ ಉದ್ಯನ್ ವಾ ಏಷ ಪ್ರಜಾಭ್ಯ ಉದ್ಗಾಯತಿ। ಉದ್ಯಗ್‌ಂಸ್ತಮೋ ಭಯಮಪಹನ್ತಿ॥ 1–3–1.

ಭಾವಾರ್ಥ:– ಅಗೊ, ಆ ತಪಿಸುತ್ತಿರುವನಲ್ಲ, ಅವನೆಂದೇ ಉದ್ಗೀಥವನ್ನು ಉಪಾಸನೆಮಾಡಬೇಕು. ಉದಯಿಸುವಾಗ ಇವನು ಪ್ರಜೆಗಳಿಗೆ ಉದ್ಗಾನಮಾಡುತ್ತಾನೆ. ಉದಯಿಸುವಾಗಲೆ ತಮಸ್ಸನ್ನೂ ಭಯವನ್ನೂ ನಾಶಗೊಳಿಸುತ್ತಾನೆ.

(ಸೂರ್ಯನನ್ನು ಉದ್ಗೀಥವೆಂದು ಉಪಾಸನೆಮಾಡಬೇಕು. ಏಕೆಂದರೆ ಆತನು ಉದಯಿಸುವಾಗಲೇ ಸಸ್ಯಗಳನ್ನು ಪಕ್ವಗೊಳಿಸುತ್ತಾ ಕತ್ತಲೆಯನ್ನು ಕಳೆಯುತ್ತಾ ಭಯವನ್ನು ನಾಶಗೊಳಿಸುತ್ತಾ ಮೇಲಕ್ಕೇರುವನು. ಆದ್ದರಿಂದ ಸೂರ್ಯನು ಉದ್ಗೀಥನು–ಎಂದು ಭಾವ.)

# 4. ಆದಿತ್ಯೋಪಾಸನೆಯ ತತ್ತ್ವ

ಹಿಂದಿನ ವಿವರಣೆಯಲ್ಲಿ ಮುಖ್ಯಪ್ರಾಣನ ಉಪಾಸನೆಯನ್ನು ಕುರಿತು ವಿಚಾರಮಾಡಲಾಗಿತ್ತು. ನಮ್ಮ ಜೀವನಾಧಾರನಾದ ಪ್ರಾಣನು ವಿಶುದ್ಧನು. ಏಕೆಂದರೆ ಆತನಿಗೆ ಯಾವದೇ ಪಾಪಗಳ ಸಂಪರ್ಕವಿಲ್ಲ. ಉಸಿರಾಡುತ್ತಿರುವ ದೇಹಗಳೆಲ್ಲವೂ ಒಂದು ರೀತಿಯಲ್ಲಿ 'ಮಡಿ'ಯಾಗಿರುವವು. ಆದರೆ ಅದೇ ಪ್ರಾಣನು ದೇಹವನ್ನು ಬಿಟ್ಟನೆಂದರೆ ದೇಹವೇ 'ಮೈಲಿಗೆ'ಯಾಗಿ ಶವವಾಗುವದು. ದೇಹವು ಶಿವವಾಗಿರಬೇಕಾದರೆ ಪ್ರಾಣನ ಸನ್ನಿಧಿಯೇ ಕಾರಣವು. ಆ ಪ್ರಾಣನಿಗೆ ಮಾತ್ರ ಯಾವ ಮಡಿಮೈಲಿಗೆಗಳೂ ಇಲ್ಲ. ಹಾಗೆಯೇ ಪ್ರಾಣನ ಆಧಿದೈವಿಕರೂಪವಾದ 'ವಾಯು'ವಿಗೂ ಕಟ್ಟುಪಾಡುಗಳಿಲ್ಲ. ಅವನಿಗೆ ಏನನ್ನು ಮುಟ್ಟಿದರೂ ಮೈಲಿಗೆಯಾಗುವದಿಲ್ಲ. ಇದೇ ವಿಶುದ್ಧತ್ತ್ವವು. ಇದರ ಜೊತೆಗೆ ಪ್ರಾಣನು 'ಅಂಗಿರಸ'ನೆಂದೂ ಪ್ರಸಿದ್ಧನಾಗಿರುವನು. ಅಂಗಗಳಿಗೆಲ್ಲ ಈತನೇ ರಸನಾದ್ದರಿಂದ ಈ ಹೆಸರೂ ಅನ್ವರ್ಥವಾಗಿದೆ. ಮತ್ತು ಈ ಪ್ರಾಣನು ಆತ್ಮಂಭರಿಯಲ್ಲ. ಆತ್ಮಂಭರಿ ಎಂದರೆ ತನ್ನ ಹೊಟ್ಟೆಯ ಪಾಡನ್ನು ಮಾತ್ರ ನೋಡಿಕೊಳ್ಳುವವನು. ಇಂಥವನನ್ನು ಸ್ವಾರ್ಥಿಯೆಂದೂ ಜನರು ಕರೆಯುತ್ತಾರೆ. ಪ್ರಾಣನು ವಾಕ್ಕು ಮುಂತಾದ ಎಲ್ಲಾ ಇಂದ್ರಿಯಗಳ ಯೋಗಕ್ಷೇಮವನ್ನೂ ನೋಡಿಕೊಳ್ಳುವವನಾಗಿದ್ದು ತಾನು ನಿಃಸ್ಪೃಹನಾಗಿರುವನು. ಈ ಪ್ರಾಣನನ್ನು ಬೃಹತಿಯೆಂದೂ ಬಲ್ಲವರು ಚಿಂತಿಸುತ್ತಾರೆ. ಏಕೆಂದರೆ ವಾಕ್ಕು (ಮಾತು) ಎಂಬಿದು ಬೃಹಸ್ಪತಿಯು. ಅದಕ್ಕೆ ಇವನು ಪತಿಯಾದ್ದರಿಂದ ಬೃಹಸ್ಪತಿಯು. ಇದೇ ರೀತಿಯಾಗಿ ಆಸ್ಯ–ಎಂದರೆ ಮುಖದಿಂದ ಹೊರ ಬರುವವನಾದ್ದರಿಂದ ಆಯಾಸ್ಯನೆಂದೂ ತಿಳಿಯಬೇಕು. ಇಂಥ ಮುಖ್ಯಪ್ರಾಣನನ್ನು ಓಂಕಾರ ರೂಪನೆಂದೂ ಉದ್ಗೀಥನೆಂದೂ ಚಿಂತಿಸಬೇಕೆಂದು ಈವರೆಗೆ ತಿಳಿಸಿದ್ದಾಗಿದೆ.

ಈಗ ಆಧಿದೈವಿಕವಾಗಿ ಆದಿತ್ಯರೂಪದಿಂದ ಉದ್ಗೀಥೋಪಾಸನೆಯನ್ನು ಉಪನಿಷತ್ತು ಪ್ರಸ್ತಾಪಿಸುತ್ತಿದೆ. ಉಪಾಸನೆಗಳನ್ನು ಮಾಡಲು ಉತ್ಕೃಷ್ಟವಾದ ಯಾವದಾದರೊಂದು ಆಲಂಬನವು ಬೇಕಾಗುವದು. ಜ್ಞಾನವಾದರೊ, ಎಲ್ಲೆಲ್ಲೂ

ವ್ಯಾಪಿಸಿರುವ ಆತ್ಮತತ್ತ್ವವನ್ನು ಗ್ರಹಿಸಬಲ್ಲದಾದ್ದರಿಂದ ನಿರ್ದಿಷ್ಟವಾದ ಉಪಾಧಿಯು ಅದಕ್ಕೆ ಬೇಕಿಲ್ಲ. ಆದರೆ ಎಲ್ಲರಿಗೂ ಒಮ್ಮೆಗೇ ಜ್ಞಾನವು ದಕ್ಕಲಾರದಾದ್ದರಿಂದ ಜ್ಞಾನದಿಂದ ಯಾವ ವಸ್ತುವನ್ನು ಅರಿಯಬೇಕಾಗಿದೆಯೋ ಅದನ್ನೇ ಒಂದಾನೊಂದು ಆಲಂಬನದಲ್ಲಿ ಭಾವಿಸಿ ಚಿಂತಿಸುವಂತೆ ಶಾಸ್ತ್ರವು ಏರ್ಪಡಿಸಿರುತ್ತದೆ. ಇದು ಮಧ್ಯಮಾಧಿಕಾರಿಗಳಿಗೆ ಅತ್ಯುಪಯುಕ್ತವಾಗಿದೆ. ಹೀಗೆ ಚಿಂತಿಸುವಾಗ ಬ್ರಹ್ಮವು ಅತ್ಯಂತಪರಿಶುದ್ಧವೂ, ಬೃಹತ್ತೂ, ಚೇತನವೂ ಅಸಂಗವೂ ಆಗಿರುವದರಿಂದ ಸಾಧ್ಯವಾದಮಟ್ಟಿಗೂ ಬ್ರಹ್ಮವನ್ನು ಹೋಲುವಂಥ ಆಲಂಬನಗಳನ್ನೇ ಉಪಾಸನೆಗೆ ಆಧಾರವಾಗಿಟ್ಟುಕೊಳ್ಳಬೇಕು. ನಮಗೆಲ್ಲರಿಗೂ ಚಿರಪರಿಚಿತವಾಗಿದ್ದು ಸುಲಭವಾಗಿ ಅರ್ಥವಾಗುವ ಹಾಗೂ ಪ್ರತ್ಯಕ್ಷದೇವತೆಯಾಗಿದ್ದು ಲೋಕವನ್ನನುಗ್ರಹಿಸುವ ಆದಿತ್ಯನು ಬ್ರಹ್ಮೋಪಾಸನೆಗೆ ಅತ್ಯಂತ ಶ್ರೇಷ್ಠವಾದ ಆಲಂಬನವಾಗಿರುತ್ತಾನೆ. ಆದ್ದರಿಂದ ಆದಿತ್ಯನಲ್ಲಿಯೇ ಉದ್ಗೀಥದೃಷ್ಟಿಯನ್ನು ಈಗ ವಿಧಿಸಲಾಗುತ್ತಿದೆ.

ಈಗ ಆಲಂಬನಗಳ ವಿಚಾರವಾಗಿ ಸ್ವಲ್ಪ ವಿಮರ್ಶೆಮಾಡಬಹುದಾಗಿದೆ. ಆಲಂಬನ, ಆಶ್ರಯ, ಪ್ರತೀಕ, ಉಪಾಧಿ–ಇವೆಲ್ಲವೂ ಉಪಾಸನಾಪ್ರಕರಣದಲ್ಲಿ ಪರ್ಯಾಯಶಬ್ದಗಳಾಗಿರುತ್ತವೆ. ಸೂರ್ಯ, ಚಂದ್ರ, ವಾಯು–ಮುಂತಾದವುಗಳು ಹಾಗೂ ಭೌತಿಕವಾಗಿ ಗೋವು, ಬ್ರಾಹ್ಮಣ, ಅಗ್ನಿ–ಇತ್ಯಾದಿಗಳನ್ನು ಬ್ರಹ್ಮೋಪಾಸನೆಗೆ ಪ್ರತೀಕವಾಗಿ ಅಲ್ಲಲ್ಲಿ ಹೇಳಿರುತ್ತಾರೆ. ಉತ್ಕೃಷ್ಟವೆಂದು ನಮಗೆ ತೋರುವ ಪದಾರ್ಥಗಳೇ ಪ್ರತೀಕವಾಗಲು ಯೋಗ್ಯವಾಗಿರುವವು. ಏಕೆಂದರೆ ಬ್ರಹ್ಮಭಾವನೆಯು ಉಂಟಾಗಲು ಇಂಥ ಉಪಾಧಿಗಳು ಅವಶ್ಯವಾಗಿರುವವು. ಕೆಲವರು ಗೋವನ್ನು ಮಾತ್ರ ದೇವರೆಂದೂ ನಾಯಿಯನ್ನು ಅಲ್ಲವೆಂದೂ ಭಾವಿಸಲು ಕಾರಣವೇನು? ಎಲ್ಲದರಲ್ಲಿಯೂ ಪರಮಾತ್ಮನಿರುವನಲ್ಲವೆ? ನಾಯಿಯಲ್ಲೇ ಆ ಭಗವಂತನನ್ನೇಕೆ ಚಿಂತಿಸಬಾರದು? ಎಂದು ಕೇಳುತ್ತಾರೆ. ಆದರೆ ಎಲ್ಲಾ ಪ್ರಾಣಿಗಳನ್ನೂ ದೇವರೆಂದೇ ಕಂಡುಕೊಂಡಿರುವವನಿಗೆ ಈ ಸಮಸ್ಯೆಯು ಉದ್ಭವಿಸುವದಿಲ್ಲ. ಅಂಥವರು ತೀರ ಕಡಿಮೆ ಇರುತ್ತಾರೆ. ಉಳಿದವರಿಗೆ ಗೋವು ಶ್ರೇಷ್ಠವೆಂದೂ ನಾಯಿಯು ಕನಿಷ್ಠವೆಂದೂ ಭಾವನೆಯಿದ್ದುಕೊಂಡಿದೆ. ಯಾವನಾದರೂ ಕಷ್ಟಪಡುತ್ತಿದ್ದರೆ ಅಂಥವನನ್ನು 'ನಾಯಿಪಾಡು ಹತ್ತಿದ್ದಾನೆ' ಎನ್ನುವರು. ಈ ಕಲ್ಪನೆಗೆ ನಾವೇನು ಮಾಡೋಣ? ಜನರಿಗೆ ನಾಯಿಯ ವಿಷಯದಲ್ಲಿ ಕೂಡ ಜಾತಿಯ ನಾಯಿ, ಬೀದಿಯನಾಯಿ–ಎಂಬ ಉತ್ಕೃಷ್ಟನಿಕೃಷ್ಟಭಾವವಿದೆ. ಹೀಗೆ ನೈಸರ್ಗಿಕ ವಾಗಿರುವ ಭೇದಬುದ್ಧಿ , ಉಚ್ಚನೀಚಭಾವನೆಗಳಿಗೆ ಅನುಸಾರವಾಗಿಯೇ ಶಾಸ್ತ್ರವು ಉಚ್ಚವಾದ ಹಾಗೂ ಉತ್ಕೃಷ್ಟವಾದ ವಸ್ತುಗಳನ್ನೇ ಬ್ರಹ್ಮಚಿಂತನೆಗೆ ಆಲಂಬನವಾಗಿ ಆರಿಸಿಕೊಂಡಿರುತ್ತದೆ. ನಮ್ಮ ಶರೀರದಲ್ಲಿಯೇ ಎಡಗೈಗಿಂತ ಬಲಗೈ ಉತ್ಕೃಷ್ಟವೆಂಬ ಭಾವನೆ ನಮಗಿದೆ. ಷೇಕ್‌ಹ್ಯಾಂಡ್‌ನಿಂದ ಹಿಡಿದು ದೇವರಪೂಜೆಯವರೆಗೂ

ಭೋಜನಾದಿಗಳಿಗೂ ಬಲಗೈಯನ್ನೇ ಉಪಯೋಗಿಸುವೆವು. ಇಂಥ ಭಾವನೆಯೇ ಉತ್ಕೃಷ್ಟವಸ್ತುಗಳನ್ನು ಮಾತ್ರ ಆಲಂಬನವಾಗಿ ಹೇಳಿರುವದರ ರಹಸ್ಯವಾಗಿದೆ. 'ಬ್ರಹ್ಮದೃಷ್ಟಿರುತ್ಕರ್ಷಾತ್' ಎಂಬ ಬಾದರಾಯಣಸೂತ್ರವೂ ಈ ತತ್ತ್ವವನ್ನೇ ಸಮರ್ಥಿಸುತ್ತಿದೆ.

ಈಗ ಉತ್ಕೃಷ್ಟಾಲಂಬನಗಳಲ್ಲಿ ಆದಿತ್ಯನನ್ನೇ ಆರಿಸಿಕೊಂಡಿರುವದರ ವೈಶಿಷ್ಟ್ಯವನ್ನು ನೋಡೋಣ. ಆದಿತ್ಯನು ಎಲ್ಲರಿಗೂ ಪರಿಚಿತನು. ರುದ್ರಾಧ್ಯಾಯದ 'ಉತ್ಯೈನಂ ಗೋಪಾ ಅದೃಶನ್' ಎಂಬ ಮಂತ್ರದಲ್ಲಿ ಆದಿತ್ಯನು ದನಕಾಯುವವರಿಂದ ಹಿಡಿದು ನೀರುತರುವಂಥ ಕೂಲಿಯ ಹೆಂಗಸರನ್ನೂ ಒಳಗೊಂಡು ಎಲ್ಲಾ ಪ್ರಾಕೃತ–ವಿದ್ವಾಂಸ–ಜನರಿಗೂ ಗೊತ್ತಿರುವವನಾಗಿರುತ್ತಾನೆ–ಎಂದು ಹೊಗಳಿದೆ. ಹೀಗಿರುವದರಿಂದ ಸೂರ್ಯನ ಚಿಂತನೆಯು ಎಲ್ಲರಿಗೂ ಸುಲಭವಾಗಿದೆ. ಇನ್ನು ಸೂರ್ಯನ ಗುಣಗಳನ್ನು ನೋಡಿದರೆ ಆತನು ಯಾವಾಗಲೂ ಸ್ವಯಂಪ್ರಕಾಶ ಸ್ವರೂಪನಾಗಿರುತ್ತಾನೆ. ಅವನನ್ನು ಮೀರಿದ ಬೆಳಕು ಬೇರಾವುದೊಂದೂ ಸೃಷ್ಟಿಯಲ್ಲಿಲ್ಲ. ಆತನ, ಚಲನೆಯು ಕಾಲಮಾನವನ್ನು ಅಳೆಯಲು ಉಪಯುಕ್ತವಾಗಿದೆ. ವಿಜ್ಞಾನಶಾಸ್ತ್ರಗಳ ಸಿದ್ಧಾಂತದಂತೆ ಸೂರ್ಯನು ಚಲಿಸುವದಿಲ್ಲವೆಂಬುದು ನಿಜವಾದರೂ ಭೂಮಿಯೇ ಚಲಿಸುತ್ತಿದ್ದರೂ ಸಾಪೇಕ್ಷವ್ಯವಹಾರದಲ್ಲಿ ಹೀಗೆ ಭಾವಿಸಿದರೆ ತಪ್ಪಾಗದು. ಭೂಮಿಯ ಮೇಲಿರುವ ಜನರ ದೃಷ್ಟಿಯಿಂದ ಶಾಸ್ತ್ರವು ಉಪದೇಶಿಸುತ್ತಿರುವದರಿಂದ ಮತ್ತು ಹಾಗೆ ಹೇಳಿದರೆ ಮಾತ್ರವೇ ಜನರಿಗೆ ಅರ್ಥವಾಗುವದರಿಂದ ನಾವು ಉಪದೇಶಸೌಕರ್ಯಕ್ಕಾಗಿ ಸೂರ್ಯನಿಗೆ ಚಲನೆಯುಂಟು–ಎಂದು ಕಲ್ಪಿಸಿಕೊಳ್ಳೋಣ. ಆಗ ಸೂರ್ಯನು ಉದಯಾಸ್ತಗಳನ್ನು ಹೊಂದುವದರಿಂದ ಭಾನುವಾರಾದಿ ವ್ಯವಹಾರಗಳು ಸಿದ್ಧವಾಗುವವು. ಪಂಚಾಂಗಗಳೆಲ್ಲವೂ ಕಾಲದ ಅವಯವಗಳಾಗಿದ್ದು ಸೂರ್ಯಚಂದ್ರಾದಿಗ್ರಹಗಳ ಚಲನೆಯೇ ಅದಕ್ಕೆ ಆಧಾರವಾಗಿರುವದು. ಹೀಗೆ ಕಾಲಾತ್ಮನಾಗಿರುವ ಸೂರ್ಯನ ಉಪಯೋಗವು ಎಲ್ಲರಿಗೂ ಬೇಕಾಗಿರುವದಾಗಿದೆ. ಇನ್ನು ಜಗತ್ತಿಗೆ ಔಷ್ಣ್ಯವನ್ನೂ ಪ್ರಕಾಶವನ್ನೂ ನೀಡುವ ಸೂರ್ಯನು ಸಸ್ಯಗಳನ್ನೂ ಪ್ರಾಣಿಗಳನ್ನೂ ವೃದ್ಧಿಗೊಳಿಸುವನು. ಬೆಳೆಯಿಸುವನು; ಪಕ್ವಗೊಳಿಸುವನು. ಬೇಸಿಗೆಯಲ್ಲಿ ಕೆರೆ–ನದಿ ಸಮುದ್ರಗಳ ನೀರನ್ನೆಲ್ಲ ಸೆಳೆದುಕೊಂಡು ಮಳೆಗಾಲದಲ್ಲಿ ಮಳೆಯ ರೂಪದಿಂದ ಸುರಿಸುವನು. ಆತನ ಉಪಕಾರವನ್ನು ಇಷ್ಟೆಂದು ಹೇಳಲಾದೀತೆ? ಅಳೆಯಲಾದೀತೆ? ಸೂರ್ಯನಿಲ್ಲದ ಜಗತ್ತನ್ನೇ ನಾವು ಕಲ್ಪಿಸಲಾರೆವು. ಅವನಿಗೆ ಪರ್ಯಾಯವಾಗಿ ಬೇರೊಂದು ವಸ್ತುವೇ ಇರುವದಿಲ್ಲ. ಅವನು ಒಬ್ಬನೇ. ಎಲ್ಲಾ ದೇಶಗಳವರೂ ಒಬ್ಬನೇ ಸೂರ್ಯನ ಕೃಪೆಯಿಂದ ಬದುಕಿರಬೇಕಾಗಿದೆ. ಅವನನ್ನು ಹಂಚಿಕೊಳ್ಳುವದಾಗಲಿ, ವಿಭಾಗಮಾಡಿಕೊಳ್ಳುವದಾಗಲಿ, ಅವನು ಬೇರೊಂದು ದೇಶಕ್ಕೆ ಬೆಳಗದಂತೆ ತಡೆಗಟ್ಟುವದಕ್ಕಾಗಲಿ, ಯಾರಿಂದಲೂ

ಸಾಧ್ಯವಾಗಿಲ್ಲ. ಕುರುಡನನ್ನು ಹೊರತು ಬೇರೆ ಯಾವನೂ ಅವನನ್ನು ಇಲ್ಲವೆನ್ನಲಾಗುವದಿಲ್ಲ. ಮಹಾರಾಜನಿಗೂ, ಸೇವಕನಿಗೂ ಸಮಾನವಾಗಿಯೇ ಬೆಳಕು–ಶಾಖಗಳನ್ನು ಒದಗಿಸುವ ಆತನು ಎಲ್ಲರಿಗೂ ಸಮನು. ಹೀಗೆ ವರ್ಣಿಸುತ್ತಾ ಹೋದರೆ ಸೂರ್ಯನ ಮಹಿಮೆಗೆ ಪಾರವೇ ಇಲ್ಲವೆನಿಸುವದು. ಲೌಕಿಕವಾಗಿಯೇ ಇಷ್ಟುಮಹಿಮಾವಂತನಾಗಿರುವ ಸೂರ್ಯನು ದೇವತೆಯಾಗಿ ವೇದಗಳಲ್ಲಿ ಸ್ತುತಿಸಲ್ಪಟ್ಟಿರುವದನ್ನು ಚಿಂತಿಸಿದರೆ ನಮಗೆ ಇನ್ನೂ ಆಶ್ಚರ್ಯವಾಗುವದು. ಎಲ್ಲಾ ವರ್ಣದವರೂ ಎಲ್ಲಾ ಆಶ್ರಮಿಗಳೂ ಹಾಗೂ ವರ್ಣಾಶ್ರಮಧರ್ಮಬಾಹಿರರೂ ಆತನನ್ನೇ ಮೊರೆಹೊಕ್ಕಿರುವರು. ಅಧ್ಯಾತ್ಮತತ್ತ್ವದೃಷ್ಟಿಯಿಂದ ಹೊರಗೆ ಸೂರ್ಯನಾಗಿಯೂ ಒಳಗೆ ನಮ್ಮ ಆತ್ಮನಾಗಿಯೂ ಇರುವವನು ಒಬ್ಬನೇ ಪರಮಾತ್ಮನಾಗಿರುತ್ತಾನೆ. 'ಸ ಏಕಃ' ಎಂದೇ ಉಪನಿಷತ್ತು ಸಾರುತ್ತಿದೆ. ಹೀಗೆ ಬ್ರಹ್ಮರೂಪನೇ ಆಗಿರುವ ಸೂರ್ಯನು ಬ್ರಹ್ಮೋಪಾಸನೆಗೆ ತಕ್ಕ ಆಲಂಬನನಾಗಿರುವದು ಯುಕ್ತವೇ ಆಗಿದೆ. ಸೂರ್ಯನಲ್ಲಿ ಉದ್ಗೀಥದೃಷ್ಟಿಯನ್ನು ವಿಧಿಸಿರುವದೂ ಸಮಂಜಸವಾಗಿಯೇ ಇರುತ್ತದೆ. ಇಂಥ ಸೂರ್ಯೋಪಾಸನೆಯು ಮಾನವರಿಗೆ ಸರ್ವವಿಧದಿಂದಲೂ ಶ್ರೇಷ್ಠವೆಂಬುದನ್ನು ಹೇಳುವದೇನಿದೆ?

ಈಗ ಆದಿತ್ಯನನ್ನು ಉದ್ಗೀಥವೆಂದು ಉಪಾಸನೆಮಾಡುವದು ಹೇಗೆ? ಎಂಬಿದನ್ನು ಚಿಂತಿಸೋಣ. ಉದ್ಗೀಥ ಎಂಬಿದು ಸಾಮದ ಅವಯವವಾದ ಅಕ್ಷರವು. ಆದಿತ್ಯನೆಂಬುವನು ಒಂದು ಪೂಜ್ಯವಸ್ತುವು. ಹೀಗಿರುವಲ್ಲಿ ಸಾಮ್ಯವು ಹೇಗೆ? ಎಂದು ಶಂಕೆಯುಂಟಾಗುತ್ತದೆ. ಅದಕ್ಕೆ ಉತ್ತರವೇನೆಂದರೆ: ಉದ್ಗೀಥ ಶಬ್ದಕ್ಕೆ ಆದಿತ್ಯನಿಗೆ ಅನ್ವಯಿಸುವಂತೆ ಅರ್ಥಾಂತರವನ್ನು ಹೇಳಬೇಕು. ಉಪಾಸನೆಯಾದ್ದರಿಂದ ಯಾವದಾದರೊಂದು ಗುಣ–ವಿಶೇಷದಿಂದ ಸಾಮ್ಯವು ಕಂಡುಬಂದರೂ ಸಾಕು–ಧ್ಯಾನಮಾಡಬಹುದು. ಆದ್ದರಿಂದ ಆದಿತ್ಯನು ಉದ್ಗೀಥವು–ಎಂದರೆ ಉತ್–ಮೇಲಕ್ಕೆ ಗೀ–ಗಚ್ಛನ್ (ಏರುತ್ತಾ) ಪ್ರಜೆಗಳಿಗೆ ಅನ್ನವು ಹುಟ್ಟಲೆಂದು ಗಾನಮಾಡುವವನಂತೆ ಪ್ರತಿದಿನವೂ ಪ್ರಾತಃಕಾಲದಲ್ಲಿ ಕಂಡುಬರುವನು–ಎಂದು ಭಾಷ್ಯಕಾರರು ವಿವರಿಸಿದ್ದಾರೆ. ಆದ್ದರಿಂದ ಉದ್ಗಾನಮಾಡುವವನಂತೆ ಮೇಲಕ್ಕೇರುತ್ತಾನಾದ್ದರಿಂದ ಉದ್ಗೀಥನೆಂದು ಆದಿತ್ಯನನ್ನು ಸ್ತುತಿಸಲಾಗಿದೆ. ಮತ್ತು ಹೀಗೆ ಉದಯಿಸುತ್ತಲೇ ಪ್ರಾಣಿಗಳಿಗೆ ಕತ್ತಲೆಯನ್ನು ಕಳೆದು ಭಯವನ್ನು ಪರಿಹರಿಸುತ್ತಿರುವನು. ಆದ್ದರಿಂದ ಯಾವನು ಆದಿತ್ಯನನ್ನು ಉದ್ಗೀಥನೆಂದು ಚಿಂತಿಸುವನೋ ಅವನ ಭಯವು ಪರಿಹಾರವಾಗುವದು. ಇಲ್ಲಿ ಭಯವೆಂದರೆ ನಾವು ವ್ಯವಹಾರದೃಷ್ಟಿಯಿಂದ ಕತ್ತಲೆಯಲ್ಲಿ ಉಂಟಾಗುವ ಭಯವನ್ನೂ ಬೆಳಕನ್ನು ಕಂಡಾಗ ದೊರಕುವ ಅಭಯವನ್ನೂ ಲೆಕ್ಕಕ್ಕೆ ಹಿಡಿಯುತ್ತೇವೆ. ಇದೇನೋ ಸರಿ. ಆದರೆ ಆದಿತ್ಯೋಪಾಸನೆಗೆ ಇಷ್ಟೇ ಫಲವೆಂದಾದರೆ ಅಗ್ನಿ, ವಿದ್ಯುತ್ತು–ಮುಂತಾದ ಉಳಿದ ಬೆಳಕುಗಳಿಗಿಂತ ಆದಿತ್ಯನಿಗೆ ಏನು ಹೆಚ್ಚುಗಾರಿಕೆಯಿದ್ದೀತು? ಎನಿಸಬಹುದು.

ಆದ್ದರಿಂದ ಇಲ್ಲಿ ಭಯಶಬ್ದಕ್ಕೆ ಜನನಮರಣರೂಪವಾದ ಸಂಸಾರಭಯದಿಂದಲೂ ಆದಿತ್ಯನು ಉದ್ಧರಿಸುವನು– ಎಂಬ ವಿಶೇಷಾರ್ಥವನ್ನೂ ಮಾಡಬೇಕು– ಎಂದು ಭಾಷ್ಯಕಾರರು ತಿಳಿಸಿದ್ದಾರೆ.

ಹಾಗಾದರೆ ಆದಿತ್ಯೋಪಾಸನಾಮಾತ್ರದಿಂದ ಮುಕ್ತಿಯಾಗಬಲ್ಲದೆ? ಜ್ಞಾನದಿಂದ ಮೋಕ್ಷವೆಂಬ ಸಿದ್ಧಾಂತಕ್ಕೇನು ಗತಿ? ಎಂದು ಯಾರಿಗಾದರೂ ಸಂಶಯವು ಬರಬಹುದು. ಅದಕ್ಕೆ ಉತ್ತರವೇನೆಂದರೆ: ಆದಿತ್ಯೋಪಾಸನೆಯಿಂದ ನೇರಾಗಿ ಮುಕ್ತಿಯಾಗುವದಿಲ್ಲ, ಮತ್ತೇನೆಂದರೆ ಉಪಾಸಕನು ಆದಿತ್ಯಲೋಕವನ್ನು ಸೇರಿ ಅಲ್ಲಿ ಜ್ಞಾನವನ್ನು ಪಡೆದುಕೊಂಡು ಅನಂತರ ಮುಕ್ತನಾಗುತ್ತಾನೆ– ಎಂದಭಿಪ್ರಾಯ. ಇದನ್ನು ಕ್ರಮಮುಕ್ತಿ ಎಂದು ಕರೆಯುತ್ತಾರೆ. ಆದಿತ್ಯಲೋಕಕ್ಕೆ ಹೋದವನು ಎಂದಿಗೂ ಹಿಂದಿರುಗಿ ಬರುವದಿಲ್ಲ. ಅಲ್ಲಿಗೆ ಹೋಗುವ ಮಾರ್ಗವನ್ನು ದೇವಯಾನ, ಶುಕ್ಲಗತಿ– ಎಂದೂ ಕರೆಯುವರು. ಅನಾವೃತ್ತಿಯೇ ಈ ಲೋಕಪ್ರಾಪ್ತಿಯ ಫಲವು. ಹೀಗೆ ಆದಿತ್ಯೋಪಾಸನೆಯು ಎಲ್ಲಾ ರೀತಿಯಿಂದಲೂ ಶ್ರೇಯಸ್ಕರವಾಗಿರುತ್ತದೆ. ಕಡೆಗೆ ಪ್ರಾಣನೆಂದರೂ ಆದಿತ್ಯನೆಂದರೂ ಒಂದೇ ತತ್ತ್ವವೆಂದೂ ಉಪನಿಷತ್ತಿನಲ್ಲಿ ತಿಳಿಸಿದೆ. ಪ್ರಕೃತ ಆದಿತ್ಯೋಪಾಸನೆಯಿಂದ ನಾವು ಕೃತಾರ್ಥರಾಗೋಣ.

---

## ಅಮೃತಾಭಯಗುಣವಿಶಿಷ್ಟೋಂಕಾರ

**ಓಮ್ ॥ ಯದೇತದಕ್ಷರಮೇತದಮೃತಮಭಯಂ ತತ್ಪ್ರವಿಶ್ಯ ದೇವಾ ಅಮೃತಾ ಅಭಯಾಭವನ್ ॥** **1–4–4.**

**ಭಾವಾರ್ಥ:–** ಈ ಅಕ್ಷರವೆಂಬುದಿದೆಯಲ್ಲ, ಇದು ಅಮೃತವು; ಅಭಯವು. ಇದನ್ನು ಪ್ರವೇಶಿಸಿ ದೇವತೆಗಳು ಅಮೃತರೂ ಅಭಯರೂ ಆದರು.

(ಉದ್ಗೀಥೋಪಾಸನೆಯ ಅಂಗವಾಗಿ ಹೇಳಿರುವ ಓಂಕಾರೋಪಾಸನೆಯು ಮತ್ತೊಮ್ಮೆ ಅಮೃತಾಭಯಗುಣವಿಶಿಷ್ಟವಾಗಿ ವಿಧಿಸಲ್ಪಟ್ಟದೆ. ಮತ್ತೆ ಮತ್ತೆ ಹೇಳಿರುವದರಿಂದ ಓಂಕಾರೋಪಾಸನೆಯು ಬಹಳ ಮಹತ್ತ್ವವುಳ್ಳದ್ದೆಂದು ಅಭಿಪ್ರಾಯ. ಏಕೆಂದರೆ ದೇವತೆಗಳು ಕೂಡ ಓಂಕಾರವನ್ನು ಪ್ರವೇಶಿಸಿ ಅಭಯವನ್ನು ಹೊಂದಿದರು– ಎಂದು ಇಲ್ಲಿ ಸ್ತುತಿಸಲಾಗಿದೆ.)

## 5. ಓಂ ಎಂಬ ಅಮೃತಾಂಜನ

ಛಾಂದೋಗ್ಯೋಪನಿಷತ್ತಿನಲ್ಲಿ ಬ್ರಹ್ಮವನ್ನು ಉಪಾಸನೆಮಾಡುವ ನಾನಾ ಪ್ರಕಾರಗಳನ್ನು ವರ್ಣಿಸುವಾಗ ಅದಕ್ಕೆ ಆಲಂಬನವಾಗಿ ಆರಿಸಿಕೊಂಡಿರುವ ಪದಾರ್ಥ

ಗಳಲ್ಲಿ ಈವರೆಗೆ ಓಂಕಾರ, ಉದ್ಗೀಥ, ಆದಿತ್ಯ, ಪ್ರಾಣ–ಇವುಗಳನ್ನು ವಿವರಿಸಿರುತ್ತದೆ. ಈ ಆಲಂಬನಗಳು ಬ್ರಹ್ಮವನ್ನೇ ಪ್ರತಿನಿಧಿಸುತ್ತವೆಯಾದ್ದರಿಂದ ಬ್ರಹ್ಮದ ಗುಣಗಳು ಇವುಗಳಲ್ಲಿಯೂ ತಕ್ಕಮಟ್ಟಿಗೆ ಇವೆ–ಎಂದೂ ತಿಳಿಸಿರುತ್ತಾರೆ. ಉದಾಹರಣೆಗೆಃ ಓಂಕಾರದಲ್ಲಿ ಆಪ್ತಿ–ಸಮೃದ್ಧಿ ಮುಂತಾದವುಗಳಿವೆ–ಎಂದು ಹೇಳಿದೆ. ಈಗ ಮತ್ತೊಮ್ಮೆ ಅದೇ ಓಂಕಾರಾಲಂಬನದಿಂದ ಬ್ರಹ್ಮಚಿಂತನೆಯನ್ನು ಹೇಳಲು ಉಪಕ್ರಮಿಸಿ ಓಂಕಾರವು ಅಮೃತಾಭಯಗಳೆಂಬ ಗುಣಗಳುಳ್ಳದ್ದಾಗಿದೆ–ಎಂದು ವರ್ಣಿಸಲಾರಂಭಿಸಿದೆ. ಇದರ ವಿವರವನ್ನು ಈಗ ತಿಳಿಯೋಣ.

ಓಂಕಾರಕ್ಕೂ ಬ್ರಹ್ಮಕ್ಕೂ ಸಾಧಕನು ತನ್ನ ಅಂತಃಕರಣದಲ್ಲಿ ಯಾವದಾದರೊಂದು ರೀತಿಯಿಂದ ಮೊದಲು ಸಂಬಂಧವನ್ನು ಕಲ್ಪಿಸಿಕೊಳ್ಳಬೇಕು. ಏಕೆಂದರೆ ಓಂಕಾರವು ಒಂದು ಶಬ್ದರೂಪದಿಂದ ನಮಗೆ ಶ್ರೋತ್ರೇಂದ್ರಿಯಗೋಚರವಾಗಿದೆ. ಬ್ರಹ್ಮವಾದರೊ, ಆ ಹೆಸರು ಕಿವಿಗೆ ಬಿದ್ದಿದೆಯಾದರೂ ವಸ್ತುಜ್ಞಾನವಾಗಿರುವದಿಲ್ಲ. ಆದ್ದರಿಂದ ಉಪಾಸನೆಯನ್ನು ಕೈಗೊಳ್ಳುವಮಟ್ಟಿಗೆ ಶಬ್ದರೂಪವಾದ ಓಂಕಾರವೇ ಬ್ರಹ್ಮವೆಂದು ತಾದಾತ್ಮ್ಯ ಸಂಬಂಧವನ್ನು ಕಲ್ಪಿಸಿಕೊಳ್ಳುವದು ಯೋಗ್ಯವಾಗಿರುತ್ತದೆ. ಅನಂತರ ಆ ಆಲಂಬನವೇ ನಮಗೆ ಬ್ರಹ್ಮದ ಪ್ರಾಪ್ತಿಯನ್ನು ಉಂಟುಮಾಡಿಕೊಡಲಿದೆ. ಈ ನ್ಯಾಯವನ್ನು ನಾವು ಭಗವಂತನ ಎಲ್ಲಾ ನಾಮಗಳಿಗೂ ಅನ್ವಯಿಸಬಹುದು. ಉದಾಹರಣೆಗೆ 'ನಾರಾಯಣ' ಎಂಬ ನಾಮವನ್ನು ತೆಗೆದುಕೊಳ್ಳೋಣ. ಈ ಹೆಸರು ನಮ್ಮ ಕಿವಿಗೆ ಚಿರಪರಿಚಿತವೇ ನಿಜ. ಆದರೆ ನಾರಾಯಣನೆಂಬ ವಿಶಿಷ್ಟಗುಣಸಂಪನ್ನನಾದ ದೇವರನ್ನು ನಾವು ಕಂಡಿಲ್ಲ. ಹೀಗಿದ್ದರೂ ನಾರದರು ಧ್ರುವನಿಗೆ ನಾರಾಯಣನೆಂಬ ಹೆಸರನ್ನೇ ಮಂತ್ರವೆಂತ ಪರಿಚಯಮಾಡಿಕೊಟ್ಟು ಉಪದೇಶಿಸಿದರು. ಆಗ ಧ್ರುವನು ಇನ್ನೂ ಐದು ವರ್ಷದ ಬಾಲಕ. ಅವನಿಗೆ ಪ್ರಾಪಂಚಿಕವಸ್ತುಗಳಲ್ಲಿ ಕೂಡ ಕೆಲವೇ ಪದಾರ್ಥಗಳ ಜ್ಞಾನವಿತ್ತು. ಇನ್ನು ನಾರಾಯಣನ ತಿಳಿವು ಹೇಗೆ ತಾನೆ ಇರಲು ಸಾಧ್ಯ? ಆದರೂ ಧ್ರುವನು ಆ ಮಂತ್ರವನ್ನೇ ತನ್ನ ಇಷ್ಟದೇವತೆಯಾಗಿ ಭಾವಿಸಿ ಚಿಂತಿಸಿದನು. ಆ ನಾಮದ ಮಹತ್ತ್ವವು ಎಷ್ಟು? ಎಂದರೆ ಕಡೆಗೆ ಅದು ಧ್ರುವನಿಗೆ ನಿಜವಾದ ನಾರಾಯಣನ ಪ್ರಾಪ್ತಿಯನ್ನೇ ಉಂಟುಮಾಡಿತು. ಈ ಉದಾಹರಣೆಯಂತೆಯೇ ಓಂ ಎಂಬೀ ಸರಳವಾದ ಮಂತ್ರವನ್ನೂ ಸಾಧಕನು ಬ್ರಹ್ಮವೆಂದೇ ಭಾವಿಸಿ ಚಿಂತಿಸಿದಲ್ಲಿ ಕಡೆಗೆ ಪರಬ್ರಹ್ಮದ ಪ್ರಾಪ್ತಿಯಾಗುವದರಲ್ಲಿ ಸಂಶಯವಿಲ್ಲ. ಅಂಜನವನ್ನು ಹಾಕಿಕೊಂಡ ಕಣ್ಣಿಗೆ ಅಪೂರ್ವವಸ್ತುಗಳು ಗೋಚರವಾಗುವಂತೆ ಅಂತಃಕರಣಕ್ಕೆ ಓಂ ಎಂಬ ಅಂಜನವನ್ನು ಸವರಿಕೊಂಡಲ್ಲಿ ಬ್ರಹ್ಮಾನ್ವೇಷಣೆಯು ಅತ್ಯಂತ ಸುಲಭವಾಗುವದರಲ್ಲಿ ಸಂಶಯವಿಲ್ಲ. ಈ ಅನ್ವೇಷಣೆಗೆ ಸಹಾಯಕವಾಗಿಯೇ ಉಪಾಸನೆಗಳನ್ನು ಶಾಸ್ತ್ರಗಳಲ್ಲಿ ವಿಧಿಸಿರುತ್ತದೆ.

ಈಗ ಬ್ರಹ್ಮದ ಗುಣಗಳಾದ ಅಮೃತ–ಅಭಯಗಳ ವಿಷಯಕ್ಕೆ ವಿಚಾರ ಮಾಡೋಣ. ಉಪಾಸ್ಯಬ್ರಹ್ಮಕ್ಕೆ ಗುಣಗಳಿರಬೇಕಾದದ್ದು ತೀರ ಅಗತ್ಯ. ಆದರೆ ಹೀಗೆ ಚಿಂತಿಸಿದ ಮಾತ್ರದಿಂದ ನಿರ್ಗುಣಬ್ರಹ್ಮಸ್ವರೂಪಕ್ಕೇನೂ ಹಾನಿಯಾಗುವದಿಲ್ಲ. ಹೇಗೆಂದರೆ ಭೂಮಿಯ ಮೇಲೆ ನಿಂತು ನೋಡುವವರಿಗೆ ನೆತ್ತಿಯ ಮೇಲೆ ಕಾಣುವ ಆಕಾಶವು ನೀಲವರ್ಣವಾಗಿಯೇ ತೋರುವದು. ಆಕಾಶವು ನೀಲಿಯಾಗಿದೆ–ಎಂದು ನಾವು ವ್ಯವಹರಿಸಿದ ಮಾತ್ರದಿಂದ ಆಕಾಶಕ್ಕೇನೂ ಆ ಬಣ್ಣವು ಅಂಟುವದಿಲ್ಲವಷ್ಟೆ! ಆಕಾಶವೆಂಬುದು ಅಮೂರ್ತದ್ರವ್ಯವಾಗಿದ್ದು ಅದರಲ್ಲಿ ಅವಯವವಿಭಾಗಗಳಿಲ್ಲವಾದ್ದರಿಂದ ಯಾವ ಬಣ್ಣವೂ ಅದಕ್ಕೆ ಅಂಟಲಾರದು. ಆದರೂ ಆಕಾಶದ ವಿಷಯಕ್ಕೆ ಬೇರೊಬ್ಬರಿಗೆ ಪರಿಚಯಮಾಡಿಕೊಡುವಾಗ ಹಾಗೂ ಅದರ ಮಹತ್ತ್ವವನ್ನು ಕುರಿತು ಚಿಂತಿಸುವಾಗ ನೀಲವರ್ಣವು ನಮ್ಮ ತಿಳಿವಳಿಕೆಯಲ್ಲಿ ಬೆರೆತರೂ ತಪ್ಪೇನೂ ಆಗುವದಿಲ್ಲ. ನಮ್ಮ ಬುದ್ಧಿಯಲ್ಲಿ ಅಧ್ಯಾಸವಾದದ್ದು ನಿಜವಾಗಿ ವಸ್ತುವಿಗೆ ಯಾವ ಮಾರ್ಪಾಡನ್ನೂ ಉಂಟುಮಾಡುವದಿಲ್ಲ. ಅದರಂತೆಯೇ ಬ್ರಹ್ಮವನ್ನು ಚಿಂತಿಸುವ ಸಲುವಾಗಿ ಅದರಲ್ಲಿ ಅಮೃತ, ಅಭಯ–ಎಂಬ ಗುಣಗಳನ್ನು ಆರೋಪಮಾಡಬಹುದಾಗಿದೆ. ಇದು ಚಿಂತಕನಿಗೆ ಸೌಕರ್ಯವಾಗಲೆಂಬ ಉದ್ದೇಶದಿಂದ ಹೇಳಿದ್ದಾಗಿದೆ. ಹೀಗೆ ಆರೋಪಿತಗುಣವಿಶಿಷ್ಟಬ್ರಹ್ಮವು ಅಮೃತಾಭಯವಾಗಿದೆ ಎಂದು ಹೇಳಿದರೆ ದೋಷವಾಗಲಾರದು. ನಿಜವಾಗಿ ನೋಡಿದರೆ ಅಮೃತವೆಂದರೇನು? ಅಭಯವೆಂದರೇನು? ಈ ಎರಡೂ ಮೃತ–ಭಯಗಳಿಗೆ ಪ್ರತಿಯೋಗಿಶಬ್ದಗಳು. ಸಂಸಾರದಲ್ಲಿ ಹುಟ್ಟಿದ ಪ್ರತಿಯೊಂದು ವಸ್ತುವೂ ಮೃತವಾಗುತ್ತದೆ. ಬ್ರಹ್ಮವು ಹಾಗಲ್ಲ– ಎಂದಿಷ್ಟೇ ಅಭಿಪ್ರಾಯ. ಹಾಗೆಯೇ ಪ್ರಪಂಚದಲ್ಲಿ ನಮ್ಮ ಸ್ವರೂಪಕ್ಕಿಂತ ಬೇರೆಯಾಗಿ ಕಂಡುಬರುವ ದ್ವಿತೀಯವಸ್ತುಗಳೆಲ್ಲ ಭಯವನ್ನುಂಟುಮಾಡುತ್ತವೆ. ಬ್ರಹ್ಮವಾದರೊ, ನಮ್ಮ ಆತ್ಮನೇ ಆಗಿರುವದರಿಂದ ಅಭಯವಾಗಿದೆ–ಎಂದು ಅಭಿಪ್ರಾಯ. ಆದ್ದರಿಂದ ಪ್ರಪಂಚ ದೃಷ್ಟಿಯಿಂದ ಅಮೃತಾಭಯವೆಂದು ಬ್ರಹ್ಮವನ್ನು ಕರೆದಿದೆಯೇ ಹೊರತು ಸ್ವರೂಪದಿಂದ ಅದಕ್ಕೆ ಯಾವ ಗುಣಜಾತಿಕ್ರಿಯೆಗಳು ತಾನೆ ಇದ್ದೀತು? ಅಂತೂ ಬ್ರಹ್ಮವನ್ನು ಉಪಾಸ್ಯವಾಗಿ ಭಾವಿಸಿಯೇ ಈ ಗುಣಗಳನ್ನು ಹೇಳಲಾಗಿದೆ. ನಮಗಾದರೊ, ಅಮೃತತ್ವವೂ ಅಭಯವೂ ಬೇಕಾಗಿದೆ. ಅದು ಬ್ರಹ್ಮವೊಂದರಲ್ಲಿ ಮಾತ್ರವೇ ಪೂರ್ಣವಾಗಿ ಇರತಕ್ಕ ಗುಣಗಳು. ಅವುಗಳಿಂದ ವಿಶಿಷ್ಟವಾಗಿದೆಯೆಂದೇ ಬ್ರಹ್ಮವನ್ನು ಚಿಂತಿಸಬೇಕಾಗಿದೆ. ಅದು ಕೂಡ ಓಂಕಾರದ ಮೂಲಕವಾಗಿ–ಎಂಬಿದು ಇಲ್ಲಿ ಮನನಮಾಡತಕ್ಕದ್ದಾಗಿದೆ.

ಈಗ ಬ್ರಹ್ಮದ ಉಪಾಸನೆಗೆ ಆಲಂಬನವಾಗಿರುವ ಓಂಕಾರವು ಅಮೃತಾಭಯ ಗುಣವಿಶಿಷ್ಟವಾದದ್ದೆಂದು ತಿಳಿಸಲು ಉಪನಿಷತ್ತಿನಲ್ಲಿ ಒಂದು ಕಥೆಯನ್ನು ಹೇಳಿದ್ದಾರೆ. ಏನೆಂದರೆ: ದೇವತೆಗಳು ಒಮ್ಮೆ ಮೃತ್ಯುವಿಗೆ ಹೆದರಿ ತ್ರಯೀವಿದ್ಯೆಯನ್ನು

ಆಶ್ರಯಿಸಿದರಂತೆ. ಇಲ್ಲಿ ಮೃತ್ಯುವೆಂದರೆ ಸ್ವಾಭಾವಿಕ ಕರ್ಮಗಳು. ಸ್ವಾಭಾವಿಕವೆಂದರೆ ಸಹಜವಾದ ಕ್ರಿಯೆಗಳು. ಆಹಾರ, ನಿದ್ರೆ, ಶರೀರಚೇಷ್ಟಾದಿಗಳು–ಎಂದರ್ಥ. ಇವೇ ಮೃತ್ಯುವೆಂದು ಕರೆಯಲ್ಪಟ್ಟಿವೆ. ಏಕೆಂದರೆ ಇವುಗಳನ್ನು ಸ್ವೇಚ್ಛೆಯಾಗಿ ಮಾಡುತ್ತಾ ಮಾಡುತ್ತಾ ಮನುಷ್ಯನು ಮುಪ್ಪಾಗಿ ಸಾಯುವನು. ಇರಲಿ. ದೇವತೆಗಳಾದರೊ, ತಿಳಿವಳಿಕೆಯುಳ್ಳವರಾದ್ದರಿಂದ ಋಗ್ವೇದಾದಿಗಳಲ್ಲಿ ವಿಧಿಸಿರುವ ಶಾಸ್ತ್ರೀಯಕರ್ಮಗಳಿಂದ ಈ ಮೃತ್ಯುವನ್ನು ಗೆಲ್ಲಲು ಇಚ್ಛಿಸಿದವರಾಗಿ ವೈದಿಕಕರ್ಮಗಳನ್ನು ಆರಂಭಮಾಡಿದರು. ಹಾಗೆ ಮಾಡುವಾಗ–ಕರ್ಮಗಳಿಗೆ ಉಪಯೋಗಿಸಿದ ಮೇಲೂ ಉಳಿಯಬಹುದಾದ ಕೆಲವು ಮಂತ್ರಗಳೆಂಬ ಹೊದಿಕೆಯಿಂದ ತಮ್ಮನ್ನು ಮೃತ್ಯುವು ಪೀಡಿಸದಂತೆ ಬಚ್ಚಿಟ್ಟುಕೊಂಡರು. ಹೀಗೆ ಯಾವ ಮಂತ್ರಗಳಲ್ಲಿ ಛಾದಿತರಾದರೋ (ಮುಚ್ಚಲ್ಪಟ್ಟರೋ) ಅವು ಛಂದಸ್ಸುಗಳೆನಿಸಿದವಂತೆ. ಆಗಲಿ. ಮುಂದೇನಾಯಿತೆಂದರೆ: ಮೃತ್ಯುವು ದೇವತೆಗಳನ್ನು ಹುಡುಕುತ್ತಿರುವಾಗ–ಹೇಗೆ ಮೀನು ಹಿಡಿಯುವವನು ನೀರಿನಲ್ಲಿ ಅವಿತಿಟ್ಟುಕೊಂಡಿರುವ ಮೀನುಗಳನ್ನು ಗಾಳ, ಬಲೆ–ಮುಂತಾದ ಸಾಧನಗಳಿಂದ ಕಂಡುಕೊಳ್ಳುವನೋ ಹಾಗೆ–ಪತ್ತೆಮಾಡಿದನು. ಇದನ್ನರಿತ ದೇವತೆಗಳು ಕೂಡಲೆ 'ಓಹೋ, ಈ ಕೇವಲ ಕರ್ಮಗಳು ನಮ್ಮನ್ನು ಕಾಪಾಡಲಾರವು'– ಎಂದು ಭಾವಿಸಿ ಕೂಡಲೆ ವೇದತ್ರಯಗಳ ಸಾರವಾದ ಓಂಕಾರವನ್ನೇ ಪ್ರವೇಶಿಸಿಬಿಟ್ಟರು. ಅಲ್ಲಿ ಮೃತ್ಯುವು ಇವರನ್ನು ಗೆಲ್ಲಲಾರದೆ ಹಿಮ್ಮೆಟ್ಟಿದನು. ಹೀಗೆ ಓಂಕಾರವು ದೇವತೆಗಳಿಗೆ ಅಭಯವನ್ನೂ ಅಮೃತತ್ವವನ್ನೂ ತಂದುಕೊಟ್ಟಿತು– ಎಂಬಿದೇ ಕಥೆಯ ಸಾರವಾಗಿರುತ್ತದೆ. ಈ ಮೂಲಕ ಓಂಕಾರವನ್ನು ಸ್ತುತಿಸಿದಂತಾಗಿದೆ.

ಇಲ್ಲಿ ಒಂದು ಪ್ರಶ್ನೆಯೇನೆಂದರೆ: ವೈದಿಕಕರ್ಮಗಳು ದೇವತೆಗಳನ್ನು ಕಾಪಾಡಲಾರದೆ ಹೋದವು–ಎಂಬಿದನ್ನು ಕೇಳಿ ಕೆಲವರು ಅವುಗಳ ಅನುಷ್ಠಾನದಿಂದ ಪ್ರಯೋಜನವೇನೂ ಇಲ್ಲವಾದಮೇಲೆ ಮಾಡುವದಾದರೂ ಏಕೆ? ಎನ್ನುತ್ತಾರೆ. ಇದಕ್ಕೆ ಉತ್ತರವೇನೆಂದರೆ : ವೈದಿಕಕರ್ಮಗಳು ದೇವತೆಗಳನ್ನು ಮೃತ್ಯುವಿನ ಸೆರೆಯಿಂದ ಪೂರ್ತಿ ಬಿಡುಗಡೆಮಾಡಿ ಕಾಪಾಡದೆ ಇರಬಹುದು. ಆದರೆ ಆ ಕರ್ಮಗಳನ್ನು ಅವರು ಮಾಡಿದ್ದರಿಂದಲೇ ಶುದ್ಧರಾಗಿ ಮುಂದೆ ಓಂಕಾರವನ್ನು ಪ್ರವೇಶಿಸಿ ಉದ್ಧಾರವಾಗಬೇಕೆಂಬ ಬುದ್ಧಿಯನ್ನು ಪಡೆದುಕೊಂಡರು; ಹಾಗಿಲ್ಲದಿದ್ದರೆ ಸ್ವಾಭಾವಿಕಕರ್ಮಗಳಿಗೇ ಸಿಕ್ಕಿಬಿದ್ದು ಪೂರ್ತಿಯಾಗಿ ಮೃತ್ಯುವಶರಾಗಿಬಿಡುತ್ತಿದ್ದರು–ಎಂದರ್ಥಮಾಡಬೇಕು. ಇದರಿಂದ ತಿಳಿಯಬರುವದೇನೆಂದರೆ: ವೈದಿಕಕರ್ಮಗಳು ನೇರಾಗಿ ಮೋಕ್ಷವನ್ನುಂಟುಮಾಡದೆ ಹೋದರೂ ಮೋಕ್ಷಕ್ಕೆ ಸಾಧನವಾದ ಜ್ಞಾನವನ್ನು ಸಂಪಾದಿಸಿಕೊಳ್ಳಲು ತಕ್ಕ ಅಂತಃಕರಣಶುದ್ಧಿಯನ್ನಂತೂ ಖಂಡಿತ ಉಂಟುಮಾಡುವವು. ಆದ್ದರಿಂದ ಮುಮುಕ್ಷುವು ಚಿತ್ತಶುದ್ಧಿಗಾಗಿ, ದುರಿತಕ್ಷಯಕ್ಕಾಗಿ ವೈದಿಕಕರ್ಮಗಳನ್ನು ಮಾಡಲೇಬೇಕು–ಎಂದು ಹೇಳಿದಂತಾಗಿದೆ.

ಪ್ರಕೃತ–ಓಂಕಾರೋಪಾಸನೆಯ ವಿಚಾರವನ್ನು ಮುಂದುವರಿಸೋಣ. ಹೀಗೆ ದೇವತೆಗಳಿಗೆ ಅಭಯಪ್ರದಾನಮಾಡಿ ಕಾಪಾಡಿದ ಓಂಕಾರವು ಬ್ರಹ್ಮದ ಪ್ರತಿನಿಧಿಯಾಗಿದ್ದು ಅದರ ಎಲ್ಲಾ ವಿಶಿಷ್ಟಗುಣಗಳನ್ನೂ ಪಡೆದುಕೊಂಡಿದೆ. ಇದು ನಿಜವಾಗಿಯೂ ಎಲ್ಲಾ ಮಂತ್ರಗಳ ಸಾರವಾಗಿರುತ್ತದೆ. ಹೇಗೆಂದರೆ: ಋಕ್ಕನ್ನು ಅಧ್ಯಯನಮಾಡುವವನು ಓಂ ಎಂದೇ ಮೊದಲು ಗಟ್ಟಿಯಾಗಿ ಉಚ್ಚರಿಸುತ್ತಾನೆ. ಈ ಧ್ವನಿಯೇ ಸ್ವರವೆನಿಸುವದು. ಅಕ್ಷರ ರೂಪವಾದ ಓಂಕಾರವು ಸ್ವರವಾಗಿಯೂ ಪ್ರಸಿದ್ಧವಾಗಿದೆ. ಎಲ್ಲಾ ವೇದಗಳ ಅಧ್ಯಯನಾರಂಭದಲ್ಲಿಯೂ ಓಂ ಎಂದೇ ಉಚ್ಚರಿಸುವದು ರೂಢಿಯಲ್ಲಿದೆ. ಆದ್ದರಿಂದ ಓಂಕಾರವು ಸ್ವರವೂ ಅಕ್ಷರವೂ ಬ್ರಹ್ಮವೂ ಆಗಿ ವಿರಾಜಮಾನವಾಗಿದೆ. ಇದನ್ನು ಅಮೃತಾಭಯಗುಣವಿಶಿಷ್ಟವಾದ ಬ್ರಹ್ಮವೆಂದು ಚಿಂತಿಸುವವನು ಅಮೃತನಾಗುವದರಲ್ಲಿ ಸಂಶಯವಿಲ್ಲ.

ಓಂಕಾರವನ್ನು ಹಿಂದೆ ದೇವತೆಗಳು ಉಪಾಸನೆಮಾಡಿ ಅಮೃತತ್ವವನ್ನು ಪಡೆದುಕೊಂಡಿರಬಹುದು. ಆದರೆ ಈಗಿನ ಕಾಲದ ಮನುಷ್ಯರೂ ಹೀಗೆ ಉಪಾಸನೆಯನ್ನು ಮಾಡಿ ಫಲವನ್ನು ಪಡೆದುಕೊಳ್ಳಲು ಸಾಧ್ಯವೇ? ದೇವತೆಗಳಿಗಾದರೊ, ಮನುಷ್ಯರಿಗಿಂತ ಹೆಚ್ಚಿನ ಶಕ್ತಿಸಾಮರ್ಥ್ಯಗಳಿರುವದರಿಂದ ಅವರಿಗೆ ಈ ಉಪಾಸನೆಯು ಸಾಧ್ಯವಾಗಿರಬಹುದು. ಮಾನವರಿಗೆ ಹೇಗಾದೀತು? ಎಂದು ಯಾರಾದರೂ ಶಂಕಿಸಿದಲ್ಲಿ ಅದಕ್ಕೆ ಉತ್ತರವನ್ನೂ ಶ್ರುತಿಯೇ ತಿಳಿಸುತ್ತಿದೆ. 'ಯದಮೃತಾ ದೇವಾಸ್ತದಮೃತೋ ಭವತಿ' (ದೇವತೆಗಳು ಯಾವ ಅಮೃತತ್ವವನ್ನು ಪಡೆದುಕೊಂಡರೋ ಅದೇ ಅಮೃತತ್ವವನ್ನೇ ಉಪಾಸಕನು ಈಗಲೂ ಪಡೆಯುತ್ತಾನೆ)–ಎಂದು ಎಲ್ಲಾ ಕಾಲಕ್ಕೂ ಅನ್ವಯವಾಗುವಂತೆಯೇ ಫಲವನ್ನು ಹೇಳಿದೆ. 'ಭವತಿ' ಎಂಬ ಕ್ರಿಯಾಪದವು ವರ್ತಮಾನಕಾಲವಾಚಿಯಾದ್ದರಿಂದ ಯಾರು ಯಾವಾಗ ಉಪಾಸನೆಮಾಡಿದರೂ ಫಲವುಂಟಾಗುವದು ಖಚಿತವೆಂತ ತಿಳಿಸಿದಂತಾಗಿದೆ. ಉಪಾಸನೆಯು ಮುಖ್ಯವೇ ಹೊರತು ಉಪಾಸಕನು ಯಾರು? ಎಂಬುದಲ್ಲ.

ಈಗ ನಾವು ಓಂಕಾರವನ್ನು ಮೊದಲು ಆಶ್ರಯಿಸಬೇಕು. ಅದನ್ನು ಅಕ್ಷರವೆಂದೋ ಸ್ವರವೆಂದೋ ಹೇಗೆ ಬೇಕಾದರೂ ಮನಸ್ಸಿಗೆ ತಂದುಕೊಂಡು ಉಪನಿಷತ್ತಿನಲ್ಲಿ ಹೇಳಿರುವ ಗುಣಗಳನ್ನು ಅಳವಡಿಸಿಕೊಂಡು ಉಪಾಸನೆಮಾಡಬೇಕು. ಓಂಕಾರದ ಮಹಿಮೆಯನ್ನು ವಿವರಿಸುವ ಗ್ರಂಥಗಳನ್ನೂ ವಾಕ್ಯಗಳನ್ನೂ ಅನುಸಂಧಾನಮಾಡಬೇಕು. ನಮ್ಮ ಅಂತಃಕರಣವು 'ಓಂ' ಎಂದು ಸ್ಮರಿಸುತ್ತಿರುವಂತೆ ಎಚ್ಚರವಹಿಸಬೇಕು. ಹಾಗಾದರೆ ಓಂಕಾರೋಪಾಸನೆಯು ನಮಗೆ ಕೈವಶವಾಗಲಿದೆ.

---

## ಆದಿತ್ಯಾಂತರ್ಗತಪುರುಷನ ಉಪಾಸನೆ

**ಓಮ್॥ ಅಥ ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶ ಆಪ್ರಣಖಾತ್ ಸರ್ವ ಏವ ಸುವರ್ಣಃ ॥ 1–6–6.**

**ಭಾವಾರ್ಥ:–** ಇನ್ನು ಆದಿತ್ಯನೊಳಗೆ ಈ ಹಿರಣ್ಮಯನಾದ ಪುರುಷನು ಕಾಣಿಸುತ್ತಿರುವನಲ್ಲ, ಹಿರಣ್ಯಶ್ಮಶ್ರುವಾಗಿ, ಹಿರಣ್ಯಕೇಶನಾಗಿ, ಪ್ರಣಖದವರೆಗೂ ಎಲ್ಲವೂ ಸುವರ್ಣವೇ ಆಗಿರುವನಲ್ಲ–(ಅವನನ್ನು ಚಿಂತಿಸಬೇಕು).

(ಸೂರ್ಯನೊಳಗೆ ಕಾಣಬರುವ ಚಿನ್ನದಂತೆ ಶರೀರವುಳ್ಳ, ಚೇತನನೂ ಆದ ಪುರುಷನು ಪರಮಪವಿತ್ರನೂ ಸರ್ವಕಾಮಗಳೊಡೆಯನೂ ಸರ್ವಲೋಕಾಧಿಪತಿಯೂ ಪಾಪರಹಿತನೂ ಆಗಿರುವನೆಂದು ಚಿಂತಿಸಬೇಕು. ಇವನೇ ಅಧಿದೈವತನಾದ ಉದ್ಗೀಥದೇವನೆನಿಸಿರುವನು–ಎಂದಭಿಪ್ರಾಯ.)

## 6. ಹಿರಣ್ಮಯಪುರುಷನ ಉಪಾಸನೆ

ಛಾಂದೋಗ್ಯೋಪನಿಷತ್ತಿನಲ್ಲಿ ಓಂಕಾರದ ಉಪಾಸನೆಯನ್ನು ತಿಳಿಸಿದ ಬಳಿಕ ಈಗ ಆದಿತ್ಯೋಪಾಸನೆಯನ್ನು ಪುನಃ ರೂಪಾಂತರದಿಂದ ಹೇಳಲಾರಂಭಿಸಿದ್ದಾರೆ. ಉದ್ಗೀಥೋಪಾಸನಾಪ್ರಕರಣದಲ್ಲಿಯೇ ಈ ವಿಷಯವೂ ಬಂದಿರುವದು. ಏಕೆಂದರೆ ಆದಿತ್ಯನ ಬಿಳುಪಾದ ಕಾಂತಿಯನ್ನು ಋಕ್ ಎಂದೂ ಕಪ್ಪಾದ ಕಲೆಯನ್ನು ಸಾಮವೆಂದೂ ಚಿಂತಿಸಬೇಕೆಂದು ಹಿಂದೆ ವರ್ಣಿಸಿದೆ. ಸೂರ್ಯನಲ್ಲಿ ಕಪ್ಪುಕಾಂತಿಯಿರುವದುಂಟೆ? ಎಂದರೆ ಚಿತ್ತಸಮಾಧಾನವನ್ನು ಪಡೆದು ಶಾಸ್ತ್ರದೃಷ್ಟಿಯಿಂದ ಚಿಂತಿಸುವವರಿಗೆ ಮಾತ್ರ ಅದು ಕಂಡುಬರುತ್ತದೆ–ಎಂದು ಭಾಷ್ಯಕಾರರು ತಿಳಿಸಿರುತ್ತಾರೆ. ಹೀಗೆ ಆದಿತ್ಯೋಪಾಸನೆಯ ಮೂಲಕ ಋಕ್ಸಾಮಗಳನ್ನೂ ಆ ಮೂಲಕ ಉದ್ಗೀಥವನ್ನೂ ಸಂಬಂಧಿಸಿ ಉಪಾಸನೆಗಳನ್ನು ವಿವಿಧವಾಗಿ ಇಲ್ಲಿ ವರ್ಣಿಸಲಾಗಿದೆ. ಈಗ ಆಧಿದೈವಿಕವಾಗಿ ಆದಿತ್ಯನೊಳಗೆ ಅಡಗಿರುವ ಪುರುಷನ ಉಪಾಸನೆಯನ್ನು ಹೇಳುತ್ತಾರೆ. ಅದರ ವಿವರವನ್ನು ನೋಡೋಣ.

ಉಪಾಸನೆಗಳೆಲ್ಲವೂ ಪರಬ್ರಹ್ಮದ ಪ್ರಾಪ್ತಿಗಾಗಿಯೇ ಹೇಳಲ್ಪಟ್ಟಿರುವವು. ಜ್ಞಾನಕ್ಕೂ ಉಪಾಸನೆಗೂ ಭೇದವೇನೆಂದರೆ: ಉಪಾಸನೆಯು ಕರ್ತೃತಂತ್ರವಾಗಿದ್ದು ಮಾನಸಿಕವಾದ ಒಂದು ಕರ್ಮವೇ ಆಗಿರುತ್ತದೆ. ಆದ್ದರಿಂದ ದ್ವೈತದೃಷ್ಟಿಯು ಇಲ್ಲಿ ಅನಿವಾರ್ಯವು. ಶಾಸ್ತ್ರವು ಈ ದ್ವೈತದೃಷ್ಟಿಯನ್ನವಲಂಬಿಸಿ ಸಾಧಕನ ಚಿತ್ತಸಮಾಧಾನಕ್ಕಾಗಿ ಉತ್ಕೃಷ್ಟೋಪಾಧಿಗಳಲ್ಲಿ ಬ್ರಹ್ಮಕ್ಕೆ ರೂಪಾಕಾರಾದಿಗಳನ್ನೂ ಗುಣಮಹಿಮಾದಿಗಳನ್ನೂ ತಾನೇ ಕಲ್ಪಿಸಿಕೊಟ್ಟು ಹಾಗೆಯೇ ಚಿಂತಿಸಬೇಕೆಂದು ಉಪದೇಶಿಸುತ್ತದೆ. ಇಂಥ ಕಲ್ಪನೆಗಳು

ಶಾಸ್ತ್ರದ ಆಧಾರದಿಂದಲೇ ಹೊರಟಿರುವದರಿಂದ ಸಾಧಕನಿಗೆ ಮುಂದೆ ಜ್ಞಾನಕ್ಕೆ ಅನುಕೂಲವಾಗಿಯೇ ಇರುತ್ತವೆ. ಹೇಗೆಂದರೆ ಉತ್ಕೃಷ್ಟೋಪಾಧಿಗಳಲ್ಲಿ ಪರಬ್ರಹ್ಮವನ್ನು ಸಗುಣ–ಸಾಕಾರವಾಗಿ ಚಿಂತಿಸಿದಂತೆಲ್ಲ ಸಾಧಕನು ಅದಕ್ಕೆ ಹತ್ತಿರವಾಗುವನು. ಅವನ ಅಂತಃಕರಣವು ಸೂಕ್ಷ್ಮವಸ್ತುಗ್ರಹಣಕ್ಕೆ ತಕ್ಕದ್ದಾಗುವದು. ಮುಂದೆ ಜ್ಞಾನವು ಸುಲಭವಾಗಿ ದಕ್ಕುವದು. ಆದ್ದರಿಂದ ಆದಿತ್ಯಾಂತರ್ಗತಪುರುಷನ ಉಪಾಸನೆಯೂ ಸಹ ನಮ್ಮೆಲ್ಲರ ದೃಷ್ಟಿಯಿಂದ ಬಹಳ ಮಹತ್ತ್ವವುಳ್ಳದ್ದೂ ಉಪಯುಕ್ತವಾದದ್ದೂ ಆಗಿದೆ. ಆ ಪುರುಷನನ್ನು 'ನಾರಾಯಣ'ನೆಂದು ಉಪನಿಷತ್ತುಗಳಲ್ಲಿಯೂ ಪುರಾಣಗಳಲ್ಲಿಯೂ ಹೆಸರಿಸಿರುತ್ತಾರೆ. ಅವನ ಶರೀರಾದಿಗಳು, ಮಹಿಮೆ–ಮುಂತಾದವುಗಳನ್ನು ಅರಿತು ಚಿಂತಿಸುವದು ಒಂದು ಹೆಚ್ಚಿನ ಸಾಧನೆಯಾಗಿರುವದು. ವೈದಿಕರಿಗಂತೂ ಇದು ಚಿರಪರಿಚಿತವೂ ಪ್ರಿಯವೂ ಆಗಿರುತ್ತದೆ.

ಈಗ ಸೂರ್ಯಾಂತರ್ಗತಪುರುಷನ ವರ್ಣನೆಯನ್ನು ಕೇಳಿರಿ: ಮೊದಲು ಈ ಮಂತ್ರದಲ್ಲಿರುವ ದೃಶ್ಯತೇ (ಕಂಡುಬರುತ್ತಾನೆ) ಎಂಬ ಶಬ್ದವನ್ನು ಚಿಂತಿಸೋಣ. ಸೂರ್ಯನನ್ನು ನಾವು ನೋಡಿದ್ದೇವಾದರೂ ಅವನಲ್ಲಿ ಯಾವ ಪುರುಷನೂ ನಮಗೆ ಕಂಡುಬಂದಿಲ್ಲವಲ್ಲ? ಎಂದು ಯಾರಾದರೂ ಆಕ್ಷೇಪಿಸಬಹುದು. ಮತ್ತು ಆತನ ಕಿರಣಗಳು ನಮ್ಮ ಕಣ್ಣಿಗೆ ಚುಚ್ಚದಂತೆ ಉಪಾಯವಾಗಿ ಯಂತ್ರಗಳ ಮೂಲಕ ನೋಡುವ ವಿಜ್ಞಾನಿಗಳಿಗೂ ಸಹ ಪುರುಷನ ದರ್ಶನವಾಗಿರಲಾರದು. ಹಾಗಾದರೆ ದೃಶ್ಯತೇ–ಎಂದು ಪ್ರಸಿದ್ಧವಾಗಿರುವಂತೆ ಮಂತ್ರದಲ್ಲಿ ಹೇಳಿದೆಯಲ್ಲ–ಎಂದರೆ ಶ್ರೀ ಶಂಕರಾಚಾರ್ಯರು ಅದನ್ನು ಈ ರೀತಿ ವಿವರಿಸುತ್ತಾರೆ: ''ಕಾಣಬರುತ್ತಾನೆ–ಎಂದರೆ ಅಂತರ್ದೃಷ್ಟಿಯಿಂದ ನೋಡುವ ಸ್ವಭಾವವುಳ್ಳ, ಹಾಗೂ ಮನಸ್ಸಿನ ಹೊಯ್ದಾಟವಿಲ್ಲದ, ಮತ್ತು ಬ್ರಹ್ಮಚರ್ಯ, ಶಮದಮಾದಿಗಳಿಂದ ಅಂತಃಕರಣವನ್ನು ಸೂಕ್ಷ್ಮವಾಗಿ ಸ್ವಚ್ಛವಾಗಿರಿಸಿಕೊಂಡಿರುವ ಯೋಗಿಗಳಿಗೆ'' ಎಂದರ್ಥ. ಆದ್ದರಿಂದ ಪಾಮರರಾದ ಭೌತಿಕದೃಷ್ಟಿಯ ಜನರಿಗೆ ಹಿರಣ್ಮಯಪುರುಷನು ಕಾಣಬರುವ ಸಂಭವವಿಲ್ಲ. ಯಾವದೇ ವಸ್ತುವನ್ನಾದರೂ ನೋಡಬೇಕಾದರೆ ಅದಕ್ಕೆ ತಕ್ಕ ಕರಣಗಳು ಬೇಕು. ಸೂಕ್ಷ್ಮವಾದ ದೃಶ್ಯಗಳಾದ ಕ್ರಿಮಿಕೀಟಗಳನ್ನು ಕೂಡ ಸಾಮಾನ್ಯಕಣ್ಣಿನಿಂದ ನೋಡಲಾಗುವದಿಲ್ಲ. ಅದಕ್ಕೆ ಸೂಕ್ಷ್ಮ ದರ್ಶಕಯಂತ್ರಗಳು ಬೇಕಾಗುವದು. ಹಾಗೆಯೇ ಇಲ್ಲಿಯೂ ಹಿರಣ್ಮಯಪುರುಷನ ದರ್ಶನಕ್ಕೆ ಅಸಾಧಾರಣವಾದ ಕರಣವೇ ಬೇಕಾಗಿರುತ್ತದೆ. ಯಾವನು ಇಂಥ ಸಂಪತ್ತುಳ್ಳವನಾಗಿರುವನೋ ಅವನಿಗೆ ಆ ಪರಮಪುರುಷನು ಕಂಡುಬರುತ್ತಾನೆ–ಎಂದಭಿಪ್ರಾಯ.

ಈಗ ಹಿರಣ್ಮಯಪುರುಷನ ಸ್ವರೂಪವನ್ನು ತಿಳಿಯೋಣ. ಈತನ ಗಡ್ಡಮೀಸೆಗಳೆಲ್ಲವೂ ಹಿರಣ್ಮಯವೇ ಆಗಿರುವವು–ಎಂದು ಉಪನಿಷತ್ತಿನಲ್ಲಿದೆ.

ಭಾಷ್ಯಕಾರರು ಅರ್ಥಮಾಡುವಾಗ ಇಲ್ಲಿ 'ಮಯ–ಎಂದರೆ ವಿಕಾರವೆಂಬ ಅರ್ಥವನ್ನು ಹೇಳಬಹುದಾದರೂ ಪುರುಷನು ಚೇತನನಾಗಿರುವದರಿಂದ ಚಿನ್ನದಂತೆ ಹೊಳಪಾದ ಹಳದಿಯ ಕಾಂತಿಯುಳ್ಳ ಶರೀರದವನು–ಎಂದೇ ತಿಳಿಯಬೇಕು'–ಎಂಬುದಾಗಿ ಸೂಚಿಸಿದ್ದಾರೆ. ಏಕೆಂದರೆ ಚೇತನನಾದ ಪುರುಷನೊಬ್ಬನಿಗೆ ಚಿನ್ನದ ಗಡ್ಡಮೀಸೆ ಗಳಿರುವದು ಸಂಭವಿಸುವದಿಲ್ಲ. ಇನ್ನು ಈತನು ಉಗುರುತುದಿಗಳವರೆಗೂ ಎಲ್ಲಾ ಶರೀರಾವಯವಗಳಿಂದಲೂ ಸುವರ್ಣವರ್ಣನಾಗಿಯೇ ಇರುತ್ತಾನೆ. ಈತನ ಕಣ್ಣುಗಳೊ, ಎಂದರೆ ಕಮಲದಂತೆ ನಸುಗೆಂಪಾಗಿರುವವು. ಇವನಿಗೆ 'ಉತ್' ಎಂಬ ಹೆಸರೂ ಇದೆ. ಎಲ್ಲಾ ವಿಧವಾದ ಪಾಪಸಮೂಹಗಳಿಂದಲೂ ಮೇಲೆದ್ದು ಪರಿಶುದ್ಧನಾಗಿರುವದರಿಂದ ಈ ಹೆಸರು ಬಂದಿರುವದು. ಇದು ಗೌಣನಾಮವು. ಗೌಣವೆಂದರೆ ಗುಣಗಳ ನಿಮಿತ್ತವಾಗಿ ಬಂದಿರುವ ಹೆಸರು. ಹೇಗೆ ಕೃಷ್ಣನೆಂದರೆ ಕಪ್ಪುವರ್ಣದವನೆಂದು ಹೇಳುವರೋ ಹಾಗೆ ಉತ್ ಎಂದರೆ ಉದಿತನು ಎಂದಭಿಪ್ರಾಯ.

ಇನ್ನು ಈ ಹಿರಣ್ಮಯಪುರುಷನ ಮಹಿಮೆಯನ್ನು ವಿಚಾರಮಾಡಬಹುದಾಗಿದೆ. ಇವನಿಗೆ ಋಕ್ಕೂ ಸಾಮಗಳೂ ಗೇಷ್ಣುಗಳೆಂದು ತಿಳಿಸಿದೆ. ಆದ್ದರಿಂದ ಉದ್ಗೀಥನೆನಿಸಿರುವನು. ಇದು ಒಂದು ಗುಣವಿಶೇಷವು. ವೇದಗಳೆಂಬಿವು ಪರಮಪವಿತ್ರವಾದ ವಾಙ್ಮಯಗಳು. ಅವೇ ಹಿರಣ್ಮಯಪುರುಷನಿಗೆ ಗೇಷ್ಣುಗಳಾಗಿವೆ. ಆದರೆ ಕೇವಲ ವೇದವಾಙ್ಮಯಗಳು ಮಾತ್ರ ಅವಯವಗಳೆಂದು ಇಲ್ಲಿ ಅಭಿಪ್ರಾಯವಿರುವದಿಲ್ಲ. ಮತ್ತೇನೆಂದರೆ ಋಕ್ ಎಂದರೆ ಪೃಥಿವಿಯೆಂದೂ ಸಾಮವೆಂದರೆ ಅಗ್ನಿಯೆಂದೂ ಹಿಂದೆ ತಿಳಿಸಿರುವಂತೆ ಇಲ್ಲಿಯೂ ಋಕ್ಸಾಮಶಬ್ದಗಳಿಗೆ ಅರ್ಥವನ್ನು ತಿಳಿಯಬೇಕು. ಪೃಥಿವೀ, ಅಗ್ನಿ–ಇತ್ಯಾದಿ ಲೋಕಗಳೆಲ್ಲವೂ ಗೇಷ್ಣುಗಳ ಸ್ಥಾನದಲ್ಲಿವೆ–ಎಂದು ಭಾವಿಸಬೇಕು. ಏಕೆಂದರೆ ಈ ಪುರುಷನು ಆದಿತ್ಯನಿಂದ ಆಚೆಗೆ ಇರುವ ಲೋಕಗಳನ್ನೆಲ್ಲ ಆಳುತ್ತಾನೆ. ದೇವತೆಗಳ ಕಾಮಗಳಿಗೂ ಒಡೆಯನಾಗಿದ್ದಾನೆ–ಎಂದು ಹೇಳಿರುವದರಿಂದ ಹೀಗೆ ಅರ್ಥಮಾಡ ಬೇಕು. ಇದರಿಂದ ನಮಗೆ ಆ ದೇವನ ಮಹಿಮೆಯ ಅರಿವಾಗುತ್ತದೆ. ಸತ್ಯಲೋಕ ಪರ್ಯಂತವಾದ ಎಲ್ಲಾ ಲೋಕಗಳಿಗೂ ಈತನೇ ಅಧಿಪತಿಯಾಗಿರುತ್ತಾನೆ. ಇಂಥ ಮಹಿಮಾನ್ವಿತನೆಂದು ಚಿಂತಿಸುವದರಿಂದ ಉಪಾಸಕನು ಈ ಹಿರಣ್ಮಯಪುರುಷನ ಉಪಾಸನೆಯಿಂದ ಸತ್ಯಲೋಕವನ್ನು ಪಡೆದುಕೊಳ್ಳುವನು–ಎಂದು ತಿಳಿದುಬರುತ್ತದೆ. ಈ ಪುರುಷನು 'ಉದ್ಗೀಥ'ನೆಂದೂ ಪ್ರಸಿದ್ಧನಾಗಿರುವನು. ಹೇಗೆಂದರೆ: ಋಗಾದಿಗಳು ಇವನ ಗೇಷ್ಣುಗಳಾಗಿರುವದು, ಈತನು ಪಾಪಗಳಿಂದ ರಹಿತನಾಗಿರುವದು–ಇವೇ 'ಉದ್ಗೀಥ' ನಾಮದ ವೈಶಿಷ್ಟ್ಯಗಳಾಗಿವೆ. 'ಹಿರಣ್ಮಯಪುರುಷ'ನೆಂಬ ಹೆಸರೇ ಬಹಳ ಚೆನ್ನಾಗಿರುವಲ್ಲಿ ಉದ್ಗೀಥನೆಂಬ ಅಡ್ಡ ಹೆಸರು ಏಕೆ? ಎಂದು ಆಕ್ಷೇಪಿಸಬಾರದು. ದೇವತೆಗಳಿಗೆ ತಮ್ಮ ಹೆಸರನ್ನು ಮರೆಮಾಚಿ ರೂಪಾಂತರದಿಂದ ಹೇಳಿಕೊಳ್ಳುವದೇ

ಪ್ರಿಯವಾಗಿರುತ್ತದೆಯಂತೆ. ಹಾಗೆಯೇ ಇಲ್ಲಿಯೂ ತಿಳಿಯಬೇಕು. ಇಷ್ಟು ವಿಷಯಗಳನ್ನು ಉಪನಿಷತ್ತಿನಲ್ಲಿ ವಿವರಿಸಿರುತ್ತದೆ.

ಈಗ ನಾವು ಆದಿತ್ಯಪುರುಷನ ಉಪಾಸನೆಗೆ ಸಿದ್ಧರಾಗುವದು ಹೇಗೆಂದು ವಿಚಾರಮಾಡೋಣ. ಆದಿತ್ಯನು ಪ್ರತ್ಯಕ್ಷದೇವತೆಯೆಂಬುದು ನಿರ್ವಿವಾದವು. ಆತನು ಒಬ್ಬನೇ, ಎಂಬಿದೂ ಸ್ವಚ್ಛನೂ ತೇಜೋಮಯನೂ ಲೋಕಗಳ ಪೋಷಕನೂ ಸರ್ವರಿಗೂ ಪ್ರಿಯನೂ ಆಗಿರುವದೂ ನಮಗೇ ತಿಳಿದಿದೆ. ಇಂಥ ಆದಿತ್ಯನು ನಿಜವಾಗಿ ಯಾರು? ಎಂದರೆ ನಮಗೆ ಹೊರಗೆ ಕಾಣುವ ತೇಜೋಮಯವಾದ ಮಂಡಲವಲ್ಲ, ಅದು ಜಡವು. ವಿಜ್ಞಾನಿಗಳ ಪ್ರಕಾರ ಅದೊಂದು ಉರಿಯುವ ಗೋಳವು. ಆದರೆ ಆ ಉಪಾಧಿಯಿಂದ ಉಪಲಕ್ಷಿತನಾಗಿ ಚೇತನನಾಗಿದ್ದು ಮಂಡಲಾಭಿಮಾನಿಯಾದ 'ನಾರಾಯಣ'ನೆಂಬ ಹೆಸರಿನ ಅಲ್ಲಿರುವ ಹಿರಣ್ಮಯಪುರುಷನು ಬೇರೆಯೇ–ಎಂದು ಶಾಸ್ತ್ರಗಳ ಅಭಿಪ್ರಾಯ.

ಪುರಾಣಗಳಲ್ಲಿ ಪ್ರಸಿದ್ಧವಾಗಿರುವ ಈ ಕೆಳಗಿನ ಪದ್ಯವನ್ನು ನೋಡಿರಿ.

ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಃ ಸರಸಿಜಾಸನಸನ್ನಿವಿಷ್ಟಃ।
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ॥

"ಸೂರ್ಯಮಂಡಲದೊಳಗೆ ಇದ್ದುಕೊಂಡಿರುವ, ಕಮಲದ ಆಸನದಲ್ಲಿ ಕುಳಿತಿರುವ, ಕೇಯೂರ (ಭುಜಕೀರ್ತಿ), ಮೀನಿನ ಆಕಾರದ ಕರ್ಣಕುಂಡಲಗಳು, ಕಿರೀಟ, ರತ್ನಹಾರ, ಶಂಖಚಕ್ರಗಳನ್ನು ಧರಿಸಿರುವವನೂ ಚಿನ್ನದಂತೆ ಹೊಂಬಣ್ಣವುಳ್ಳವನೂ ಆದ ನಾರಾಯಣನು ಧ್ಯಾನಕ್ಕೆ ವಿಷಯನಾಗಿರುವನು" ಎಂದು ಈ ಶ್ಲೋಕದ ಅರ್ಥ. ಇದರಲ್ಲಿ ಬಹಳಮಟ್ಟಿಗೆ ಉಪನಿಷತ್ತಿನ ಅಭಿಪ್ರಾಯವನ್ನೇ ಅಡಕಮಾಡಿದೆ. ದ್ವಿಜರು ಸಂಧ್ಯಾವಂದನೆ ಮಾಡುವಾಗ ಜಪಿಸುವ ಗಾಯತ್ರೀಮಂತ್ರದ ಅರ್ಥವನ್ನು ಅನುಸಂಧಾನಮಾಡಿದರೂ ಇದೇ ನಾರಾಯಣನ ಉಪಾಸನೆಯೇ ಕಂಡುಬರುತ್ತದೆ. ಆದ್ದರಿಂದ ಉಪನಿಷತ್ತಿನಲ್ಲಿ ಕೊಟ್ಟಿರುವ ಹೆಚ್ಚಿನ ವಿಶೇಷಣಗಳನ್ನೂ ಸೇರಿಸಿಕೊಂಡು ನಾವು ಪ್ರತಿದಿನವೂ ಪ್ರಾತಃಕಾಲದಲ್ಲಿ ಈ ಹಿರಣ್ಮಯಪುರುಷನ ಉಪಾಸನೆಯನ್ನು ಕೈಗೊಳ್ಳಬಹುದಾಗಿದೆ. ವೈದಿಕಕರ್ಮಗಳನ್ನು ಅನುಷ್ಠಾನಮಾಡಲು ಸೌಕರ್ಯಗಳಿಲ್ಲದವರೂ ಸಹ ಮೇಲ್ಕಂಡ ಶ್ಲೋಕವನ್ನೇ ಪಠಿಸುತ್ತಾ ಸೂರ್ಯಾಂತರ್ಗತಪುರುಷನನ್ನು ಹೃದಯದಲ್ಲಿ ಚಿಂತಿಸಬಹುದು. ಇಲ್ಲಿ ಉಪಾಸನೆಯು ಮುಖ್ಯವೇ ಹೊರತು ಮಂತ್ರತಂತ್ರಗಳಲ್ಲ. ಆದರೆ ಅವುಗಳು ಇದ್ದರೆ ಚಿನ್ನಕ್ಕೆ ಸುವಾಸನೆಯಿಟ್ಟಂತೆ ಒಳ್ಳೆಯದೇ ಆಯಿತು. ಹೀಗೆ ಹಿರಣ್ಮಯಪುರುಷನ ಉಪಾಸನೆಯನ್ನು ಪ್ರಾರಂಭಕ್ಕೆ ಎಲ್ಲರೂ ಮಾಡಬಹುದಾಗಿದೆ.

ಸೂರ್ಯನು ಎಲ್ಲರಿಗೂ ಸುಲಭವಾಗಿ ಗೋಚರನಾಗುವದರಿಂದ ಹಾಗೂ ಅವನ ತೇಜಸ್ಸು ಯಾವದೇ ಪ್ರಾಣಿಗೂ ಪಕ್ಷಪಾತವಿಲ್ಲದೆ ದೊರಕುವದರಿಂದ ಈ ಸೂರ್ಯಾತ್ಮನನ್ನು ಸರ್ವರೂ ಒಮ್ಮತದಿಂದ ಉಪಾಸನೆಮಾಡಬಹುದಾಗಿದೆ. ಚಿಕ್ಕಮಕ್ಕಳಿಗೆ ಪಾಠಶಾಲೆಗಳಲ್ಲಿ ಹೇಳಿಕೊಡುವ 'ಸ್ವಾಮಿ ದೇವನೆ ಲೋಕಪಾಲನೆ' ಎಂಬ ಹಾಡು ಪೂರ್ಣವಾಗಿ ಆದಿತ್ಯೋಪಾಸನೆಯ ತತ್ತ್ವವನ್ನೇ ಒಳಗೊಂಡಿದೆ. ಜಾತಿ–ಮತ ಭೇದಗಳು ಏನೇ ಇರಲಿ, ಸೂರ್ಯನ ಧ್ಯಾನವು ಮಾತ್ರ ಯಾರಿಗೂ ಕೆಟ್ಟಬುದ್ಧಿಯನ್ನುಂಟುಮಾಡುವದಿಲ್ಲ. ಈಗಿನ ಕಾಲಕ್ಕೂ ನಾವು ಭಾರತೀಯರಾಗಿ ಬದುಕಲು ಸೂರ್ಯನ ಉಪಾಸನೆಯೊಂದು ಮಾತ್ರವೇ ಸರ್ವಗ್ರಾಹ್ಯವಾಗಿದೆ.

ಬ್ರಾಹ್ಮಣನಿಗೆ ಈ ಸೂರ್ಯಚಿಂತನೆಯು ವಿಶೇಷವಾಗಿ ಹೇಳಲ್ಪಟ್ಟಿದೆ. ಏಕೆಂದರೆ ಬ್ರಾಹ್ಮಣನು ಮಿತ್ರದೇವತಾಕನೆಂದು ಶಾಸ್ತ್ರಗಳ ಹೇಳಿಕೆ. ಬೇರೆ ಯಾವ ಕರ್ಮಾನುಷ್ಠಾನಗಳನ್ನು ಮಾಡಲಿ, ಬಿಡಲಿ–ಬ್ರಾಹ್ಮಣನು ಗಾಯತ್ರೀಜಪ–ಅ ಮೂಲಕ ಸೂರ್ಯೋಪಾಸನೆಯನ್ನು ಮಾಡಲೇಬೇಕೆಂದು ವಿಧಿಯಿದೆ. ನಮ್ಮ ಬುದ್ಧಿವೃತ್ತಿಗಳನ್ನು ಪ್ರೇರಿಸುವ ಅಂತರ್ಯಾಮಿಯಾದ ಸೂರ್ಯನಾರಾಯಣನು ದ್ವಿಜರಿಗೆಲ್ಲ ಪರಮೋಪಾಸ್ಯನು. ಸಂಧ್ಯಾಧಿಕಾರವುಳ್ಳ ತ್ರೈವರ್ಣಿಕರುಗಳೂ ಈ ಹಿರಣ್ಮಯಪುರುಷನ ಉಪಾಸನೆಗೆ ಮುಖ್ಯಾಧಿಕಾರಿಗಳು. ಇವರುಗಳು ಇದನ್ನು ಮಾಡಿದಲ್ಲಿ ಉಳಿದವರ ಬುದ್ಧಿಗಳೂ ಸನ್ಮಾರ್ಗದಲ್ಲಿ ಪ್ರೇರಿಸಲ್ಪಡುವವು. ಮೇಲುಪಂಕ್ತಿ ಸರಿಯಾಗಿದ್ದಲ್ಲಿ ಕಾಪಿ ಬರೆಯುವದು ಸುಲಭ. ಹಾಗೆಯೇ ದ್ವಿಜರು ಮೇಲುಪಂಕ್ತಿಯಾದಲ್ಲಿ ಸಮಾಜವೆಲ್ಲ ಉದ್ಧಾರವಾಗುವದು.

---

## ಅಕ್ಷ್ಯಂತರ್ಗತಪುರುಷನ ಉಪಾಸನೆ

ಓಮ್ ॥ಅಥ ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ ಸೈವರ್ಕ್ ತತ್ಸಾಮ ತದುಕ್ಥಂ ತದ್ಯಜುಃ ತದ್ಬ್ರಹ್ಮ॥ 1–7–5.

ಭಾವಾರ್ಥ:– ಇನ್ನು ಅಕ್ಷಿ(ಕಣ್ಣು)ಯೊಳಗೆ ಈ ಪುರುಷನು ಕಾಣಿಸುತ್ತಿರುವನಲ್ಲ, ಅದೇ ಋಕ್ಕು, ಅದೇ ಸಾಮವು, ಅದೇ ಉಕ್ಥವು, ಅದೇ ಯಜುಸ್ಸು, ಅದೇ ಬ್ರಹ್ಮವು.

(ಪುರುಷನ ಬಲಗಣ್ಣಿನೊಳಗೆ ಕಂಡುಬರುವ ದೇವನನ್ನು ಋಕ್, ಸಾಮ, ಮುಂತಾದ ಮಹಿಮೆಗಳುಳ್ಳವನೆಂದೇ ಚಿಂತಿಸಬೇಕು. ಆದಿತ್ಯಪುರುಷನೊಡನೆ ಈತನಿಗೆ ತಾದಾತ್ಮ್ಯವಿದೆ. ಇವನೂ ಸಹ ಲೋಕಾಧಿಪತಿಯೂ ಪೂಜ್ಯನೂ ಆಗಿರುವನು. ಹೀಗೆ ಚಿಂತಿಸುವವನಿಗೆ ಮನುಷ್ಯ ಸಂಬಂಧಿಯಾದ ಕಾಮಗಳೆಲ್ಲವೂ ದೊರಕುವವು– ಎಂದಭಿಪ್ರಾಯ.)

# 7. ಬಲಗಣ್ಣಿನಲ್ಲಿರುವ ಪುರುಷನ ಉಪಾಸನೆ

ಹಿಂದಿನ ವಿವರಣೆಯಲ್ಲಿ ಸೂರ್ಯಾಂತರ್ಗತನಾದ ಹಿರಣ್ಮಯಪುರುಷನ ಉಪಾಸನೆಯನ್ನು ತಿಳಿಸಿದ್ದಾಗಿದೆ. ಈಗ ಅದೇ ಪುರುಷನು ಅಧ್ಯಾತ್ಮವಾಗಿ ಮನುಷ್ಯನ ಬಲಗಣ್ಣಿನೊಳಗೂ ಇದ್ದಾನೆಂದೂ ಅವನನ್ನೂ ಉಪಾಸನೆಮಾಡಬಹುದೆಂದೂ ತಿಳಿಸಹೊರಟಿದ್ದಾರೆ. ಸರ್ವಗತವಾದ ಬ್ರಹ್ಮವು ಇಡಿಯ ಬ್ರಹ್ಮಾಂಡವನ್ನೇ ವ್ಯಾಪಿಸಿರುವದೇ ಪರಮಾರ್ಥವೆಂದು ಹೇಳಿದಮೇಲೆ ಪ್ರತ್ಯೇಕವಾಗಿ ಆದಿತ್ಯನಲ್ಲಿಯೂ ಮನುಷ್ಯನ ಬಲಗಣ್ಣಿನಲ್ಲಿಯೂ ಇದ್ದಾನೆ ಎಂದೇನೂ ಹೇಳಬೇಕಾದ್ದಿಲ್ಲ. ಆದರೂ ಸರ್ವಗತವಾದ ವಸ್ತುವನ್ನು ಅರಿತುಕೊಳ್ಳಬಹುದೇ ಹೊರತು ಚಿಂತಿಸಲಾಗುವದಿಲ್ಲ. ಚಿಂತನೆ ಅಥವಾ ಧ್ಯಾನಕ್ಕೆ ಏನಾದರೊಂದು ಆಲಂಬನವು ಬೇಕು. ಆದ್ದರಿಂದ ಉಪಾಸಕರ ದೃಷ್ಟಿಯಿಂದ ಇಲ್ಲಿ ಬ್ರಹ್ಮಕ್ಕೆ ಆಧ್ಯಾತ್ಮಿಕವಾಗಿ 'ಅಕ್ಷಿ' ಸ್ಥಾನವನ್ನು ಕಲ್ಪಿಸಿ ಗುಣ–ಮಹಿಮಾದಿಗಳನ್ನೂ ಜೋಡಿಸಿ ಚಿಂತಿಸಬೇಕೆಂದು ವಿಧಿಸಿರುತ್ತದೆ. ಕರ್ಮೋಪಾಸನೆಗಳನ್ನು ಹೀಗೆ ವಿಧಿಸಲು ಬರುತ್ತದೆ. ಆದರೆ ಜ್ಞಾನವನ್ನು ವಿಧಿಸಲು ಬರುವದಿಲ್ಲ. ಇರಲಿ. ಈಗ ಅಕ್ಷಿಪುರುಷನೆಂದರೆ ಯಾರು? ಅವನ ಸ್ವರೂಪವೇನು? ಅವನನ್ನು ಹೇಗೆ ಉಪಾಸನೆಮಾಡಬೇಕು? ಫಲವೇನು? ಎಂಬ ವಿಷಯಗಳನ್ನು ಕುರಿತು ಈಗ ವಿಚಾರಿಸಲಾಗುತ್ತದೆ.

ಉಪಾಸನೆಗಳಲ್ಲಿ ಆಧ್ಯಾತ್ಮಿಕ–ಆಧಿದೈವಿಕ ಎಂಬ ವಿಭಾಗಗಳುಂಟು. ಆಧಿದೈವಿಕವಾಗಿ ಆದಿತ್ಯನಲ್ಲಿ ಪುರುಷನನ್ನು ಚಿಂತಿಸಬೇಕೆಂದು ಹೇಳಿರುವಂತೆಯೇ ಈಗ ಆಧ್ಯಾತ್ಮಿಕವಾಗಿ ಕಣ್ಣಿನಲ್ಲಿಯೂ ಪುರುಷನ ಉಪಾಸನೆಯನ್ನು ಶಾಸ್ತ್ರವು ಹೇಳುತ್ತಿದೆ. ಹೇಗೆಂದರೆ: ಮನುಷ್ಯನಿಗೆ ಇಂದ್ರಿಯಗಳಲ್ಲಿ ಕಣ್ಣು ಪ್ರಧಾನವಾದುದು. ಕಿವಿಯಲ್ಲಿ ಕೇಳಿದ್ದಕ್ಕಿಂತಲೂ ಕಣ್ಣಿನಲ್ಲಿ ನೋಡಿದ್ದು ಹೆಚ್ಚು ಪ್ರಮಾಣವೆಂದು ವ್ಯವಹಾರ ಸಿದ್ಧವಾಗಿರುತ್ತದೆ. ನಾವು ಓದುಬರಹಗಳನ್ನು ಕಣ್ಣಿನ ಸಹಾಯದಿಂದಲೇ ನೆರವೇರಿಸುತ್ತೇವೆ. ಕಣ್ಣುಗಳಿಲ್ಲವಾದರೆ ರೂಪಪ್ರಪಂಚವೇ ನಮಗೆ ಸಿದ್ಧವಾಗುವದಿಲ್ಲ. ಇಂಥ ಕಣ್ಣುಗಳಲ್ಲಿಯೂ ಉಪಾಸನೆಗಾಗಿ ಬಲಗಣ್ಣನ್ನು ಆರಿಸಿಕೊಳ್ಳಲಾಗಿದೆ. ಗೌಡಪಾದಕಾರಿಕೆಯಲ್ಲಿ ''ದಕ್ಷಿಣಾಕ್ಷಿಮುಖೇ ವಿಶ್ವಃ'' ಎಂಬ ಶ್ಲೋಕವೊಂದಿದೆ. ಅದರ ಪ್ರಕಾರ ಬಲಗಣ್ಣಿನಲ್ಲಿ ಎಚ್ಚರಾವಸ್ಥೆಗೆ ಅಭಿಮಾನಿಯಾದ ವಿಶ್ವನೆಂಬ ಜಾಗ್ರದಾತ್ಮನಿರುತ್ತಾನೆ–ಎಂದು ತಿಳಿದುಬರುತ್ತದೆ. ಆದ್ದರಿಂದ ನಾವು ವ್ಯವಹಾರಮಾಡುತ್ತಿರುವ ಈ ಪ್ರಪಂಚಕ್ಕೆಲ್ಲ ಎಚ್ಚರದವಸ್ಥೆಯೇ ಆಧಾರವಾಗಿದ್ದು ಅದರ ಅಭಿಮಾನಿಯಾದ ವಿಶ್ವನೆಂಬ ಆತ್ಮನು ಬಲಗಣ್ಣಿನಲ್ಲಿದ್ದುಕೊಂಡಿರುತ್ತಾನೆಂದು ಶಾಸ್ತ್ರಗಳ ಹೇಳಿಕೆಯಿದೆ. ಹೀಗೆ ಉಪಾಸಕರಿಗೆ ಅಧ್ಯಾತ್ಮವಾಗಿ ಅಕ್ಷಿಪುರುಷನು ಧ್ಯೇಯನಾಗಿರುತ್ತಾನೆ–ಎಂದು ತಿಳಿಯಬೇಕು.

ಮತ್ತೊಂದು ದೃಷ್ಟಿಯಿಂದಲೂ ಕಣ್ಣು– ಪುರುಷನ ಉಪಾಸನೆಗೆ ತಕ್ಕಸ್ಥಾನವಾಗಿದೆ. ಹೇಗೆಂದರೆ: ಇಂದ್ರಿಯಗಳಲ್ಲೆಲ್ಲ ಯಾವಾಗಲೂ ಅತ್ಯಂತ ಸ್ವಚ್ಛವಾಗಿರುವದು ಕಣ್ಣು ಮಾತ್ರ. ಆದ್ದರಿಂದಲೇ ಏನಾದರೂ ಸಣ್ಣ ಕಸವು ಬಿದ್ದರೂ ಕಣ್ಣು ಉರಿಯಲಾರಂಭಿಸುತ್ತದೆ. ಅದನ್ನು ತೆಗೆದ ಹೊರತು ಸಮಾಧಾನವಾಗುವದಿಲ್ಲ. ಇತರ ಇಂದ್ರಿಯಗಳಲ್ಲಿ ಕಸವು ಸೇರಿದಾಗ ಅವು ತಡೆದುಕೊಳ್ಳುವದುಂಟು. ಆದರೆ ಕಣ್ಣು ಮಾತ್ರ ಹೊರಗಿನ ವಸ್ತು (Foreign Matter) ವನ್ನು ಸಹಿಸುವದೇ ಇಲ್ಲ. ಆದ್ದರಿಂದ ಇದು ಯಾವಾಗಲೂ ಶುದ್ಧವಾದ ಜಾಗವಾಗಿರುತ್ತದೆ. ಎರಡನೆಯದಾಗಿ ಕಣ್ಣಿಗೆ ಅಧೀನವಾಗಿಯೇ ಇತರ ಇಂದ್ರಿಯಗಳೂ ಕೆಲಸಮಾಡುವವು. ಉದಾಹರಣೆಗೆ : ಕಣ್ಣು ತೋರಿಸಿದ್ದನ್ನು ಕೈ ತೆಗೆದುಕೊಳ್ಳುತ್ತದೆ. ವಾಕ್ಕು ಓದುತ್ತದೆ. ನಾಲಗೆಯು ಓದುವಾಗ ಕಣ್ಣಿನ ಸಹಾಯವು ಬೇಕೇಬೇಕು. ಬಾಯಿಂದ ಓದುತ್ತೇವೆ ಎಂದು ನಾವು ಭಾವಿಸಿದ್ದರೂ ನಿಜವಾಗಿ ಓದುವದು ಕಣ್ಣಿನಿಂದಲೇ ಸರಿ. ಏಕೆಂದರೆ ಬಾಯಿ ಮುಚ್ಚಿಕೊಂಡೇ ಕಣ್ಣನ್ನು ಮಾತ್ರ ತೆರೆದುಕೊಂಡು ಓದಬಹುದು. ಆದರೆ ಕಣ್ಣು ಮುಚ್ಚಿಕೊಂಡಲ್ಲಿ ಓದಲಾಗುವದೇ ಇಲ್ಲ–ಇತ್ಯಾದಿ; ಆದ್ದರಿಂದಲೇ ಇಂದ್ರಿಯಗಳಲ್ಲೆಲ್ಲ ಕಣ್ಣೇ ಪ್ರಧಾನವೆನಿಸಿರುವದು. 'ಹೆಣ್ಣು ಚೆಂದವಾಗಿದೆ; ಕಣ್ಣು ಮಾತ್ರ ಕುರುಡು' ಎಂಬ ಗಾದೆಯೂ ಈ ಕಾರಣದಿಂದಲೇ ಹುಟ್ಟಿರಬೇಕು. ಹೀಗೆ ವ್ಯಾವಹಾರಿಕವಾಗಿಯೂ ಕಣ್ಣು ಮಾನವನ ಜೀವನದಲ್ಲಿ ಪ್ರಧಾನಸ್ಥಾನವನ್ನು ಆಕ್ರಮಿಸಿರುವದರಿಂದ ಆಧ್ಯಾತ್ಮಿಕವಾಗಿಯೂ ಪುರುಷನ ಉಪಾಸನೆಗೆ ಈ ಕಣ್ಣನ್ನು ಸ್ಥಾನವಾಗಿ ಆರಿಸಿಕೊಂಡಿದೆ. ಇಲ್ಲಿ ಕಂಡುಬರುವ ಎಂದರೆ ಕಣ್ಣಿಗೆ ಅನುಗ್ರಾಹಕನಾಗಿ– ಅದು ನೋಡುವ ಶಕ್ತಿಯನ್ನು ಪಡೆಯಲು ಬೇಕಾದ ಬಲವನ್ನು ದಯಪಾಲಿಸಿರುವ ಭಗವಂತನು ಇಲ್ಲಿ ಉಪಾಸ್ಯನಾಗಿರುತ್ತಾನೆ. ಅವನು ಕಣ್ಣಿಗೂ ಕಣ್ಣಾಗಿದ್ದಾನೆ– ಎಂದು ಕೇನೋಪನಿಷತ್ತಿನಲ್ಲಿ ತಿಳಿಸಿದೆ.

ಈಗ ಈ ಉಪಾಸ್ಯಪುರುಷನ ಸ್ವರೂಪವನ್ನು ಮನನಮಾಡೋಣ. ಚಿಂತನೆಗಾಗಿ ಕಲ್ಪಿಸಿರುವ ಈ ಪುರುಷನಿಗೂ ಆದಿತ್ಯಾಂತರ್ಗತಪುರುಷನಂತೆಯೇ ಅವಯವಾದಿಗಳನ್ನು ಚಿಂತಿಸಬೇಕು–ಎಂದು ಉಪನಿಷತ್ತಿನಲ್ಲಿ ತಿಳಿಸಿದೆ. ಇದರಿಂದ ಅಕ್ಷಿಪುರುಷನ ವಿಷಯಕ್ಕೆ ನಮಗೆ ಬರಬಹುದಾದ ಸಂಶಯಗಳು ನಿವಾರಣೆಯಾಗುತ್ತವೆ. ಸಾಮಾನ್ಯಜನರಿಗೆ ಅಕ್ಷಿಪುರುಷ– ಎಂದರೆ ಕಣ್ಣಿನಲ್ಲಿ ಪ್ರತಿಫಲಿಸುವ ಪ್ರತಿಬಿಂಬ ಎಂದಿಷ್ಟೇ ಅಭಿಪ್ರಾಯವಿರುತ್ತದೆ. ಆದರೆ ಆ ಛಾಯಾಪುರುಷನು ಅನಿತ್ಯನೂ ವಿಕಾರಿಯೂ ಆಗಿರುವನಾದ್ದರಿಂದ ಉಪಾಸ್ಯನಲ್ಲ. ಅವನನ್ನು ಕೈಬಿಟ್ಟು ಕೇವಲ ಶಕ್ತಿರೂಪನಾಗಿ ಕಣ್ಣನ್ನು ಅನುಗ್ರಹಿಸುತ್ತಿರುವ ನಿತ್ಯದೃಗ್‌ರೂಪನಾದ ಪರಮಾತ್ಮನೇ ಇಲ್ಲಿ ಧ್ಯೇಯನಾಗಿರುತ್ತಾನೆ. ಆದ್ದರಿಂದಲೇ ಆದಿತ್ಯನೊಳಗಿನ ಪುರುಷನಿಗೆ ಇರುವ ಎಲ್ಲಾ ರೂಪ, ಗುಣ–ಮಹಿಮಾದಿಗಳು– ಉದ್ಗೀಥನೆಂಬ ನಾಮವೂ ಈತನಿಗೂ ಇದ್ದುಕೊಂಡಿರುತ್ತವೆ. ವ್ಯತ್ಯಾಸವೇನೆಂದರೆ:

ವ್ಯವಹಾರಬುದ್ಧಿಯಿಂದ ನೋಡಿದಾಗ ಆದಿತ್ಯಪುರುಷನು ಕೋಟಿಗಟ್ಟಲೆ ಮೈಲಿಗಳ ದೂರದಲ್ಲಿರುತ್ತಾನೆ. ಅಕ್ಷಿಪುರುಷನಾದರೊ, ನಮ್ಮ ಅತಿ ಸಮೀಪದಲ್ಲಿ ಅಥವಾ ನಮ್ಮ ಕಣ್ಣಿನಲ್ಲಿಯೇ ಕಂಡುಬರುತ್ತಾನೆ. ಈ ಇಬ್ಬರೂ ಒಂದೇ ತತ್ತ್ವವಾಗಿರುತ್ತಾರೆ. ಹೇಗೆ ಹುಣ್ಣಿಮೆಯ ದಿನ ಚಂದ್ರನು ಕೆರೆಯ ನೀರಿನಲ್ಲಿ ಪ್ರತಿಬಿಂಬಿತನಾಗಿದ್ದಾಗ ಕೆರೆಯಲ್ಲಿರುವವನೂ ಆಕಾಶದಲ್ಲಿರುವವನೂ ಒಬ್ಬನೇ ಆಗಿರುವನೋ ಆಕಾಶದಲ್ಲಿರುವ ಚಂದ್ರನ ಪ್ರಕಾಶ–ಶೀತಾದಿಗುಣಗಳೆಲ್ಲವೂ ಕೆರೆಯೊಳಗಿನ ಚಂದ್ರನಲ್ಲಿಯೂ ಇವೆ– ಎಂದು ವ್ಯವಹರಿಸಬಹುದೋ ಹಾಗೆ ತಿಳಿಯಬೇಕು. ನಿಜವಾಗಿ ನೋಡಿದರೆ ಸರ್ವಗತನಾದ ಪರಮಪುರುಷನಿಗೆ ಯಾವ ಗೊತ್ತಾದ ಸ್ಥಾನವೂ ಇಲ್ಲ. ಹಾಗೆ ಇದೆ ಎಂದು ಕಲ್ಪಿಸಿದ ಕೂಡಲೆ ಅವನನ್ನು ಪರಿಚ್ಛೇದಗೊಳಿಸಿದಂತಾಗುವದು. ''ವಿಶ್ವಂ ವಿಷ್ಣುಃ''–ಎಂಬಿದು ಕೇವಲ ಉಪಚಾರವಾಗಿಬಿಡುವದು. ಆದ್ದರಿಂದ ಉಪಾಸನೆಗಾಗಿ ಮಾತ್ರವೇ ಅಕ್ಷಿಸ್ಥಾನವನ್ನು ನಿರ್ದೇಶಿಸಿ ಶ್ರುತಿಯು ಅಲ್ಲಿ ಶಕ್ತಿರೂಪನಾಗಿ ಕಂಡುಬರುವ ಪುರುಷನು ಆದಿತ್ಯಾಂತರ್ಗತನಾದ ಪುರುಷನಂತೆಯೇ ಉಪಾಸ್ಯನೆಂದು ತಿಳಿಸಿದೆ. ಉಳಿದ ಎಲ್ಲಾ ಗುಣಗಳ ವಿವರವನ್ನೂ ಹಿಂದಿನ ವಿವರಣೆಯಂತೆಯೇ ವಾಚಕರು ಮನನ ಮಾಡಬೇಕು.

ಈಗ ಈ ಅಕ್ಷಿಪುರುಷನ ವಿಶೇಷಮಹಿಮೆಯನ್ನು ತಿಳಿಸಲಾಗುವದು. ಈತನು ತನಗಿಂತ ಈಚಿನ ಲೋಕಗಳಿಗೆ–ಎಂದರೆ ಭೌತಿಕವಾದ ಬಾಹ್ಯಪ್ರಪಂಚಕ್ಕೆ ಹಾಗೂ ಅಲ್ಲಿರುವ ಮನುಷ್ಯರೇ ಮೊದಲಾದ ಜೀವಿಗಳ ಕಾಮಗಳಿಗೆ ಒಡೆಯನಾಗಿರುತ್ತಾನೆ. ಇದರಿಂದ ತಿಳಿಯಬರುವದೇನೆಂದರೆ; ಐಹಿಕವಾದ ಹಾಗೂ ಬದುಕಿರುವಾಗಲೇ ಬಯಸುವಂಥ ಕಾಮಗಳನ್ನು ಪಡೆದುಕೊಳ್ಳುವ ಇಚ್ಛೆಯುಳ್ಳವರು ಈ ಅಕ್ಷಿಸ್ಥಾನಗತ ಪುರುಷನನ್ನೇ ಉಪಾಸನೆ ಮಾಡಬೇಕು. ಏಕೆಂದರೆ ಇಂಥ ಭೋಗಗಳನ್ನು ಕೊಡಲು ಈತನು ಸಮರ್ಥನಾಗಿದ್ದಾನೆ. ಮನುಷ್ಯಕಾಮಗಳೆಂಬಿವೂ ಕಳಪೆಯಾದವುಗಳೇನಲ್ಲ. ಹಾಗೆ ನೋಡಿದರೆ ಈಗಿನ ಪ್ರಪಂಚದಲ್ಲಿ ಯಾವನೊಬ್ಬನೂ ಸಾರ್ವಭೌಮ ನೆಂಬುವನಿರುವದೇ ಇಲ್ಲ. ಸರ್ವಭೂಮಿಗೂ ಒಡೆಯನಾದರೆ ಮಾತ್ರ ಸಾರ್ವಭೌಮ ನೆನಿಸುವನು. ಈಗಿನ ರಾಜಕೀಯ ಭೂಪಟದಂತೆಯೂ ದೇಶಗಳೆಲ್ಲವೂ ಪಾಶ್ಚಾತ್ಯ, ಪೌರ್ವಾತ್ಯ–ಎಂಬ ಎರಡು ವಿಭಾಗಗಳಲ್ಲಿ ಹರಿದು ಹಂಚಿಹೋಗಿ ಬೇರೆಬೇರೆಯ ಭೂಭಾಗಕ್ಕೆ ಬೇರೆಬೇರೆಯ ಯಜಮಾನರಿರುತ್ತಾರೆ. ಅವರು ಕೂಡ ಪ್ರಜಾತಂತ್ರರೇ ಹೊರತು ಸ್ವತಂತ್ರರಲ್ಲ. ಆದ್ದರಿಂದ ಸಾರ್ವಭೌಮತ್ವವೇ ಸಿದ್ಧಿಸದೇ ಇರುವಾಗ ಉಳಿದ ಭೋಗಗಳ ಪ್ರಾಪ್ತಿಯು ಕೂಡ ಎಲ್ಲವೂ ಎಲ್ಲರೀತಿಯಿಂದಲೂ ಯಾರೊಬ್ಬರಿಗೂ ದಕ್ಕಿರುವದಿಲ್ಲ. ಈ ಉಪಾಸ್ಯನಾದ ಅಕ್ಷಿಪುರುಷನಾದರೊ, ಸಾರ್ವಭೌಮನೂ, ಮನುಷ್ಯರ

ಸಕಲಕಾಮಗಳ ಗನಿಯೂ ಆಪೇಕ್ಷಿಕವಾದ ಅಮೃತತ್ವವುಳ್ಳವನೂ ಸ್ವರೂಪದಿಂದ ನಿರತಿಶಯಾನಂದವಾದ ಪರಬ್ರಹ್ಮವೂ ಆಗಿರುವನು. ಹೇಗೆಂದರೆ ಮಹಾವಿಷ್ಣುವು ಸಕಲವಸುಧಾಧಿಪತಿಯಾದರೂ ರಾಮಾವತಾರದಲ್ಲಿ ಅಯೋಧ್ಯಾಧಿಪತಿ–ಎನಿಸಿ ಕೊಂಡಂತೆ–ಎಂದು ತಿಳಿಯಬೇಕು.

ಈಗ ಈ ಅಕ್ಷಿಪುರುಷನನ್ನು ಸಂಗೀತಗಾರರೂ ಗಾನಮಾಡುತ್ತಾರೆಂಬ ವಿಷಯವನ್ನು ಪರಿಶೀಲಿಸೋಣ. ಉಪನಿಷತ್ತಿನಲ್ಲಿ ವೀಣಾಗಾನಮಾಡುವವರೆಲ್ಲ ಈತನನ್ನೇ ಗಾನಮಾಡುತ್ತಾರೆಂತ ತಿಳಿಸಿದೆ. ವೀಣಾಗಾನವನ್ನು ಉಪಲಕ್ಷಣವಾಗಿಟ್ಟುಕೊಂಡರೆ ಎಲ್ಲಾ ವಾದ್ಯಸಂಗೀತಗಾರರೂ ಗಾತ್ರಸಂಗೀತಗಾರರೂ ಈ ಭಗವಂತನನ್ನೇ ಹಾಡಿ ಹೊಗಳುವರು–ಎಂದರ್ಥಮಾಡಬಹುದಾಗುವದು. ಇಲ್ಲಿ ಸಂಗೀತಗಾರರೆಂದರೆ ಶ್ರೀ ತ್ಯಾಗರಾಜರು, ಶ್ರೀ ಮುತ್ತುಸ್ವಾಮಿದೀಕ್ಷಿತರು, ಶ್ರೀ ಪುರಂದರದಾಸರಂಥವರನ್ನು ತೆಗೆದುಕೊಳ್ಳಬೇಕು. ಅವರೆಲ್ಲ ಧನವಂತರಾಗಿದ್ದರು. ಧನ ಎಂದರೆ ಭಗವಂತನ ನಿರಂತರ ಸ್ಮರಣರೂಪವಾದ ಧನವು–ಇದನ್ನೇ ಭಕ್ತಿಭಾಗ್ಯವೆನ್ನುವರು. ರಾಮಭಕ್ತಿಸಾಮ್ರಾಜ್ಯದ ಸಾರ್ವಭೌಮರಾಗಿ ಶ್ರೀ ತ್ಯಾಗರಾಜರು ಬಾಳಿದ್ದು ಯಾರಿಗೆ ಗೊತ್ತಿಲ್ಲ? ಹಾಗೆಯೇ ಪುರಂದರದಾಸರು ಸಹ ನಿಧನಕ್ಕೆ ಕಾರಣವಾದ ಐಹಿಕಧನವನ್ನು ತ್ಯಾಗಮಾಡಿ ವಿಠಲನೆಂಬ ಅಮರಧನವನ್ನಾಶ್ರಯಿಸಿ ಕೃತಾರ್ಥರಾದುದೂ ಸುಪ್ರಸಿದ್ಧವಾಗಿದೆ. ಇಂಥ ಮಹನೀಯರುಗಳು ಮತ್ತೊಬ್ಬರು ಯಾರೂ ತಮ್ಮ ಸ್ಥಾನವನ್ನಾಕ್ರಮಿಸದಂತೆ ಕೀರ್ತಿಶರೀರದಿಂದ ಸಾರ್ವಭೌಮರೇ ಆಗಿ ಈಗಲೂ ಜನತೆಯನ್ನು ಆಳುತ್ತಿದ್ದಾರೆ. ತ್ಯಾಗರಾಜರಿಗೆ ಸರಿಸಾಟಿಯಾದ ಮತ್ತೊಬ್ಬ ತ್ಯಾಗರಾಜರಾಗಲಿ, ಅಥವಾ ಪುರಂದರದಾಸರಿಗೆ ಸರಿಸಾಟಿಯಾದ ಮತ್ತೊಬ್ಬ ಪುರಂದರದಾಸರಾಗಲಿ ಈವರೆಗೂ ಹುಟ್ಟಿರುವದಿಲ್ಲ. ಆದ್ದರಿಂದ ಇಂಥ ಮಹಾಧನಿಕರಾದ ಮಹಾನುಭಾವರು ತಮ್ಮ ತಮ್ಮ ಪರಮೈಶ್ವರ್ಯವನ್ನು ಈ ಚಾಕ್ಷುಷಪುರುಷನೆನಿಸಿರುವ ನಾರಾಯಣನ ಕೃಪೆಯಿಂದಲೇ ಪಡೆದುಕೊಂಡಿರುತ್ತಾರೆ. ಯಾವ ರಾಜಕೀಯನಾಯಕನೂ ಈ ಮಹನೀಯರುಗಳ ಸ್ಥಾನವನ್ನು ಎಂದಿಗೂ ಆಕ್ರಮಿಸಲಾರನು. ವಾಚಕರೆ, ಈ ಉಪಾಸನೆಯ ಪ್ರಯೋಜನವು ದೃಷ್ಟಫಲವೆಂದು ಬೇರೆಯಾಗಿ ಹೇಳಬೇಕಾಗಿಲ್ಲವಷ್ಟೆ!

ಈಗಲೂ ಲೌಕಿಕದೃಷ್ಟಿಯಿಂದ ನೋಡಿದರೂ ಸಂಗೀತಶಾಸ್ತ್ರವನ್ನು ಕಲೆಯಾಗಿ ತಿಳಿದು ಜೀವಮಾನವೆಲ್ಲ ಉಪಾಸನೆಮಾಡುತ್ತಿರುವ ಅಂತರರಾಷ್ಟ್ರೀಯ ಪ್ರಸಿದ್ಧ ವ್ಯಕ್ತಿಗಳು ಕೂಡ ನಮ್ಮ ಕಣ್ಣಮುಂದೆಯೇ ಇದ್ದಾರೆ. ಇವರಾರೂ ಬಡವರಲ್ಲ. ಒಬ್ಬ ಮಹಿಳೆಯಂತೂ 'ದಾನಶೀಲೆ ಗಾಯಕಿ'ಯೆಂದೇ ಜನರ ಬಾಯಲ್ಲಿ ನಲಿದಾಡುತ್ತಿದ್ದಾಳೆ. ಹಿಂದಿನ ಕಾಲದಿಂದಲೂ ಸಂಗೀತಗಾರರಿಗೆ ಸಲ್ಲುತ್ತಿರುವ ಸಂಭಾವನೆಗಳು ಬಿರುದುಗಳೂ

ಖಿಲ್ಲತ್ತುಗಳೂ ಈ ಪುರುಷೋಪಾಸನೆಯ ಫಲವೇ–ಎಂದು ನಿಸ್ಸಂದೇಹವಾಗಿ ಹೇಳಬಹುದು. ಅನೇಕ ಸಂಗೀತಗಾರರಿಗೆ ತಾವು ಪಡೆದಿರುವ ಐಶ್ವರ್ಯವು ಭಗವದುಪಾಸನೆಯ ಫಲವೇ–ಎಂಬಿದು ಮನವರಿಕೆಯೂ ಆಗಿದೆ. ಆದ್ದರಿಂದ ವೀಣಾಗಾನಮಾಡುವ ವಿದ್ವಾಂಸರು ಧನವಂತರಾಗುವದು ಈ ಭಗವಂತನ ಚಿಂತನೆಯಿಂದಲೇ–ಎಂದು ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಗಾಂಧರ್ವವೇದವೆಂದೇ ಪ್ರಸಿದ್ಧವಾಗಿರುವ ಸಂಗೀತವು ಭಗವಂತನ ಸಾಕ್ಷಾತ್ಕಾರಕ್ಕೆ ನೇರ ಮಾರ್ಗವೆಂದೂ ಇಲ್ಲಿ ತಿಳಿಸಿದಂತಾಯಿತು. ಹೀಗೆ ಅಕ್ಷಿಪುರುಷನ ಉಪಾಸನೆಯೂ ಮಾನವನಿಗೆ ಶ್ರೇಯಸ್ಕರವಾಗಿರುತ್ತದೆ.

---

## ಉದ್ಗೀಥಾಶ್ರಯನು ಪರಮಾತ್ಮನೇ

**ಓಮ್ ॥ ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯನ್ತೇ ಆಕಾಶಂ ಪ್ರತ್ಯಸ್ತಂ ಯನ್ತಿ ಆಕಾಶೋ ಹ್ಯೇವೈಭ್ಯೋ ಜ್ಯಾಯಾನ್ ಆಕಾಶಃ ಪರಾಯಣಮ್ ॥ 1–9–1.**

ಭಾವಾರ್ಥ:– ಈ ಲೋಕಕ್ಕೆ ಗತಿ ಯಾವುದು? (ಅವನು) ಇಂತೆಂದನು: ಆಕಾಶವೇ (ಗತಿ). ಈ ಭೂತಗಳೆಲ್ಲವೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ. ಆಕಾಶದಲ್ಲಿಯೇ ಪ್ರತ್ಯಸ್ತಮಯವಾಗುತ್ತವೆ. ಆಕಾಶವೇ ಇವುಗಳಿಗಿಂತ ದೊಡ್ಡದು. ಆಕಾಶವೇ ಪರಾಯಣವು.

(ಶಿಲಕ, ದಾಲ್ಭ್ಯ, ಜೈವಲಿ–ಎಂಬ ಮೂವರು ಉದ್ಗೀಥಕುಶಲರು ತತ್ತ್ವನಿರ್ಣಯಕ್ಕಾಗಿ ವಾದಮಾಡಿದಾಗ ಜೈವಲಿ–ಎಂಬವನು ಆಕಾಶನೆಂಬ ಹೆಸರಿನ ಪರಮಾತ್ಮನೇ ಉದ್ಗೀಥಾಶ್ರಯನು, ಎಲ್ಲಕ್ಕೂ ಆಧಾರನು, ಎಲ್ಲಕ್ಕೂ ಮಿಗಿಲಾದವನು–ಎಂದು ನಿರ್ಣಯಿಸಿ ತಿಳಿಸಿದನು. ಉಳಿದವರು ತಮ್ಮ ತಿಳಿವಳಿಕೆಯನ್ನು ತಿದ್ದಿಕೊಂಡು ಕೃತಾರ್ಥರಾದರು–ಎಂದಭಿಪ್ರಾಯ.)

## 8. ಉದ್ಗೀಥದ ಕೊನೆಯ ಗತಿ

ಛಾಂದೋಗ್ಯೋಪನಿಷತ್ತನ್ನು ಕುರಿತ ಅಧ್ಯಾತ್ಮವಿಚಾರಗಳನ್ನು ಓದುತ್ತಿರುವ ವಾಚಕರಿಗೆ ಈಗಾಗಲೇ 'ಉದ್ಗೀಥ' ಶಬ್ದವು ಪರಿಚಿತವಾಗಿರುತ್ತದೆ. ಸಾಮಾನ್ಯಾರ್ಥದಲ್ಲಿ ಉದ್ಗೀಥವೆಂದರೆ ಪರಮಶ್ರೇಷ್ಠವಾದುದು–ಎಂದು ಭಾವಿಸಬಹುದು. ಇಂಥ ಪರಮಶ್ರೇಷ್ಠವಾದದ್ದು ಈ ಜಗತ್ತನ್ನೂ ಮೀರಿ ಜಗತ್ತಿನ ಉತ್ಪತ್ತಿಸ್ಥಿತಿಲಯಗಳಿಗೂ

ಕಾರಣವಾಗಿರುವದೂ ಆಗಿರುತ್ತದೆ. ಹಾಗಿದ್ದರೇ ಅದು ಉದ್ಗೀಥವೆನಿಸೀತು. ಪ್ರಕೃತ–ಉದ್ಗೀಥವಿದ್ಯೆಯಲ್ಲಿ ನಿಪುಣರೆನಿಸಿ ಒಂದಾನೊಂದು ಕಾಲದಲ್ಲಿ ಒಂದಾನೊಂದು ಸ್ಥಳದಲ್ಲಿ ಒಟ್ಟಿಗೆ ಸೇರಿದ್ದ ಮೂವರು ಬ್ರಹ್ಮವಿದರ ಕಥೆಯನ್ನು ನೆಪಮಾಡಿಕೊಂಡು ಆಕಾಶನೆಂಬ ಹೆಸರಿನ ಪರಮಾತ್ಮನ ತತ್ತ್ವವನ್ನು ಈಗ ವಿವರಿಸಲಾಗುವದು.

ಶಿಲಕಶಾಲಾವತ್ಯ, ಚೈಕಿತಾಯನದಾಲ್ಭ್ಯ, ಪ್ರವಾಹಣಜೈವಲಿ–ಎಂಬ ಮೂವರು ಒಂದು ಕಡೆ ಸೇರಿ ತತ್ತ್ವನಿರ್ಣಯಕ್ಕಾಗಿ ವಾದವನ್ನು ಕೈಗೊಂಡರು. 'ವಾದೇ ವಾದೇ ಜಾಯತೇ ತತ್ತ್ವಬೋಧಃ' ಎಂಬ ಒಂದು ಆರ್ಯೋಕ್ತಿಯೂ ಪ್ರಸಿದ್ಧವಾಗಿದೆ. ಅದರಂತೆ ಉದ್ಗೀಥವಿಷಯದ ವಾದವನ್ನಾರಂಭಿಸಿದರು. ಇವರಲ್ಲಿ ಜೈವಲಿಯೆಂಬುವನು ಕ್ಷತ್ರಿಯನಾಗಿದ್ದು ರಾಜನಾಗಿದ್ದನು. ಆದ್ದರಿಂದ ಆತನು 'ಪೂಜ್ಯರೆ, ನೀವು ಬ್ರಾಹ್ಮಣರಿಬ್ಬರೂ ವಾದಮಾಡಿರಿ; ನಿಮ್ಮ ಮಾತನ್ನು ನಾನು ಕೇಳುತ್ತಿರುವೆನು'–ಎಂದು ಗೌರವಪೂರ್ವಕವಾಗಿ ನುಡಿದನು. ಆದರೆ ನಿಜವಾಗಿ ಉದ್ಗೀಥತತ್ತ್ವದ ಸಿದ್ಧಾಂತವನ್ನು ಸರಿಯಾಗಿ ಬಲ್ಲವನೇ ಈತನಾಗಿದ್ದನು. ಆದರೂ ನಿರಹಂಕಾರಭಾವದಿಂದ ಕೂಡಿದವನಾಗಿ ತನ್ನ ವಿದ್ಯೆಯನ್ನು ಪ್ರಕಟಪಡಿಸದೆ ಗಂಭೀರನಾಗಿದ್ದನು. ಅನಂತರ ಶಿಲಕನು ವಾದವನ್ನಾರಂಭಿಸಿದನು. ವಾದದ ಮುಖ್ಯವಿಷಯವು ಉದ್ಗೀಥದ ಕೊನೆಯ ಗತಿ ಯಾವದು? ಎಂಬಿದೇ ಆಗಿತ್ತು. ಆದ್ದರಿಂದ ಉದ್ಗೀಥಸಾಮಕ್ಕೆ ಆಶ್ರಯವಾವುದು? ಎಂದು ಅವನು ಕೇಳಿದನು. ದಾಲ್ಭ್ಯನು 'ಸ್ವರವೇ ಗತಿ'–ಎಂದನು. ಏಕೆಂದರೆ ಸಾಮಗಾನವೆಲ್ಲವೂ ಸ್ವರಾತ್ಮಕವಾಗಿಯೇ ಇರುತ್ತದೆ. ಸಂಗೀತಶಾಸ್ತ್ರಕ್ಕೆಲ್ಲ ಗತಿ ಯಾವದು? ಎಂದರೆ ಏಳುಸ್ವರಗಳು–ಎಂದರೆ ಹೇಗೋ ಹಾಗೆಯೇ–ಇದನ್ನೂ ತಿಳಿಯಬೇಕು. ಅನಂತರ ಸ್ವರಕ್ಕೆ ಯಾವದು ಗತಿ? ಎಂದು ಶಿಲಕನು ಪ್ರಶ್ನಿಸಲಾಗಿ ದಾಲ್ಭ್ಯನು 'ಪ್ರಾಣವೇ ಗತಿ'–ಎಂದನು. ಏಕೆಂದರೆ ಪ್ರಾಣನ ಬಲವಿಲ್ಲದೆ ಸ್ವರಗಳು ಹೊರಡುವದಿಲ್ಲ. ಮುಂದುವರೆದು ಪ್ರಾಣಕ್ಕೆ ಆಶ್ರಯವು ಯಾವದು? ಎನ್ನಲಾಗಿ ಅನ್ನವು–ಎಂದು ದಾಲ್ಭ್ಯನು ಉತ್ತರಿಸಿದನು. ಏಕೆಂದರೆ ಅನ್ನವಿಲ್ಲದಿದ್ದರೆ ಪ್ರಾಣವು ಕುಸಿದೇಹೋಗುವದು. ಅನಂತರ ಅನ್ನಕ್ಕೆ ಆಶ್ರಯವಾವುದು? ಎಂದು ಶಿಲಕನು ಕೇಳಲು ನೀರು–ಎಂದು ದಾಲ್ಭ್ಯನು ಉತ್ತರಿಸಿದನು. ಏಕೆಂದರೆ ನೀರಿಲ್ಲದೆ ಯಾವ ಸಸ್ಯವೂ ಬೆಳೆಯಲಾರದು. ನೀರಿಗೂ ಆಶ್ರಯವಾವುದು? ಎಂದು ಕೇಳಲು ಸ್ವರ್ಗಲೋಕವು–ಎಂದು ದಾಲ್ಭ್ಯನು ಉತ್ತರಿಸಿದನು. ಏಕೆಂದರೆ ಅಂತರಿಕ್ಷದಿಂದಲೇ ನಮಗೆ ಮಳೆಯ ರೂಪದಿಂದ ನೀರು ದೊರೆಯುತ್ತದೆ. ಮುಂದುವರೆದು ಮತ್ತೆ ಶಿಲಕನು ಪ್ರಶ್ನಿಸಬಹುದೆಂದು ಭಾವಿಸಿ ದಾಲ್ಭ್ಯನು ಮತ್ತೆ ಹೀಗೆಂದನು: 'ಸಾಮಕ್ಕೆ ಕೊನೆಯ ಗತಿಯು ಸ್ವರ್ಗವೇ. ಅದಕ್ಕಿಂತ ಮುಂದೆ ಸಾಮವನ್ನು ಯಾವನೂ ಎಲ್ಲಿಗೂ ಒಯ್ಯಲಾರನು'. 'ಸಾಮವೇದವೇ ಸ್ವರ್ಗಲೋಕವು' ಎಂದು ಶ್ರುತಿಯಿದೆ. ಆದ್ದರಿಂದ

ನಾವು ಸ್ವರ್ಗವೇ ಸಾಮಕ್ಕೆ ಕೊನೆಯ ಗತಿ–ಎಂದು ತೀರ್ಮಾನಿಸಿರುತ್ತೇವೆ'–ಎಂದು ಹೇಳಿ ಸುಮ್ಮನಾದನು.

ಆಗ ಶಿಲಕನು ದಾಲ್ಭ್ಯನನ್ನು ಕುರಿತು 'ನಿನ್ನ ತೀರ್ಮಾನವು ಕೊನೆಯದಲ್ಲ, ನೀನು ತಿಳಿದಿರುವಷ್ಟು ಸರಿಯಾದರೂ ಅದೇ ಪರಮಗತಿಯಲ್ಲ, ಏಕೆಂದರೆ ಸ್ವರ್ಗಕ್ಕೂ ಮೀರಿದ ಗತಿಯುಂಟು. ಅದು ನಿನಗೆ ಗೊತ್ತಿರಲಾರದು. ಆದ್ದರಿಂದ ನಿನಗಿಂತ ಹೆಚ್ಚಿನ ವಿದ್ಯಾವಂತನು ಈಗ 'ನಿನ್ನ ತಲೆ ಬೀಳಲಿ' ಎಂದರೆ ಬಿದ್ದು ಹೋದೀತು. 'ಜೋಕೆ'–ಎಂದನು. ಆಗ ದಾಲ್ಭ್ಯನು 'ಅಯ್ಯೊ, ಹಾಗಾದರೆ ನಾನು ಹಟಮಾಡುವದಿಲ್ಲ. ತತ್ತ್ವವನ್ನು ತಿಳಿಯುವ ಆಸೆಯುಳ್ಳವನಾಗಿರುವೆನು. ಸ್ವರ್ಗಲೋಕಕ್ಕೆ ಗತಿಯು ಯಾವದೆಂಬುದನ್ನು ಪೂಜ್ಯನಾದ ನಿನ್ನಿಂದ ತಿಳಿಯಬಹುದೆ'? ಎಂದು ವಿನಯಪೂರ್ವಕವಾಗಿ ಕೇಳಿದನು. ಆಗಬಹುದು–ಎಂದು ಹೇಳಿ ಶಾಲಾವತ್ಯನು ವಾದವನ್ನಾರಂಭಿಸಿ ಮುಂದುವರೆಯುವವನಾದನು.

ಈಗ ಶಾಲಾವತ್ಯನ ಸಿದ್ಧಾಂತವೇನೆಂದು ವಿಚಾರಮಾಡೋಣ. 'ಸ್ವರ್ಗಲೋಕಕ್ಕೆ ಗತಿ ಯಾವದು? ಎಂದು ದಾಲ್ಭ್ಯನು ಪ್ರಶ್ನಿಸಲಾಗಿ 'ಈ ಲೋಕವೇ'–ಎಂದನು. ಈ ಲೋಕವೆಂದರೆ ಪೃಥಿವೀ–ಎಂದರ್ಥ. ಭೂಮಿಯು ಸ್ವರ್ಗಕ್ಕೂ ಆಶ್ರಯವಾಗಿದೆ–ಎಂದರೆ ನಮಗೆ ಆಶ್ಚರ್ಯವಾಗಬಹುದು. ಆದರೆ ಅದು ನಿಜವಾಗಿದೆ. ಹೇಗೆಂದರೆ: ಯಾಗ–ದಾನ–ಹೋಮವೇ ಮುಂತಾದ ಎಲ್ಲಾ ವೈದಿಕಕರ್ಮಗಳೂ ದೇವತೆಗಳನ್ನು ಕುರಿತು ಮಾಡಲ್ಪಡುವದು ಈ ಭೂಮಿಯ ಮೇಲೆ ಮಾತ್ರವೇ. ಆದ್ದರಿಂದಲೇ ಇದನ್ನು ಕರ್ಮಭೂಮಿಯೆಂದೂ ಕರೆಯುವರು. ಸ್ವರ್ಗಾದಿಲೋಕಗಳಲ್ಲಾದರೊ, ಕರ್ಮಫಲ ವನ್ನನುಭವಿಸಬೇಕೇ ಹೊರತು ಏನೂ ಮಾಡಲಾಗುವದಿಲ್ಲ. ಆದ್ದರಿಂದ ಸೃಷ್ಟಿಯಲ್ಲಿರುವ ಎಲ್ಲಾ ಜೀವರುಗಳಿಗೂ, ವಿಶೇಷವಾಗಿ ಮನುಷ್ಯರಿಗೆ ಈ ಭೂಭಾಗವು ಕರ್ಮಾನುಷ್ಠಾನಕ್ಕೆ ತಕ್ಕದ್ದಾಗಿರುವದು. ಗೀತೆಯಲ್ಲಿಯೂ ಈ ಲೋಕಕ್ಕೂ ದೇವಲೋಕಕ್ಕೂ ಇರುವ ಸಂಬಂಧವನ್ನು ವರ್ಣಿಸುವಾಗ ಭಗವಂತನು ಮನುಷ್ಯರು ಮಾಡುವ ಸತ್ಕರ್ಮಗಳಿಂದ ದೇವತೆಗಳು ಸಂತುಷ್ಟರಾಗಿ ಮಳೆಬೆಳೆಗಳನ್ನು ಕೊಡುವರೆಂದೂ ಅವರಿಗೆ ಮನುಷ್ಯ ಲೋಕವು ಆಶ್ರಯವಾಗಿದೆಯೆಂದೂ ತಿಳಿಸಿರುತ್ತಾನೆ. ಆದ್ದರಿಂದ ಶಾಲಾವತ್ಯನ ಸಿದ್ಧಾಂತದಂತೆ ಭೂಮಿಯೇ ಉದ್ಗೀಥದ ಕೊನೆಯ ಗತಿ–ಎಂದಾಯಿತು.

ಹೀಗೆ ಇವರಿಬ್ಬರೂ ತಮ್ಮ ವಾದಗಳನ್ನು ಮಂಡಿಸಲು ಉದ್ಗೀಥದ ಪೂರ್ಣ ವಿಜ್ಞಾನವುಳ್ಳ ಜೈವಲಿಯು ಹೀಗೆಂದನು: ಶಾಲಾವತ್ಯನೆ, ನಿನ್ನ ಸಾಮವೂ ಅಂತವುಳ್ಳದ್ದಾಗಿದೆ. ಎಂದರೆ ನಾಶವುಳ್ಳದ್ದಾಗಿದೆ. ಇದು ಸಿದ್ಧಾಂತವಾಗಲಾರದು. ಈಗ ಯಾರಾದರೂ ಉದ್ಗೀಥವಿದರು ''ನಿನ್ನ ತಲೆಯು ಬಿದ್ದುಹೋಗಲಿ! ಎಂದರೆ ಬಿದ್ದು ಹೋದೀತು''–ಎಂದು ಉಚ್ಚರಿಸಿದನು. ಆಗ ಶಾಲಾವತ್ಯನು ''ಹಾಗಾದರೆ ಉದ್ಗೀಥದ ಪರಮಗತಿಯನ್ನು

ನಾನು ಸರಿಯಾಗಿ ತಿಳಿದಿಲ್ಲವೆಂದಾಯಿತು. ಈವರೆಗೆ ನಾವಿಬ್ಬರೂ ಮಾಡಿದ ವಾದದಲ್ಲಿ ನಮಗೆ ತಿಳಿದಿರುವಷ್ಟು ಮಟ್ಟಿಗೂ ತತ್ತ್ವವನ್ನು ನಿನ್ನ ಮುಂದಿಟ್ಟಿರುವೆವು. ಇದಕ್ಕೂ ಮೀರಿದ್ದು ಇರುವದಾದರೆ ನಾನು ನಿನ್ನನ್ನು ಕೇಳಬಹುದೆ?'' ಎಂದನು. ಆಗಬಹುದೆಂದು ಜೈವಲಿಯು ಒಪ್ಪಿಕೊಳ್ಳಲಾಗಿ ಶಾಲಾವತ್ಯನು ಅವನನ್ನೂ ಪ್ರಶ್ನೆಮಾಡಿದನು. ಆಗ ಜೈವಲಿಯು ಕೊಟ್ಟ ಉತ್ತರವೇ ಈ ಅಧ್ಯಾತ್ಮ ಜಿಜ್ಞಾಸೆಯ ವಿಷಯವಾಗಿದೆ.

ಇಲ್ಲಿ ನಾವು ತಿಳಿಯಬೇಕಾದದ್ದೇನೆಂದರೆ: ಪ್ರತಿಯೊಬ್ಬನಿಗೂ ತಾನು ತಿಳಿದುಕೊಂಡಿರುವ ವಿಷಯದಲ್ಲಿ ಅಭಿಮಾನವಿರುವದು ಸಹಜ. ಅದು ತಪ್ಪೇನಲ್ಲ. ಆದರೆ ತನಗೆ ಗೊತ್ತಿರುವಷ್ಟು ಮಾತ್ರವೇ ಸರಿ; ಅಷ್ಟೇ ಇರುವದು; ಮತ್ತೊಬ್ಬನಿಗೆ ಏನೂ ತಿಳಿಯದು—ಎಂದು ಮಾತ್ರ ದುರಭಿಮಾನವನ್ನು ಯಾರೂ ತಾಳಬಾರದು. ವಾದ ಮಾಡುವದು ನಮ್ಮ ತಿಳಿವಳಿಕೆಯನ್ನು ಮತ್ತಷ್ಟು ಬೆಳೆಸಿಕೊಂಡು ಬುದ್ಧಿಯನ್ನು ಶುದ್ಧಿಗೊಳಿಸಿಕೊಳ್ಳುವದಕ್ಕೇ ಹೊರತು ಹಟಮಾಡುವದಕ್ಕಲ್ಲ. ತತ್ತ್ವವಿಚಾರದಲ್ಲಿ ಸರಿಯಾದ ತೀರ್ಮಾನವನ್ನು ಕೈಗೊಳ್ಳಬೇಕಾದರೆ ಅಹಂಕಾರವನ್ನು ಕೈಬಿಡಬೇಕು. ಬಲ್ಲವರನ್ನು ಬಳಿಸಾರಬೇಕು. ನ್ಯಾಯಪ್ರಾಪ್ತವಾದ ರೀತಿಯಲ್ಲಿ ಪ್ರಶ್ನೆಮಾಡಬೇಕು. ತಿಳಿದು ಕೃತಕೃತ್ಯನಾಗಬೇಕು.

ಪ್ರಕೃತವಿಚಾರಕ್ಕೆ ಬರೋಣ. ಈಗ ಜೈವಲಿಯು ಶಾಲಾವತ್ಯನ ಪ್ರಶ್ನೆಗೆ ಕೊಟ್ಟ ಉತ್ತರವೇನೆಂದರೆ : ''ಈ ಲೋಕಕ್ಕೆ ಆಕಾಶವೇ ಗತಿಯು. ಎಲ್ಲಾ ಭೂತಗಳೂ ಆಕಾಶದಿಂದಲೇ ಹುಟ್ಟುವವು. ಆಕಾಶದಲ್ಲಿಯೇ ಲಯವಾಗುವವು. ಆಕಾಶವೇ ಈ ಎಲ್ಲಾ ಭೂತಗಳಿಗಿಂತಲೂ ದೊಡ್ಡದು. ಅದೇ ಎಲ್ಲಕ್ಕೂ ಪರಮಾಶ್ರಯವು'' —ಎಂದು ತಿಳಿಸಿದನು. ಇಲ್ಲಿ ಆಕಾಶವೆಂದರೆ ಪರಬ್ರಹ್ಮವೆಂದು ನಿರ್ಣಯಮಾಡಲಾಗಿದೆ. ಬಾದರಾಯಣರು ''ಆಕಾಶಸ್ತಲ್ಲಿಂಗಾತ್'' ಎಂಬ ಸೂತ್ರದಲ್ಲಿ ಈ ವಿಷಯವನ್ನು ನಿರ್ಧರಿಸಿ ತಿಳಿಸಿರುತ್ತಾರೆ—ಎಂದು ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರಭಾಷ್ಯದಲ್ಲಿ ವಿವರಿಸಿರುತ್ತಾರೆ. ಎಲ್ಲಾ ಭೂತಗಳೂ ಯಾವದರಿಂದ ಹುಟ್ಟಿ ಯಾವದನ್ನೇ ಆಶ್ರಯಿಸಿಕೊಂಡಿದ್ದು ಯಾವದರಲ್ಲಿ ಲಯವಾಗುವವೋ ಅದು ಪರಬ್ರಹ್ಮವೇ ಆಗಿರಬೇಕೇ ಹೊರತು ಬೇರೊಂದಾಗಲಾರದು. ಈ ಸ್ಪಷ್ಟ ಬ್ರಹ್ಮಲಿಂಗವು ಆಕಾಶಶಬ್ದಕ್ಕೆ ಬ್ರಹ್ಮವೇ ಮುಖ್ಯಾರ್ಥವೆಂದು ಗೊತ್ತುಪಡಿಸುತ್ತದೆ. ಆದ್ದರಿಂದ ಉದ್ಗೀಥದ ಕೊನೆಯ ಗತಿಯು ಪರಬ್ರಹ್ಮವೇ ಎಂಬಿದು ಜೈವಲಿಯ ಅಭಿಪ್ರಾಯ.

ಈಗ ಬ್ರಹ್ಮವನ್ನು ಆಕಾಶಶಬ್ದದಿಂದ ಉಪನಿಷತ್ತಿನಲ್ಲಿ ನಿರ್ದೇಶಿಸಿರುವದರ ರಹಸ್ಯವೇನೆಂದು ವಿಚಾರಿಸೋಣ. ಅಶಬ್ದವೆನಿಸಿರುವ ಪರತತ್ತ್ವವು ನಿಜವಾಗಿ ಯಾವ ಮಾತಿಗೂ ನಿಲುಕತಕ್ಕದ್ದಲ್ಲ. ಆದ್ದರಿಂದ ಬ್ರಹ್ಮಶಬ್ದಕ್ಕಾಗಲಿ, ಆಕಾಶಶಬ್ದಕ್ಕಾಗಲಿ ಅದು

ವಾಚ್ಯವಲ್ಲ. ಆದರೂ ಜನರಿಗೆ ಬೋಧಿಸುವದಕ್ಕಾಗಿ ಯಾವದಾದರೊಂದು ಶಬ್ದವನ್ನು ಪ್ರಯೋಗಿಸಬೇಕಾಗಿದೆ. ಆಕಾಶ–ಎಂದಕೂಡಲೆ ನಮಗೆ ಅದು ಪಂಚಭೂತಗಳಲ್ಲಿ ಒಂದು, ಶಬ್ದಗುಣಕ್ಕೆ ಆಶ್ರಯವಾಗಿರುವದು–ಎಂದು ಅನುಭವಕ್ಕೆ ಬರುತ್ತದೆ. ಈ ಅನುಭವವನ್ನೇ ನೆಪಮಾಡಿಕೊಂಡು ಹಾಗೂ ಆಕಾಶದ ಉಳಿದ ಅಸಾಧಾರಣ ಗುಣಗಳಾದ ವ್ಯಾಪಕತ್ವ, ಅಸಂಗತ್ವ, ಅಮೂರ್ತತ್ವ, ಅಪರಿಚ್ಛಿನ್ನತ್ವಾದಿಗಳನ್ನೂ ಎತ್ತಿ ತೋರಿಸಿ ಇಂಥ ಆಕಾಶವನ್ನೂ ವ್ಯಾಪಿಸಿಕೊಂಡು ಇದಕ್ಕೂ ಆಶ್ರಯವಾಗಿರುವದೇ ಬ್ರಹ್ಮವು–ಎಂದು ತಿಳಿಸಬಹುದಾಗಿದೆ. ಮತ್ತು ಆಕಾಶವೇ ಸಾಮಾನ್ಯಜನರಿಗೆ ವ್ಯವಹಾರದಲ್ಲಿ ಮರೆತುಹೋಗಿರುತ್ತದೆಯಾದರೂ ಹೇಗೆ ಇದ್ದುಕೊಂಡೇ ಇರುವದೋ, ಅದರಲ್ಲಿಯೇ ಜನರು ವ್ಯವಹಾರಮಾಡುವರೋ ಆದರೂ ಅರಿಯದೆ ಇರುವರೋ– ಹಾಗೆ ಬ್ರಹ್ಮದಲ್ಲಿಯೇ ಹುಟ್ಟಿ, ಅದರಲ್ಲಿಯೇ ಇದ್ದು ಲಯವಾಗುತ್ತಿದ್ದರೂ ಅಜ್ಞರು ಬ್ರಹ್ಮವನ್ನರಿಯದೆ ಇರುತ್ತಾರೆ–ಎಂದೂ ತಿಳಿಸಲು ಸಾಧ್ಯವಾಗುತ್ತದೆ. ಆದ್ದರಿಂದ ಆಕಾಶಶಬ್ದವು ಬ್ರಹ್ಮೋಪದೇಶಕ್ಕೆ ಬಹಳಮಟ್ಟಿಗೆ ತಕ್ಕದ್ದಾಗಿದೆ. ಆದರೆ ಭೂತಾಕಾಶದಲ್ಲಿಯೂ ಆಕಾಶಶಬ್ದಪ್ರಯೋಗವಿರುವದರಿಂದ ಸಂಶಯವಾಗುತ್ತದೆ ಯಲ್ಲವೆ? ಎಂದರೆ ವಿಶೇಷಲಿಂಗವಿರುವದರಿಂದ ಭೂತಾಕಾಶವಲ್ಲವೆಂದು ಇಲ್ಲಿ ನಿಶ್ಚಯಿಸಬಹುದಾಗುತ್ತದೆ. ಆದ್ದರಿಂದ ದೋಷವಿಲ್ಲ. ಇನ್ನು ಆಕಾಶವೂ ಇಲ್ಲದ, ಬ್ರಹ್ಮವೊಂದೇ ಇರುವ ಅನುಭವವೂ ನಮ್ಮಲ್ಲೇ ಅಡಗಿದೆ. ಹೇಗೆಂದರೆ: ಸುಷುಪ್ತಿಯಲ್ಲಿ ನಾವು ಯಾವ ಆಕಾಶವನ್ನೂ ಅರಿಯುವದಿಲ್ಲ. ನಾವು ಮಾತ್ರ ಇದ್ದೇ ಇರುತ್ತೇವೆ. ಇದರಿಂದ ಆಕಾಶಕ್ಕೂ ಬ್ರಹ್ಮವೇ ಮೂಲವೆಂದಾಗುತ್ತದೆ. ಇಂಥ ಬ್ರಹ್ಮವನ್ನು ಭೂತಾಕಾಶದಿಂದ ವಿಂಗಡಿಸಿ ತಿಳಿಸಲು 'ಪರಮಾಕಾಶ' ವೆಂದು ಹೆಸರಿಸಬಹುದಾಗಿದೆ. ಹೀಗೆ ಉಪನಿಷತ್ತುಗಳಲ್ಲಿ ಆಕಾಶಶಬ್ದವನ್ನು ಬ್ರಹ್ಮವಾಚಕವಾಗಿ ಉಪಯೋಗಿಸಿರುತ್ತದೆ.

ಈಗ ಆಕಾಶವನ್ನೇ ಪರಮಗತಿಯಾಗಿ ಉಳ್ಳ ಉದ್ಗೀಥವನ್ನು ಸ್ತುತಿಮಾಡ ಲಾಗುವದು. ಅದನ್ನು 'ಪರೋವರೀಯ'ವೆಂದು ಹೊಗಳಿದೆ. ಹೆಚ್ಚಿನ ಶ್ರೇಷ್ಠವೂ ಮಿಗಿಲಾದದ್ದೂ ಆಗಿರುವದೇ ಪರೋವರೀಯವು. ಉದ್ಗೀಥವು ಪರಂಪರೆಯಿಂದ ಬ್ರಹ್ಮವೇ ಆಗಿರುವದರಿಂದ ಇದನ್ನೂ ಪರೋವರೀಯವೆಂದೇ ಸ್ತೋತ್ರಮಾಡಿದೆ. ಹೀಗೆ ಉದ್ಗೀಥವನ್ನು ಉಪಾಸನೆಮಾಡಿದವನಿಗೆ ಇಹಲೋಕದಲ್ಲಿ ಹೆಚ್ಚಿನ ಗೌರವಯುತವಾದ ಜೀವನವೂ ಪರಲೋಕದಲ್ಲಿ ಉತ್ಕೃಷ್ಟವಾದ ಭೋಗಗಳಿಂದ ಕೂಡಿದ ಗತಿಯೂ ಉಂಟಾಗಿ ಕಡೆಯಲ್ಲಿ ಬ್ರಹ್ಮಪ್ರಾಪ್ತಿಯೇ ಆಗುವದು–ಎಂದು ಉದ್ಗೀಥಕುಶಲರ ಈ ವಾದದಿಂದ ಸಿದ್ಧವಾಯಿತು.

------

## ಪ್ರಸ್ತಾವದೇವತೆಯ ನಿರ್ಣಯ

**..... ಕತಮಾ ಸಾ ದೇವತೇತಿ।ಪ್ರಾಣ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಪ್ರಾಣ ಮಭ್ಯುಜ್ಜಿಹತೇ ಸ್ಯೆಷಾ ದೇವತಾ ಪ್ರಸ್ತಾವಮನ್ವಾಯತ್ತಾ॥ 1–11–4,5**

ಭಾವಾರ್ಥ:– "ಆ ದೇವತೆಯು ಯಾವದು?" (ಎಂದನು). ಅವನು "ಪ್ರಾಣನೇ ಆ ದೇವತೆ; ಈ ಭೂತಗಳೆಲ್ಲ ಪ್ರಾಣನನ್ನೇ ಒಳಹೋಗುತ್ತವೆ. ಪ್ರಾಣನನ್ನೇ ಬಿಟ್ಟು ಈಚೆಗೆ ಬರುತ್ತವೆ. ಆ ಈ ದೇವತೆಯು ಪ್ರಸ್ತಾವಕ್ಕೆ ಅನ್ವಾಯತ್ತವಾಗಿದೆ."

(ಉಷಸ್ತಚಾಕ್ರಾಯಣನೆಂಬ ಬ್ರಹ್ಮವಿದನು ಒಬ್ಬ ರಾಜನು ನಡೆಯಿಸುತ್ತಿದ್ದ ಯಜ್ಞದಲ್ಲಿ ಋತ್ವಿಜರೊಡನೆ ವಾದಮಾಡಿ ತನ್ನ ವಿದ್ಯೆಯಿಂದ ಪ್ರಾಣನೆಂಬ ಹೆಸರಿನ ಪರಬ್ರಹ್ಮವೇ ಪ್ರಸ್ತಾವದೇವತೆಯೆಂದು ತಿಳಿಸಿಕೊಟ್ಟು ಎಲ್ಲರಿಗಿಂತ ಶ್ರೇಷ್ಠನೆನಿಸಿದನು. ಸಕಲಸಾಮಗಳ ಸಾರವೂ ಪರಬ್ರಹ್ಮವೇ–ಎಂದಭಿಪ್ರಾಯ.)

## 9. ಪ್ರಾಣನಾಮಕಪರಬ್ರಹ್ಮದ ಜ್ಞಾನ

ಛಾಂದೋಗ್ಯೋಪನಿಷತ್ತಿನ ಒಂದನೆಯ ಅಧ್ಯಾಯದಲ್ಲಿ ಬ್ರಹ್ಮೋಪಾಸನೆಗಳೇ ಪ್ರಧಾನವಾಗಿ ವರ್ಣಿಸಲ್ಪಟ್ಟಿದ್ದರೂ ಆ ಬ್ರಹ್ಮವು ಪರಮಾತ್ಮನೇ–ಎಂಬಿದು ಅಂತಿಮವಾದ ನಿರ್ಣಯವಾಗಿರುತ್ತದೆ. ಆದರೆ ಉಪಾಧಿವಿಶಿಷ್ಟವಾದ ವಸ್ತುವಾಚಕ ಶಬ್ದಗಳಿಂದಲೇ ಇಲ್ಲಿ ಬ್ರಹ್ಮವಿದ್ಯೆಯನ್ನು ಹೆಚ್ಚಾಗಿ ಪ್ರಸ್ತಾಪಿಸಲಾಗಿದೆ. ವಿದ್ಯಾ ಶಬ್ದವನ್ನು ಉಪಾಸನೆ, ಜ್ಞಾನ–ಈ ಎರಡು ರೀತಿಯಿಂದಲೂ ಉಪನಿಷತ್ತುಗಳಲ್ಲಿ ಬಳಸಿರುತ್ತಾರೆ. ಆದ್ದರಿಂದ ನ್ಯಾಯಗಳಿಂದ ನಿರ್ಣಯಮಾಡಿದ ಅನಂತರವೇ ಆಯಾ ವಾಕ್ಯಗಳನ್ನು ಬ್ರಹ್ಮಪರವೋ, ಉಪಾಸನಾಪರವೋ–ಎಂಬಿದನ್ನು ತಿಳಿಯಬೇಕಾಗುತ್ತದೆ. ಹಾಗೆ ತಿಳಿದಮೇಲೂ ಉಪಾಸನೆಗಿಂತ ಹೆಚ್ಚಿನ ಜ್ಞಾನದಲ್ಲಿ ವಿಷಯವನ್ನು ಸಮನ್ವಯಗೊಳಿಸಿ ಬ್ರಹ್ಮಪ್ರಾಪ್ತಿಗೆ ಪ್ರಯತ್ನಿಸಬಹುದಾಗಿದೆ. ಇರುವದು ಒಂದೇ ಬ್ರಹ್ಮವಾದ್ದರಿಂದ ಹೇಗೆ ವ್ಯಾಖ್ಯಾನ ಮಾಡಿದರೂ ತಪ್ಪಾಗುವದಿಲ್ಲ. ಆದರೂ ಶಾಸ್ತ್ರಮರ್ಯಾದೆಯನ್ನನುಸರಿಸಿ ಸೋಪಾಧಿಕಬ್ರಹ್ಮವಾಚಕಶಬ್ದಗಳಿರುವ ವಾಕ್ಯಗಳನ್ನು ಉಪಾಸನಾವಿಧಿಯಲ್ಲಿಯೇ ಸಮನ್ವಯಗೊಳಿಸಲಾಗುತ್ತದೆ. ನಿಜವು ಮಾತ್ರ ನಿರುಪಾಧಿಕಪರಬ್ರಹ್ಮದ ಕಡೆಗೇ ಇದ್ದುಕೊಂಡಿರುತ್ತದೆ. ಅಂಥ ಒಂದು ವಾಕ್ಯವು ಈಗಿನ ವಿಚಾರಕ್ಕೆ ವಿಷಯವಾಗಿದೆ. ಪ್ರಾಣ–ಎಂಬ ಹೆಸರಿನಿಂದ ಪ್ರಸ್ತೋತೃವು ಉಪಾಸಿಸುವ ವಸ್ತುವು ನಿಜವಾಗಿ ಪರಮಾತ್ಮನೇ ಆಗಿದ್ದಾನೆ–ಎಂಬುದನ್ನು ಈಗ ವಿವರಿಸಲಾಗುವದು.

ಒಮ್ಮೆ ಒಬ್ಬ ರಾಜನು ಯಜ್ಞಕಾರ್ಯವನ್ನು ಕೈಗೊಂಡು ಋತ್ವಿಕ್ ಕರ್ಮಕ್ಕೆ ಪ್ರಸ್ತೋತಾ–ಉದ್ಗಾತಾ–ಪ್ರತಿಹರ್ತಾ–ಎಂಬ ಸ್ಥಾನಗಳಿಗೆ ತಕ್ಕ ವಿದ್ವಾಂಸರನ್ನು ಆರಿಸಿಕೊಂಡು ಕರ್ಮವನ್ನಾರಂಭಿಸಿದನು. ಪ್ರಸ್ತೋತಾ–ಎಂದರೆ ದೇವತೆಯನ್ನು ಸಾಮಗಳಿಂದ ಯಜ್ಞದಲ್ಲಿ ಗಾನಮಾಡುವವನು–ಎಂದರ್ಥ. ಹಾಗೆಯೇ ಉದ್ಗಾತೃ–ಪ್ರತಿಹರ್ತೃಗಳೂ ಈತನ ಕಡೆಯವರೇ ಆಗಿರುತ್ತಾರೆ. ಈ ಮೂವರ ಕೆಲಸವೂ ಒಂದೇ, ಹವಿಸ್ಸನ್ನು ಸ್ವೀಕರಿಸುವ ದೇವತೆಯನ್ನು ಸಾಮಗಾನಗಳಿಂದ ಹೊಗಳುವದು. ಯಜ್ಞದಲ್ಲಿ ಒಬ್ಬೊಬ್ಬರೇ ಆರ್ತ್ವಿಜ್ಯವನ್ನು ಮಾಡಲಾಗುವದಿಲ್ಲ, ಸಹಾಯಕರು ಬೇಕಾಗುತ್ತದೆ. ಇರಲಿ. ಹೀಗೆ ಋತ್ವಿಜರನ್ನು ಕೂಡಿಸಿಕೊಂಡು ರಾಜನು ಯಜ್ಞವನ್ನಾರಂಭಿಸುತ್ತಿದ್ದಾಗ ಉಷಸ್ತಿ ಚಾಕ್ರಾಯಣನೆಂಬ ಒಬ್ಬ ಋಷಿಯು ಅಲ್ಲಿಗೆ ಬಂದನು. ಅವನು ಈ ಮೂವರು ಋತ್ವಿಜರಿಗಿಂತಲೂ ವಿದ್ಯಾವಂತನಾಗಿದ್ದನು. ಆದರೆ ಅಷ್ಟೇ ದರಿದ್ರನಾಗಿದ್ದನು. ಆತನು ವಿವಾಹಿತನೂ ಆಗಿದ್ದು ಹೆಂಡತಿಯೊಡನೆಯೇ ಯಜ್ಞಶಾಲೆಗೆ ಬಂದಿದ್ದನು. ಬರುವ ಮುಂಚೆ ಅವನ ಸ್ಥಿತಿಯು ಹೇಗಿತ್ತೆಂದರೆ: ಹೊಟ್ಟೆಗೆ ಅನ್ನವಿಲ್ಲದೆ ಯಾವನೋ ಒಬ್ಬ ಮಾವಟಿಗನು ಬೇಯಿಸಿದ್ದ ಹಳಸಿದ ಹುರುಳಿಕಾಳನ್ನು ಬೇಡಿ ತಂದು ಆಹಾರವಾಗಿ ಸೇವಿಸಿದ್ದನು. ಏಕೆಂದರೆ ಅವನು ಸಂಚರಿಸುತ್ತಿದ್ದ ದೇಶದಲ್ಲಿ ದುರ್ಭಿಕ್ಷವು ತಾಂಡವ ವಾಡುತ್ತಿತ್ತು. ಹೇಗೋ ಈ ಋಷಿಯು ಜೀವವನ್ನುಳಿಸಿಕೊಂಡು ರಾಜನ ಯಜ್ಞಶಾಲೆಗೆ ಬಂದನು. ಆತನು ಪ್ರಾಣರಕ್ಷಣೆಗಾಗಿ ಅಭಕ್ಷ್ಯಭಕ್ಷಣವನ್ನು ಮಾಡಿದ್ದು ನಿಜ. ಆದರೆ ಮಾವಟಿಗನು ಹುರುಳಿಯನ್ನು ಕೊಟ್ಟ ಅನಂತರ ಕುಡಿಯಲು ನೀರನ್ನು ಕೊಟ್ಟಾಗ 'ಬೇಡ, ಇದು ವೈಲಿಗೆ, ನನಗೆ ನೀರು ಎಲ್ಲಿಯಾದರೂ ಸಿಗುತ್ತದೆ'–ಎಂದು ಹೇಳಿ ಹೊರಟುಬಂದಿದ್ದನು. ಹೀಗೆ ಪ್ರಾಣವಿಪತ್ಕಾಲದಲ್ಲಿ ಆಪದ್ಧರ್ಮದಿಂದ ಹುರುಳಿಯನ್ನು ತಿಂದು ತನ್ನ ಹೆಂಡತಿಗೂ ಅದನ್ನೇ ಕೊಟ್ಟು ಕರೆತಂದಿದ್ದನು. ಆಪತ್ತು ಪರಿಹಾರವಾದ ಕೂಡಲೇ ಆಪದ್ಧರ್ಮವನ್ನು ಅಧರ್ಮವೆಂದೇ ಭಾವಿಸಿ ಕೈಬಿಟ್ಟನು. ಇದರಿಂದ ನಾವು ತಿಳಿಯಬೇಕಾದದ್ದೇನೆಂದರೆ ಧರ್ಮರಕ್ಷಣೆಯು ಕರ್ತವ್ಯವೇ ಆದರೂ ಅದಕ್ಕಿಂತ ಆತ್ಮ (ಪ್ರಾಣ) ರಕ್ಷಣೆಯು ಹೆಚ್ಚಿನದಾಗಿರುತ್ತದೆ. ಮತ್ತು ಆ ಪ್ರಾಣರಕ್ಷಣೆಯಾದರೊ, ಮುಂದೆ ಧರ್ಮಾನುಷ್ಠಾನಕ್ಕಾಗಿಯೇ ಮೀಸಲಾಗಿರುತ್ತದೆ. ಈ ರೀತಿಯಾಗಿ ಎಲ್ಲರೂ ನಡೆಯಬೇಕು. ಪ್ರಕೃತ ಉಷಸ್ತಿಯು ಯಜ್ಞಶಾಲೆಗೆ ಬಂದು 'ಎಲೈ ಪ್ರಸ್ತೋತೃವೆ, ನೀನು ಪ್ರಸ್ತಾವ ಮಾಡುವೆಯಾದರೆ ಯಾವ ದೇವತೆಯನ್ನು ಮಾಡುತ್ತೀಯೆ? ಆ ದೇವತಾಜ್ಞಾನವು ನಿನಗಿಲ್ಲವಾದರೆ ನಿನ್ನ ತಲೆಯು ಬಿದ್ದುಹೋದೀತು?' ಎಂದನು. ಇದೇ ರೀತಿಯಾಗಿ ಉದ್ಗಾತೃ–ಪ್ರತಿಹರ್ತೃಗಳಿಗೂ ಎಚ್ಚರಿಕೆಕೊಟ್ಟನು. ಎಲ್ಲರೂ ಹೆದರಿಬಿಟ್ಟರು.

ರಾಜನು ಆರಿಸಿಕೊಂಡಿದ್ದ ಋತ್ವಿಜರೇನೂ ದಡ್ಡರಲ್ಲ, ಅವರು ಆ ಯಜ್ಞಕರ್ಮಕ್ಕೆ ಬೇಕಾದ ಮಂತ್ರಗಳನ್ನೂ ಪ್ರಯೋಗಗಳನ್ನೂ ಮಾತ್ರವೇ ಬಲ್ಲವರಾಗಿದ್ದರೇ ಹೊರತು

ಆಯಾ ಮಂತ್ರಪ್ರತಿಪಾದ್ಯದೇವತೆಯ ಜ್ಞಾನವಾಗಲಿ ಆ ದೇವತೆಯ ಉಪಾಸನಾ ವಿದ್ಯೆಯಾಗಲಿ ಅವರಿಗೆ ತಿಳಿದಿರಲಿಲ್ಲ. ಯಾವಾಗಲೂ ಹೆಚ್ಚಾಗಿ ಬಲ್ಲವರ ಮುಂದೆ ಕಡಿಮೆ ತಿಳಿವಳಿಕೆಯವರು ಮುನ್ನುಗ್ಗಬಾರದು. ಒಂದು ವೇಳೆ ಅನಿವಾರ್ಯವಾದರೆ ಬಲ್ಲವರ ಅನುಮತಿಯನ್ನಾದರೂ ಪಡೆದುಕೊಳ್ಳಬೇಕು. ಈ ವಿಷಯವು ರಾಜನಿಗೆ ಗೊತ್ತಿದ್ದುದರಿಂದ ಕೂಡಲೆ ಅವನು ಈ ಋಷಿಯನ್ನು ಕುರಿತು 'ಪೂಜ್ಯರೆ, ತಾವೇ ಎಲ್ಲಾ ಆರ್ತ್ವಿಜ್ಯಗಳನ್ನೂ ವಹಿಸಿಕೊಂಡು ಯಜ್ಞವನ್ನು ನಡೆಯಿಸಿಕೊಡಬೇಕು' ಎಂದನು. ಆಗ ಋಷಿಯು 'ಹಾಗೇನೂ ಬೇಡ. ನಾನು ಅಪ್ಪಣೆಕೊಟ್ಟಿರುತ್ತೇನೆ. ಈ ಋತ್ವಿಜರೇ ಕಾರ್ಯವನ್ನು ಮುಂದುವರೆಯಿಸಲಿ. ಆದರೆ ನೀನು ಈ ಮೂವರಿಗೂ ಎಷ್ಟು ದಕ್ಷಿಣೆಯನ್ನು ಕೊಡುವೆಯೋ ಆ ಮೊತ್ತವನ್ನು ನನಗೂ ಕೊಡಬೇಕು. ಏಕೆಂದರೆ ಈ ಮೂವರ ತಿಳಿವಳಿಕೆಗೂ ಮೀರಿದ ಹೆಚ್ಚಿನ ತಿಳಿವಳಿಕೆಯು ನನಗಿದೆ. ಅದ್ದರಿಂದ ಈ ಮೂವರು ಋತ್ವಿಜರ ದಕ್ಷಿಣೆಯ ಒಟ್ಟು ಮೊತ್ತದಷ್ಟು ದಕ್ಷಿಣೆಯನ್ನು ಸ್ವೀಕರಿಸಲು ನಾನು ಅರ್ಹನು'–ಎಂದನು. ರಾಜನು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡನು.

ಇಲ್ಲಿ ತಿಳಿಯಬೇಕಾದ ಒಂದು ವಿಚಾರವಿದೆ. ಉಷಸ್ತಿಯು ದಕ್ಷಿಣೆಯ ಆಶೆಯಿಂದ ರಾಜನಲ್ಲಿ ವಾದಮಾಡಿರುವದಿಲ್ಲ. ಮತ್ತೇನೆಂದರೆ: ತನ್ನಲ್ಲಿರುವ ವಿದ್ಯೆಯು ಅಷ್ಟೊಂದು ಹೆಚ್ಚಿನದೆಂದೂ ಅದಕ್ಕೆ ತಕ್ಕ ಗೌರವವು ಸಲ್ಲಲೇಬೇಕೆಂದೂ ತಿಳಿಸಿರುತ್ತಾನೆ. ಇದು ನಿಜವಾಗಿಯೂ ಮೆಚ್ಚತಕ್ಕದ್ದಾಗಿದೆ. ಈಗಿನ ಕಾಲದ ಜನರಿಗೂ ಎಷ್ಟೋ ಸಂದರ್ಭಗಳಲ್ಲಿ ವಿದ್ಯಾವಂತರನ್ನೂ ಅವರ ವಿದ್ಯೆಯನ್ನೂ ಹೇಗೆ ಗೌರವಿಸಬೇಕೆಂಬುದೇ ತಿಳಿದಿರುವದಿಲ್ಲ. ಪುರೋಹಿತವರ್ಗವನ್ನು ಇಲ್ಲಿ ಉದಾಹರಣೆಯಾಗಿ ಕೊಡಬಹುದು. ಸಂದರ್ಭಾನುಸಾರವಾಗಿ ವೇದಾಧ್ಯಯನ– ಶಾಸ್ತ್ರಾಧ್ಯಯನ– ಅಧ್ಯಾತ್ಮವಿದ್ಯಾಸಂಪನ್ನ ರಾದವರು ಕೂಡ ವಿವಾಹಾದಿಕಾರ್ಯಗಳಿಗೆ ಆಚಾರ್ಯರಾಗಿ ಒಪ್ಪಿಕೊಳ್ಳುತ್ತಾರೆ. ಆದರೆ ಯಜಮಾನನು ಮಾತ್ರ ಅವರ ಯೋಗ್ಯತೆಯನ್ನರಿಯದೆ ಸಾಮಾನ್ಯಪುರೋಹಿತನಿಗೆ ನಡೆದುಕೊಳ್ಳುವಂತೆಯೇ ಅಂಥವರ ವಿಷಯಕ್ಕೂ ನಡೆದುಕೊಳ್ಳುತ್ತಾನೆ. ಯೋಗ್ಯ ಪುರಸ್ಕಾರವನ್ನು ನೀಡುವದಿಲ್ಲ. ಇದೊಂದು ವಿಪರ್ಯಾಸವೆಂದು ಹೇಳಬೇಕಾದದ್ದಿಲ್ಲ. ಹಾಗಾಗಬಾರದೆಂದೇ–ಎಂದರೆ ವಿದ್ಯೆಗೆ ಅಗೌರವವಾಗಬಾರದೆಂದೇ ಚಾಕ್ರಾಯಣನು ಮೂರುಪಟ್ಟು ದಕ್ಷಿಣೆಯನ್ನು ಕೇಳಿರುತ್ತಾನೆ. ಕೊಡುವವನು ಮಹಾರಾಜನಾದ್ದರಿಂದ ಧಾರಾಳವಾಗಿ ಕೊಟ್ಟಿರುತ್ತಾನೆ. ಇದು ಪ್ರಾಸಂಗಿಕವಿಷಯವಾಯಿತು. ಪ್ರಕೃತ ವಿಚಾರಕ್ಕೆ ಬರೋಣ.

ಪ್ರಾಣನೆಂಬ ಪರಮಾತ್ಮನ ವಿಷಯವನ್ನು ಈಗ ವಿಚಾರಮಾಡಬೇಕಾಗಿದೆ. ಪ್ರಸ್ತೋತೃವು ಉಷಸ್ತಿಯನ್ನು ಕುರಿತು ''ಪ್ರಸ್ತಾವಭಕ್ತಿಯನ್ನು ಆಶ್ರಯಿಸಿರುವ ಎಂದರೆ ಆ

ಭಕ್ತಿಗೆ ಆಧಾರವಾಗಿದ್ದುಕೊಂಡು ಪ್ರಸ್ತಾವವನ್ನು ಹೊರಗೆಡಹುವ ದೇವತೆಯು ಯಾವದು?'' ಎಂದು ಕೇಳಿದನು. ಆಗ ಉಷಸ್ತಿಯು ''ಪ್ರಾಣನೇ ಆ ದೇವತೆಯು. ಏಕೆಂದರೆ ಎಲ್ಲಾ ಭೂತಗಳೂ ಪ್ರಾಣನಲ್ಲಿಯೇ ಪ್ರಲಯಕಾಲದಲ್ಲಿ ಒಂದಾಗುತ್ತವೆ. ಉತ್ಪತ್ತಿಕಾಲದಲ್ಲಿ ಪ್ರಾಣನಿಂದಲೇ ಹೊರಬರುತ್ತವೆ. ಆದ್ದರಿಂದ ಪ್ರಸ್ತಾವವೆಂಬ ಸಾಮಗಾನಕ್ಕೂ ಪರಬ್ರಹ್ಮವೇ ಆಶ್ರಯವು. ಇದನ್ನರಿಯದವನು ಸಾಮಗಾನವನ್ನರಿತವ ನಾದರೂ ಪ್ರಾಣದೇವತಾಭಿಜ್ಞನ ಎದುರಿಗೆ ಆರ್ತ್ವಿಜ್ಯವನ್ನು ಮಾಡಬಾರದು. ಹಾಗೆ ಮಾಡಿದರೆ ತಲೆಯು ಬಿದ್ದುಹೋದೀತು. ನೀನಾದರೂ, ಒಳ್ಳೆಯದನ್ನು ಮಾಡಿದೆ. ಏಕೆಂದರೆ ನಾನು ಬೇಡವೆಂದಕೂಡಲೇ ನೀನು ಕರ್ಮವನ್ನು ನಿಲ್ಲಿಸಿದೆಯಲ್ಲವೆ?'' ಎಂದು ಹೊಗಳಿದನು. ಇಲ್ಲಿ ಪ್ರಾಣನೆಂದರೆ ಪರಬ್ರಹ್ಮವೇ. ಏಕೆಂದರೆ ಸ್ಪಷ್ಟ ಬ್ರಹ್ಮಲಿಂಗಗಳಿರುವದರಿಂದ–ಎಂದು ಬ್ರಹ್ಮಸೂತ್ರಭಾಷ್ಯದಲ್ಲಿ ಶಂಕರಾಚಾರ್ಯರು ನಿರ್ಣಯಿಸಿರುತ್ತಾರೆ. ಎಲ್ಲಾ ಭೂತಗಳೂ ಹುಟ್ಟುವ ಮೂಲಕಾರಣವು ಪರಬ್ರಹ್ಮವೇ ಆಗಿರಬೇಕೇ ಹೊರತು ಬೇರೊಂದಾಗಲಾರದು. ಉಳಿದ ಕಾರಣಗಳು ಪ್ರಕೃತಿವಿಕೃತಿ ಭಾವವನ್ನು ಪಡೆಯುವವಾದರೂ ಯಾವಾಗಲೂ ವಿಕಾರವಾಗದೆ ಪ್ರಕೃತಿಯಾಗಿಯೇ ಉಳಿದು ಜಗಜ್ಜನ್ಮಾದಿಕಾರಣವಾಗಲು ಬ್ರಹ್ಮವೊಂದೇ ತಕ್ಕದ್ದು–ಎಂದು ತಿಳಿಯಬೇಕು. ಅದೇ ಪ್ರಸ್ತಾವದೇವತೆಯು ಎಂದು ಸಿದ್ಧವಾಯಿತು.

ಈಗ ಉಷಸ್ತಿಯು ಉದ್ಗಾತೃ–ಪ್ರತಿಹಾರದೇವತೆಗಳನ್ನು ನಿರ್ಣಯಿಸಿ ಹೇಳಲು ಹೊರಟಿರುತ್ತಾನೆ. ಆತನ ಅಭಿಪ್ರಾಯದಂತೆ ಆದಿತ್ಯನೇ ಉದ್ಗೀಥದೇವತೆಯು ಅನ್ನವೇ ಪ್ರತಿಹಾರದೇವತೆಯು. ಹೇಗೆಂದರೆ: ಉತ್ ಎಂದರೆ ಮೇಲುಗಡೆ ಎಂದರ್ಥ. ಸೂರ್ಯನು ಮೇಲಕ್ಕೇರಿರುವಾಗ ಎಂದರೆ ಹಗಲಿನಲ್ಲಿ ಎಲ್ಲಾ ಪ್ರಾಣಿಗಳೂ ಗಾನಮಾಡುವವು. ಹಕ್ಕಿಗಳು–ಪ್ರಾಣಿಗಳು–ಮನುಷ್ಯರೆಲ್ಲರೂ ಶಬ್ದಮಾಡುತ್ತಾ ಗದ್ದಲವನ್ನುಂಟುಮಾಡುವದು ಹಗಲಿನಲ್ಲೇ ಅಲ್ಲವೆ? ರಾತ್ರೆಯಲ್ಲಾದರೋ ಬಹಳಮಟ್ಟಿಗೆ ಎಲ್ಲಾ ಪ್ರಾಣಿಗಳು ಶಾಂತವಾಗಿರುತ್ತವೆ. ಆದ್ದರಿಂದ ಆದಿತ್ಯನ ಏರುವಿಕೆಯು ಉದ್ಗಾನಕ್ಕೆ ನಿಮಿತ್ತವಾದ್ದರಿಂದ ಆದಿತ್ಯನನ್ನೇ ಉದ್ಗೀಥದೇವತೆಯೆಂದು ತಿಳಿಯಬೇಕು. ಹಾಗೆಯೇ ಪ್ರತಿಹಾರದೇವತೆಯು ಅನ್ನವೇ ಆಗಿರುತ್ತದೆ. ಪ್ರತಿಹರಣವೆಂದರೆ ತನ್ನ ಕಡೆಗೆ ತಂದುಕೊಳ್ಳುವದು, ಕೂಡಿಹಾಕುವದು–ಎಂದರ್ಥ. ಎಲ್ಲಾ ಪ್ರಾಣಿಗಳು ತಮ್ಮ ಆಹಾರವನ್ನು ಹುಡುಕಿ ತಮ್ಮಲ್ಲಿಗೇ ತಂದುಕೊಳ್ಳುವವು. ಈ ಸಾಮಾನ್ಯದಿಂದ ಅನ್ನವನ್ನು ಪ್ರತಿಹಾರದೇವತೆಯೆಂದು ಉಪಾಸನೆಮಾಡಬೇಕು: ಹೀಗೆ ಪ್ರಾಣ–ಆದಿತ್ಯ–ಅನ್ನ ಎಂಬೀ ದೇವತೆಗಳು ಇಲ್ಲಿ ಉಪಾಸ್ಯರಾಗಿರುತ್ತಾರೆ. ಇವರಲ್ಲಿ ಪ್ರಾಣನು ಜ್ಞೇಯನೂ ಆಗಿರುತ್ತಾನೆ. ಹಾಗೆ ಜ್ಞೇಯನಾದಾಗ ಅವನು ಪರಬ್ರಹ್ಮವೇ ಆಗಿರುವನು ಎಂಬಿದು ಉಷಸ್ತಿಯ ವಿಜ್ಞಾನದ ತಾತ್ಪರ್ಯವಾಗಿದೆ.

ಸಾಮವೇದವನ್ನೂ ಯಜ್ಞಕರ್ಮವನ್ನೂ ವಿವರವಾಗಿ ಬಲ್ಲವರಿಗೆ ಈ ವಿಚಾರಗಳು ಚೆನ್ನಾಗಿ ಅರ್ಥವಾಗುತ್ತವೆ. ಯಾವನೊಬ್ಬ ಋತ್ವಿಜನಾಗಲಿ ಕೇವಲ ಕರ್ಮಿಯಾಗಿರುವದಕ್ಕಿಂತ ಉಪಾಸಕನೂ ಆಗಿ ಆಯಾ ದೇವತೆಯ ವಿಜ್ಞಾನವುಳ್ಳವನಾಗಿದ್ದರೆ ಹೆಚ್ಚಿನವೆನಿಸುತ್ತಾನೆ. ಆದರೆ ಇಂಥ ವಿಜ್ಞಾನಿಗಳು ದುರ್ಲಭರೇ ಸರಿ. ಅಪರೂಪವಾಗಿ ಉಷಸ್ತಿಯಂಥ ಒಬ್ಬೊಬ್ಬರಿರಬಹುದು. ಈ ಮಹರ್ಷಿಯ ಉಪದೇಶವನ್ನು ಜನಸಾಮಾನ್ಯರಾದ ನಾವು ಹೀಗೆ ತಿಳಿಯಬಹುದು. ನಾವು ಯಾವ ವೈದಿಕಕರ್ಮಗಳನ್ನು ಮಾಡದೆ ಹೋದರೂ ದೇವತೆಗಳ ವಿಷಯವಾದ ತಿಳಿವಳಿಕೆಯನ್ನು ಮಾಡಿಕೊಂಡು ಉಪಾಸನಾದಿಗಳಲ್ಲಿ ತೊಡಗಬಹುದು. ಹೇಗೆಂದರೆ: ಅನ್ನವನ್ನೇ ತೆಗೆದುಕೊಳ್ಳೋಣ. ನಾವು ಪ್ರತಿದಿನವೂ ಊಟಮಾಡುವ ಅನ್ನವನ್ನು ದೇವತೆಯೆಂದು ಮೊದಲು ಭಾವಿಸಬೇಕು. ಅನಂತರ ಅದು ಎಲ್ಲರಿಗೂ ಬೇಕಾದದ್ದು– ಎಲ್ಲರೂ ಸ್ವೀಕರಿಸತಕ್ಕದ್ದೆಂದು ತಿಳಿದು ಅದು ಪ್ರತಿಹಾರವೆಂಬ ಸಾಮಭಕ್ತಿಯ ಅಭಿಮಾನಿದೇವತೆ ಎಂದು ಚಿಂತಿಸಬೇಕು. ಹೀಗೆಯೇ ಆದಿತ್ಯನನ್ನು ಉದ್ಗಾತೃದೇವತೆಯೆಂದೂ ಪ್ರಾಣನನ್ನು ಪ್ರಸ್ತಾವದೇವತೆಯೆಂದೂ ಧ್ಯಾನಿಸಬೇಕು. ಕಡೆಯಲ್ಲಿ ಪ್ರಾಣನೆಂಬ ದೇವತೆಯಲ್ಲಿಯೇ ಉಳಿದ ಇಬ್ಬರೂ ಅಡಕವಾಗುವದರಿಂದ ಪ್ರಾಣನೊಬ್ಬನೇ ಪರಮದೇವತೆಯೆಂದೂ ಚಿಂತಿಸಬೇಕು. ಈ ಪ್ರಾಣನು ಬ್ರಹ್ಮವೇ ಎಂದು ತಿಳಿದರೆ ಬ್ರಹ್ಮದ ಉಪಾಸನೆಯೇ ಆಯಿತು. ಇದೇ ಉಷಸ್ತಿಯ ವಿಜ್ಞಾನವು.

---

## ಶೌವ ಉದ್ಗೀಥ

**ಓ೩ಮದಾ೩ಮೋಂ೩ ಪಿಬಾ೩ಮೋಂ೩ ದೇವೋ ವರುಣಃ ಪ್ರಜಾಪತಿಃ ಸವಿತಾ೨ ಅನ್ನಮಿಹಾ೨ಹರದನ್ನಪತೇ೩ ಅನ್ನಮಿಹಾ೨ಹರಾ೨ಹರೋ೨ಮಿತಿ॥**
**1–12–5**

**ಭಾವಾರ್ಥಃ–** "ಓಂ ನಾವು ಉಣ್ಣುವಂತಾಗಲಿ ! ಓಂ ಕುಡಿಯುವಂತಾಗಲಿ! ದೇವನಾದ ವರುಣನು, ಪ್ರಜಾಪತಿಯು, ಸವಿತನು (ಸಹ) ಅನ್ನವನ್ನು ಇಲ್ಲಿಗೆ ತಂದುಕೊಡಲಿ! ಅನ್ನಪತಿಯೆ, ಅನ್ನವನ್ನು ಇಲ್ಲಿಗೆ ತಂದುಕೊಡು, ತಂದುಕೊಡು."

(ಬಕದಾಲ್ಭ್ಯನೆಂಬ ಋಷಿಗೆ ಆತನ ವೇದಾಧ್ಯಯನಕ್ಕಾಗಿ ಸಂತೋಷಗೊಂಡು ನಾಯಿಯ ರೂಪದಿಂದ ಕಾಣಿಸಿಕೊಂಡ ದೇವತೆಯು ತನ್ನ ಪರಿವಾರದ ನಾಯಿಗಳೊಡಗೂಡಿ ಅನ್ನಕ್ಕಾಗಿ ಮೇಲ್ಕಂಡ ಸಾಮಗಾನವನ್ನು ಮಾಡಿತು. ಋಷಿಯು ಅದನ್ನು ಅರಿತುಕೊಂಡು ಅನ್ನಸಮೃದ್ಧಿಯನ್ನು ಹೊಂದಿ ಸುಖವಾಗಿದ್ದನು– ಎಂದಭಿಪ್ರಾಯ.)

# 10. ಬಕದಾಲ್ಭ್ಯ ಋಷಿಯು ಕಂಡುಕೊಂಡ ಶೌವ–ಉದ್ಗೀಥ

ಹಿಂದಿನ ವಿವರಣೆಯಲ್ಲಿ ಉಷಸ್ತಿಯೆಂಬ ಋಷಿಯ ಕಥೆಯ ಮೂಲಕ ಪ್ರಸ್ತಾವ ದೇವತೆಯಾದ ಪ್ರಾಣನೆಂಬ ಪರಬ್ರಹ್ಮದ ಪರಿಚಯವನ್ನು ಮಾಡಿಕೊಂಡಿದ್ದೇವೆ. ಆದರೆ ಆ ಕಥಾನಾಯಕನು ಅತಿಯಾದ ದುರ್ಭಿಕ್ಷಕ್ಕೆ ಒಳಗಾಗಿ ಅನ್ನಕ್ಕಾಗಿ ಪಾಡುಪಟ್ಟ ಕಥೆಯು ಕರುಣಾಜನಕವಾಗಿದೆ. ಮಹಾವಿದ್ಯಾವಂತನೂ ತಪಸ್ವಿಯೂ ಆದವನಿಗೂ ಹೀಗೆ ಅನ್ನಕ್ಕೆ ಕೊರತೆಯುಂಟಾಗಿದ್ದರೆ ಇನ್ನು ನಮ್ಮಂಥ ಅಲ್ಪರ ಪಾಡೇನು? ಆದ್ದರಿಂದ ನಾವು ಅನ್ನದ ಅಭಾವವನ್ನು ನೀಗಿಕೊಳ್ಳಲೆಂದು ಕೃಪೆಯಿಂದ ವೇದಮಾತೆಯು ಒಂದು ಉಪಾಯವನ್ನು ಈಗ ತಿಳಿಸಲಿದ್ದಾಳೆ. ಅದೇ ಈ ಉಪದೇಶದ ವಿಷಯವು.

ಒಮ್ಮೆ ಬಕದಾಲ್ಭ್ಯನೆಂಬ ಋಷಿಯು ವೇದಾಧ್ಯಯನಮಾಡುವದಕ್ಕಾಗಿ ಹೊರಟು ಏಕಾಂತವಾದ ಹಾಗೂ ಪರಿಶುದ್ಧವಾದ, ಜಲಾಶಯವುಳ್ಳ ಒಂದು ಸ್ಥಳಕ್ಕೆ ಬಂದನು. ಅಲ್ಲಿ ನಿಯಮದಿಂದ ವೇದಾಭ್ಯಾಸವನ್ನು ಮಾಡುತ್ತಿದ್ದನು. ಆತನು ವೇದಪಾರಾಯಣಕ್ಕಾಗಿ ಯಾವ ಹೆಚ್ಚಿನ ಫಲವನ್ನೂ ಬಯಸಿರಲಿಲ್ಲ. ತನ್ನ ಸ್ವಧರ್ಮವೆಂದು ತಿಳಿದು ನಿಷ್ಠೆಯಿಂದ ಅಧ್ಯಯನಮಾಡುತ್ತಿದ್ದನು. ಆದರೂ ಅಧ್ಯಯನಕ್ಕೆ ತಕ್ಕ ಶಕ್ತಿಯುಂಟಾಗಬೇಕಾದರೆ ಹೊಟ್ಟೆಯು ಹಸಿದಿರಬಾರದಷ್ಟೆ! ಆದಕ್ಕಾಗಿ ಅನ್ನವನ್ನು ಬಯಸಿದ್ದನೆಂದು ಕಲ್ಪಿಸಬಹುದಾಗಿದೆ. ಅನ್ನವು ಉದ್ಗೀಥಗಾನದಿಂದ ಸಮೃದ್ಧಿಯಾಗಿ ದೊರಕುವದೆಂದು ಅವನಿಗೆ ನಂಬುಗೆಯಿತ್ತು, ಅನ್ನಪ್ರದವಾದ ಉದ್ಗೀಥವು ಯಾವದೆಂಬುದನ್ನು ಕೇಳಿ ತಿಳಿದುಕೊಳ್ಳುವ ಕುತೂಹಲವುಳ್ಳವನಾಗಿದ್ದನು. ಅವನ ವೇದಾಧ್ಯಯನರೂಪವಾದ ತಪಸ್ಸಿಗೆ ಮೆಚ್ಚಿ ಒಬ್ಬ ದೇವತೆಯು ನಾಯಿಯ ರೂಪದಿಂದ ದರ್ಶನವನ್ನು ಕೊಟ್ಟಿತು. ಅದು ಬಿಳುಪಾದ ನಾಯಿಯಾಗಿತ್ತು. ನಾಯಿಯನ್ನು ನಾವು ಕ್ಷುದ್ರಪ್ರಾಣಿಯೆಂದು ತಿಳಿದಿದ್ದೇವೆ. ಬೈಗುಳಕ್ಕೆ ಸಹ 'ನಾಯಿ' ಎಂದು ಉಪಯೋಗಿಸುವೆವು. ಆದರೆ ದೇವತೆಗಳು ಯಾವ ಯಾವ ರೂಪದಿಂದ ಭಕ್ತರಿಗೆ ಕಾಣಿಸಿಕೊಂಡು ದರ್ಶನವನ್ನು ನೀಡುವರೋ ಹೇಳಲು ಬಾರದು. ದಶಾವತಾರಗಳಲ್ಲಿ ಕೂಡ ವರಾಹ, ಮತ್ಸ್ಯ–ಮುಂತಾದವು ಭಗವಂತನ ರೂಪವಾಗಿದ್ದರೂ ನಮ್ಮ ದೃಷ್ಟಿಯಿಂದ ಕೀಳೆಂದೇ ವ್ಯವಹರಿಸಲ್ಪಡುವವು. ಆದರೆ ದೇವತೆಗಳಿಗೆ ಆಯಾ ಸಮಯಕ್ಕೆ ಅರ್ಥಕ್ರಿಯಾಕಾರಿಯಾದ ತಕ್ಕ ರೂಪವೇ ಅಪೇಕ್ಷಿತವೇ ಹೊರತು ನಮ್ಮ ವ್ಯವಹಾರದೃಷ್ಟಿ ಭೇದವು ಮುಖ್ಯವಲ್ಲ. ಶ್ರೀಶಂಕರಾಚಾರ್ಯರಿಗೆ ಕಾಶೀಕ್ಷೇತ್ರದಲ್ಲಿ ಪರಮೇಶ್ವರನು ಚಂಡಾಲರೂಪದಿಂದ

ಕಾಣಿಸಿಕೊಂಡ ಕಥೆ ಪ್ರಸಿದ್ಧವಾಗಿದೆ. ಇರಲಿ. ಈಗ ಋಷಿಯು ಬಿಳಿಯ ನಾಯಿಯನ್ನು ಕಂಡು ಅದು ದೇವತೆಯೆಂದೇ ಭಾವಿಸಿದನು. ಸ್ವಲ್ಪಹೊತ್ತಿನಲ್ಲಿಯೇ ಆ ಬಿಳಿಯ ದೊಡ್ಡನಾಯಿಯ ಸುತ್ತಲೂ ಅನೇಕ ಮರಿನಾಯಿ (ಕುನ್ನಿ) ಗಳು ಕಾಣಿಸಿಕೊಂಡವು.

ಆಗ ಮರಿನಾಯಿಗಳೆಲ್ಲವೂ ಒಟ್ಟಾಗಿ ದೊಡ್ಡನಾಯಿಯ ಬಳಿಗೆ ಬಂದು 'ನಮಗೆ ಅನ್ನವನ್ನು ಪೂಜ್ಯನಾದ ನೀನು ಆಗಾನಮಾಡಿಕೊಡು' ಎಂದು ಕೇಳಿದವು. ಆಗ ದೊಡ್ಡ ನಾಯಿಯು 'ಒಳ್ಳೆಯದು, ಆಗಾನಮಾಡಿಕೊಡುತ್ತೇನೆ; ಇದೇ ಜಾಗಕ್ಕೆ ನೀವೆಲ್ಲರೂ ನಾಳೆ ಬೆಳಗ್ಗೆ ಬನ್ನಿರಿ' ಎಂದಿತು. ಆಗ ಬಕದಾಲ್ಭ್ಯನು ತಾನೂ ಆ ಸಮಯವನ್ನು ಕಾದುಕೊಂಡು ಕುಳಿತನು. ಏಕೆಂದರೆ ಅನ್ನಪ್ರಾಪ್ತಿಗಾಗಿ ಮಾಡಬೇಕಾದ ಉದ್ಗೀಥಗಾನವು ಯಾವದೆಂಬುದನ್ನು ಅವನು ಅರಿತುಕೊಳ್ಳಬೇಕಾಗಿತ್ತು; ಅದಕ್ಕಾಗಿ ಸಿದ್ಧನಾದನು–ಎಂದು ಉಪನಿಷತ್ತಿನಲ್ಲಿ ತಿಳಿಸಿದೆ. ಭಾಷ್ಯಕಾರರು ಇದಕ್ಕೆ ಮತ್ತಷ್ಟು ವಿವರಣೆಯನ್ನು ಹೀಗೆ ನೀಡಿದ್ದಾರೆ. 'ಕೇವಲ ನಾಯಿಗೆ ಸಾಮಗಾನಮಾಡುವ ಯೋಗ್ಯತೆಯಿರುವದಿಲ್ಲ. ಆದ್ದರಿಂದ ಋಷಿಯು ಭಾವಿಸಿದಂತೆ ಅದು ಒಂದು ದೇವತೆಯೇ ಆಗಿರಬೇಕು. ಬಹಳಮಟ್ಟಿಗೆ ಅನ್ನವನ್ನು ಆಗಾನಮಾಡುವದು ಮುಖ್ಯಪ್ರಾಣನ ಕೆಲಸವಾದ್ದರಿಂದ ಆ ಮುಖ್ಯಪ್ರಾಣ ದೇವತೆಯೇ ಇಲ್ಲಿ ಬಿಳಿಯನಾಯಿಯ ರೂಪದಿಂದ ಕಾಣಿಸಿಕೊಂಡಿರುತ್ತಾನೆ. ಉಳಿದ ಕ್ಷುದ್ರ ನಾಯಿಗಳೆಂದರೆ ಅವೆಲ್ಲವಾಗಾದಿ ಇಂದ್ರಿಯಾಭಿಮಾನಿಗಳಾದ ದೇವತೆಗಳಾಗಿರಬೇಕು. ಹೀಗೆ ಅನ್ನಾಗಾನಶಕ್ತಿಯನ್ನು ಹೊಂದಿರುವವನು ಮುಖ್ಯಪ್ರಾಣನೊಬ್ಬನೇ ಆಗಿರುವದ ರಿಂದ ಅವನು ಉಳಿದ ದೇವತೆಗಳನ್ನು ಕುರಿತು 'ಆಗಲಿ, ನಾಳೆ ಬೆಳಗ್ಗೆ ಗಾನಮಾಡುವೆನು' ಎಂದು ತಿಳಿಸಿರುತ್ತಾನೆ. ಏಕೆಂದರೆ ಬೆಳಗಿನ ವೇಳೆಯಲ್ಲಿ ಮಾತ್ರ ಸೂರ್ಯನು ನಮಗೆ ಇದಿರಾಗಿದ್ದು ಮೇಲಕ್ಕೇರುತ್ತಿರುತ್ತಾನೆ. ಮಧ್ಯಾಹ್ನದಲ್ಲಿಯಾದರೊ, ಅವನು ನೆತ್ತಿಯ ಮೇಲಿರುವದರಿಂದ ಗಾನಮಾಡಲು ಸೌಕರ್ಯವಿರುವದಿಲ್ಲ. ಆದ್ದರಿಂದ ಅನ್ನಾಗಾನವನ್ನು ಪ್ರಾತಃಕಾಲದಲ್ಲಿಯೇ ಮಾಡಬೇಕು–ಎಂದು ವಿಧಿಸಿದಂತಾಗುವದು'–ಎಂದು ತಿಳಿಸಿದ್ದಾರೆ. ಈ ವಿವರಣೆಯಿಂದ ನಾವು ತಿಳಿಯಬೇಕಾದದ್ದೇನೆಂದರೆ : ಉಪನಿಷತ್ತಿನಲ್ಲಿ ಕಥಾರೂಪದಿಂದ ತತ್ತ್ವವನ್ನು ಸುಲಭವಾಗಿ ವಿವರಿಸುವದಕ್ಕಾಗಿ ಬಕದಾಲ್ಭ್ಯಋಷಿಯ ಆಖ್ಯಾನವನ್ನು ಹೇಳಿದೆಯೇ ಹೊರತು ಕಥೆಯಲ್ಲಿ ಮುಖ್ಯತಾತ್ಪರ್ಯವೇನೂ ಇರುವದಿಲ್ಲ. ಆದ್ದರಿಂದಲೇ ನಾಯಿಯ ಪ್ರಸ್ತಾಪವನ್ನೂ ನಾವು ಗೌಣವಾಗಿ ಭಾವಿಸಿ ಮುಖ್ಯವಾದ ಉದ್ಗೀಥಾನ್ನಗಾನವನ್ನು ಕೇಳಿ ತಿಳಿದು ಅದನ್ನೇ ಉಪಾಸನೆಮಾಡಿ ಅನ್ನಸಂಕಟದಿಂದ ಪಾರಾಗಬೇಕು–ಎಂದು ಗೊತ್ತಾಗುತ್ತದೆ.

ಈಗ ಮುಂದಿನ ವಿಚಾರವನ್ನು ಕೇಳೋಣ. ಮಾರನೆಯ ದಿನ ಬೆಳಗ್ಗೆ ಎಲ್ಲಾ ಕ್ಷುದ್ರನಾಯಿಗಳೂ ಪ್ರಧಾನನಾಯಿಯನ್ನು ಬಳಿಸಾರಿದವು. ಅದರ ಸೂಚನೆಯಂತೆ

ಉದ್ಗಾನಕ್ಕೆ ಸಜ್ಜಾದವು. ಇಲ್ಲಿ ಸಜ್ಜಾಗುವದೆಂದರೇನು? ಎಂಬಿದನ್ನು ಉಪನಿಷತ್ತಿನಲ್ಲಿ ಹೀಗೆ ವಿವರಿಸಿದೆ. ಯಜ್ಞದಲ್ಲಿ ಸಾಮಗಾನದಿಂದ ಸ್ತೋತ್ರಮಾಡುವ ಆರ್ತ್ವಿಜ್ಯವನ್ನು ಹೊಂದಿರುವ ಋತ್ವಿಜರು ಕ್ರಮವಾಗಿ ಒಬ್ಬರ ಹಿಂದೊಬ್ಬರು ನಡೆಯಬೇಕು. ಮತ್ತು ಒಬ್ಬರನ್ನೊಬ್ಬರು ಮುಟ್ಟಿಕೊಂಡಿರಬೇಕು. ಇದು ಶಾಸ್ತ್ರವಿಧಿ. ಕೆಲವು ಸಂದರ್ಭಗಳಲ್ಲಿ ಮುಂದಿರುವ ಋತ್ವಿಜರ ವಸ್ತ್ರವನ್ನು ಹಿಂದಿನವರು ಹಿಡಿದುಕೊಂಡು ಸಾಲಾಗಿ ನಡೆಯುವದೂ ಉಂಟು. ಹಾಗೆಯೇ ಈ ನಾಯಿಗಳು ಸಾಲಾಗಿ ಪ್ರದಕ್ಷಿಣೆಮಾಡುತ್ತಾ ಒಂದರ ಬಾಲವನ್ನು ಮತ್ತೊಂದು ತನ್ನ ಬಾಯಿಯಿಂದ ಕಚ್ಚಿಕೊಂಡು ನಡೆಯಲಾರಂಭಿಸಿದವು. ಇದೇ ಉದ್ಗಾನದ ಸಿದ್ಧತೆಯೆನಿಸುವದು. ಹೀಗೆ ಪ್ರದಕ್ಷಿಣೆಮಾಡಿದ ಬಳಿಕ ಸಾಲಾಗಿ ಸೂರ್ಯನಿಗೆ ಇದಿರಾಗಿ ಕುಳಿತುಕೊಂಡವು. ಹಿಂಕಾರವನ್ನು ಮಾಡಿದವು.

ಈಗ ಶೌವ-ಉದ್ಗೀಥವನ್ನು ವಿಚಾರಮಾಡೋಣ. ಶ್ವಾ-ಎಂದರೆ ಸಂಸ್ಕೃತ ಭಾಷೆಯಲ್ಲಿ ನಾಯಿ ಎಂದರ್ಥ. 'ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ' ಎಂಬ ರುದ್ರಾಧ್ಯಾಯಮಂತ್ರವನ್ನು ಕೇಳಿದ್ದೀರಷ್ಟೆ! ಅಲ್ಲಿಯೂ ಇದೇ ಅರ್ಥವನ್ನು ಗ್ರಹಿಸಿದೆ. ನಾಯಿಯ ಮೂಲಕ ಹೊರಬಂದ ಉದ್ಗೀಥವು 'ಶೌವ' ಎನಿಸುವದು. ಬಿಳಿಯನಾಯಿಯು ಹೇಳಿಕೊಟ್ಟಂತೆ ಎಲ್ಲಾ ನಾಯಿಗಳೂ ಒಟ್ಟಿಗೆ ಸೇರಿ ಹೀಗೆ ಗಾನಮಾಡಲಾರಂಭಿಸಿದವು: 'ಓಂ ನಾವು ಊಟಮಾಡುವಂತಾಗಲಿ!....' ಇತ್ಯಾದಿ. ಈ ಮಂತ್ರವನ್ನು ಕೊಡಲಾಗಿದೆ. ವಾಚಕರು ದಯವಿಟ್ಟು ನೋಡಬೇಕು. ಇಲ್ಲಿ ಆದಿತ್ಯನನ್ನು ಅನ್ನಪತಿಯೆಂದು ಕರೆಯಲಾಗಿದೆ. ಏಕೆಂದರೆ ಎಲ್ಲಾ ಅನ್ನ (ಸಸ್ಯ) ಗಳನ್ನೂ ಅವನೇ ಪಕ್ವಮಾಡುವವನು. ಸೂರ್ಯನ ಬಿಸಿಲಿಲ್ಲದೆ ಯಾವ ಗಿಡವಾಗಲಿ ಪೈರಾಗಲಿ ಬೆಳೆಯಲಾರದು. ಆದ್ದರಿಂದ ಸೂರ್ಯನು ಅನ್ನಪತಿಯೆನಿಸುವನು. ಮತ್ತು ಪ್ರಜಾಪತಿಯೆಂದೂ ಸ್ತೋತ್ರಮಾಡಲ್ಪಡುತ್ತಾನೆ. ಎಲ್ಲಾ ಪ್ರಜೆಗಳೂ ಅನ್ನದಿಂದಲೇ ಹುಟ್ಟಿ ಬೆಳೆದು ಲಯವಾಗುವದರಿಂದ, ಆ ಅನ್ನವನ್ನು ಆದಿತ್ಯನೇ ಎಲ್ಲರಿಗೂ ಒದಗಿಸಿಕೊಡುವದರಿಂದ ಅವನು ಪ್ರಜಾಪತಿಯೆಂಬುದು ಅನ್ವರ್ಥವಾಗಿದೆ. ಮತ್ತು ಸವಿತಾ, ವರುಣ-ಎಂಬ ಹೆಸರುಗಳಿಂದಲೂ ಸೂರ್ಯನೇ ಇಲ್ಲಿ ಹೊಗಳಲ್ಪಟ್ಟಿರುವನು. ಸವಿತೃವೆಂದರೆ 'ಸೂಯತೇ ಇತಿ ಸವಿತಾ'- ಎಂಬ ವ್ಯುತ್ಪತ್ತಿಯಂತೆ ಜಗತ್ತನ್ನೇ ಹಡೆಯುವವನು ಎಂದರ್ಥ. ಸೂರ್ಯನು ಸ್ಥಾವರಜಂಗಮುಗಳೆಲ್ಲಕ್ಕೂ ಆತ್ಮನಾಗಿದ್ದು ಎಲ್ಲಾ ಜೀವರುಗಳನ್ನೂ ತನ್ನಿಂದ ಹೊರಹಾಕುತ್ತಾನಾದ್ದರಿಂದ 'ವಿರಾಟ್' ಎಂದೂ ವೇದಗಳಲ್ಲಿ ಸ್ತುತಿಸಲ್ಪಟ್ಟಿರುವನು. ಈ ವಿರಾಜನೇ ಸವಿತೃವೆನಿಸುವನು. ಇನ್ನು ವರುಣನೆಂದರೆ 'ವರಣಾದ್ ವರುಣಃ' ಎಂಬ ವ್ಯುತ್ಪತ್ತಿಯಂತೆ ಜಗತ್ತೆಲ್ಲವೂ ಆದಿತ್ಯನನ್ನೇ ಬಯಸುವದರಿಂದ ಎಂದರೆ ಚುನಾಯಿಸಿ

ಕೊಳ್ಳುವದರಿಂದ 'ವರುಣ'ನೆನಿಸಿರುತ್ತಾನೆ. ಅಥವಾ ಜಲಾಭಿಮಾನಿದೇವತೆಯಾದ ವರುಣರೂಪದಿಂದಿರುವವನೂ ಆದಿತ್ಯನೇ–ಎಂದರ್ಥ. ಹೀಗೆ ಸ್ತುತಿಸಲ್ಪಡುತ್ತಿರುವ ಆದಿತ್ಯನನ್ನು ಪ್ರಧಾನವಾಗಿ ಈ ಉದ್ಗೀಥದಲ್ಲಿ 'ಎಲೈ ಅನ್ನಪತಿಯೆ, ನಮಗೆ ಅನ್ನವನ್ನು ಇಲ್ಲಿಗೆ ತಂದುಕೊಡು. ನಾವು ಅನ್ನವನ್ನು ಊಟಮಾಡುವಂತಾಗಲಿ! ಕುಡಿಯುವಂತಾಗಲಿ!' ಎಂದು ಕೇಳಿಕೊಂಡಿರುತ್ತದೆ. ಇವೇ ಶೌವ ಉದ್ಗೀಥವು. ಇದರಲ್ಲಿ ಕೆಲವು ಅಕ್ಷರಗಳಿಗೆ ಪ್ಲುತವನ್ನು ಜೋಡಿಸಿ ದೀರ್ಘವಾಗಿ ಹಾಡಿರುತ್ತದೆ. ಗಾನಮಾಡುವಾಗ ದೀರ್ಘವಾಗಿ ಎಳೆಯುವದು ಸ್ವಾಭಾವಿಕವಷ್ಟೆ!

ಈಗ ಸೂರ್ಯನು ಅನ್ನಪತಿಯೆಂಬುದನ್ನು ಸುಪ್ರಸಿದ್ಧವಾದ ಮಹಾಭಾರತ ಇತಿಹಾಸದಿಂದಲೂ ತಿಳಿಯಬಹುದು. ಅಲ್ಲಿರುವ ಕಥೆಯಂತೆ ಧರ್ಮರಾಜನು ಜೂಜಿನಲ್ಲಿ ಸೋತು ವನವಾಸಕ್ಕೆ ತನ್ನ ತಮ್ಮಂದಿರು ಹಾಗೂ ಹೆಂಡತಿಯಾದ ದ್ರೌಪದಿಯೊಡನೆ ಹೊರಟಾಗ ಹತ್ತುಸಾವಿರ ಜನ ಬ್ರಾಹಣರು ತಮ್ಮ ಅಗ್ನಿಹೋತ್ರಗಳನ್ನು ಎತ್ತಿಕೊಂಡು ಅವನನ್ನು ಹಿಂಬಾಲಿಸಿದರು. ಈಗ ತಾನು ರಾಜನಲ್ಲವೆಂದೂ ಪ್ರತಿದಿನವೂ ಅತಿಥಿಸತ್ಕಾರಮಾಡಲು ತನಗೆ ಶಕ್ತಿಯಿಲ್ಲವೆಂದೂ ಆದ್ದರಿಂದ ಹಿಂಬಾಲಿಸಬಾರದೆಂದೂ ಧರ್ಮರಾಜನು ಪ್ರಾರ್ಥಿಸಿಕೊಂಡರೂ ಬ್ರಾಹ್ಮಣರು ವಿನಯದಿಂದಲೇ 'ಮಹಾರಾಜ, ನಿನ್ನೊಡನೆ ಸತ್ಸಂಗಕ್ಕಾಗಿ ಮಾತ್ರ ನಾವು ಬರುತ್ತಿದ್ದೇವೆ. ನಮ್ಮ ಹೊಟ್ಟೆಯಪಾಡನ್ನು ನಾವೇ ನೋಡಿಕೊಳ್ಳುತ್ತೇವೆ. ನಿನಗೇನೂ ತೊಂದರೆಯನ್ನು ಕೊಡುವದಿಲ್ಲ' ಎಂದು ಸಮಾಧಾನಗೊಳಿಸಿ ಜೊತೆಯಲ್ಲೇ ಕಾಡಿಗೆ ಬಂದುಬಿಟ್ಟರು. ಆಗ ಧರ್ಮರಾಜನು ಈ ಧರ್ಮಸಂಕಟದಿಂದ ಪಾರಾಗಲು ಧೌಮ್ಯಋಷಿಗಳ ಅಪ್ಪಣೆಯಂತೆ ಅತಿಥಿಸತ್ಕಾರಕ್ಕೆ ಅನ್ನವನ್ನು ದೊರಕಿಸಿಕೊಳ್ಳುವದಕ್ಕಾಗಿ ಸೂರ್ಯಭಗವಂತನನ್ನು ಸ್ತುತಿಸಿದನು. ಅವನ ಸ್ತೋತ್ರಕ್ಕೆ ಮೆಚ್ಚಿದ ಆದಿತ್ಯನು ಪ್ರತ್ಯಕ್ಷನಾಗಿ ಅಕ್ಷಯಪಾತ್ರೆಯನ್ನು ಅನುಗ್ರಹಿಸಿ ಪ್ರತಿದಿನವೂ ಸೂರ್ಯೋದಯಕಾಲದಿಂದ ಹಿಡಿದು ಮಧ್ಯಾಹ್ನ ದ್ರೌಪದಿಯು ಊಟಮಾಡುವವರೆಗೆ ಈ ಪಾತ್ರೆಯಲ್ಲಿ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯಗಳೆಂಬ ನಾಲ್ಕು ವಿಧವಾದ ಅನ್ನವು ಸಮೃದ್ಧಿಯಾಗಿ ದೊರೆಯುವದು; ಇದು ಹನ್ನೆರಡುವರ್ಷಗಳವರೆಗೂ ಜಾರಿಯಲ್ಲಿರುವದು–ಎಂದು ವರವನ್ನು ನೀಡಿದನು. ಇದರಿಂದ ಧರ್ಮರಾಜನ ಅನ್ನಸಮಸ್ಯೆಯು ಪರಿಹಾರವಾಯಿತು–ಎಂದು ಅಲ್ಲಿ ತಿಳಿಸಿದೆ. ಹೀಗೆ ಸೂರ್ಯಭಗವಂತನ ದಯೆಯೊಂದಿದ್ದರೆ ಯಾವನೊಬ್ಬನೂ ಹಸಿವೆಯಿಂದ ಪೀಡಿಸಲ್ಪಡಲಾರನು ಎಂದು ಸಿದ್ಧವಾಗುತ್ತದೆ.

ಆಧ್ಯಾತ್ಮಿಕದೃಷ್ಟಿಯಿಂದ ಚಿಂತಿಸಿದರೆ ಪ್ರತಿಯೊಬ್ಬ ಜೀವನೂ ಧರ್ಮರಾಜನಾದರೆ, ಅವನ ಮನಸ್ಸೇ ಅಕ್ಷಯಪಾತ್ರೆಯು. ಸೂರ್ಯದೇವತಾಕವಾದ ಮಂತ್ರ–ಸ್ತೋತ್ರಗಳೇ ಭಕ್ಷ್ಯಭೋಜ್ಯಗಳು, ಕುಟುಂಬದ ಸದಸ್ಯರೇ ಅತಿಥಿಗಳು. ಯಜಮಾನನನ್ನು ಅನುಸರಿಸಿ ಕುಟುಂಬದವರೆಲ್ಲ ಧಾರ್ಮಿಕಪ್ರವೃತ್ತಿಯವರೂ ಆದಿತ್ಯೋಪಾಸಕರೂ ಆಗಿಬಿಟ್ಟಲ್ಲಿ ಯಾವ ಭೂಸುಧಾರಣೆಯಿಂದಲೂ ನಮಗೆ ಅನ್ನವಿಲ್ಲದಂತೆ ಮಾಡಲು ಯಾರಿಂದಲೂ ಸಾಧ್ಯವಾಗಲಾರದು. ನಿಜವಾಗಿ ಹೇಳುವದಾದರೆ ಅನ್ನಕ್ಕಿಂತಲೂ ಮಾನಸಿಕತೃಪ್ತಿಯೇ ಹಸಿವನ್ನು ಅಡಗಿಸಬಲ್ಲದ್ದಾಗಿದೆ. ಮನಸ್ಸು ಹಿಗ್ಗಿದಂತೆಲ್ಲ ಅದು ಅಕ್ಷಯಪಾತ್ರೆಯ ಸಮಾನತೆಯನ್ನೇ ಪಡೆದೀತು. ಹಾಗೆ ಹಿಗ್ಗಲು ಧರ್ಮಾಚರಣೆಯೇ ಬೇಕು. ಬರಿಯ ಸಂಪಾದನೆಯಿಂದ ಮನಸ್ಸು ಹಿಗ್ಗಲಾರದು. ಇನ್ನು ಮೇಲಾದರೂ ನಾವು ಮರೆಯದೆ ಸೂರ್ಯಸ್ತೋತ್ರ, ಜಪ, ತಪ–ಉದ್ಗಾನಾದಿಗಳಿಂದ ಅನ್ನಸಮೃದ್ಧಿಯನ್ನು ಹೊಂದಿ ತೃಪ್ತರಾಗೋಣ.



# ಎರಡನೆಯ ಅಧ್ಯಾಯ

## (ಸಾಮ–ಪ್ರಣವೋಪಾಸನೆಗಳು)

## ಪಂಚವಿಧಸಾಮಗಳ ಉಪಾಸನೆ

**ಓಮ್ ॥ ಲೋಕೇಷು ಪಂಚವಿಧಗ್ಂ ಸಾಮೋಪಾಸೀತ ಪೃಥಿವೀ ಹಿಂಕಾರಃ । ಅಗ್ನಿಃ ಪ್ರಸ್ತಾವೋಽನ್ತರಿಕ್ಷಮುದ್ಗೀಥ ಆದಿತ್ಯಃ ಪ್ರತಿಹಾರೋ ದ್ಯೌರ್ನಿಧನಮಿತಿ ಊರ್ಧ್ವೇಷು ॥ 2–2–1**

ಭಾವಾರ್ಥ:– ಲೋಕಗಳಲ್ಲಿ ಐದು ಬಗೆಯ ಸಾಮವನ್ನು ಉಪಾಸನೆ ಮಾಡಬೇಕು. ಪೃಥಿವಿಯು ಹಿಂಕಾರವು. ಅಗ್ನಿಯು ಪ್ರಸ್ತಾವವು. ಅಂತರಿಕ್ಷವು ಉದ್ಗೀಥವು. ಆದಿತ್ಯನು ಪ್ರತಿಹಾರವು. ದ್ಯುಲೋಕವು ನಿಧನವು. ಹೀಗೆ ಊರ್ಧ್ವಲೋಕಗಳ ವಿಷಯದಲ್ಲಿ ಸಾಮೋಪಾಸನೆಯನ್ನು ತಿಳಿಯಬೇಕು.

(ಸಾಮವೇದದ ತಿರುಳಾಗಿರುವ ಸಾಮೋಪಾಸನೆಯನ್ನು ನಾನಾವಿಧವಾಗಿ ತಿಳಿಸುವ ಸಂದರ್ಭದಲ್ಲಿ ಐದ್ಯೆದು ರೀತಿಯಾಗಿ ದೇವತೆಗಳ ರೂಪದಿಂದ ಸಾಮಚಿಂತನೆಯನ್ನು ಮಾಡಬೇಕೆಂದೂ ಅದಕ್ಕೆ ತಕ್ಕಂತೆ ಪ್ರತ್ಯಕ್ಷಫಲಗಳಾಗುವವೆಂದೂ ಅಭಿಪ್ರಾಯ.)

## 11. ಸಾಮೋಪಾಸನೆಗಳ ವಿವರ

ಛಾಂದೋಗ್ಯೋಪನಿಷತ್ತು ಸಾಮವೇದಕ್ಕೆ ಸೇರಿರುವದರಿಂದ ಅದರಲ್ಲಿ ಬ್ರಹ್ಮವಿದ್ಯೆಯ ಉಪದೇಶಕ್ಕೆ ಪೂರ್ವದಲ್ಲಿ ಅನೇಕ ಸಾಮೋಪಾಸನೆಗಳನ್ನು ಪ್ರಸ್ತಾಪಿಸಲಾಗಿದೆ. ಶ್ರೀಶಂಕರಭಗವತ್ಪಾದರು ಇಡಿಯ ಉಪನಿಷತ್ತಿಗೇ ತಮ್ಮ ಭಾಷ್ಯವನ್ನು ರಚಿಸಿರುವದರಿಂದ ಮುಮುಕ್ಷುಗಳು ಬೇಸರಪಟ್ಟುಕೊಳ್ಳದೆ ಉಪಾಸನಾಭಾಗವನ್ನೂ ಅವಲೋಕಿಸಿ ವಿಚಾರಗಳನ್ನು ಮನಸ್ಸಿಗೆ ಅಳವಡಿಸಿಕೊಳ್ಳುವದು ಆಗತ್ಯವಾಗಿರುತ್ತದೆ. ಈವರೆಗಿನ ಉಪದೇಶಗಳಲ್ಲಿ ಒಂದನೆಯ ಅಧ್ಯಾಯದ ಮುಖ್ಯ ವಿಷಯಗಳನ್ನು ಅಡಕಮಾಡಲಾಯಿತು. ಈಗ ಎರಡನೆಯ ಅಧ್ಯಾಯದ ವಿಷಯಗಳನ್ನು ವಿಚಾರಕ್ಕೆ ತೆಗೆದುಕೊಳ್ಳಲಾಗುವದು. ಅದರಲ್ಲಿ ಪಂಚವಿಧಸಾಮೋಪಾಸನೆಯ ವಿಚಾರವು ಈಗ ಪ್ರಕೃತವಾಗಿರುತ್ತದೆ.

ಸಾಮಗಾನವು ಐದು ಭಾಗಗಳಾಗಿರುತ್ತದೆ. ಹೇಗೆ ಸಂಗೀತಶಾಸ್ತ್ರದಲ್ಲಿ ಒಂದು ಹಾಡಿಗೆ ಆಲಾಪನೆ, ಪಲ್ಲವಿ, ಅನುಪಲ್ಲವಿ, ಚರಣಗಳು, ಸ್ವರಪ್ರಸ್ತಾರ–ಎಂಬ ಭಾಗಗಳಿರುವವೋ ಹಾಗೆ ಸಾಮಗಾನದಲ್ಲಿ ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ,

ನಿಧನ–ಎಂಬ ಐದು ವಿಭಾಗಗಳಿರುತ್ತವೆ. ಆದರೆ ಇವುಗಳನ್ನೆಲ್ಲ ಒಬ್ಬನೇ ಹಾಡುವದಿಲ್ಲ. ಉದ್ಗಾತೃವು ಹಿಂಕಾರವನ್ನೂ ಉದ್ಗೀಥವನ್ನೂ ಪ್ರಸ್ತೋತೃವು ಪ್ರಸ್ತಾವವನ್ನೂ ಪ್ರತಿಹರ್ತೃವು ಪ್ರತಿಹಾರವನ್ನೂ ಎಲ್ಲರೂ ಒಟ್ಟು ಸೇರಿ ನಿಧನವನ್ನೂ ಹಾಡುವರು. ಹೀಗೆ ಸಾಮಗಾನವು ಮೂವರು ಋತ್ವಿಜರಿಂದ ನಿರ್ವಹಿಸಲ್ಪಡುತ್ತದೆ. ಇದಕ್ಕೆ ಕಡಿಮೆಯಾದರೆ ಗಾನವು ಪೂರ್ಣವಾಗಲಾರದು. ಸಂಗೀತಕಚೇರಿಗೂ ಹಾಡುವವನು, ಪಿಟೀಲುವಾದಕ, ಮೃದಂಗವಾದಕ–ಹೀಗೆ ಮೂವರು ಬೇಕೇಬೇಕು. ಇರಲಿ, ಈ ಸಾಮವಿದ್ಯೆಯನ್ನು ಇಲ್ಲಿ ಉಪನಿಷತ್ತಿನಲ್ಲಿ ಅಧ್ಯಾತ್ಮಸಾಧನವಾಗಿ ಬಳಸಿಕೊಂಡಿರುವದೊಂದು ವಿಶೇಷವಾಗಿದೆ. ಸಾಮವನ್ನು ಮೊದಲು ಸಾಧುವೆಂದು ಸ್ತೋತ್ರಮಾಡಲಾಗಿದೆ. ಏಕೆಂದರೆ ವ್ಯವಹಾರದಲ್ಲಿಯೂ ಸಾಮಶಬ್ದಕ್ಕೆ ಸಾಧುವೆಂಬರ್ಥವು ಬಳಕೆಯಲ್ಲಿದೆ. 'ಸಾಮದಿಂದ ಬಳಿಸಾರಿದನು' ಎಂಬಲ್ಲಿ ಒಳ್ಳೆಯತನದಿಂದ ಹೋದನು– ಎಂದೇ ಅರ್ಥ. ನಾಲ್ಕು ಉಪಾಯಗಳಲ್ಲಿ ಮೊದಲನೆಯದಾದ ಸಾಮೋಪಾಯವು 'ಒಳ್ಳೆಯತನ'ವನ್ನೇ ಪ್ರತಿನಿಧಿಸುತ್ತದೆ. ಸಾಮಕ್ಕೆ ಬಗ್ಗದವನಿಗೆ ದಾನಭೇದದಂಡಗಳನ್ನು ಹೇಳಿದೆ. ಹೀಗೆ ಸಾಮವೆಂದರೆ ಒಳ್ಳೆಯದು, ಸಾಧು ಎಂಬಿದು ಸುಪ್ರಸಿದ್ಧವಾಗಿದೆ. ಆದ್ದರಿಂದಲೇ ಸಾಮವನ್ನು ಸಾಧುವೆಂದು ಉಪಾಸನೆಮಾಡಿದರೆ ಅಂಥವನಿಗೆ ಸಾಮಧರ್ಮ (ಒಳ್ಳೆಯ ಗುಣ)ಗಳು ಬಂದು ಸೇರುವವು. ಹಾಗೂ ಅವನಿಗೆ ವಶವಾಗುವವು–ಎಂದು ಫಲವನ್ನು ಹೇಳಲಾಗಿದೆ. ಇಂಥ ಸಾಮವನ್ನು ಈಗ ಲೋಕಗಳು, ಮಳೆ, ನೀರು, ಋತುಗಳು, ಪಶುಗಳು, ಪ್ರಾಣಗಳು–ಇವುಗಳ ದೃಷ್ಟಿಯಿಂದ ಐದೈದು ರೂಪವಾಗಿ ಉಪಾಸನೆ ಮಾಡಬೇಕೆಂದು ತಿಳಿಸಲಾಗುವದು.

ಈಗ ಪಂಚವಿಧಸಾಮೋಪಾಸನೆಯ ವಿವರವನ್ನು ನೋಡೋಣ. ಈ ಸಾಮಗಳ ದೃಷ್ಟಿಯನ್ನು ಎಲ್ಲಿ ಮಾಡಬೇಕೆಂಬುದನ್ನು ಮೊದಲು ವಿವರಿಸುತ್ತಾರೆ. ಹೇಗೆಂದರೆ ಪೃಥಿವಿಯನ್ನು ಹಿಂಕಾರವೆಂದೂ ಅಗ್ನಿಯನ್ನು ಪ್ರಸ್ತಾವವೆಂದೂ ಅಂತರಿಕ್ಷವನ್ನು ಉದ್ಗೀಥವೆಂದೂ ಆದಿತ್ಯನನ್ನು ಪ್ರತಿಹಾರವೆಂದೂ, ದ್ಯುಲೋಕವನ್ನು ನಿಧನವೆಂದೂ– ಚಿಂತಿಸಬೇಕೆಂದು ತಿಳಿಸಲಾಗಿದೆ. ಇವುಗಳಿಗೆ ನೆನಪಿಟ್ಟುಕೊಳ್ಳುವದಕ್ಕಾಗಿ ಒಂದೊಂದು ಸಾಮ್ಯ (ಸಮಜಾಯಿಷಿ)ವನ್ನು ಹೇಳಲಾಗುತ್ತದೆ. ಭೂಮಿಯು ಹಿಂಕಾರವೆಂದು ಚಿಂತಿಸಲ್ಪಡಬೇಕು–ಏಕೆಂದರೆ ಅದೇ ಮೊದಲನೆಯದು. ಪ್ರಾಣಿಗಳಿಗೆ ಆಧಾರವು ಮೊದಲನೆಯ ಅವಶ್ಯಕತೆಯಷ್ಟೆ? ಅನಂತರವೇ ಉಳಿದ ಆಹಾರ, ವಿಹಾರ, ಜೀವನಾದಿಗಳು ಸಂಭವಿಸುತ್ತದೆ. ಆದ್ದರಿಂದ ಭೂಮಿಯು ಸರ್ವಾಧಾರವಾಗಿದ್ದು ಪ್ರಾಥಮ್ಯವನ್ನೂ ಹೊಂದಿದೆ. ಸಾಮದಲ್ಲಿ ಹಿಂಕಾರವೇ ಮೊದಲನೆಯದಾಗಿದೆ. ಆದ್ದರಿಂದ ಭೂಮಿಯಲ್ಲಿ ಹಿಂಕಾರದೃಷ್ಟಿಯನ್ನು ಮಾಡಬೇಕು–ಎಂದರ್ಥ. ಇದರಂತೆಯೇ ಉಳಿದವನ್ನೂ ತಿಳಿಯಬಹುದಾಗಿದೆ. ಅಗ್ನಿಯೇ ಪ್ರಸ್ತಾವವು. ಏಕೆಂದರೆ ಅಗ್ನಿಯಲ್ಲಿಯೇ

ವೈದಿಕಕರ್ಮಗಳು ಮಾಡಲ್ಪಡುವವು. ಅಗ್ನಿಯ ಪ್ರಸ್ತಾವ (ಮಾತುಕತೆ) ಯಿಲ್ಲದೆ ಯಾವ ಯಜ್ಞವೂ ನಡೆಯುಂತಿಲ್ಲ. 'ಅಳಿಯನನ್ನು ಬಿಟ್ಟು ದಿಬ್ಬಣ ತೆರಳಿದರು' ಎಂಬ ಗಾದೆಯಂತೆ ಅಗ್ನಿಯನ್ನೇ ಕೈಬಿಟ್ಟರೆ ಯಾವ ಹೋಮವನ್ನು ತಾನೆ ಮಾಡಲಾದೀತು? ಆದ್ದರಿಂದ ಅಗ್ನಿಯನ್ನು ಪ್ರಸ್ತಾವವೆಂದು ಚಿಂತಿಸಬೇಕು. ಆಕಾಶವೇ ಉದ್ಗೀಥವು. ಗಗನ ಎಂದರೂ ಆಕಾಶವೇ. ಉದ್ಗೀಥಶಬ್ದದಲ್ಲಿಯೂ ಗಗನ ಶಬ್ದದಲ್ಲಿಯೂ ಇರುವ 'ಗ' ಕಾರವೇ ಇದಕ್ಕೆ ಹೋಲಿಕೆಯು. ಹೀಗೆಯೇ ಆದಿತ್ಯನು ಪ್ರತಿಹಾರವು. ಏಕೆಂದರೆ ಎಲ್ಲಾ ಪ್ರಾಣಿಗಳಿಗೂ ಸೂರ್ಯನು ಇದಿರಾಗಿರುವದರಿಂದ ಪ್ರತಿ–ಎಂದು ಹೇಳಲು ಸಾಧ್ಯವಾಗುವದು. ಇದೇ ಆದಿತ್ಯನಲ್ಲಿ ಪ್ರತಿಹಾರಬುದ್ಧಿಯನ್ನೂ ಮಾಡಲು ಕಾರಣವಾಗಿದೆ. ಕಡೆಯದಾಗಿ ದ್ಯುಲೋಕದಲ್ಲಿ ನಿಧನದೃಷ್ಟಿಯನ್ನಿಡಬೇಕು. ಇಲ್ಲಿಂದ ನಿಧನರಾದವರೆಲ್ಲ ದ್ಯುಲೋಕದಲ್ಲಿ ಇಡಲ್ಪಡುವದರಿಂದ ಈ ಹೋಲಿಕೆಯು ಸಾಧುವಾಗಿದೆ. ಹೀಗೆ ಲೋಕಗಳಲ್ಲಿ ಪಂಚವಿಧಸಾಮಗಳನ್ನು ಚಿಂತಿಸಬೇಕೆಂದು ಉಪನಿಷತ್ತು ತಿಳಿಸುತ್ತಿದೆ. ಇದೇ ಸಾಮೋಪಾಸನೆಯು. ಐದೈದು ರೀತಿಯಾಗಿ ಯಾವದೇ ಪೂಜ್ಯಪದಾರ್ಥದಲ್ಲಿ ಈ ಸಾಮೋಪಾಸನೆಯನ್ನು ಮಾಡಬಹುದು. ಏಕೆಂದರೆ ಉಪಾಸಕನಿಗೆ ಅವನ ಇಷ್ಟಾನುಸಾರ ಉಪಾಸ್ಯವಸ್ತುವನ್ನು ಆರಿಸಿಕೊಳ್ಳಲು ಸ್ವಾತಂತ್ರ್ಯವಿದೆ. ಉದಾಹರಣೆಗೆ– ಒಬ್ಬನಿಗೆ ಮಳೆಯು ಬೇಕಾಗಿದೆಯೆಂದಿಟ್ಟುಕೊಳ್ಳೋಣ. ಅಂಥವನು ಮುಂಗಾಳಿಯಲ್ಲಿ ಹಿಂಕಾರ ಬುದ್ಧಿಯನ್ನೂ ಮೋಡದಲ್ಲಿ ಪ್ರಸ್ತಾವಬುದ್ಧಿಯನ್ನೂ ಮಳೆಗರೆಯುವಿಕೆಯಲ್ಲಿ ಉದ್ಗೀಥದೃಷ್ಟಿಯನ್ನೂ ಮಿಂಚುಗುಡುಗಳಲ್ಲಿ ಪ್ರತಿಹಾರಬುದ್ಧಿಯನ್ನೂ ಮಳೆಯ ನಿಲುಗಡೆಯಲ್ಲಿ ನಿಧನದೃಷ್ಟಿಯನ್ನೂ ಇಡಬೇಕು. ಇಂಥ ಉಪಾಸಕನಿಗೆ ಮಳೆಯನ್ನು ಸುರಿಸುವ ಸಾಮರ್ಥ್ಯವುಂಟಾಗುವದು.

ಇನ್ನು ಪಂಚವಿಧಸಾಮೋಪಾಸನೆಗಳ ಮತ್ತೆ ಕೆಲವು ಪ್ರಕಾರಗಳನ್ನೂ ತಿಳಿಸಲಾಗ ವದು. ನೀರು, ಋತುಗಳು, ಪಶುಗಳು, ಪ್ರಾಣಗಳು–ಇವೇ ಆ ಪ್ರಕಾರಗಳು. ನಮ್ಮ ಜೀವನಕ್ಕೆ ಇವೆಲ್ಲ ಬೇಕಾದ ವಸ್ತುಗಳೇ ಆಗಿವೆ. ಇವುಗಳಲ್ಲಿ ಯಾವದೊಂದರಲ್ಲಿಯಾದರೂ ಪಂಚವಿಧಸಾಮದೃಷ್ಟಿಯನ್ನಿಡಬಹುದಾಗಿದೆ ಹೇಗೆಂದರೆ: (1) ನೀರಿನ ವಿಷಯಕ್ಕೆ ಹೇಳುವದಾದರೆ, ಮೋಡಗಳ ಒಟ್ಟುಗೂಡುವಿಕೆ, ಮಳೆಗರೆಯುವಿಕೆ, ಪೂರ್ವಕ್ಕೆ ಹರಿಯುವಿಕೆ, ಪಶ್ಚಿಮಕ್ಕೆ ಹರಿಯುವಿಕೆ, ಸಮುದ್ರ–ಇವುಗಳಲ್ಲಿ ಕ್ರಮವಾಗಿ ಹಿಂಕಾರಾದಿಭಾವನೆಗಳನ್ನು ಮಾಡಿದವನಿಗೆ ನೀರಿನ ಬರವುಂಟಾಗುವದಿಲ್ಲ; ನೀರಿನಲ್ಲಿ ಮುಳುಗಿ ಸಾಯುವದಿಲ್ಲ–ಹೀಗೆ ದೃಷ್ಟ ಫಲಗಳಾಗುವವು. (2) ಋತುಗಳಲ್ಲಿ ಕ್ರಮವಾಗಿ ವಸಂತದಲ್ಲಿ ಹಿಂಕಾರದೃಷ್ಟಿಯನ್ನೂ ಗ್ರೀಷ್ಮ, ವರ್ಷ, ಶರದ್, ಹೇಮಂತಗಳಲ್ಲಿ ಪ್ರಸ್ತಾವಾದಿದೃಷ್ಟಿಯನ್ನೂ ಮಾಡಿದವನಿಗೆ ಬೇಕಾದ ಭೋಗೈಶ್ವರ್ಯಗಳು ಪ್ರಾಪ್ತವಾಗುವವು. ಆಯಾ ಋತುಗಳಲ್ಲಿ ಫಲಿಸಬೇಕಾದ ಸಸ್ಯಗಳು ಸಮೃದ್ಧಿಯನ್ನೂ

ನೀಡಿ ಸುಗ್ಗಿಯನ್ನುಂಟುಮಾಡುವವು–ಎಂದಭಿಪ್ರಾಯ. (3) ಪಶುಗಳಲ್ಲಿ ಸಾಮೋಪಾಸನೆ ಮಾಡಲಿಚ್ಛೆಯುಳ್ಳವನು ಹೆಣ್ಣು ಆಡಿನಲ್ಲಿ ಹಿಂಕಾರಬುದ್ಧಿಯನ್ನೂ ಕುರಿಗಳು, ಹಸುಗಳು, ಕುದುರೆಗಳು, ಮನುಷ್ಯರಲ್ಲಿ ಕ್ರಮವಾಗಿ ಪ್ರಸ್ತಾವಾದಿಬುದ್ಧಿಯನ್ನೂ ಮಾಡಬೇಕು. ಇದರಿಂದ ಪಶುಸಮೃದ್ಧಿಯುಂಟಾಗುವದು. ಜನಪ್ರಿಯನೂ ಆಗುವನು. (4) ಪ್ರಾಣಗಳಲ್ಲಿ ಎಂದರೆ ಉಸಿರಾಡುವದು, ಮಾತನಾಡುವದು, ನೋಡುವದು, ಕೇಳುವದು, ಆಲೋಚಿಸುವದು–ಇವುಗಳಿಗೆ ಆಶ್ರಯವಾಗಿರುವ ಪ್ರಾಣ, ವಾಕ್ಕು, ಚಕ್ಷುಸ್ಸು, ಶ್ರೋತ್ರ, ಮನಸ್ಸುಗಳಲ್ಲಿ ಕ್ರಮವಾಗಿ ಹಿಂಕಾರಾದಿದೃಷ್ಟಿಯನ್ನಿಡಬೇಕು. ಇಂಥ ಉಪಾಸಕನಿಗೆ ಅತ್ಯುತ್ತಮವಾದ ಜೀವನವು ಸಾಗುತ್ತದೆ. ಎಲ್ಲರಿಂದಲೂ ಗೌರವಿಸಲ್ಪಟ್ಟು ಎಲ್ಲರಿಗಿಂತ ಮಿಗಿಲಾಗಿ ಬದುಕುತ್ತಾನೆ. ಪರಲೋಕಗಳಲ್ಲಿ ಇವನು ಮುಖ್ಯವ್ಯಕ್ತಿಯಾಗಿ ಎಣಿಸಲ್ಪಡುತ್ತಾನೆ–ಎಂದಭಿಪ್ರಾಯ.

ಈಗ ಒಟ್ಟಿನಲ್ಲಿ ಪಂಚವಿಧಸಾಮೋಪಾಸನೆಗಳ ವಿಷಯವನ್ನು ಈಗಿನ ನಮ್ಮ ಜೀವನಕ್ಕೆ ಅನ್ವಯಿಸಿ ನೋಡೋಣ. ನಾವು ಇನ್ನೂ ಎಷ್ಟೇ ಕಾಲವಾದರೂ ಯಾವ ರಾಜ್ಯಭಾರವು ಬಂದರೂ ಭೂಮಿಯ ಮೇಲೆ ವಾಸಿಸುವದನ್ನಾಗಲೀ, ಉಸಿರಾಡುವದು, ಆಹಾರವನ್ನು ಸೇವಿಸುವದು, ನೀರು ಕುಡಿಯುವದು – ಮುಂತಾದವುಗಳನ್ನಾಗಲಿ ಬದಲಾಯಿಸಲಾಗುವದಿಲ್ಲ. ಹಾಗೆಯೇ ಸೂರ್ಯಚಂದ್ರರಾಗಲೀ, ಅಗ್ನಿ, ವಾಯುಗಳಾಗಲಿ, ಪಶುಮೃಗಾದಿಗಳಾಗಲಿ ಬದಲಾಗುವದಿಲ್ಲ. ಕಾಲಚಕ್ರಭ್ರಮಣೆಯೂ ಋತುಧರ್ಮಗಳು ಕೂಡ ವ್ಯತ್ಯಾಸವಾಗುವಂತಿಲ್ಲ. ಇನ್ನು ಇಂದ್ರಿಯಗಳ ಉಪಯೋಗಗಳಲ್ಲಿ ಕೂಡ ಕಾಲಿನಿಂದ ಬರೆಯುವದಾಗಲಿ, ಕೈಯಿಂದ ನಡೆಯುವ ದಾಗಲಿ ಸಾಧ್ಯವಾಗಲಾರದು. ಪ್ರಪಂಚದ ಎಲ್ಲಾ ಭೂಭಾಗಕ್ಕೂ ಈ ಕ್ರಿಯೆಗಳು ಸರಿ ಸಮಾನವಾಗಿರುವವು. ತಿನ್ನುವದು ಎಂದರೆ ಭಾರತ, ಅಮೆರಿಕಾ, ರಷ್ಯಾ, ಜಪಾನ್ ಎಲ್ಲಾ ದೇಶಗಳಲ್ಲಿಯೂ ಬಾಯಿಯಿಂದಲೇ ಸರಿ–ಎಂಬುದು ಖಚಿತವಾಗಿಬಿಟ್ಟಿದೆ. ಇಷ್ಟು ವಿಚಾರಗಳು ನಿತ್ಯವಾಗಿರಲಾಗಿ ಮನುಷ್ಯನು ತನ್ನ ಶರೀರ, ಅದರೊಳಗಿನ ಕ್ರಿಯೆಗಳು ಅದಕ್ಕೆ ಬೇಕಾದ ಭೋಗಗಳು–ಇವುಗಳಿಗೆ ಆಧಾರವಾಗಿರುವ ಭೌತಿಕ ಹಾಗೂ ಆಧಿ ದೈವಿಕಪ್ರಪಂಚವನ್ನು ದೇವತಾಬುದ್ಧಿಯಿಂದೇಕೆ ನೋಡಬಾರದು? ಎಲ್ಲವನ್ನೂ ಆಯಾ ವಸ್ತುರೂಪದಿಂದಲೇ ಗ್ರಹಿಸಿದಾಗ ವ್ಯವಹಾರವು ಸಾಗಿದರೂ ಅಹಂಕಾರಮಮಕಾರ ಗಳು, ಸ್ಪರ್ಧೆಗಳು, ದ್ವೇಷಾಸೂಯೆಗಳು ನಮ್ಮನ್ನು ಪೀಡಿಸುತ್ತಿವೆಯಲ್ಲವೆ? ಆದ್ದರಿಂದ ಶಾಸ್ತ್ರಕಾರರು ಯಾವದೇ ವಸ್ತುವನ್ನಾದರೂ ಪೂಜ್ಯಬುದ್ಧಿಯಿಂದ ಕಾಣುವ ಹಾಗೂ ಅದರಲ್ಲಿ ದೇವತಾಭಾವವನ್ನು ಕಾಣುವ ವಿದ್ಯೆಯನ್ನು ಪ್ರತಿಯೊಬ್ಬ ಮಾನವನೂ ಕಲಿಯಬೇಕೆಂದು ತಿಳಿಸುತ್ತಾರೆ. ಇದೇ ಉಪಾಸನೆಯ ರಹಸ್ಯವಾಗಿದೆ. ನಾವು ಲೌಕಿಕವಾಗಿಯೂ ಈಗ ಬಳಸುತ್ತಿರುವ ವಸ್ತುಗಳಲ್ಲಿ ಹಾಗೂ ನಾವು

ವ್ಯವಹರಿಸುತ್ತಿರುವ ಪ್ರಪಂಚದಲ್ಲಿ ಈ ಉಪಾಸನೆಯನ್ನು ಕೈಗೊಳ್ಳಬಹುದು. ನಮ್ಮ ಬುದ್ಧಿಯು ಮಾತ್ರ ಹೀಗೆ ಭಾವಿಸುವ ಸಂಸ್ಕಾರವುಳ್ಳದ್ದಾಗಿರಬೇಕು. ಉದಾಹರಣೆಗೆ: ಪಶುಸಾಮೋಪಾಸನೆಯನ್ನು ಎಲ್ಲರೂ ಮಾಡಬಹುದು. ಕುರಿ, ಆಡು, ಹಸು, ಕುದುರೆಗಳೇನೂ ಅಪರೂಪವಲ್ಲ. ಅವು ಕಣ್ಣಿಗೆ ಬೀಳುತ್ತಲೇ ಇರುವವು. ಅಂಥವುಗಳನ್ನು ಕಂಡಾಗ ಈ ಗ್ರಾಮ್ಯಪಶುಗಳೆಲ್ಲ ಭಗವಂತನ ಪ್ರತಿನಿಧಿಗಳು. ಯಜ್ಞಕಾಲಕ್ಕೆ ಬಳಸುವ ಸಾಮಗಾನದ ಹಿಂಕಾರಾದಿ ವಿಭಾಗಗಳಿಗೆ ಇವು ಪ್ರತೀಕವಾಗಿವೆ– ಎಂದು ಚಿಂತಿಸಿದಲ್ಲಿ ನಮಗೆ ಪಶುಬುದ್ಧಿಯು ಮರೆಯಾಗಿ ಯಜ್ಞಬುದ್ಧಿಯ ಉದಯವಾಗುವದು. ಕೂಡಲೆ ಯಜ್ಞಸಂಬಂಧದ ಎಲ್ಲಾ ಸನ್ನಿವೇಶವೂ ನೆನಪಾದಂತೆಲ್ಲ ನಾವು ಒಂದು ಮಾನಸಿಕ ಯಜ್ಞವನ್ನೇ ಮಾಡಿದಂತಾಗುವದು. ಮನುಷ್ಯರ ಗುಂಪನ್ನು ಕಂಡಾಗಲೂ ಹೀಗೆಯೇ ಜನತಾಜನಾರ್ದನನ ನೆನಪು ಬಂದರೆ ಅದೊಂದು ಉಪಾಸನೆಯೇ ಆಗಲಿದೆ. ಇದೇ ರೀತಿಯಾಗಿ ಮಳೆಗರೆಯುವಾಗ– ಋತು ಬದಲಾವಣೆಗಳಾದಾಗ, ನಾವೇ ಮಾತನಾಡುವಾಗ– ನೋಡುವಾಗ– ಕೇಳುವಾಗ– ಚಿಂತಿಸುವಾಗಲೆಲ್ಲ ಯಜ್ಞದ ಅನುಸಂಧಾನವು ಬಂದದ್ದೇ ಆದರೆ ಪ್ರತ್ಯೇಕವಾದ ಉಪಾಸನೆಯೇ ಬೇಕಿರುವದಿಲ್ಲ. ಕೆಲವರು ಉಪಾಸನೆಗಳು ಮಂದಾಧಿ ಕಾರಿಗಳಿಗೆಂದೂ ಜ್ಞಾನವೇ ತಮಗೆ ಬೇಕೆಂದೂ ಆಗ್ರಹಮಾಡುತ್ತಾರೆ. ಆದರೆ ಉಪಾಸನೆಗಳಿಂದ ಅಂತಃಕರಣವು ಸೂಕ್ಷ್ಮವಾಗದೆ ಇದ್ದಾಗ ಜ್ಞಾನವನ್ನು ಬಯಸಿದರೆ ಅದು ದಕ್ಕುವದಾದರೂ ಹೇಗೆ ಸಾಧ್ಯ? ಈ ದೃಷ್ಟಿಯಿಂದ ನಾವು ಉಪಾಸನೆಗಳಿಗೇ ಸದ್ಯಕ್ಕೆ ಹೆಚ್ಚು ಪ್ರಾಮುಖ್ಯವನ್ನು ನೀಡಬೇಕಾಗಿದೆ. ಇನ್ನು ಮುಂದೆ ಸಪ್ತವಿಧ ಸಾಮೋಪಾಸನೆಗಳನ್ನು ಕುರಿತು ವಿಚಾರಿಸೋಣ.

---

## ಸಪ್ತವಿಧಸಾಮೋಪಾಸನೆ

**ಅಥ ಖಲ್ವಮುಮಾದಿತ್ಯಂ ಸಪ್ತವಿಧಂ ಸಾಮೋಪಾಸೀತ ಸರ್ವದಾ ಸಮಸ್ತೇನ ಸಾಮ ಮಾಂ ಪ್ರತಿ ಮಾಂ ಪ್ರತೀತಿ ಸರ್ವೇಣ ಸಮಸ್ತೇನ ಸಾಮ|| 2–9–1.**

**ಭಾವಾರ್ಥ:–** ಇನ್ನು ಈ ಆದಿತ್ಯನೆಂದು ಸಪ್ತವಿಧಸಾಮವನ್ನು ಉಪಾಸನೆ ಮಾಡಬೇಕು. (ಅವನು) ಯಾವಾಗಲೂ ಸಮನು, ಆದ್ದರಿಂದ ಸಾಮವು. ನನ್ನ ಎದುರಿಗೆ, ನನ್ನ ಎದುರಿಗೆ– ಎಂದು ಎಲ್ಲರಿಗೂ ಸಮನು. ಆದ್ದರಿಂದ ಸಾಮವು.

(ಆದಿತ್ಯನು ಪ್ರತಿದಿನವೂ ಬೆಳಗ್ಗೆ ಪೂರ್ವಾಭಿಮುಖವಾಗಿ ನಿಂತವರಿಗೆಲ್ಲ ಎದುರಾಗಿಯೇ ಇರುತ್ತಾನೆ. ಆದ್ದರಿಂದ ಎಲ್ಲರಿಗೂ ಸಮನು. ಇವನನ್ನು ಸಾಮನೆಂದು ಚಿಂತಿಸುವವನು ಆದಿತ್ಯಲೋಕವನ್ನು ಜಯಿಸಿ ಅಮೃತನಾಗುವನೆಂದು ಅಭಿಪ್ರಾಯ.)

# 12. ಸಪ್ತವಿಧಸಾಮಗಳಲ್ಲಿ ಆದಿತ್ಯದೃಷ್ಟಿ

ಛಾಂದೋಗ್ಯೋಪನಿಷತ್ತು ವೈದಿಕೋಪಾಸನಾತತ್ತ್ವಗಳ ಗನಿಯಾಗಿದೆ. ಆದರೆ ಉಪಾಸಕರೆಂದು ಈಗ ಪ್ರಸಿದ್ಧರಾಗಿರುವವರು ಯಾರೂ ಈ ಉಪನಿಷತ್ ಪ್ರತಿಪಾದ್ಯವಾದ ಯಾವದೊಂದು ಉಪಾಸನೆಯನ್ನೂ ಕೈಗೊಂಡಂತೆ ಕಾಣುವದಿಲ್ಲ. ಇಲ್ಲಿ ಎಲ್ಲಾ ಉಪಾಸನೆಗಳಿಗೂ ದೃಷ್ಟಫಲವನ್ನೂ ಹೇಳಿದೆ. ಆದರೂ ವೇದಸಾಹಿತ್ಯದ ಪರಿಚಯವು ಜನರಿಗೆ ತೀರ ಕಡಿಮೆಯಾಗಿರುವದರ ಫಲವಾಗಿ ಈ ಉಪಾಸನೆಗಳೆಲ್ಲ ರಹಸ್ಯವಾಗಿಯೇ ಉಳಿದುಬಿಟ್ಟವೆ. ಪ್ರಕೃತ ಏಳು ವಿಧವಾದ ಸಾಮಗಳನ್ನು ಪ್ರಧಾನವಾಗಿ ಆದಿತ್ಯನ ದೃಷ್ಟಿಯಿಂದ ಮತ್ತು ವಾಗಾದಿಗಳ ದೃಷ್ಟಿಯಿಂದ ಹೇಗೆ ಚಿಂತಿಸಬೇಕೆಂಬುದನ್ನು ಈಗ ವಿವರಿಸಲಾಗುವದು.

ಸಾಮದ ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ–ಎಂಬ ಐದು ಅವಯವಗಳನ್ನು ಹಿಂದೆ ವರ್ಣಿಸಿದೆ. ಈಗ ಆದಿ, ಉಪದ್ರವ–ಎಂಬ ಎರಡನ್ನು ಹೆಚ್ಚಾಗಿ ಸೇರಿಸ ಒಟ್ಟು ಏಳು ವಿಧವಾಗಿ ಸಾಮವನ್ನು ವರ್ಣಿಸುತ್ತಾರೆ. ಆದಿ ಉಪದ್ರವಗಳು ಸಹ ಸಾಮಭಕ್ತಿಯ ಅವಯವಗಳೇ ಆಗಿರುತ್ತವೆ. ಸಾಮವೇದವನ್ನು ಚೆನ್ನಾಗಿ ಅಧ್ಯಯನ ಮಾಡಿದವರಲ್ಲಿ ವಿಚಾರಿಸಿ ಇವುಗಳ ಹೆಚ್ಚಿನ ಪರಿಚಯವನ್ನು ಮಾಡಿಕೊಳ್ಳಬಹುದು. ಪ್ರಕೃತ–ಸೂರ್ಯನ ಗತಿಯನ್ನು ಅನುಸರಿಸಿ ಈ ಏಳು ಸಾಮಭಕ್ತಿಗಳನ್ನೂ ಜೋಡಿಸಿ ಆದಿತ್ಯಸಾಮೋಪಾಸನೆಯನ್ನು ವಿವರಿಸಲಾಗುವದು. ಕಾಲವನ್ನು ಹೆಸರಿಸುವ ಶಾಸ್ತ್ರಜ್ಞರ ಅಭಿಪ್ರಾಯದಂತೆ ಅದು ಏಳು ಭಾಗವಾಗಿರುತ್ತದೆ. (1) ಸೂರ್ಯನು ಹುಟ್ಟುವ ಮುಂಚಿನ ಕಾಲವು ಉಷಃಕಾಲವೆನಿಸುವದು. ಈ ಸಮಯದಲ್ಲಿ ಸೂರ್ಯನು ನಮಗೆ ಕಣ್ಮರೆಯಾಗಿದ್ದರೂ ಇದ್ದುಕೊಂಡೇ ಇರುವದರಿಂದ ಅವನನ್ನು 'ಧರ್ಮ'ನೆಂದು ಕರೆಯಲಾಗಿದೆ. ಹೀಗೆ ಧರ್ಮರೂಪವಾಗಿರುವ ಸೂರ್ಯನ ದೃಷ್ಟಿಯನ್ನು ಸಾಮದ ಹಿಂಕಾರದಲ್ಲಿ ಮಾಡಬೇಕು. ಈ ಸಾಮವನ್ನು ಗೋವೇ–ಮುಂತಾದ ಪಶುಗಳು ಆಶ್ರಯಿಸಿಕೊಂಡಿರುವವು–ಎಂದೂ ಚಿಂತಿಸಬೇಕು. ಏಕೆಂದರೆ ಸೂರ್ಯನು ಉದಯಿಸುವ ಮುಂಚೆಯೇ ಪ್ರಾಣಿಗಳು ಕೂಗಿಕೊಳ್ಳುವವು. ಕೋಳಿಗಳು, ಕಾಗೆಗಳು, ದನಗಳು–ಇವು ಉದಯಕ್ಕೆ ಮುಂಚೆಯೇ ಧ್ವನಿಮಾಡುವದು ಪ್ರಸಿದ್ಧವಾಗಿದೆ. ಆ ಧ್ವನಿಗಳನ್ನೇ ಹಿಂಕಾರವೆಂದು ಚಿಂತಿಸಬೇಕು. (2) ಎರಡನೆಯದೇ ಉದಯಕಾಲ ಅಥವಾ ಪ್ರಾತಃಕಾಲವು. ಇದನ್ನು ಸಾಮದೃಷ್ಟಿಯಿಂದ ಪ್ರಸ್ತಾವವೆಂದು ಚಿಂತಿಸಬೇಕು. ಈ ಸಾಮಭಕ್ತಿಯನ್ನು ಮನುಷ್ಯರು ಆಶ್ರಯಿಸಿಕೊಂಡಿರುತ್ತಾರೆ. ಪ್ರಸ್ತಾವ–ಪ್ರಸ್ತುತಿ ಎಂಬೆರಡು ಪದಗಳಿಗೂ ಒಂದೇ ಅರ್ಥ. ಪ್ರಸ್ತುತಿ ಎಂದರೆ ಹೊಗಳಿಕೆ, ಸಾಮಾನ್ಯವಾಗಿ ಮನುಷ್ಯರು ಹೊಗಳಿಕೆಯನ್ನು ಬಯಸುತ್ತಾರೆ. ಹೊಗಳಿಕೆಯು ಎಲ್ಲರಿಗೂ ಇಷ್ಟವೆಂಬುದನ್ನು

ಹೇಳಬೇಕಾಗಿಯೇ ಇಲ್ಲ. ಈ ಸಾಮಾನ್ಯದಿಂದ ಪ್ರಾತಃಕಾಲವನ್ನು ಪ್ರಸ್ತಾವವೆಂಬ ಸಾಮಭಕ್ತಿಯನ್ನಾಗಿ ಚಿಂತಿಸಬೇಕು–ಎಂದಭಿಪ್ರಾಯ.

(3) ಮೂರನೆಯ ಕಾಲವು ಸಂಗವಕಾಲವೆನಿಸಿಕೊಳ್ಳುವದು. ಇದು ಬಹಳ ಮಟ್ಟಿಗೆ ಬೆಳಿಗ್ಗೆ 9 ಘಂಟೆಯ ವೇಳೆಯಾಗಿರುತ್ತದೆಯೆನ್ನಬಹುದು. ಈ ಸಮಯದಲ್ಲಿ ಸೂರ್ಯನ ರಶ್ಮಿಗಳೆಲ್ಲ ಒಂದುಗೂಡುವವು. ಈ ಸಮಯವನ್ನು ಆದಿ ಎಂಬ ಸಾಮಾವಯವವಾಗಿ ಚಿಂತಿಸಬೇಕು. ಆದಿ ಎಂಬಿದನ್ನು 'ಆದಾಯ ಗಚ್ಛನ್ತಿ'–ತಮ್ಮನ್ನು ತಾವು ಒಯ್ದು ಆಕಾಶದಲ್ಲಿ ಸಂಚರಿಸುತ್ತವೆ–ಎಂಬರ್ಥದಲ್ಲಿಯೂ ತೆಗೆದುಕೊಳ್ಳಬೇಕು. ಏಕೆಂದರೆ ಆದಿಶಬ್ದದಲ್ಲಿಯೂ ಆದಾಯ–ಎಂಬಲ್ಲಿಯೂ 'ಆ' ಕಾರವಿರುವದು ಇದಕ್ಕೆ ನಿಮಿತ್ತವಾಗಿದೆ. ಈ ನೆಪದಿಂದ ಆಕಾಶದಲ್ಲಿ ಆಲಂಬನವಾವುದೂ ಇಲ್ಲದೆ ಹಾರುತ್ತಿರುವ ಹಕ್ಕಿಗಳಿರುವವಲ್ಲ , ಅವು ಆದಿ ಎಂಬ ಈ ಸಾಮಭಕ್ತಿಯನ್ನಾಶ್ರಯಿಸುತ್ತವೆ–ಎಂದು ಉಪಾಸನೆಮಾಡಬೇಕು. ಮತ್ತು ಸಂಗವಕಾಲದಲ್ಲಿ ಹಸು–ಕರುಗಳು ಒಂದುಗೂಡುವವಾದ್ದರಿಂದಲೂ ಪಶುಗಳು ಕೂಡ ಈ ಕಾಲವನ್ನಾಶ್ರಯಿಸಿರುವದರಿಂದ ಸಾಮದ ಆದಿ ಎಂಬ ಭಕ್ತಿಗೆ ಪಶುಗಳೂ ಭಾಗಿಗಳಾಗುತ್ತವೆ–ಎಂದು ಚಿಂತಿಸಬೇಕು. ಹೀಗೆ ಸೂರ್ಯನು ಮೇಲೇರಿದಂತೆಲ್ಲ ಪಶುಪಕ್ಷಿಗಳಿಗೂ ಅವನು ವ್ಯವಹಾರಾಶ್ರಯನಾಗುವದರಿಂದ ಅವನನ್ನು ಸಾಮಾವಯವಗಳಲ್ಲಿ ಚಿಂತಿಸುವದು ಸೂಕ್ತವಾಗಿದೆ. (4) ನಾಲ್ಕನೆಯದೇ ಮಾಧ್ಯಂದಿನ ಕಾಲವು. ವೈದಿಕರು ಈ ಸಮಯದಲ್ಲಿ ಮಾಧ್ಯಾಹ್ನಿಕವೆಂಬ ಕರ್ಮವನ್ನಾಚರಿಸುವರು. ಸೂರ್ಯನು ನೆತ್ತಿಯ ಮೇಲಕ್ಕೆ ಏರಿರುವ ಸಮಯವಿದು. ಈ ಸಮಯವು ಸೂರ್ಯನ ಯೌವನಾವಸ್ಥೆಯಾಗಿರುವದು. ಎಲ್ಲಾ ಪ್ರಾಣಿಗಳಿಗೂ ಯೌವನವು ಸುಖಪಡುವದಕ್ಕೂ ಪ್ರಸಿದ್ಧಿಯನ್ನು ಹೊಂದುವದಕ್ಕೂ ಮುಖ್ಯಕಾಲವು. ಇಂಥ ಸಮಯದಲ್ಲಿ ಸೂರ್ಯನನ್ನು ಸಾಮಭಕ್ತಿಯ ಉದ್ಗೀಥಸ್ವರೂಪನೆಂದು ಚಿಂತಿಸಬೇಕು. ಈ ಸಮಯವನ್ನು ದೇವತೆಗಳು ತಮ್ಮದಾಗಿ ಮಾಡಿಕೊಂಡಿರುವರು. ಎಲ್ಲಾ ದೇವತಾಕಾರ್ಯಗಳೂ ಮಧ್ಯಾಹ್ನಕಾಲವು ಪೂರೈಸುವದರೊಳಗೇ ನೆರವೇರುವವು. ಅನಂತರದ ಕಾಲವು ದೇವತಾಕಾರ್ಯಗಳಿಗೆ ಪ್ರಶಸ್ತವಲ್ಲ. ಪ್ರಜಾಪತಿಯ ಮಕ್ಕಳಾದ ದೇವ–ಮನುಷ್ಯ–ರಾಕ್ಷಸರಲ್ಲಿ ದೇವತೆಗಳೇ ಶ್ರೇಷ್ಠರೆಂಬುದು ಪ್ರಸಿದ್ಧವಾಗಿದೆ. ಸಾಮಭಕ್ತಿಗಳಲ್ಲಿ ಉದ್ಗೀಥವೇ ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದೆ. ಆದ್ದರಿಂದ ಉದ್ಗೀಥಭಕ್ತಿಯನ್ನು ಆಶ್ರಯಿಸಿರುವ ದೇವತೆಗಳೇ ಮಾಧ್ಯಂದಿನ ಕಾಲದ ಸೂರ್ಯನನ್ನು ಪ್ರತಿನಿಧಿಸುತ್ತಾರೆ. ಆದ್ದರಿಂದ ಉದ್ಗೀಥಸಾಮವನ್ನು ಮಾಧ್ಯಂದಿನ ಸೂರ್ಯನ ಸ್ವರೂಪವಾಗಿ ಚಿಂತಿಸಬೇಕೆಂದು ಗೊತ್ತಾಯಿತು. ಈ ಸಾಮದ ಇನ್ನು ಮೂರು ಅವಯವಗಳನ್ನೂ ಪೂರ್ಣವಾಗಿ ತಿಳಿದು ಒಟ್ಟು ಏಳು ವಿಧವಾದ ಸಾಮೋಪಾಸನೆಯ ತತ್ತ್ವವನ್ನು ಸಮನ್ವಯಮಾಡಿಕೊಳ್ಳಬೇಕು. ಉಳಿದ ಮೂರನ್ನು ಈಗ ವಿಚಾರಮಾಡೋಣ.

(5) ಐದನೆಯದು ಅಪರಾಹ್ನಕಾಲವು. ಈ ಸಮಯದ ಸೂರ್ಯನನ್ನು ಪ್ರತಿಹಾರವೆಂಬ ಸಾಮಭಕ್ತಿಯಲ್ಲಿ ಚಿಂತಿಸಬೇಕು. ಈ ಸಮಯವನ್ನು ಗರ್ಭಗಳು ಆಶ್ರಯಿಸಿಕೊಂಡಿರುತ್ತವೆ. ಗರ್ಭದಿಂದ ಹೊರಬರುವ ಎಲ್ಲಾ ಪ್ರಾಣಿಗಳನ್ನೂ ಇಲ್ಲಿ ತೆಗೆದುಕೊಳ್ಳಬೇಕು. ಪ್ರತಿಯೊಂದು ಪ್ರಾಣಿಯೂ ಹುಟ್ಟುವ ಮುಂಚೆ ಗರ್ಭವಾಸವನ್ನು ಮಾಡಲೇಬೇಕಷ್ಟೆ? ವಿಶೇಷವಾಗಿ ಮನುಷ್ಯನು ಮಾತೃಗರ್ಭದಲ್ಲಿರುವಾಗ ತಲೆಕೆಳಗಾಗಿ ಮಲಗಿರುತ್ತಾನೆ. ತಾಯಿಯು ನಿಂತಿರುವಾಗ, ಓಡಾಡುವಾಗ ಗರ್ಭವು ಜಾರಿ ಕೆಳಗೆ ಬೀಳಬಹುದಾದರೂ ಹಾಗೆ ಬೀಳದೆ ಇರುವದಕ್ಕೆ ಕಾರಣವೇನೆಂದರೆ: ಪ್ರತಿಹಾರ ಭಕ್ತಿಯೆಂದು ಚಿಂತಿಸಲ್ಪಡುವ ಸೂರ್ಯನ ಕಿರಣಗಳನ್ನು ಸೂರ್ಯನು ತನ್ನ ಕಡೆಗೇ ಸೆಳೆದುಕೊಳ್ಳುವಂಥ ಕಾಲವದು. ಹಾಗೆ ಸೆಳೆದುಕೊಳ್ಳುವ ಪ್ರಕಾಶವುಳ್ಳ ಆದಿತ್ಯನ ಅಪರಾಹ್ನಕಾಲದ ರೂಪವನ್ನು ಗರ್ಭಗಳು ಆಶ್ರಯಿಸಿರುವವು. ಆದ್ದರಿಂದಲೇ ಅವು ಜಾರಿಬೀಳದೆ ಇವೆ-ಎಂದು ಇಲ್ಲಿ ತಿಳಿಸಿದೆ. ಒಟ್ಟಿನಲ್ಲಿ ಉಪಾಸಕನು ಅಪರಾಹ್ನದ ಸೂರ್ಯನಲ್ಲಿ ಪ್ರತಿಹಾರಸಾಮಬುದ್ಧಿಯನ್ನಿಡಬೇಕೆಂದು ಅಭಿಪ್ರಾಯ. (6) ಅಪರಾಹ್ನಕಾಲದ ಅನಂತರ ಸೂರ್ಯನು ಅಸ್ತವಾಗುವಕಾಲದವರೆಗಿನ ಸಮಯವು ಸಾಯಂಕಾಲವೆನಿಸುವದು. ಈ ಸಮಯದಲ್ಲಿ ಸೂರ್ಯನನ್ನು ಉಪದ್ರವವೆಂದು ಸಾಮಸ್ವರೂಪನನ್ನಾಗಿ ಚಿಂತಿಸಬೇಕು. ಈ ಕಾಲವನ್ನು ಅರಣ್ಯಪಶುಗಳು ಆಶ್ರಯಿಸಿ ಕೊಂಡಿರುವವು. ಅರಣ್ಯಪಶುಗಳೆಂದರೆ ಕಾಡುಪ್ರಾಣಿಗಳು. ಉಪದ್ರವಂತಿ ಎಂದರೆ ಓಡಿಹೋಗುತ್ತವೆ ಎಂಬ ಸಾಮಾನ್ಯವನ್ನು ಇಲ್ಲಿಟ್ಟುಕೊಂಡಿದೆ. ಮನುಷ್ಯರನ್ನು ಕಂಡಾಗ ಹೆದರಿದ ಈ ಪ್ರಾಣಿಗಳು ಕಾಡಿನೊಳಗೆ ನಿರ್ಭಯವಾಗಿರುವದೆಂಬ ಕಾರಣದಿಂದ ಓಡಿಬಿಡುವವು. ಆದ್ದರಿಂದ ಉಪದ್ರವವೆಂಬ ಸಾಮಕ್ಕೆ ಇವು ಹೊಂದಿಕೊಂಡಿವೆ-ಎಂದು ತಿಳಿಯಬೇಕು. (7) ಕಡೆಯದಾಗಿ ಸಾಮದ ನಿಧನವೆಂಬ ಅವಯವವು. ಇದು ಸೂರ್ಯನು ಅಸ್ತಮಯನಾಗುತ್ತಲಿರುವ ಕಾಲವು. ಅಸ್ತಮಾನಕಾಲವೆಂದೇ ಕರೆಯಬಹುದು. ಇದನ್ನು ನಿಧನವೆಂಬ ಸಾಮಾವಯವವೆಂದು ಚಿಂತಿಸಬೇಕು. ಈ ಕಾಲವನ್ನು ಪಿತೃಗಳು ಆಶ್ರಯಿಸಿಕೊಂಡಿರುವರು. ನಿಧೀಯಂತೇ-ಎಂದರೆ ಇಡಲ್ಪಡುತ್ತಾರೆ -ಎಂದರ್ಥ. ಮನುಷ್ಯನು ತನ್ನ ಪಿತೃಗಳಿಗೆ ಶ್ರಾದ್ಧಮಾಡುವ ಕಾಲಕ್ಕೆ ಮೂರು ಪಿಂಡಗಳನ್ನು ತಂದೆ-ಅಜ್ಜ-ಮುತ್ತಜ್ಜ-ಎಂಬ ರೂಪದಿಂದ ದರ್ಭೆಗಳ ಮೇಲೆ ಇಡುತ್ತಾನಷ್ಟೆ! ಈ ಇಡುವಿಕೆಯೇ ನಿಧನವೆಂಬ ಸಾಮಕ್ಕೆ ಹೋಲಿಕೆಯಾಗಿದ್ದು ಈ ಕಾಲವನ್ನು ಪಿತೃಗಳು ಆಶ್ರಯಿಸಿರುತ್ತಾರೆಂತ ತಿಳಿಸಲಾಗಿದೆ. ಹೀಗೆ ಏಳು ಸಾಮಭಕ್ತಿಗಳಲ್ಲಿ ಆದಿತ್ಯನ ಏಳು ಕಾಲಗಳ ಸ್ಥಿತಿಯನ್ನು ಹೊಂದಿಸಿ ಒಂದೊಂದು ಕಾಲಕ್ಕೂ ಒಬ್ಬೊಬ್ಬ ಪ್ರಾಣಿಗಳು ಆಶ್ರಿತರಾಗಿರುತ್ತಾರೆಂದೂ ತಿಳಿಸಿ ಸಪ್ತವಿಧಸಾಮೋಪಾಸನೆಯನ್ನು ಆದಿತ್ಯನ ದೃಷ್ಟಿಯಿಂದ ಮಾಡಬೇಕೆಂದು ವರ್ಣಿಸಿದೆ. ಈ ಉಪಾಸನೆಯು ಅತ್ಯಂತ ಅಪೂರ್ವವಾದದ್ದೆಂಬುದರಲ್ಲಿ ಸಂಶಯವಿಲ್ಲ.

ಹೀಗೆ ಆದಿತ್ಯದೃಷ್ಟಿಯಿಂದ ಸ್ಪಪ್ತವಿಧಸಾಮೋಪಾಸನೆಯನ್ನು ಮಾಡುವಂತೆಯೇ ವಾಕ್‌ದೃಷ್ಟಿಯಿಂದಲೂ ಮಾಡಬಹುದಾಗಿದೆ. ಹಾಗೆಯೇ ಅತಿಮೃತ್ಯು ಸಾಮೋಪಾಸನೆ ಯೆಂದೂ ಮತ್ತೊಂದು ಬಗೆಯಿದೆ. ಮೃತ್ಯು ಎಂದರೂ ಆದಿತ್ಯನೇ. ಹಗಲು ರಾತ್ರಿಗಳ ರೂಪದಿಂದ ಅವನು ಜಗತ್ತನ್ನು ಕ್ಷಯಗೊಳಿಸುತ್ತಾನೆ. ಆದ್ದರಿಂದ ಆ ಮೃತ್ಯುವನ್ನು ದಾಟುವದಕ್ಕಾಗಿ ಅವನನ್ನು ಸಾಮರೂಪದಿಂದ ಚಿಂತಿಸುವ ವಿಧಾನವೂ ಇರುತ್ತದೆ. ಇನ್ನೂ ಮುಂದುವರೆದು ನೋಡಿದರೆ ಆದಿತ್ಯನೆಂಬ ಮೃತ್ಯುವು ಹನ್ನೆರಡು ತಿಂಗಳುಗಳು, ಐದು ಋತುಗಳು, ಮೂರು ಲೋಕಗಳು– ಹೀಗೆ ಇಪ್ಪತ್ತು ಎಂಬ ಸಂಖ್ಯೆಯನ್ನು ದಾಟಿ ಇಪ್ಪತ್ತೊಂದನೆಯದಾಗಿರುತ್ತಾನೆಂದು ಶ್ರುತಿಪ್ರಸಿದ್ಧಿಯಿದೆ. ಸಪ್ತಸಾಮೋಪಾಸನೆಯ ಫಲವು ಯಾವದೆಂದರೆ ಆದಿತ್ಯನಿಗಿಂತ ಆಚೆಗಿರುವ 'ನಾಕ'ವೆಂಬ ಲೋಕಪ್ರಾಪ್ತಿಯು. ಕ ಎಂದರೆ ಸುಖವು. ಅಕ ಎಂದರೆ ಸುಖವಲ್ಲದ್ದು–ಸುಖವಲ್ಲದ್ದೆಂಬುದಲ್ಲದ್ದು–ನಾಕವು ಎಂದರೆ ಸುಖವೇ ಸ್ವರ್ಗವೇ ಎಂದರ್ಥ. ಇಂಥ ಸ್ವರ್ಗಲೋಕವನ್ನು ಪಡೆದು ಅತಿಮೃತ್ಯು ಪದವಿಯನ್ನು ಸಪ್ತವಿಧ ಸಾಮೋಪಾಸಕನು ಹೊಂದುತ್ತಾನೆ– ಎಂದು ಇಲ್ಲಿ ತಿಳಿಸಿದೆ.

ವಾಚಕರೆ, ಈ ಸಪ್ತವಿಧಸಾಮೋಪಾಸನೆಯ ವಿಚಾರವು ತಮಗೆಲ್ಲ ಬೇಸರವನ್ನು ತಂದಿರಬಹುದು. ದಯವಿಟ್ಟು ಹಾಗೆ ಭಾವಿಸಬೇಡಿರಿ. ಸೂರ್ಯನ ಚಲನೆಯ ಫಲವಾದ ಕಾಲಗತಿಯನ್ನು ಯಾರೂ ತಿರಸ್ಕರಿಸುವಂತಿಲ್ಲ. ಅದೇ ನಮ್ಮ ಆಯುಷ್ಯವೆನಿಸುವದು. ಹಗಲುರಾತ್ರಿಗಳಂತೂ ಒಂದೇ ಸಮನೆ ಒಂದಾಗುತ್ತಲೊಂದು ಆಗುತ್ತಲೇ ಇವೆ. ಅವುಗಳಲ್ಲಿ ರಾತ್ರೆಯಲ್ಲಿ ಯಾವ ಉಪಾಸನೆಗಳೂ ಸಾಧ್ಯವಿಲ್ಲ. ಹಗಲನ್ನೇ ಆಶ್ರಯಿಸಿ ನಾವು ನಮ್ಮ ಆಯುಷ್ಯದ ಅಮೂಲ್ಯಕಾಲವನ್ನು ಸದ್ವಿನಿಯೋಗಮಾಡಿಕೊಳ್ಳಬೇಕಾಗಿದೆ. ಸೂರ್ಯೋದಯಕ್ಕೆ ಮುಂಚಿನಿಂದ ಹಿಡಿದು ಅವನು ಅಸ್ತಮಾನನಾಗುವವರೆಗಿನ ಏಳುಕಾಲಗಳಲ್ಲಿಯೂ ನಾವು ಭಗವಂತನ ಚಿಂತನೆಮಾಡಬೇಕು ಎಂಬುದೇ ಈ ಉಪಾಸನೆಯ ಅರ್ಥ. ಅದು ಹೆಚ್ಚಾಗಬಹುದೆಂತ ಭಾವಿಸಿ ಪೂರ್ವಿಕರು ತ್ರಿಕಾಲ (ಪ್ರಾತಃ, ಮಧ್ಯಾಹ್ನ, ಸಾಯಂ) ಗಳಲ್ಲಿ ಆದಿತ್ಯನನ್ನು ಚಿಂತಿಸುವ ಆಹ್ನಿಕಗಳನ್ನು ಏರ್ಪಡಿಸಿದ್ದಾರೆ. ಸಮಸ್ತಜೀವರುಗಳಿಗೂ ಸೂರ್ಯನೇ ದೇವರು. ಅವನೇ ಪ್ರತ್ಯಕ್ಷದೇವತೆಯು. ಆತನ ಕಿರಣಗಳ ಉಪಯೋಗವಂತೂ ನಾನಾವಿಧವಾಗಿದೆ. ಗರ್ಭದಲ್ಲಿರುವ ಪ್ರಾಣಿಗಳಿಂದ ಹಿಡಿದು ಮೃತರಾದ ಪಿತೃಗಳವರೆಗಿನ ಜೀವರುಗಳೆಲ್ಲರೂ ಆದಿತ್ಯಾಶ್ರಿತರಾಗಿಯೇ ಇರುತ್ತಾರೆಂದೂ ದೇವತೆಗಳು ಕೂಡ ಆದಿತ್ಯನೆಂಬ ಸವಿತೃಸ್ವರೂಪದಲ್ಲಿಯೇ ಅಡಕವಾಗಿದ್ದರೆಂದೂ ಸಾಮಗಳೆಲ್ಲ ಆದಿತ್ಯನ ಅವಯವಗಳೆಂದೂ ಈವರೆಗೆ ನಮಗೆ ತಿಳಿದುಬಂದಿದೆ. ಇಂಥ ವೇದಮಯನಾದ ಆದಿತ್ಯನನ್ನು ಯಾವ ರೀತಿಯಿಂದಲಾದರೂ ನಾವು ಶ್ರುತಿ–ಸ್ಮೃತಿ ಶಿಷ್ಟಾಚಾರಮಾರ್ಗಗಳಲ್ಲಿ ಒಂದರಿಂದ ಆರಾಧಿಸಬೇಕು. ಆದಿತ್ಯಾರಾಧನೆಯೇ ಮಾನವಜೀವನದ ಸಾರವೆಂದು ತಿಳಿಯಬೇಕು.

## ಗಾಯತ್ರಸಾಮೋಪಾಸನೆಯ ಫಲ

ಓಮ್ ॥ ಸ ಯ ಏವಮೇತದ್ ಗಾಯತ್ರಂ ಪ್ರಾಣೇಷು ಪ್ರೋತಂ ವೇದ ಪ್ರಾಣೀ ಭವತಿ ಸರ್ವಮಾಯುರೇತಿ ಜ್ಯೋಗ್ ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಮಹಾಮನಾಃ ಸ್ಯಾತ್ ತದ್ವ್ರತಮ್ ॥
2–11–2

ಭಾವಾರ್ಥ:– ಯಾವನು ಹೀಗೆಂದರಿತು ಪ್ರಾಣಗಳಲ್ಲಿ ಪ್ರೋತವಾಗಿರುವ ಈ ಗಾಯತ್ರವನ್ನು ಅರಿತುಕೊಂಡಿರುವನೋ ಅವನು ಪ್ರಾಣಿಯಾಗಿರುವನು, ಆಯುಸ್ಸೆಲ್ಲವನ್ನೂ ಹೊಂದುವನು, ಚೆನ್ನಾಗಿ ಬಾಳುತ್ತಾನೆ, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗುವನು; ಕೀರ್ತಿಯಿಂದಲೂ ದೊಡ್ಡವನಾಗಿರುವನು, ಮಹಾಮನಸ್ಕನಾಗಿರಬೇಕು. ಇದು ವ್ರತವು.

(ಸಾಮೋಪಾಸನೆಗಳಲ್ಲಿ ಗಾಯತ್ರಸಾಮೋಪಾಸನೆಯೆಂಬುದೊಂದುಂಟು. ಅದನ್ನು ಮಾಡಿದವನು ದೀರ್ಘಾಯುಷ್ಯಾದಿಫಲಗಳನ್ನು ಹೊಂದುವನು. ಕ್ಷುದ್ರಚಿತ್ತನಾಗಿರಲಾರನು– ಎಂದಭಿಪ್ರಾಯ.)

## 13. ಗಾಯತ್ರಾದಿಸಾಮೋಪಾಸನೆಗಳು

ಈಗ ಗಾಯತ್ರಾದಿಸಾಮೋಪಾಸನೆಗಳನ್ನು ಕುರಿತು ವಿವರಿಸಲಾಗುವದು. ಈ ಉಪಾಸನೆಗಳ ಅಂತರಂಗವೆಲ್ಲ ಪರಬ್ರಹ್ಮವೇ ಆಗಿದೆ. ಅದನ್ನೇ ಸಾಮೋಪಾಸನೆಗಳ ನೆಪದಲ್ಲಿ ವಿವರಿಸಲಾಗಿದೆ. ಪ್ರಕೃತದಲ್ಲಿ ಗಾಯತ್ರ, ರಥಂತರ, ವಾಮದೇವ, ಬೃಹತ್, ವೈರೂಪ, ವೈರಾಜ, ಶಕ್ವರೀ, ರೇವತೀ, ಯಜ್ಞಾಯಜ್ಞೀಯ, ರಾಜನ–ಎಂಬ ಹತ್ತು ಸಾಮೋಪಾಸನೆಗಳನ್ನು ಇಲ್ಲಿ ಒಟ್ಟಿಗೆ ವಿಚಾರಮಾಡಲಾಗುವದು. ಈ ಎಲ್ಲಾ ಹೆಸರಿನ ಸಾಮಗಳು ವೈದಿಕಕರ್ಮಗಳಲ್ಲಿ ಪ್ರಯುಕ್ತವಾಗಿರುವವು. ಈಗ ವೈದಿಕಕರ್ಮಗಳು ಹೆಚ್ಚು ಪ್ರಚಾರದಲ್ಲಿಲ್ಲವಾದ್ದರಿಂದ ಈ ಸಾಮಗಳ ಹೆಸರುಗಳು ಕೂಡ ಅಪರೂಪವಾಗಿಬಿಟ್ಟಿವೆ. ಆದರೆ ಬಹಳಮಟ್ಟಿಗೆ ಈ ಉಪಾಸನೆಗಳಿಗೆ ಪ್ರತ್ಯಕ್ಷವಾದ ಐಹಿಕಫಲಗಳನ್ನೇ ಹೇಳಿರುವದರಿಂದ ಫಲವನ್ನು ಬಯಸಿ ವ್ಯವಹಾರಮಾಡುವ ನಾವುಗಳು ಇಂಥ ಉಪಾಸನೆಗಳನ್ನು ಅರಿತು ಅನುಷ್ಠಿಸಿ ನೋಡಬಹುದಾಗಿದೆ. ಈ ದೃಷ್ಟಿಯಿಂದ ಈ ಉಪಾಸನೆಗಳ ಸಾಮಾನ್ಯವಿವರವನ್ನಾದರೂ ತಿಳಿದುಕೊಳ್ಳುವದು ಅಗತ್ಯವಾಗಿದೆ. ಕೆಲವು ವಿಷಯಗಳನ್ನು ಈಗ ತಮ್ಮ ಮುಂದಿಡುವೆನು.

ಗಾಯತ್ರಸಾಮವು ಈ ಪಟ್ಟಿಯಲ್ಲಿ ಮೊದಲನೆಯದಾಗಿದೆ. ಗಾಯತ್ರೀ ಛಂದಸ್ಸಿನ ಮಂತ್ರದ ಒಂದು ಸಾಮಗಾನವು ಗೊತ್ತಾದ ಒಂದು ವೈದಿಕಕರ್ಮದಲ್ಲಿ

ಪ್ರಯುಕ್ತವಾಗುತ್ತದೆ. ಇದನ್ನು ಎಂದಿನಂತೆ ಪಂಚವಿಧವಾಗಿ ಉಪಾಸನೆಮಾಡಬೇಕು; ಎಂದರೆ ಇದರ ಹಿಂಕಾರಾದಿವಿಭಾಗಗಳನ್ನು ಮನಸ್ಸೇ ಮುಂತಾದ ಐದು ವಸ್ತುಗಳಲ್ಲಿ ಚಿಂತಿಸಬೇಕು ಹೇಗೆಂದರೆ: ಮನಸ್ಸು ಈ ಗಾಯತ್ರಸಾಮದ ಹಿಂಕಾರವೆಂಬ ಭಕ್ತಿಯಾಗಿ ರುವದು–ಎಂದೂ, ಹಾಗೆಯೇ ಮುಂದುವರೆದು ವಾಕ್ಕನ್ನು ಪ್ರಸ್ತಾವವೆಂದೂ ಚಕ್ಷುಸ್ಸುಗಳನ್ನು ಉದ್ಗೀಥವೆಂದೂ ಶ್ರೋತ್ರಗಳನ್ನು ಪ್ರತಿಹಾರವೆಂದೂ ಪ್ರಾಣವನ್ನು ನಿಧನನೆಂದೂ ಚಿಂತಿಸಬೇಕು–ಎಂದು ತಿಳಿಸಲಾಗಿದೆ. ಇದೇ ಗಾಯತ್ರಸಾಮೋಪಾಸನೆ ಯೆನಿಸುತ್ತದೆ. ಇಂಥ ಸಾಮೋಪಾಸಕನು ಪ್ರಾಣದೇವತೆಯ ಅನುಗ್ರಹಕ್ಕೆ ಪಾತ್ರನಾಗುವನು. ಏಕೆಂದರೆ ಮುಖ್ಯಪ್ರಾಣವೇ ಚಕ್ಷುರಾದಿದ್ವಾರಗಳ ಮೂಲಕ ವ್ಯಾಪಾರ ಮಾಡುವದರಿಂದ ಕಿವಿ, ಮೂಗು–ಮುಂತಾದ ಇಂದ್ರಿಯಗಳೆಲ್ಲ ಪ್ರಾಣನ ಸ್ವರೂಪವೇ ಆಗಿರುವವು. ಆ ಪ್ರಾಣನು ಈ ಸಾಮೋಪಾಸಕನಿಗೆ ಪೂರ್ಣವಾದ ಆಯುಷ್ಯವನ್ನೂ ಬದುಕಿರುವವರೆಗೂ ಕೈಕಾಲು ಮುಂತಾದ ಅವಯವಗಳಿಗೆ ಶಕ್ತಿಸಾಮರ್ಥ್ಯಗಳನ್ನೂ ನೀಡುವನು. ಇಂಥವನು ಹೆಚ್ಚಿನ ಕೀರ್ತಿಶಾಲಿಯಾಗಿ ಬಾಳುವನು. ಪುತ್ರಪೌತ್ರರನ್ನು ಪಡೆದುಕೊಳ್ಳುವನು. ಹೀಗೆ ಈ ಉಪಾಸನೆಯು ದೃಷ್ಟಫಲಗಳನ್ನೇ ನೀಡುವದಾಗಿದೆ. ಆದರೆ ಇಂಥ ಉಪಾಸಕನು ಅನುಸರಿಸಬೇಕಾದ ವ್ರತ (ನಿಯಮ)ವೊಂದಿದೆ. ಅದೇನೆಂದರೆ: ಮಹಾಮನಸ್ಕನಾಗಿರಬೇಕು ಎಂದರೆ ಸಣ್ಣಬುದ್ಧಿಯವನಾಗಬಾರದು. ಈ ವ್ರತವನ್ನು ಮೀರಿದರೆ ಉಪಾಸನೆಯು ಸಿದ್ಧಿಸುವದಿಲ್ಲ ಎಂದು ತಿಳಿಸಿರುತ್ತದೆ.

ಈಗ ಉದಾಹರಣೆಗಾಗಿ ಮತ್ತೊಂದು ಸಾಮೋಪಾಸನೆಯನ್ನು ವಿಚಾರ ಮಾಡೋಣ. ರಾಜನಸಾಮವೆಂಬುದೊಂದಿದೆ. ಇದನ್ನು ಅಗ್ನಿ ಮುಂತಾದ ದೇವತೆಗಳಲ್ಲಿ ಅಳವಡಿಸಿಕೊಂಡು ಉಪಾಸನೆಮಾಡಬೇಕು. ಹೇಗೆಂದರೆ: ಅಗ್ನಿಯನ್ನು ಹಿಂಕಾರವೆಂದೂ ವಾಯುವನ್ನು ಪ್ರಸ್ತಾವವೆಂದೂ ಆದಿತ್ಯನನ್ನು ಉದ್ಗೀಥವೆಂದೂ ನಕ್ಷತ್ರಗಳನ್ನು ಪ್ರತಿಹಾರವೆಂದೂ ಚಂದ್ರನನ್ನು ನಿಧನವೆಂದೂ ಚಿಂತಿಸಬೇಕು. ಹೀಗೆ ರಾಜನಸಾಮದ ಭಕ್ತಿಗಳನ್ನು ಅಗ್ನ್ಯಾದಿದೇವತೆಗಳ ರೂಪದಲ್ಲಿ ಚಿಂತಿಸಿದರೆ ಎಲ್ಲಾ ದೇವತೆಗಳ ಅನುಗ್ರಹಕ್ಕೂ ಪಾತ್ರನಾಗುವನೆಂದು ಅಭಿಪ್ರಾಯ. ಉಳಿದ ದೀರ್ಘಾಯುಷ್ಯ, ಶರೀರಸೌಷ್ಠವ, ಪ್ರಜಾಪಶುವಿತ್ತಾದಿಗಳ ಪ್ರಾಪ್ತಿ–ಮುಂತಾದ ದೃಷ್ಟ ಫಲಗಳೂ ಆಗಿಯೇ ತೀರುವವು. ಈ ರಾಜನಸಾಮದ ಉಪಾಸಕನಿಗೆ ವ್ರತವೇನೆಂದರೆ ಬ್ರಾಹ್ಮಣರನ್ನು ನಿಂದಿಸ ಬಾರದು. ಏಕೆಂದರೆ ಈ ಭೂಮಿಯಲ್ಲಿ ಬ್ರಾಹ್ಮಣರನ್ನೇ ದೇವತೆಗಳೆಂದು ಸ್ತುತಿಸಲಾಗಿದೆ. ಆದ್ದರಿಂದ ಅಂಥವರನ್ನು ನಿಂದಿಸಬಾರದು. ವ್ರತವು ತಪ್ಪಿದರೆ ಉಪಾಸನೆಯು ಫಲಪ್ರದವಾಗುವದಿಲ್ಲ.

ಈಗ ಒಟ್ಟಿನಲ್ಲಿ ಸಾಮೋಪಾಸನೆಗಳ ತಿರುಳನ್ನು ವಿಚಾರಮಾಡೋಣ. ಹೆಚ್ಚಿನ ವಿವರಗಳು ಬೇಕಾದವರು ನೇರಾಗಿ ಉಪನಿಷತ್ತನ್ನೇ ಅಧ್ಯಯನಮಾಡಬೇಕು. ಪ್ರಕೃತದಲ್ಲಿ

ಸಾಮಗಳ ನೆಪದಿಂದ ನಿಜವಾಗಿ ಇಲ್ಲಿ ಬ್ರಹ್ಮದ ಉಪಾಸನೆಗಳನ್ನೇ ಹೇಳಿದೆ. ಬ್ರಹ್ಮವು ನಾನಾರೂಪದಿಂದ ಉಪಾಸಕರಿಗೆ ಉಪಾಸನೆಗಾಗಿಯೇ ಲಭ್ಯವಾಗಿರುತ್ತದೆ. ಅದರಲ್ಲಿ ದೇವತಾರೂಪವೂ ಪಂಚಭೂತಗಳ ರೂಪವೂ ಮುಖ್ಯವಾದುವು. ಮನುಷ್ಯರ ದೃಷ್ಟಿಯಿಂದ ದೇವತಾರೂಪಕ್ಕಿಂತ ಪಂಚಭೂತಗಳ ರೂಪವೇ ಹೆಚ್ಚು ಪರಿಚಿತವಾಗಿದೆ. ಕೆಲವು ದೇವತೆಗಳನ್ನು ನಾವು ನೋಡುವದು ದುರ್ಲಭವೇ ಸರಿ. ಆದ್ದರಿಂದ ನಮಗೆ ಗೋಚರವಾಗುವ ವಸ್ತುಗಳನ್ನೇ ದೇವತಾರೂಪದಿಂದ ಕಂಡುಕೊಳ್ಳಬೇಕು. ಇದೇ ಉಪಾಸನೆಯ ರಹಸ್ಯವಾಗಿದೆ. ಮನುಷ್ಯನಿಗೆ ದೇವತಾಭಾವನೆಯು ಆರೋಗ್ಯಕರ ವಾದುದು. ಆದ್ದರಿಂದ ಪ್ರತಿಯೊಬ್ಬ ವ್ಯಕ್ತಿಯೂ ಒಂದಲ್ಲ ಒಂದು ಉಪಾಸನೆಯನ್ನು ಅಳವಡಿಸಿಕೊಂಡು ಉಪಾಸಕನಾದರೆ ತನಗೂ ಜಗತ್ತಿಗೂ ಒಳ್ಳೆಯದನ್ನೇ ಸಾಧಿಸಿ ಕೊಂಡವನಾಗುತ್ತಾನೆ. ಹೀಗೆ ನಾನಾ ಉಪಾಸನೆಗಳನ್ನು ಕುರಿತು ವಿಚಾರ ಮಾಡುವದರಿಂದ ಯಾರಿಗೆ ಯಾವದು ಇಷ್ಟವಾಗಬಹುದೋ ಅಂಥದ್ದನ್ನು ಅನುಸರಿಸಲು ಅನುಕೂಲವಾಗುತ್ತದೆ. ಆದರೆ ಅದೇಕೋ, ಅಧ್ಯಾತ್ಮಸಾಧಕರಾದವರಿಗೆ ಕೂಡ ಉಪಾಸನೆ ಎಂದರೆ ಔದಾಸೀನ್ಯವಿರುತ್ತದೆ. ಇದು ಸರಿಯಲ್ಲ. ಯಾವನೊಬ್ಬನೂ ಮೊದಲು ಉಪಾಸಕನಾಗದೆ ಜ್ಞಾನಿಯಾಗಲಾರನು. ಉಪಾಸನೆಯೆಂಬುದು ಮಾನವನ ಅಂತಃಕರಣವನ್ನು ಏಕಾಗ್ರಗೊಳಿಸಿ ಉನ್ನತಮಟ್ಟಕ್ಕೆ ಒಯ್ಯತಕ್ಕದ್ದಾಗಿದೆ. ಅದು ಅಭ್ಯಾಸ ವಾದಂತೆಲ್ಲ ಮನುಷ್ಯನು ಅಂತರ್ಮುಖನಾಗುತ್ತಾನೆ. ಅಲ್ಲಿಯವರೆಗೆ ಉಪಾಸನೆಗಳಲ್ಲಿ ಅಭಿರುಚಿಯನ್ನುಂಟುಮಾಡುವದಕ್ಕಾಗಿ ಫಲಗಳನ್ನೂ ಕೀರ್ತನೆಮಾಡಿರುತ್ತದೆ. ದೃಷ್ಟಫಲಗಳನ್ನು ಹೇಳಿರುವದಂತೂ ಶ್ರುತಿಯು ನಮ್ಮ ಮೇಲೆ ಇಟ್ಟಿರುವ ಅಪಾರವಾದ ದಯೆಯ ಫಲವಾಗಿದೆ. ಆದ್ದರಿಂದ ಈಗ ಪ್ರಸ್ತಾಪಿಸಲ್ಪಟ್ಟಿರುವ ಗಾಯತ್ರಾದಿ–ರಾಜನಸಾಮೋಪಾಸನೆಗಳವರೆಗಿನ ವಿಷಯಕ್ಕೆ ಇನ್ನೂ ಸ್ವಲ್ಪ ವಿಚಾರಮಾಡೋಣ.

**ರಥಂತರವೆಂಬ** ಸಾಮವು ಅಗ್ನಿದೇವತೆಯಲ್ಲಿ ಹೆಣೆದುಕೊಂಡಿರುವದು. ಹೇಗೆಂದರೆ, ಅಗ್ನಿಯನ್ನು ಕಡೆಯುವದು, ಅನಂತರ ಅದು ಹೊಗೆಯಾಡುವದು, ಉರಿಯುವದು, ಕೆಂಡಗಳಾಗುವದು, ಆರುತ್ತಾಬರುವದು, ಪೂರ್ಣವಾಗಿ ತಣ್ಣಗಾಗು ವದು–ಈ ಐದು ಸ್ಥಿತಿಗಳನ್ನು ಕ್ರಮವಾಗಿ ಹಿಂಕಾರಾದಿಭಕ್ತಿಗಳಾಗಿ ಚಿಂತಿಸಬೇಕು. ಅಗ್ನಿಗೆ ಎದುರಾಗಿ ಉಗುಳುವದು, ಆಚಮನಮಾಡುವದು, ತಿನ್ನುವದು, ಉಗುಳುವದು–ಮುಂತಾದವನ್ನು ಮಾಡಬಾರದೆಂಬುದು ವ್ರತವು. ಹಾಗೆಯೇ ವಾಮದೇವವೆಂಬ ಸಾಮವು ಮಿಥುನ (ಕೂಡುವಿಕೆ)ದಲ್ಲಿ ಪ್ರೋತವಾಗಿದೆ. ಕಾಮಪ್ರೇರಿತಳಾಗಿ ಸಮಾಗಮವನ್ನು ಬಯಸಿ ಬಂದ ಸ್ತ್ರೀಯನ್ನು ನಿರಾಶೆಗೊಳಿಸಬಾರದು–ಎಂಬುದು ಇದಕ್ಕೆ ವ್ರತವು. ಇನ್ನು ಬೃಹತ್ಸಾಮವು ಆದಿತ್ಯನಲ್ಲಿ ಹೆಣೆದುಕೊಂಡಿದೆ. ಸೂರ್ಯನ ಹುಟ್ಟುವ ಸ್ಥಿತಿ, ಏರುವ ಸ್ಥಿತಿ, ಮಧ್ಯಾಹ್ನ ಕಾಲದ ರೂಪ, ಅಪರಾಹ್ನ, ಅಸ್ತಮಾನ–ಈ ಅವಸ್ಥೆಗಳನ್ನು ಹಿಂಕಾರಾದಿ ಭಕ್ತಿಗಳಲ್ಲಿ ಚಿಂತಿಸಬೇಕು. ಸೂರ್ಯನನ್ನು ನಿಂದಿಸಬಾರದೆಂಬುದು ಇದಕ್ಕೆ

ವ್ರತವು. ಇನ್ನು ವೈರೂಪಸಾಮವನ್ನು ನೋಡೋಣ. ಇದು ಪರ್ಜನ್ಯ (ಮಳೆ)ದಲ್ಲಿ ಹೆಣೆದುಕೊಂಡಿರುವದು. ಹೇಗೆಂದರೆ: ಮೋಡಗಳ ಒಟ್ಟುಗೂಡುವಿಕೆ, ಮೇಘವಾಗುವದು, ಮಳೆಗರೆಯುವದು, ಮಿಂಚುಗುಡುಗುಗಳಾಗುವದು, ನಿಲ್ಲುವದು—ಈ ಐದು ಸ್ಥಿತಿಗಳನ್ನೂ ವೈರೂಪಸಾಮದ ಹಿಂಕಾರಾದಿ ಭಕ್ತಿಗಳಲ್ಲಿ ಚಿಂತಿಸಬೇಕು. ಮಳೆಗರೆಯುವ ಮೋಡಗಳನ್ನು ನಿಂದಿಸಬಾರದೆಂಬುದು ವ್ರತವು. ವೈರಾಜಸಾಮವು ವಸಂತಾದಿ ಋತುಗಳಲ್ಲಿ ಹೆಣೆದುಕೊಂಡಿರುವದು, ಹೇಮಂತಶಿಶಿರಗಳನ್ನು ಒಂದುಗೂಡಿಸಿ ಐದು ಋತುಗಳನ್ನು ವೈರಾಜಸಾಮದ ಐದು ಭಕ್ತಿಗಳಲ್ಲಿ ಚಿಂತಿಸಬೇಕು. ಋತುಗಳನ್ನು ನಿಂದಿಸಬಾರದೆಂಬುದು ವ್ರತವು. ಇನ್ನು ಪೃಥಿವಿ, ಅಂತರಿಕ್ಷ, ದ್ಯುಲೋಕ, ದಿಕ್ಕುಗಳು, ಸಮುದ್ರ—ಈ ಐದರಲ್ಲಿ ಶಕ್ವರೀಸಾಮವು ಹೊಂದಿಕೊಂಡಿರುವದು. ಲೋಕಗಳನ್ನು ನಿಂದಿಸಬಾರದೆಂಬುದು ವ್ರತವು. ರೇವತೀಸಾಮವು ಆಡು, ಕುರಿ, ಗೋವುಗಳು, ಕುದುರೆಗಳು, ಮನುಷ್ಯರು—ಎಂಬ ಪ್ರಾಣಿಗಳಲ್ಲಿ ಹೊಂದಿಕೊಂಡಿರುವದು. ಪಶುಗಳನ್ನು ನಿಂದಿಸಬಾರದೆಂಬುದು ವ್ರತವು. ಮೈಗೂದಲು, ಚರ್ಮ, ಮಾಂಸ, ಮೂಳೆ, ಮಜ್ಜೆ—ಎಂಬ ಐದು ದೇಹಾವಯವಗಳಲ್ಲಿ ಯಜ್ಞಾಯಜ್ಞೀಯವೆಂಬ ಸಾಮವು ಹೆಣೆದುಕೊಂಡಿರುವದು. ಮಾಂಸ, ಮೀನು—ಗಳನ್ನು ತಿನ್ನಬಾರದೆಂಬುದು ಈ ಉಪಾಸನೆಗೆ ವ್ರತವು. ಹೀಗೆ ಈ ಎಂಟು ಸಾಮಗಳಿಗೂ ವಿವರವನ್ನು ತಿಳಿಯಬೇಕು. ಹಿಂದೆಯೇ ವರ್ಣಿಸಿರುವ ಗಾಯತ್ರ—ಹಾಗೂ ರಾಜನಸಾಮಗಳನ್ನು ಸೇರಿಸಿಕೊಂಡಲ್ಲಿ ಹತ್ತು ಸಾಮೋಪಾಸನೆಗಳಾಗಲಿವೆ.

ವಾಚಕರೆ, ಈ ಸಾಮೋಪಾಸನೆಗಳೆಲ್ಲವನ್ನೂ ಒಬ್ಬನೇ ಮಾಡಬೇಕೆಂದೇನೂ ನಿರ್ಬಂಧವಿರುವದಿಲ್ಲ. ಆದ್ದರಿಂದ ನಾವು ಈಗಿನ ಕಾಲಕ್ಕೆ ತಕ್ಕಂತೆ ಕೆಲವನ್ನು ಆರಿಸಿಕೊಂಡು ಅನುಷ್ಠಾನಮಾಡಬಹುದಾಗಿದೆ. ಮೊದಲನೆಯ ಸಾಮೋಪಾಸನೆಯಾದ ಗಾಯತ್ರವೊಂದೇ ಸಾಕು ಎಂದರೂ ತಪ್ಪಾಗಲಾರದು. ಏಕೆಂದರೆ ಅದು ಉಳಿದೆಲ್ಲವುಗಳಿಗಿಂತ ವಿಶಿಷ್ಟವಾಗಿದೆ. ಮನುಷ್ಯರೆಲ್ಲರಿಗೂ ಪ್ರಾಣವು ಪ್ರಧಾನವಾಗಿರುತ್ತದೆ. ಅದನ್ನು ಕಾಪಾಡಿಕೊಳ್ಳಲು ಎಲ್ಲರೂ ಕಡೆಯವರೆಗೂ ಹೋರಾಡುತ್ತಾರೆ. ಪ್ರಾಣವು ಗಟ್ಟಿ—ಎಂದು ಕಂಡುಬಂದಾಗ ಉಳಿದ ಕಣ್ಣು, ಕಿವಿ, ಮೂಗು—ಮುಂತಾದವುಗಳ ರಕ್ಷಣೆಗೆ ತೊಡಗುತ್ತಾರೆ. ಏಕೆಂದರೆ ಯಾವ ಇಂದ್ರಿಯವಿಲ್ಲವಾದರೂ ವ್ಯವಹಾರದಲ್ಲಿ ಕೊರತೆಯಾಗುತ್ತದೆ. ಅನಂತರ ಮನಸ್ಸಿನ ಕಡೆಗೆ ತಿರುಗುತ್ತಾರೆ. ಇದರಲ್ಲೇ ವಿದ್ಯಾ ಬುದ್ಧಿವಿವೇಕಶಮದಮಾದಿಗಳೆಲ್ಲ ಸೇರಿವೆ. ಆದ್ದರಿಂದ ಯಾವನಿಗೆ ಸಾತ್ತ್ವಿಕವೂ ಸುಸಂಸ್ಕೃತವೂ ಆದ ಮನಸ್ಸಿದ್ದು ಅದು ಅವನಿಗೆ ಇಹಪರಗಳಲ್ಲಿ ಸದ್ಗತಿಗೆ ಸಹಾಯಕವಾಗಿರುವದೋ ಅವನು ಗಾಯತ್ರಸಾಮದ ಅಧಿದೇವತೆಯಾದ ಪ್ರಾಣತತ್ತ್ವವನ್ನು ಕಂಡುಕೊಂಡವನಾಗುವನು. ಪ್ರಾಣನು (ವಾಯುವು) ಸರ್ವವ್ಯಾಪಿಯಾದಂತೆ ಅವನ ಮನಸ್ಸು ವಿಶಾಲವಾಗಿರುವದು. ಕಾರ್ಪಣ್ಯವು ಅಂಥವನಿಗೆ

ತೊಲಗಿರುವದು. ಮುಂದೆ ಅವನು ಬ್ರಹ್ಮವಿದನೇ ಆಗುವನು. ಇದಕ್ಕಿಂತ ಹೆಚ್ಚಿನದೇನಿದ್ದೀತು? ಆದ್ದರಿಂದ ಪರಂಪರೆಯಿಂದ ಬ್ರಹ್ಮಪ್ರಾಪ್ತಿಸಾಧನವಾಗಿರುವ ಈ ಸಾಮೋಪಾಸನೆಗಳನ್ನು ನಾವು ಯಥಾಯೋಗ್ಯವಾಗಿ ಕೈಗೊಂಡು ಕೃತಾರ್ಥರಾಗಬೇಕು.

---

## ಪ್ರಣವನಿಷ್ಠನಿಗೆ ಅಮೃತತ್ವ

**ಓಮ್॥ ತ್ರಯೋ ಧರ್ಮಸ್ಕಂಧಾ ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಃ ತಪ ಏವ ದ್ವಿತೀಯಃ ಬ್ರಹ್ಮಚಾರ್ಯಾಚಾರ್ಯಕುಲವಾಸೀ ತೃತೀಯಃ.....ಸರ್ವ ಏತೇ ಪುಣ್ಯಲೋಕಾ ಭವಂತಿ ಬ್ರಹ್ಮಸಂಸ್ಥೋ ಅಮೃತತ್ವಮೇತಿ॥ 2–23–1.**

ಭಾವಾರ್ಥ:– ಧರ್ಮಸ್ಕಂಧಗಳು ಮೂರು. ಯಜ್ಞ, ಅಧ್ಯಯನ, ದಾನ–ಎಂಬುದು ಒಂದನೆಯದು. ತಪಸ್ಸೇ ಎರಡನೆಯದು. ಅತ್ಯಂತವಾಗಿ ಆಚಾರ್ಯ ಕುಲದಲ್ಲಿ ವಾಸಮಾಡಿಕೊಂಡಿರುವದು ಮೂರನೆಯದು. ಇವರೆಲ್ಲರೂ ಪುಣ್ಯ ಲೋಕಗಳನ್ನು ಪಡೆಯುವರು. ಬ್ರಹ್ಮಸಂಸ್ಥನು ಅಮೃತತ್ವವನ್ನು ಪಡೆಯುವನು.

(ಯಜ್ಞಾದಿಗಳನ್ನು ಅನುಷ್ಠಾನಮಾಡುವ ಗೃಹಸ್ಥನಾಗಲಿ, ಕಾಡಿನಲ್ಲಿದ್ದುಕೊಂಡು ಗೃಹಸ್ಥಧರ್ಮಗಳನ್ನಾಚರಿಸುವ ವಾನಪ್ರಸ್ಥನಾಗಲಿ, ಗುರುಕುಲದಲ್ಲೇ ನೆಲೆನಿಂತು ಸೇವೆ ಮಾಡುವ ನೈಷ್ಠಿಕ ಬ್ರಹ್ಮಚಾರಿಯಾಗಲಿ– ಪುಣ್ಯಲೋಕವನ್ನು ಮಾತ್ರ ಪಡೆಯುವರು. ಪರಮಹಂಸನಾದರೊ, ಮೋಕ್ಷವನ್ನೇ ಹೊಂದುವನು–ಎಂದಭಿಪ್ರಾಯ.)

## 14. ಏಕತ್ವಜ್ಞಾನಿಯೇ ಬ್ರಹ್ಮಸಂಸ್ಥನು

ಛಾಂದೋಗ್ಯೋಪನಿಷತ್ತಿನಲ್ಲಿ ಈವರೆಗೆ ಸಾಮೋಪಾಸನೆಗಳನ್ನು ಹೇಳಿದ್ದಾಗಿದೆ. ಇನ್ನು ಮುಂದೆ ಓಂಕಾರೋಪಾಸನೆಯನ್ನು ವಿವರಿಸಲಾಗುವದು. ಅದಕ್ಕೆ ಪೀಠಿಕೆಯಾಗಿ 'ತ್ರಯೋ ಧರ್ಮಸ್ಕಂಧಾಃ' ಎಂಬ ಮಂತ್ರವು ಬಂದಿದೆ. ಈಗ ಈ ಮಂತ್ರಾರ್ಥ ವೇನೆಂಬುದನ್ನು ಅನುಸಂಧಾನಮಾಡೋಣ.

ಈಗಾಗಲೇ ಪ್ರಾರಂಭದಲ್ಲಿ ಒಮ್ಮೆ ಓಂಕಾರೋಪಾಸನೆಯನ್ನು ಈ ಉಪನಿಷತ್ತಿನಲ್ಲಿ ಪ್ರಸ್ತಾಪಿಸಿದೆ. ಆದರೆ ಅಲ್ಲಿ ಸಾಮಾವಯವವಾಗಿ ಓಂಕಾರವನ್ನು ಹೇಳಲಾಗಿತ್ತು. ಈಗಲಾದರೊ, ಸ್ವತಂತ್ರವಾಗಿ ಸ್ವಪ್ರಧಾನವಾಗಿಯೇ ಓಂಕಾರೋಪಾಸನೆಯನ್ನು ಹೇಳುವದಕ್ಕಾಗಿಯೂ ಅದರ ಫಲವಾದ ಮೋಕ್ಷವನ್ನು ತಿಳಿಸುವದಕ್ಕಾಗಿಯೂ ಮತ್ತೆ ಪ್ರಾರಂಭಿಸಲಾಗಿದೆ. ಬ್ರಹ್ಮಸಂಸ್ಥನೆಂದೇ ಓಂಕಾರೋಪಾಸಕನನ್ನು ಇಲ್ಲಿ ಹೆಸರಿಸಿದೆ. ಮತ್ತು

ಇಂಥ ಬ್ರಹ್ಮಸಂಸ್ಥನು ಪರಮಹಂಸಪರಿವ್ರಾಜಕನೇ ಆಗಿರಬೇಕೆಂದೂ ಉಳಿದ ಆಶ್ರಮಿಗಳು ಯಾರೂ ಬ್ರಹ್ಮಸಂಸ್ಥರಾಗಲಾರರೆಂದೂ ಪ್ರತಿಪಾದಿಸಲಾಗಿರುತ್ತದೆ. ಇಂಥ ಬ್ರಹ್ಮಸಂಸ್ಥನು ಪರಮಾರ್ಥೈಕತ್ವಜ್ಞಾನಿಯಾಗಿರಬೇಕೆಂಬುದು ತಿಳಿದೇ ಇದೆ.

ಈಗ ಉಪನಿಷತ್ತಿನ ಮಂತ್ರಾರ್ಥವನ್ನು ಮನನಮಾಡೋಣ. ಧರ್ಮಸ್ಕಂಧಗಳು ಮೂರು–ಎಂದು ಪ್ರಾರಂಭಿಸಲ್ಪಟ್ಟಿರುವ ಈ ವಾಕ್ಯದಲ್ಲಿ ಧರ್ಮಸ್ಕಂಧಗಳೆಂದರೆ ವಿಭಾಗಗಳು ಎಂದರ್ಥ. ಚೋದನಾರೂಪವಾದ ಧರ್ಮವು ವೇದಪ್ರಮಾಣಕವಾಗಿದ್ದು ವೇದದ ಕರ್ಮಕಾಂಡವೆಲ್ಲವೂ ಈ ಧರ್ಮದ ವ್ಯಾಖ್ಯಾನವಾಗಿದೆ. ಇದನ್ನು ಕೇವಲ ಅರಿತುಕೊಂಡರೆ ಸಾಲದು. ಹೇಗೆ ಪಾಕಶಾಸ್ತ್ರವನ್ನು (Home Science) ಓದಿ ಪದವೀಧರರಾದ ಮಾತ್ರದಿಂದ ಹಸಿವು ಹೋಗುವದಿಲ್ಲವೋ, ಅದು ಹೋಗಬೇಕಾದರೆ ಅಡುಗೆಯನ್ನು ಮಾಡಿಯೇ ಊಟಮಾಡಿಯೇ ತೃಪ್ತಿಯನ್ನು ಹೊಂದಬೇಕೋ ಹಾಗೆಯೇ ವೇದದ ಕರ್ಮಕಾಂಡಮಂತ್ರಗಳನ್ನು ಅಧ್ಯಯನಮಾಡಿದ್ದರಿಂದಾಗಲಿ, ಅವುಗಳ ಅರ್ಥ ಹಾಗೂ ಪ್ರಯೋಗಕ್ರಮಗಳನ್ನು ತಿಳಿದುಕೊಂಡದ್ದರಿಂದಾಗಲಿ ಫಲವು ದೊರಕುವದಿಲ್ಲ. ಆಯಾ ಕರ್ಮವನ್ನು ಮಾಡಿಯೇ ಅಭ್ಯುದಯಫಲಗಳನ್ನು ಲೋಕಾಂತರಗಳಲ್ಲಿ, ಕಾಲಾಂತರದಲ್ಲಿ ಪಡೆಯಬೇಕಾಗಿರುತ್ತದೆ ಆದ್ದರಿಂದ ಧರ್ಮಾನುಷ್ಠಾನಕ್ರಮವನ್ನು ವಿಭಾಗಮಾಡಿ ವರ್ಣಾಶ್ರಮಧರ್ಮಗಳೆಂದು ಹೆಸರಿಸಿ ಶಾಸ್ತ್ರದಲ್ಲಿ ವಿಧಿಸಲಾಗಿದೆ. ಇದರಲ್ಲಿ ಮೊದಲನೆಯದು ಯಜ್ಞ, ಅಧ್ಯಯನ, ದಾನ–ಎಂಬಿವುಗಳು. ಇವು ಬ್ರಹ್ಮಚರ್ಯ, ಗಾರ್ಹಸ್ಥ್ಯ–ಈ ಆಶ್ರಮಗಳ ಧರ್ಮವಿಭಾಗವಾಗಿವೆ. ಬ್ರಹ್ಮಚಾರಿಗೆ ಅಧ್ಯಯನವೇ ಪ್ರಧಾನವಾಗಿರುತ್ತದೆ. ಅದು ಪೂರೈಸಿದ ಅನಂತರ ಅವನು ಸಹಧರ್ಮಚಾರಿಣಿಯನ್ನು ಪಾಣಿಗ್ರಹಮಾಡಿಕೊಂಡು ಮುಂದೆ ಯಜ್ಞದಾನಗಳನ್ನು ಅಧ್ಯಯನದ ನೆರವಿನಿಂದ ಅನುಷ್ಠಿಸಬೇಕಾಗಿದೆ. ಇದು ಮೊದಲನೆಯದು.

ತಪಸ್ಸೆಂಬುದು ಧರ್ಮದ ಎರಡನೆಯ ಭಾಗವು. ಈ ತಪಸ್ಸು ಬಹಳಮಟ್ಟಿಗೆ ಶರೀರಪ್ರಧಾನವಾಗಿರುತ್ತದೆ. ವನವಾಸ, ಉಪವಾಸ, ನಿಯಮಗಳು, ವ್ರತಗಳು–(ಶರೀರವನ್ನು ಪೋಷಣೆಗಿಂತಲೂ ಶೋಷಣೆಗೇ ಒಳಪಡಿಸುವದು) ಈ ಕ್ರಮಗಳಿಂದ ಪಾಪವನ್ನು ಕಳೆದುಕೊಳ್ಳುವದು, ಅಂತಃಕರಣಶುದ್ಧಿಯನ್ನು ಸಂಪಾದಿಸಿಕೊಳ್ಳುವದು–ಇವೇ ಮುಂತಾದ ಪ್ರಯೋಜನವುಳ್ಳ ವಾನಪ್ರಸ್ಥಾಶ್ರಮವು ಧರ್ಮದ ಎರಡನೆಯ ಸ್ಕಂಧವಾಗಿರುತ್ತದೆ. ಈಗಿನ ಕಾಲಕ್ಕೆ ಇದು ಜಾರಿಯಲ್ಲಿಲ್ಲ, ಸಹಗಮನ, ವಿಧವಾಮುಂಡನಾದಿಗಳಂತೆ ಸಮಾಜದಿಂದ ಕಣ್ಮರೆಯಾಗಿರುತ್ತದೆ. ಕೆಲವು ಸ್ಮೃತಿಗಳಲ್ಲಿ ಕಲಿಯುಗಕ್ಕೆ ವಾನಪ್ರಸ್ಥಧರ್ಮವು ನಿಷಿದ್ಧವೆಂದೇ ಕಡುಬಂದಿದೆ. ಅವುಗಳ ಅಭಿಪ್ರಾಯವೇನೆಂದರೆ: ಭೋಗಾಸಕ್ತರೂ ಅಲ್ಪವೀರ್ಯರೂ ಮನಸ್ಸಿನ ಚಾಂಚಲ್ಯವು ಹೆಚ್ಚಾಗಿರುವವರೂ ಆದ ಕಲಿಯುಗದ ಜನರಿಗೆ ಈ ಕಠೋರನಿಯಮಗಳನ್ನು ಅನುಷ್ಠಿಸಲು ಸಾಧ್ಯವಾಗದಾದ್ದರಿಂದ

ಈ ಯುಗಕ್ಕೆ ಅದು 'ಬೇಡ'ವೆಂದು ತಿಳಿಸಲಾಗಿದೆ. ಇರಲಿ; ಈಗಿನ ಕಾಲಕ್ಕೆ ತಕ್ಕಂತೆಯಾದರೂ ವಾನಪ್ರಸ್ಥಧರ್ಮವನ್ನು ನಾವು ಏರ್ಪಡಿಸಿಕೊಳ್ಳಬೇಕು. ಇಲ್ಲವಾದರೆ ಅದರ ಪ್ರಯೋಜನವು ನಮಗೆ ಇಲ್ಲವಾಗುವದು. ಹೇಗೆಂದರೆ: ಐವತ್ತು ವರ್ಷಗಳ ಅನಂತರ ತಾನಾಗಿಯೇ ಮನುಷ್ಯನಿಗೆ ಭೋಗಗಳು ಬೇಸರವುಂಟುಮಾಡುತ್ತವೆ. ಹಲ್ಲುಗಳು ಬಿದ್ದುಹೋದ ಮೇಲೂ ಕಲ್ಲುಂಡೆಯನ್ನು ಕುಟ್ಟಿಕೊಂಡು ತಿಂದು ಅದು ಅರಗದೆ ಹೊಟ್ಟೆನೋವನ್ನನುಭವಿಸುವದು ಬೇಸರವಲ್ಲವೆ? ಹಾಗೆಯೇ ಉಳಿದ ಭೋಗಗಳ ವಿಷಯಕ್ಕೂ ತಿಳಿಯಬೇಕು. ಅದ್ದರಿಂದ ಭೋಗಸಾಮಗ್ರಿಗಳನ್ನು ಕಡಿಮೆಮಾಡಿಕೊಂಡು ಗದ್ದಲವಿಲ್ಲದ ಶಾಂತವಾದ ಸ್ಥಲದಲ್ಲಿ ಕುಳಿತು ಭಗವಚ್ಚಿಂತನೆಮಾಡುತ್ತಾ ಅತ್ಯಗತ್ಯವಾದಷ್ಟೇ ಆಹಾರವನ್ನು ಮಿತವಾಗಿ ತೆಗೆದುಕೊಳ್ಳುತ್ತಾ ಕಾಮಕ್ರೋಧಾದಿಗಳನ್ನು ಜಯಿಸಲು ಯತ್ನಿಸಿದರೆ ಸಾಕು. ಅದೇ ಈಗಿನ ಕಾಲಕ್ಕೆ ವಾನಪ್ರಸ್ಥಾಶ್ರಮಧರ್ಮವಾದೀತು. ಸಂಸಾರದಲ್ಲೇ ಇರಬೇಕಾಗಿಬಂದರೂ ಹೆಚ್ಚಾಗಿ ಅಂಟಿಕೊಳ್ಳದೆ ಉಪರತಿಯನ್ನು ಅಭ್ಯಾಸ ಮಾಡುತ್ತಿದ್ದರೆ ಸಾಕು. ವಾನಪ್ರಸ್ಥಧರ್ಮದ ಪ್ರಯೋಜನವು ದಕ್ಕಲಿದೆ. ಹೀಗೆ ತಪಃಪ್ರಧಾನವಾದ ಈ ಆಶ್ರಮವು ಎರಡನೆಯದು.

ನೈಷ್ಠಿಕಬ್ರಹ್ಮಚರ್ಯವೆಂಬುದು ಮೂರನೆಯದು. ಇದು ಕೂಡ ಕಲಿನಿಷೇಧಗಳಲ್ಲಿ ಒಂದಾಗಿದೆ. ಕೆಲವರು ಬಹಳಕಾಲ ಮದುವೆ ಮಾಡಿಕೊಳ್ಳದೆ ಆಯುಷ್ಯವನ್ನು ಸವೆಸುತ್ತಾ ತಾವು ನೈಷ್ಠಿಕಬ್ರಹ್ಮಚಾರಿಗಳೆಂದುಕೊಳ್ಳುತ್ತಾರೆ. ಇದು ಶಾಸ್ತ್ರಕ್ಕೆ ಒಪ್ಪಾಗಿರುವದಿಲ್ಲ. ನೈಷ್ಠಿಕಬ್ರಹ್ಮಚಾರಿಯು ಪ್ರತಿದಿನವೂ ವೇದಾಧ್ಯಯನಾದಿಗಳನ್ನು ಮಾಡುತ್ತಾ ಗುರುಕುಲದಲ್ಲಿಯೇ ಇದ್ದುಕೊಂಡು ಸೇವಾದಿಗಳಿಂದ ಇಡಿಯ ತನ್ನ ಜೀವನವನ್ನೆಲ್ಲ ಸವೆಯಿಸಿಬಿಡಬೇಕು. ಹಾಗಾದರೆ ಈ ಧರ್ಮಸ್ಕಂಧವು ಅರ್ಥಪೂರ್ಣವಾಗುತ್ತದೆ. ವೇದಾಧ್ಯಯನಾದಿಗಳಿಲ್ಲದ, ವಿವಾಹವಿಲ್ಲದ ಜೀವನವು ವ್ಯರ್ಥವೇ ಹೊರತು ಸಾರ್ಥಕವಲ್ಲ. ಅನಾಶ್ರಮಿಯಾಗಿ ಒಂದು ಕ್ಷಣವೂ ದ್ವಿಜನು ಇರಬಾರದೆಂದೇ ಸ್ಮೃತಿಗಳು ತಿಳಿಸುತ್ತಿವೆ.

ಈಗ ಈ ಮೂರಕ್ಕೂ ಫಲವೇನೆಂದು ವಿಚಾರಿಸೋಣ. ''ಸರ್ವ ಏತೇ ಪುಣ್ಯಲೋಕಾ ಭವಂತಿ'' ಎಂದಿಷ್ಟೇ ಉಪನಿಷತ್ತಿನಲ್ಲಿ ತಿಳಿಸಿದೆ. ಪುಣ್ಯಲೋಕಗಳೇನೋ ಈ ಮೂವರಿಗೂ ದೊರಕುತ್ತವೆ. ಆದರೆ ಪರಮಪುರುಷಾರ್ಥರೂಪವಾದ ಮೋಕ್ಷವು ಇವರುಗಳಿಗೆ ಇಲ್ಲ. ಏಕೆಂದರೆ ಜ್ಞಾನದಿಂದಲೇ ಮುಕ್ತಿಯುಂಟಾಗಬೇಕಾಗಿರುವದರಿಂದ ಕೇವಲ ಅನುಷ್ಠೇಯರೂಪವಾದ ಧರ್ಮದಿಂದ ಅದು ದೊರಕಲಾರದು-ಎಂದು ಶ್ರುತಿಯ ಅಭಿಪ್ರಾಯ. ಇಷ್ಟು ಮಾತ್ರದಿಂದ ಈ ಆಶ್ರಮಗಳು ಕಳಪೆಗಳೆಂದು ಎಂದಿಗೂ ತಿಳಿಯಬಾರದು. ರ್‍ಯಾಂಕ್ ವಿದ್ಯಾರ್ಥಿಯ ದೃಷ್ಟಿಯಿಂದ ಮೂರನೆಯ ದರ್ಜೆಯವನನ್ನು ಕೀಳೆಂದು ಹೇಳಬಹುದಾದರೂ ಪಾಸಾದವರದೃಷ್ಟಿಯಿಂದ ಅಂಥವನೂ ಹೇಗೆ

ಪದವೀಧರನೇ ಆಗಿರುವನೋ ಹಾಗೆ ಗೃಹಸ್ಥವಾನಪ್ರಸ್ಥನೈಷ್ಠಿಕಬ್ರಹ್ಮಚರ್ಯ ಧರ್ಮಾನುಷ್ಠಾನತತ್ಪರರೂ ಪುಣ್ಯಶೀಲರೇ ಆಗಿರುತ್ತಾರೆ. ಆದರೆ ಬ್ರಹ್ಮಸಂಸ್ಥನಿಗೆ ಇವರುಗಳು ಸಮಾನರಲ್ಲ– ಎಂದು ಮಾತ್ರ ತಿಳಿಯಬೇಕು. ಸಾಮಾನ್ಯಜನರ ದೃಷ್ಟಿಯಿಂದ ಸದ್ಗೃಹಸ್ಥರಾಗಲಿ, ಸಾಧುಸತ್ಪುರುಷರಾಗಲಿ, ಬ್ರಹ್ಮಚಾರಿಗಳಾಗಲಿ ಗೌರವಪಾತ್ರರೇ ಸರಿ. ಇಂಥವರು ಸಮಾಜಕ್ಕೆ ಆದರ್ಶರೂ ಹೌದು. ಆದರೆ ಪರಮಹಂಸಸನ್ಯಾಸಿಗಳಿಗೆ ಇವರು ಸಾಟಿಯಲ್ಲ ಇಷ್ಟು ಮಾತ್ರ ತಾತ್ಪರ್ಯವನ್ನು ಗ್ರಹಿಸಬೇಕು.

ಈಗ ಬ್ರಹ್ಮಸಂಸ್ಥನೆಂದರೆ ಯಾರು? ಎಂಬಿದನ್ನು ವಿಚಾರಿಸೋಣ. ಸಂಸ್ಥ ಎಂದರೆ ಸಮ್ಯಕ್ ಸ್ಥಿತಿ– ನೆಲೆನಿಂತವು. ಬ್ರಹ್ಮದಲ್ಲೇ ನೆಲೆನಿಂತವನೇ ಬ್ರಹ್ಮಸಂಸ್ಥನು. ಬ್ರಹ್ಮವೆಂಬ ಶಬ್ದಕ್ಕೆ ವೇದಗಳು, ಓಂಕಾರ, ಪರಬ್ರಹ್ಮ– ಈ ಎಲ್ಲಾ ಅರ್ಥವೂ ಹೊಂದುತ್ತದೆ. ಹಾಗೆಯೇ ಸಂನ್ಯಾಸಿಗೂ ಶಮ ದಮ– ಮುಂತಾದ ಸಾಧನಗಳಿರುವದರಿಂದ ಅವೂ ವೇದೋಕ್ತವೇ ಆಗಿರುವದರಿಂದ ವೈದಿಕಧರ್ಮಾನುಷ್ಠಾನತತ್ಪರನಾದ ಯಾವ ಆಶ್ರಮಿಯಾದರೂ ಬ್ರಹ್ಮಸಂಸ್ಥನಾಗಹುದಲ್ಲ! ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಶ್ರೀ ಶಂಕರಾಚಾರ್ಯರು ಸರ್ವಕರ್ಮಸಂನ್ಯಾಸಿಯಾದ ಪರಮಹಂಸಪರಿವ್ರಾಜಕನೊಬ್ಬನೇ ಬ್ರಹ್ಮಸಂಸ್ಥನೆಂದೂ ಉಳಿದವರಿಗೆ ಈ ವಿಶೇಷಣವು ಮುಖ್ಯಾರ್ಥದಲ್ಲಿ ಹೊಂದುವದಿಲ್ಲವೆಂದೂ ತಮ್ಮ ವಿಸ್ತಾರವಾದ ಭಾಷ್ಯಗ್ರಂಥಭಾಗದಲ್ಲಿ ತಿಳಿಸಿರುತ್ತಾರೆ. ಛಾಂದೋಗ್ಯಭಾಷ್ಯದಲ್ಲಿಯೂ ಬ್ರಹ್ಮಸೂತ್ರಭಾಷ್ಯದಲ್ಲಿಯೂ ಈ ವಿವರಗಳಿವೆ. ಆಸಕ್ತಿಯುಳ್ಳವರು ಆ ಭಾಷ್ಯಭಾಗಗಳನ್ನು ನೋಡಬಹುದು. ಮುಖ್ಯವಾಗಿ ಅವರ ಅಭಿಪ್ರಾಯವೇನೆಂದರೆ ಉಳಿದ ಆಶ್ರಮಗಳೆಲ್ಲ ಕರ್ಮ ಸಂಬಂಧವುಳ್ಳದ್ದಾಗಿವೆ. ಕರ್ಮವು ಎಂದಿಗೂ ನೇರಾಗಿ ಮೋಕ್ಷಸಾಧನವಲ್ಲ. ಅದಕ್ಕೆ ದ್ವೈತಬುದ್ಧಿಯು ಅವಶ್ಯವಾಗಿರುತ್ತದೆ. ಇಲ್ಲವಾದರೆ ಕರ್ಮಕಾಂಡವೇ ಪ್ರವರ್ತಿಸಲಾರದು. ಬ್ರಹ್ಮಸಂಸ್ಥನಿಗಾದರೊ, ದ್ವೈತಬುದ್ಧಿಯು ಅದ್ವಿತೀಯಬ್ರಹ್ಮಾತ್ಮಜ್ಞಾನದಿಂದ ಅಳಿಸಿಹೋಗಿರುತ್ತದೆ. ಹೀಗೆ ಇರುವಲ್ಲಿ ಜ್ಞಾನಿಗೆ ಕರ್ಮವನ್ನು ಅಂಟಿಸುವದು ಹೇಗಾದೀತು? ಆದ್ದರಿಂದ ಬ್ರಹ್ಮಸಂಸ್ಥನೆಂದರೆ ಸರ್ವಕರ್ಮಸಂನ್ಯಾಸಿಯಾದ ಪರಮಹಂಸನೇ ಸರಿ– ಎಂಬುದು ಅವರ ತೀರ್ಮಾನವಾಗಿರುತ್ತದೆ.

ಈಗ ಬ್ರಹ್ಮಸಂಸ್ಥನಿಗೂ ಓಂಕಾರೋಪಾಸನೆಗೂ ಸಂಬಂಧವೇನೆಂಬುದನ್ನು ವಿಚಾರ ಮಾಡೋಣ. ಶ್ರುತಿಯಲ್ಲಿ 'ಬ್ರಹ್ಮಸಂಸ್ಥೋ ಅಮೃತತ್ವಮೇತಿ' ಎಂದು ವಿಶೇಷವಾದ ಅಮೃತತ್ವಫಲವನ್ನು ಬ್ರಹ್ಮಸಂಸ್ಥನಿಗೇ ಹೇಳಿದೆ. ಉಳಿದ ಆಶ್ರಮಿಗಳಿಗೆ ಕೇವಲ ಪುಣ್ಯಲೋಕ ಪ್ರಾಪ್ತಿಯನ್ನು ಮಾತ್ರ ತಿಳಿಸಿದೆ. ಆದ್ದರಿಂದ ಬ್ರಹ್ಮಸಂಸ್ಥತ್ವವು ಪರಬ್ರಹ್ಮದ ನಿಷ್ಠೆಯಿಂದಲೇ ದೊರಕಬೇಕಾಗಿದೆ. ಪರಬ್ರಹ್ಮಕ್ಕೆ ಓಂಕಾರವು ಪ್ರತೀಕವೂ ಆಲಂಬನವೂ ಅಭಿಧಾನವೂ ಆಗಿರುತ್ತದೆ– ಎಂದರೆ ಪ್ರಣವದ (ಓಂಕಾರದ) ತಿರುಳು ಪರಬ್ರಹ್ಮವೇ. ಆಗ ಓಂಕಾರಸಂಸ್ಥನೆಂದರೂ ಬ್ರಹ್ಮಸಂಸ್ಥನೆಂದರೂ ಒಂದೇ

ಅರ್ಥವಾಗುತ್ತದೆ. ಜ್ಞಾನಿಯಾದ ಪರಮಹಂಸನ ದೃಷ್ಟಿಯಲ್ಲಿ ಬ್ರಹ್ಮವೆಂಬ ಶಬ್ದಕ್ಕಾಗಲಿ, ಓಂಕಾರವೆಂಬ ಶಬ್ದಕ್ಕಾಗಲಿ ಯಾವ ಅರ್ಥಭೇದವೂ ಇರುವದಿಲ್ಲ. ಅವನು ಬ್ರಹ್ಮಾನುಸಂಧಾನವನ್ನೇ ಸ್ವಭಾವವಾಗಿ ಹೊಂದಿದ್ದು ಯಾವಾಗಲೂ ಓಂ ಓಂ ಎಂದೇ ಚಿಂತಿಸುತ್ತಿರಬಹುದು. ಇದು ಪರಮಹಂಸನಿಗೆ ಮಾತ್ರವೇ ಸಾಧ್ಯ. ಉಳಿದವರಿಗಾದರೆ ಕರ್ಮಾದಿಗಳನ್ನು ಮಾಡುವಾಗ ಈ ಅನುಸಂಧಾನಕ್ಕೆ ವಿಚ್ಛೇದವು ಬರಲಿದೆ. ಸಂನ್ಯಾಸಿಗಳಿಗಾದರೆ ಯಾವ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವೂ ಇಲ್ಲವಾದ್ದರಿಂದ ಅವರು ನಿರಂತರವಾಗಿ ಓಂಕಾರನಿಷ್ಠರಾಗಿರಲು ಸಾಧ್ಯವಿದೆ. ಆಗ ಅವರು ಬ್ರಹ್ಮಸಂಸ್ಥರೇ ಆಗಿರಬೇಕಾಗುವದು. ಬ್ರಹ್ಮದ ಜ್ಞಾನದಿಂದಲೇ ಆತ್ಯಂತಿಕವಾದ ಮೋಕ್ಷವಾಗಬೇಕಾಗಿರುವದರಿಂದ 'ಅಮೃತತ್ವಮೇತಿ' ಎಂದು ಶ್ರುತಿಯು ಹೇಳಿದ್ದೂ ಸಾರ್ಥಕವಾಗಿರುತ್ತದೆ. ಹೀಗೆ ಬ್ರಹ್ಮನಿಷ್ಠ, ಪ್ರಣವನಿಷ್ಠ, ಬ್ರಹ್ಮಸಂಸ್ಥ–ಎಂಬೀ ಶಬ್ದಗಳೆಲ್ಲವೂ ಪರ್ಯಾಯಗಳಾಗಿದ್ದು ಸಂನ್ಯಾಸಿಗಳಿಗೇ ಓಂಕಾರೋಪಾಸನೆಯು ತಕ್ಕದ್ದಾಗಿರುವದು. ಜ್ಞಾನಿಯಲ್ಲದವನಿಗೆ ಅಥವಾ ಜ್ಞಾನಕ್ಕಾಗಿ ಇನ್ನೂ ಪ್ರಯತ್ನ ಮಾಡುತ್ತಿರುವವನಿಗೆ ಓಂಕಾರದ ಜಪವು ಅಮೃತತ್ವಕ್ಕೆ ಸಾಧನವಾಗಿರುತ್ತದೆ. ಅವನು ಓಂಕಾರ ಜಪಾನುಷ್ಠಾನ ಮಾಡುತ್ತಾ ಪ್ರಣವನಿಷ್ಠನಾದಂತೆಲ್ಲ ಅಮೃತತ್ವಕ್ಕೆ ಹತ್ತಿರನಾಗುತ್ತಾನೆ. ಆದ್ದರಿಂದ ಉಳಿದ ಆಶ್ರಮಿಗಳೂ ಜ್ಞಾನಕ್ಕಾಗಿ ಓಂಕಾರೋಪಾಸನೆಯನ್ನು ಕೈಗೊಳ್ಳಬಹುದೆಂದಾಗುತ್ತದೆ. ಹೀಗೆ ಎಲ್ಲಾ ರೀತಿಯಿಂದಲೂ ಬ್ರಹ್ಮಸಂಸ್ಥನೆಂಬ ಶಬ್ದವು ಓಂಕಾರೋಪಾಸಕನಾದ ಪರಮಹಂಸಪರಿವ್ರಾಜಕನಿಗೇ ವಾಚಕವೆಂದು ತಿಳಿಯಬೇಕು. ಬ್ರಹ್ಮಸಂಸ್ಥತೆಯು ಒಂದು ಆಶ್ರಮವಲ್ಲ, ಅದು ಧರ್ಮಸ್ಕಂಧಗಳನ್ನು ಮೀರಿದ್ದು–ಎಂದೂ ಅಭಿಪ್ರಾಯವನ್ನಿಟ್ಟುಕೊಳ್ಳಬೇಕು.

## ಓಂಕಾರವು ಸರ್ವಸಾರ

ಓಮ್ ॥ ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನ್ಯೇವಮ್ ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ ಓಂಕಾರ ಏವೇದಗ್‌ಂ ಸರ್ವಮ್ ॥

2–23–3.

ಭಾವಾರ್ಥ:– ಹೇಗೆ ಎಲೆಯ ನಾಳದಿಂದ ಎಲ್ಲಾ ಎಲೆಯ ಅವಯವಗಳೂ ವ್ಯಾಪಿಸಲ್ಪಟ್ಟಿವೆಯೋ ಹಾಗೆಯೇ ಓಂಕಾರದಿಂದ ಎಲ್ಲವೂ ವ್ಯಾಪಿಸಲ್ಪಟ್ಟಿದೆ. ಇದೆಲ್ಲವೂ ಓಂಕಾರವೇ.

(ವಾಕ್–ಎಂಬುದು ಅಕ್ಷರ–ಧ್ವನಿರೂಪಗಳಲ್ಲಿ ನಾನಾರೀತಿಯಾಗಿ ಹೊರಹೊಮ್ಮಿರುವದು. ಅದು ಓಂ ಎಂಬಿದರಲ್ಲಿಯೇ ಪೂರ್ಣವಾಗಿ ಅಡಕವಾಗಿರುವದು. ಆದ್ದರಿಂದ ವಾಕ್ಕೆಲ್ಲವೂ –ಎಲೆಯೆಲ್ಲವೂ ನಾರೇ ಎಂದಂತೆ–ಓಂಕಾರವೇ ಆಗಿರುವದು–ಎಂದಭಿಪ್ರಾಯ.)

## 15. ಓಂಕಾರೋಪಾಸನೆಯ ತತ್ತ್ವ

ಈವರೆಗೆ ಓಂಕಾರನಿಷ್ಠನಿಗೆ ಅಮೃತತ್ವಪ್ರಾಪ್ತಿಯಾಗುವದೆಂದೂ ಅವನೇ ಬ್ರಹ್ಮಸಂಸ್ಥನೆನಿಸುವನೆಂದೂ ತಿಳಿಸಿದ್ದಾಗಿದೆ. ಈಗ ಓಂಕಾರವು ಉತ್ಪತ್ತಿಯಾದುದು ಹೇಗೆ? ಅದರ ವೈಶಿಷ್ಟ್ಯವೇನು? ಎಂಬುದನ್ನು ತಿಳಿಸಿ ಓಂಕಾರೋಪಾಸನೆಯನ್ನು ವಿಧಿಸಲಾಗುವದು. ಆದಕ್ಕಾಗಿ ಒಂದು ಆಖ್ಯಾಯಿಕೆಯ ರೂಪದಲ್ಲಿ ವಿಷಯವನ್ನು ಪ್ರಸ್ತಾಪಿಸಲಾಗುತ್ತದೆ.

ಒಮ್ಮೆ ಪ್ರಜಾಪತಿಬ್ರಹ್ಮನು ತಾನೇ ಸೃಷ್ಟಿಸಿದ ಲೋಕಗಳ ಸಾರವನ್ನು ಕಂಡು ಹಿಡಿಯುವದಕ್ಕಾಗಿ ತಪಸ್ಸುಮಾಡಿದನು–ಎಂದರೆ ಅನ್ವಾಲೋಚನೆಯನ್ನು ಮಾಡಿದನು. ಲೋಕಗಳು ಎಂದರೆ ಸೃಷ್ಟಿಯಲ್ಲಿರುವ ಎಲ್ಲಾ ವಸ್ತುಗಳೂ ಸೇರುತ್ತವೆ. ಅವುಗಳಲ್ಲಿ ವಾಗ್ರೂಪವಾದ ಸೃಷ್ಟಿಯನ್ನು ಕುರಿತು ಧ್ಯಾನಮಾಡಿದನು. ಏಕೆಂದರೆ ವಸ್ತುಗಳೆಲ್ಲ ನಾಮಗಳಿಗೆ ಅಧೀನವಾಗಿವೆ. ಆಗ ಎಲ್ಲ ವಾಕ್ಕುಗಳ ಸಾರವಾಗಿ ವೇದಗಳು ಅವನಿಗೆ ದೊರಕಿದವು. ವೇದಗಳೆಂಬಿವು ನಿಜವಾಗಿ ಪ್ರಜಾಪತಿಯು ಮಾಡಿದ ಸೃಷ್ಟಿಗಳಲ್ಲ, ಸೃಷ್ಟಿಗೆ ಮುಂಚೆಯೇ ಅವು ಪರಮಾತ್ಮಸ್ವರೂಪವಾಗಿ ಅವನಲ್ಲಿಯೇ ಇದ್ದುಕೊಂಡಿದ್ದವು. ಭಗವಂತನೇ ಪ್ರಜಾಪತಿಗೂ ವೇದಗಳನ್ನು ಅನುಗ್ರಹಿಸಿರುತ್ತಾನೆ. ಆದ್ದರಿಂದ ವೇದಗಳನ್ನು ಪ್ರಜಾಪತಿಯು ತಾನು ಪಡೆದುಕೊಂಡಿದ್ದಂತೆ ಹೇಗೆ ಇದ್ದವೋ ಹಾಗೆಯೇ ಅವುಗಳನ್ನು ವಾಕ್ಕಿನ ಸಾರವೆಂದು ಗ್ರಹಿಸಿದನು–ಎಂದಭಿಪ್ರಾಯ. ಹೀಗೆ ವೇದಗಳು ಲೋಕಗಳ ಸಾರವೆಂದು ತಿಳಿದಾಗ ಪುನಃ ವೇದಗಳ ಸಾರವೇನಿರಬಹುದು? ಎಂದು ಧ್ಯಾನಮಾಡಿದನು. ಆಗ ಅವನಿಗೆ ಭೂಃ, ಭುವಃ, ಸುವಃ–ಎಂಬ ವ್ಯಾಹೃತಿಗಳು ಸಾರಭೂತವಾಗಿ ದೊರಕಿದವು. ಇವುಗಳಲ್ಲಿ ಋಗ್ವೇದದ ಸಾರವಾಗಿ ಭೂಃ ಎಂಬಿದೂ ಯಜುರ್ವೇದದ ಸಾರವಾಗಿ ಭುವಃ ಎಂಬಿದೂ ಸಾಮಾಥರ್ವಣವೇದಗಳ ಸಾರವಾಗಿ ಸುವಃ ಎಂಬಿದೂ ದೊರೆತವು. ಹೀಗೆ ಇಡಿಯ ವೇದಗಳೆಲ್ಲವೂ ಈ ಮೂರು ವ್ಯಾಹೃತಿಗಳಲ್ಲಿ ಅಡಕವಾಗಿವೆ–ಎಂದು ಅವನಿಗೆ ಗೊತ್ತಾಯಿತು. ಈಗಲೂ ಈ ವ್ಯಾಹೃತಿಗಳನ್ನು ವೇದಗಳ ಸಾರವೆಂದು ಬಲ್ಲವರು ಹೇಳುತ್ತಾರೆ. ಆದ್ದರಿಂದಲೇ ವೈದಿಕಕರ್ಮಗಳಲ್ಲಿ ಮಂತ್ರೋಚ್ಚಾರಣೆ, ಆಹುತಿಪ್ರದಾನ, ದೇವತಾಜ್ಞಾನ–ಮುಂತಾದ ವಿಷಯಗಳಲ್ಲಿ ಏನಾದರೂ ನ್ಯೂನಾತಿರೇಕ (ಹೆಚ್ಚುಕಡಿಮೆ)ಗಳಿದ್ದರೆ ಅವುಗಳನ್ನು ಸರಿಪಡಿಸುವದಕ್ಕಾಗಿ ಈ ವ್ಯಾಹೃತಿಹೋಮಗಳನ್ನು ಬಳಸುತ್ತಾರೆ. ಹೇಗೆ ಒಂದು ಪಾತ್ರೆಯು ತೂತುಬಿದ್ದಿದ್ದರೆ ಅದನ್ನು ಸೀಸದಿಂದ ಬೆಸೆಯುವರೋ ಹಾಗೆಯೇ ಕರ್ಮಾನುಷ್ಠಾನಗಳಲ್ಲಿ ಒದಗಬಹುದಾದ ರಂಧ್ರ (ತಪ್ಪು)ಗಳಿಗೆ ಬೆಸುಗೆಯಾಗಿ ಈ ವ್ಯಾಹೃತಿಜಪ–ಹೋಮಗಳನ್ನು ಅನುಷ್ಠಿಸುತ್ತಾರೆ. ಇದರಿಂದ ಕರ್ಮವು ಪರಿಪೂರ್ಣವಾಗುವದೆಂದೇ ಶಾಸ್ತ್ರದ ಹೇಳಿಕೆಯಿದೆ.

ಅನಂತರ ಪ್ರಜಾಪತಿಯು ಮತ್ತೆ ಈ ವ್ಯಾಹೃತಿಗಳ ಸಾರವನ್ನು ಕಂಡುಕೊಳ್ಳುವದಕ್ಕಾಗಿ ತಪಸ್ಸು ಮಾಡಿದನು. ಆಗ ಓಂ ಎಂಬೀ ಅಕ್ಷರವು ಇವುಗಳ ಸಾರವಾಗಿ ದೊರಕಿತು. ಹೀಗೆ ಇಡಿಯ ವಾಕ್ ಪ್ರಪಂಚದ ಸಾರವೇ ಓಂಕಾರವು ಎಂದು ಅವನಿಗೆ ಗೊತ್ತಾಯಿತು. ಓಂ ಎಂಬುದೇ ಎಲ್ಲಾ ವಾಕ್ಕುಗಳ ಸಾರವೆಂಬುದು ಹೇಗೆ? ಎಂಬುದನ್ನು ಉಪನಿಷತ್ತಿನಲ್ಲಿ ಒಂದು ಉದಾಹರಣೆಯಿಂದ ತಿಳಿಸಿದೆ. ಒಂದು ಅರಳಿ ಎಲೆಯನ್ನು ತೆಗೆದುಕೊಳ್ಳಿರಿ. ಅದರ ಮಧ್ಯದಲ್ಲಿ ಒಂದು ದಪ್ಪನಾದ ನಾರು ಬುಡದಿಂದ ತುದಿಯವರೆಗೂ ಹಾದುಹೋಗಿರುತ್ತದೆ. ಬುಡದಲ್ಲಿ ದಪ್ಪನಾಗಿದ್ದು ಮುಂದೆ ಅವಯವಗಳು ಎಲ್ಲಾ ಕಡೆಗೂ ಚೆದುರಿದಂತೆಲ್ಲ ಸೂಕ್ಷ್ಮವಾಗುತ್ತಾ ಹೋಗುತ್ತದೆ. ಇಷ್ಟೇ ಅಲ್ಲ, ಆ ನಾರಿನ ಅವಯವಗಳೇ ಇಡಿಯ ಎಲೆಯನ್ನೆಲ್ಲ ವ್ಯಾಪಿಸಿಕೊಂಡಿರುತ್ತವೆ. ನಾರನ್ನು ತೆಗೆದರೆ ಎಲೆಗೆ ಅಸ್ತಿತ್ವವೇ ಇರಲಾರದು. ಹಾಗೆಯೇ ಈ ಓಂಕಾರವು ಜಗತ್ತಿನ ಎಲ್ಲಾ ವಾಕ್ ಪ್ರಪಂಚವನ್ನೂ ವ್ಯಾಪಿಸಿಕೊಂಡಿರುವದು. ಸಂಗೀತಶಾಸ್ತ್ರದಲ್ಲಿ ಹೇಗೆ ಸಪ್ತಸ್ವರಗಳೇ ಎಲ್ಲಾ ರಾಗಗಳನ್ನೂ ಒಳಗೊಂಡಿರುವವೋ ಯಾವ ರಾಗವನ್ನು ಹಾಡಿದರೂ ಆ ಸ್ವರಗಳಲ್ಲಿಯೇ ಸಂಚಾರಮಾಡಬೇಕೋ ಹಾಗೆಯೇ ಓಂಕಾರವೆಂಬುದೇ ಎಲ್ಲಾ ಅಕ್ಷರಗಳಾಗಿಯೂ ಶಬ್ದಗಳಾಗಿಯೂ ಪದಗಳಾಗಿಯೂ ವಾಕ್ಯಗಳಾಗಿಯೂ ತೋರಿಕೊಂಡಿದೆ. ಇಂಥ ಓಂಕಾರವು ಪರಬ್ರಹ್ಮವೇ– ಎಂದು ಮತ್ತೆ ಹೇಳಬೇಕಾಗಿಲ್ಲವಷ್ಟೆ!

ಈಗ ಓಂಕಾರದ ಮಹಿಮೆಯನ್ನು ಮತ್ತಷ್ಟು ವಿಚಾರಮಾಡಿನೋಡೋಣ. ಓಂ ಎಂಬಿದರಲ್ಲಿಯೂ ಅ– ಉ– ಮ ಎಂಬ ಮೂರು ಅಕ್ಷರಗಳು ಕಂಡುಬರುತ್ತವೆ. ಆದ್ದರಿಂದ ಅವುಗಳ ಸಾರವೇನಿರಬಹುದು? ಎಂದು ವಿಚಾರಮಾಡುವದು ಯುಕ್ತವಾಗಿದೆ. ಇದಕ್ಕೆ ಶ್ರುತಿಯಲ್ಲಿ ಕೊಟ್ಟಿರುವ ಉತ್ತರವೇನೆಂದರೆ: 'ಅ' ಎಂಬಿದೇ ಇವುಗಳ ತಿರುಳಾಗಿದೆ. ಎಲ್ಲಾ ಅಕ್ಷರಗಳೂ ಮಾತುಗಳೂ ಅಕಾರದ ರೂಪಾಂತರಗಳೇ ಆಗಿವೆ. ಹೇಗೆಂದರೆ 'ಅ' ಎಂಬಿದನ್ನು ಉಚ್ಚರಿಸುವಾಗ ಸ್ಪರ್ಶ, ಊಷ್ಮ– ಮುಂತಾದ ಸ್ಥಾನ– ಪ್ರಯತ್ನಗಳ ವಿಶೇಷದಿಂದ ಅದೊಂದೇ ಬೇರೆಬೇರೆಯ ರೂಪದಿಂದ ವ್ಯಕ್ತವಾಗುತ್ತದೆ. ಹೀಗೆ ಬಹುವಾಗಿ ನಾನಾರೂಪವಾಗಿ ತೋರುವದೂ ಅಕಾರವೇ ಆಗಿದೆ. ಈ ಉತ್ತರವನ್ನು ನಾವು ಚೆನ್ನಾಗಿ ಮನನಮಾಡಬೇಕು. ಶಬ್ದಶಾಸ್ತ್ರಜ್ಞರ ಪ್ರಕ್ರಿಯೆಗಳನ್ನು ಸ್ವಲ್ಪವಾಗಿಯಾದರೂ ನಾವು ಪರಿಚಯಮಾಡಿಕೊಂಡು ಚಿಂತಿಸಿದರೆ ಈ ವಿಷಯವು ಅರ್ಥವಾಗಲಿದೆ. ಮತ್ತು ಅಕಾರವೆಂದರೆ ಕಾಗದದ ಮೇಲೆ ಬರೆಯುವ ರೇಖೆಯಲ್ಲ, ಏಕೆಂದರೆ ಅಕಾರದ ರೇಖಾವಿನ್ಯಾಸವು ಒಂದೊಂದು ಭಾಷೆಯಲ್ಲಿ ಒಂದೊಂದು ಬಗೆಯಾಗಿರುವದು. ಅದ್ದರಿಂದ 'ಅ' ಎಂಬಿದು ಕಂಠದಿಂದ ಹೊರಬೀಳುವ ಧ್ವನಿ ಎಂದು ತಿಳಿಯಬೇಕು. ಆ ಧ್ವನಿಯೇ ಮುಖದ ಒಳಗಿನ ಬೇರೆಬೇರೆಯ ಭಾಗಗಳಲ್ಲಿ ನಾಲಗೆ, ಹಲ್ಲು, ಮೂಗು, ದವಡೆ– ಇತ್ಯಾದಿಗಳ ಮೂಲಕ ಹೊರಬಿದ್ದಾಗ ಉಳಿದ ಅಕ್ಷರಗಳಾಗಿ

ಹೊರಬರುತ್ತದೆ. ಇದನ್ನು ಆಧಾರವಾಗಿಟ್ಟುಕೊಂಡೇ ಶ್ರುತಿಯು 'ಅಕಾರವೇ ಎಲ್ಲಾ ವಾಕ್ಕು' ಎಂದು ಹೇಳಿಧುತ್ತದೆ. ವರ್ಣಮಾಲೆಯ ಆದ್ಯಕ್ಷರವು ಅಕಾರವೇ ಆಗಿರುತ್ತದೆ. ಭಗವಂತನು ಕೂಡ ಗೀತೆಯಲ್ಲಿ 'ಅಕ್ಷರಗಳಲ್ಲಿ ಅಕಾರವು ನಾನು' ಎಂದು ವಿಭೂತ್ಯಧ್ಯಾಯದಲ್ಲಿ ತಿಳಿಸಿರುತ್ತಾನೆ. ಸಂಗೀತಗಾರರು ರಾಗಾಲಾಪನೆಯನ್ನು ಮಾಡುವಾಗ ಎಲ್ಲಾಸ್ವರಗಳನ್ನೂ ಧಾರಾಕಾರವಾಗಿ ಅ–ಆ–ಅ–ಎಂದೇ ಹಾಡುತ್ತಾರೆ. ಹೀಗೆ ಅಕಾರವು ಸರ್ವವ್ಯಾಪಿಯಾಗಿದೆ. ಮನುಷ್ಯನೂ ಪ್ರಾಣಿಗಳೂ ಹುಟ್ಟಿದಾಗ ಅಳುವದೂ ಕೂಗುವದೂ ಅಕಾರವೇ ಆಗಿದೆ. ಆದ್ದರಿಂದ ಓಂಕಾರವನ್ನು ಕೂಡ ಭಟ್ಟಿಯಿಳಿಸಿದರೆ 'ಅ' ಎಂದಾಗುತ್ತದೆ. ಇದೇ ಸಮಸ್ತಲೋಕಗಳ ಸಾರವು– ಎಂದು ತಿಳಿಯಬೇಕು.

ಈಗ ಓಂಕಾರದ ವೈಶಿಷ್ಟ್ಯವನ್ನು ಕುರಿತು ವಿಚಾರಮಾಡೋಣ. ಅ ಎಂಬಿದೇ ಪರಮಸಾರವಾಗಿ ವಾಕ್ಕುಗಳ ಅಮೃತವೆಂದು ಸಿದ್ಧವಾಯಿತಾದರೂ ವ್ಯವಹಾರದೃಷ್ಟಿಯ ಜನರಿಗೆ 'ಅ' ಎಂಬಿದು ಏನೆಂದು ಅರ್ಥವಾಗುವದಿಲ್ಲ. 'ಓಂ' ಎಂದರೆ ಅದರಲ್ಲಿ ಮೂರಕ್ಷರಗಳ ಸಂಯೋಗವಿದ್ದು ಧ್ವನಿವಿಶೇಷದಿಂದಲೂ ಆಕರ್ಷಕವಾಗಿಯೂ ಸ್ಥೂಲವಾಗಿಯೂ ಇರುವದರಿಂದ ಅಲ್ಲಿಂದಲೇ ಮುಂದಕ್ಕೆ ವಿಚಾರಮಾಡುವದು ಹಿತಕರವಾಗಿರುತ್ತದೆ. ಆದ್ದರಿಂದ ವೇದಗಳನ್ನೆಲ್ಲ ಓಂಕಾರದಿಂದಲೇ ಉಪಕ್ರಮಮಾಡ ಲಾಗುತ್ತದೆ. ವೇದದ ಕಡೆಯಲ್ಲಿಯೂ ಈ ಅಕ್ಷರವು ಪಠಿತವಾಗಿದ್ದು ಓಂಕಾರವೆಂಬ ಸಂಪುಟದಲ್ಲಿ ಅದು ಅಡಕವಾಗಿದೆ. ಲೌಕಿಕವ್ಯವಹಾರಕ್ಕೂ ಓಂ ಎಂಬುದು ಸಹಾಯಕವಾಗಿದೆ. ಹೇಗೆಂದರೆ ಯಜ್ಞದಲ್ಲಿ ಒಬ್ಬ ಋತ್ವಿಜನು 'ಸಾಮವನ್ನು ಗಾನಮಾಡಲೆ?' ಎಂದು ಕೇಳಿದರೆ ಓಂ ಎಂದೇ ಉಳಿದ ಋತ್ವಿಜರು ಉತ್ತರವನ್ನು ಕೊಡುವರು. 'ಆಗಬಹುದು– ಅನುಮತಿಯನ್ನು ನೀಡಲಾಗಿದೆ' ಎಂದೇ ಇದರ ಅರ್ಥ. ಕನ್ನಡದಲ್ಲಿ ಹೌದು (ಇದು ಹೂ–ಎಂದಾಗಿದೆ) ಎಂದು ಉಪಯೋಗಿಸುವಂತೆ ಸಂಸ್ಕೃತಭಾಷೆಯಲ್ಲಿ 'ಓಮಿತಿ ಬ್ರೂಮಃ' (ಹೌದು ಎನ್ನುತ್ತೇವೆ) ಎಂದೇ ಬಳಸುತ್ತಾರೆ. ಆದ್ದರಿಂದ ಲೌಕಿಕಕ್ಷೇತ್ರವನ್ನೆಲ್ಲವ್ಯಾಪಿಸಿಕೊಂಡ ಅನಂತರ ಓಂಕಾರವು ವೈದಿಕಕ್ಷೇತ್ರವನ್ನೂ ವ್ಯಾಪಿಸಿಕೊಳ್ಳುತ್ತದೆ. ಹೇಗೆಂದರೆ ಪ್ರತಿಯೊಂದು ಮಂತ್ರವೂ ಓಂಕಾರದಿಂದಲೇ ಪ್ರಾರಂಭವಾಗುವದು. ನಾಮಮಂತ್ರವಾಗಲಿ, ವೇದಮಂತ್ರವಾಗಲಿ ಜಪಮಾಡುವಾಗ ಓಂಕಾರವಿಶಿಷ್ಟವಾಗಿಯೇ ಉಚ್ಚರಿಸಲ್ಪಡುವದು. ಹೇಗೆ ಊಟಕ್ಕೆ ಬಡಿಸುವಾಗ ಮಾಡಿರುವ ಎಲ್ಲಾ ಪದಾರ್ಥಗಳನ್ನೂ ಬಡಿಸಿದಮೇಲೂ ತುಪ್ಪವನ್ನು ಹಾಕದೆ ಹೇಗೆ ಊಟವು ಆರಂಭವಾಗುವದಿಲ್ಲವೋ ಹಾಗೆಯೇ ಎಲ್ಲಾ ಮಂತ್ರಗಳಿಗೂ ಓಂಕಾರದ ಅಭಿಘಾರವು ಅಗತ್ಯವು. ತುಪ್ಪವು ತಾನೂ ಘಮಗುಟ್ಟುತ್ತಾ ಉಳಿದವುಗಳಿಗೂ ತನ್ನ ಕಂಪನ್ನು ನೀಡುವಂತೆ ಓಂಕಾರವು ಎಲ್ಲಾ ಮಂತ್ರಗಳಿಗೂ ತನ್ನ ಶಕ್ತಿಸಾಮರ್ಥ್ಯಗಳನ್ನು ನೀಡಿ ಚೇತನಗೊಳಿಸುತ್ತದೆ– ಎಂದು ತಿಳಿಯಬೇಕು.

ಈಗ ಓಂಕಾರವನ್ನು ಸಾರ್ವತ್ರಿಕವಾಗಿ ಬಳಸಬಹುದೆ? ಎಂಬಿದನ್ನು ವಿಚಾರಮಾಡಿ ತಿಳಿಯೋಣ. ಓಂ ಎಂಬುದು ವೇದಗಳ ಸಾರವಾದ್ದರಿಂದ ವೇದಾಧಿಕಾರವುಳ್ಳವರು ಮಾತ್ರವೇ ಅದನ್ನು ಜಪಿಸಲು ಹಾಗೂ ಉಚ್ಚರಿಸಲು ಅರ್ಹರು ಎಂದು ಸಾಂಪ್ರದಾಯಿಕರ ಅಭಿಪ್ರಾಯವಿದೆ. ಇದು ಸರಿಯಲ್ಲವೆಂದೂ ಎಲ್ಲರೂ ಓಂಕಾರವನ್ನು ಹೇಳಬಹುದೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಇಲ್ಲಿ ನಿಜವೇನೆಂದರೆ ಓಂ ಎಂಬಿದನ್ನು ಕೇವಲ ಶಬ್ದಮಾತ್ರವಾಗಿ ಚಿಂತಿಸುವಾಗ ಯಾರು ಬೇಕಾದರೂ ಅನುಸಂಧಾನಮಾಡಬಹುದು. ಆದರೆ ಅರ್ಥಾನುಸಂಧಾನದೃಷ್ಟಿಯಿಂದ ನೋಡಿದರೆ, ವೇದಗಳ ತಾತ್ಪರ್ಯವನ್ನೆಲ್ಲ ಓಂಕಾರದಲ್ಲಿ ಅಡಗಿಸಿಕೊಂಡು ಚಿಂತಿಸಬೇಕಾದರೆ ವೇದಾಧ್ಯಯನ ಅರ್ಥಾನುಸಂಧಾನಗಳನ್ನು ಮಾಡಿರುವ ಅಧಿಕಾರಿಯೇ ಆಗಬೇಕಾಗುತ್ತದೆ. ಉಳಿದವರಿಗೆ ಓಂಕಾರದ ರಹಸ್ಯವು ತಿಳಿಯಲಾರದು. ನಾಮಮಂತ್ರಗಳೊಡನೆಯೂ ಸಹ ಓಂಕಾರವನ್ನು ಸೇರಿಸಿ ಹೇಳುವಾಗ ಆಯಾನಾಮಗಳ ತಿರುಳೆಲ್ಲ ಓಂಕಾರದಲ್ಲಿಯೇ ಸೇರಿಹೋಗಿರುತ್ತದೆಯೆಂದು ಭಾವಿಸಬೇಕು. ಆಗ್ಗೆ ಸ್ವತಂತ್ರವಾಗಿ ಓಂ ಎಂಬಿದನ್ನು ಮಾತ್ರವೇ ಹೇಳುವದಕ್ಕಿಂತಲೂ ನಾಮಮಂತ್ರದೊಡನೆ ಹೇಳುವದು ಉತ್ತಮವೇ ಆಗಿರುತ್ತದೆ. ಇನ್ನೂ ವಿಚಾರಮಾಡಿದರೆ ಓಂ ಎಂಬಿದರ ತತ್ತ್ವವನ್ನು ನಾವು ಸರಿಯಾಗಿ ತಿಳಿದುಕೊಳ್ಳುವವರೆಗೆ ಅದರ ಪ್ರತಿನಿಧಿಯಾಗಿ ಶ್ರೀಃ ಎಂದು ಜಪಿಸಲೂಬಹುದು. ಒಂದು ಉದಾಹರಣೆಯಿಂದ ಇದನ್ನು ಸ್ಪಷ್ಟಗೊಳಿಸುವೆನು. ಚಿಕ್ಕ ಹೆಣ್ಣು ಮಕ್ಕಳಿಗೆ ಒಡವೆಗಳನ್ನು ಧರಿಸಬೇಕೆಂಬ ಆಶೆಯು ಸಹಜವಾಗಿರುತ್ತದೆ. ಒಡವೆಗಳಲ್ಲಿ ವಜ್ರದ ಒಡವೆಯು ಅತ್ಯಂತ ಬೆಲೆಬಾಳತಕ್ಕದ್ದೇ ಸರಿ. ಆದರೆ ಆ ತಿಳಿವಳಿಕೆಯು ಮಕ್ಕಳಿಗೆ ಇರುವದಿಲ್ಲ. ಆಸೆಯಂತೂ ಇದ್ದೇ ಇದೆ. ಅದಕ್ಕಾಗಿ ತಾಯಿತಂದೆಗಳು ತಮ್ಮ ಮಗುವಿಗೆ ವಜ್ರದಂತೆಯೇ ಹೊಳೆಯುವ ನಕಲಿಯ ಒಡವೆಗಳನ್ನು ಹಾಕುತ್ತಾರೆ. ಇದರಿಂದ ಮಕ್ಕಳ ಸಂತೋಷಕ್ಕೇನೂ ಕೊರತೆಯಾಗುವದಿಲ್ಲ. ಮತ್ತು ನಿಜವಾದ ಒಡವೆಯನ್ನೇ ಹಾಕಿದರೆ ಕಳ್ಳರ ಹಾಗೂ ಮೋಸಗಾರರ ಕಡೆಯಿಂದ ಮಕ್ಕಳಿಗೇ ಅಪಾಯವುಂಟು. ಆದ್ದರಿಂದ ಮಗುವಿನ ಹಿತದೃಷ್ಟಿಯಿಂದಲೇ ಈ ಬದಲಾವಣೆಯನ್ನು ಮಾಡುವಂತೆ ವಜ್ರಕ್ಕಿಂತಲೂ ಮೀರಿದ ಬೆಲೆಯುಳ್ಳ ಓಂಕಾರಜಪ– ಧ್ಯಾನಾದಿಗಳನ್ನು ನಾವು ಪರಮಹಂಸಸಂನ್ಯಾಸಿಗಳಿಗೇ ಬಿಟ್ಟು ಶ್ರೀಕಾರವನ್ನೇ ಸ್ವೀಕರಿಸುವದು ಪ್ರಾಪಂಚಿಕರ ದೃಷ್ಟಿಯಿಂದ ಯುಕ್ತವಾಗಿದೆ.

ಹೀಗೆ ಓಂಕಾರವು ಸರ್ವಸಾರವಾಗಿದ್ದು ಪ್ರಜಾಪತಿಬ್ರಹ್ಮನು ಮೂರು ಬಾರಿ ತಪಸ್ಸು ಮಾಡಿ ವಾಕ್ಕುಗಳ ತಿರುಳಾಗಿ ಕಂಡುಕೊಂಡ ತತ್ತ್ವವಾಗಿರುವದರಿಂದ ಭಗವಂತನ ಉಪಾಸನೆ ಹಾಗೂ ಜ್ಞಾನಕ್ಕೆ ಉಪಾಯವಾಗಿ ಇದನ್ನು ಶಾಸ್ತ್ರದ ಹೇಳಿಕೆಯಂತೆ ಬಳಸಬೇಕು. ಅರ್ಥರಹಿತವಾಗಿ ಉಪಯೋಗಿಸಬಾರದು. ಇಂಥ ಓಂಕಾರವು ಪರಮಮಂಗಳಸ್ವರೂಪವಾಗಿದ್ದು ಸಾಧಕನ ಆತ್ಮವೇ ಆಗಿದೆ–ಎಂಬುದನ್ನು ಮರೆಯಬಾರದು.

# ಮೂರನೆಯ ಅಧ್ಯಾಯ

## (ಕರ್ಮಫಲವಾದ ಆದಿತ್ಯೋಪಾಸನೆ–ಶಾಂಡಿಲ್ಯವಿದ್ಯೆ)

# ಆದಿತ್ಯನೆಂಬ ದೇವಮಧು

**ಓಮ್॥ ಅಸೌ ವಾ ಆದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನ ವಂಶೋ ಅನ್ತರಿಕ್ಷಮಪೂಪೋ ಮರೀಚಯಃ ಪುತ್ರಾಃ ॥ 3–1–1.**

ಭಾವಾರ್ಥ: –ಆ ಆದಿತ್ಯನೇ ದೇವಮಧು. ಅದಕ್ಕೆ ದ್ಯುಲೋಕವೇ ಅಡ್ಡಬಿದಿರು. ಅಂತರಿಕ್ಷವೇ ಜೇನುಹಟ್ಟಿಯು. ಮರೀಚಿಗಳೇ ಮರಿಗಳು.

(ಆದಿತ್ಯನನ್ನು ಮಧು–ಎಂದರೆ ಜೇನು ಎಂದು ಚಿಂತಿಸುವ ವಿದ್ಯೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಸೃಷ್ಟಿಯಲ್ಲಿರುವ ಪ್ರಾಣಿಗಳಲ್ಲೆಲ್ಲ ಉತ್ತಮೋತ್ತಮನಾದ ಹಾಗೂ ಎಲ್ಲರ ಕರ್ಮಗಳಿಗೂ ಫಲಭೂತನಾದ ಸೂರ್ಯನು ಮಧುವಿನಂತೆ ಎಲ್ಲರಿಗೂ ಪ್ರಿಯನಾಗಿರುತ್ತಾನೆ. ಅವನನ್ನು ದೇವತೆಗಳಾದಿಯಾಗಿ ಎಲ್ಲಾ ಜೀವರೂ ಆಶ್ರಯಿಸಿಕೊಂಡಿರುತ್ತಾರೆ. ಅವನ ಉಪಾಸನೆಯು ಜನರಿಗೆ ಶ್ರೇಯಸ್ಕರವು–ಎಂದು ಅಭಿಪ್ರಾಯ.)

# 16. ಆದಿತ್ಯೋಪಾಸನೆ–1

ಛಾಂದೋಗ್ಯೋಪನಿಷತ್ತಿನ ಮೂರನೆಯ ಅಧ್ಯಾಯದ ವಿಷಯಗಳನ್ನು ಈಗ ವಿಚಾರಕ್ಕೆ ತೆಗೆದುಕೊಳ್ಳಲಾಗುವದು. ನಿಜವಾಗಿಯೂ ಈ ಉಪನಿಷತ್ತು ಉಪಾಸಕರಿಗೆ ಕಾಮಧೇನುವಿನಂತಿರುವುದು. ಆಧಿದೈವಿಕೋಪಾಸನೆಗಳ ಪ್ರಕರಣದ ಆರಂಭದಲ್ಲಿ ಮೊದಲಿಗೆ ಆದಿತ್ಯೋಪಾಸನೆಯನ್ನೇ ಇಲ್ಲಿ ಪ್ರಸ್ತಾಪಿಸಲಾಗಿದೆ. ಹಿಂದಿನ ಅಧ್ಯಾಯಗಳಲ್ಲಿ ಸಾಮೋಪಾಸನೆಗಳನ್ನೂ ಓಂಕಾರೋಪಾಸನೆಯನ್ನೂ ಹೇಳಿ ಯಜ್ಞಗಳಿಗೆಲ್ಲ ಸಾಮಗಳ ಅವಶ್ಯಕತೆಯಿರುವದರಿಂದ ಅಂಥ ಸಾಮೋಪಾಸನೆಗಳ ಪೂರ್ವಕವಾಗಿ ಎಲ್ಲಾ ಯಜ್ಞಗಳನ್ನೂ ಮಾಡಿದ್ದರ ಫಲವಾಗಿ ಆದಿತ್ಯನಾಗಿ ಪ್ರಕಾಶಿಸುತ್ತಿರುವ ಸೂರ್ಯ ಭಗವಂತನು ಕರ್ಮಫಲಗಳ ಸಾಕ್ಷಿಯಾಗಿರುತ್ತಾನೆಂದೂ ಅವನ ಉಪಾಸನೆಯು ಸರ್ವ ಪುರುಷಾರ್ಥಗಳಿಗಿಂತಲೂ ಶ್ರೇಷ್ಠತಮವಾದ ಫಲವುಳ್ಳದ್ದು–ಎಂದೂ ತಿಳಿಸುತ್ತಾ ಆದಿತ್ಯೋಪಾಸನೆಯನ್ನು ಇಲ್ಲಿ ಪ್ರಾರಂಭಿಸಿದೆ ಎಂದು ಶ್ರೀ ಶಂಕರಾಚಾರ್ಯರು ಈ ಅಧ್ಯಾಯಾರಂಭದಲ್ಲಿ ತಿಳಿಸಿರುತ್ತಾರೆ.

ಈಗ ಆದಿತ್ಯನನ್ನು ದೇವಮಧುವೆಂದು ಉಪಾಸನೆಮಾಡುವ ಕ್ರಮವನ್ನು ವಿಚಾರಿಸೋಣ. ಮಧು ಎಂದರೆ ಜೇನು ಎಂದರ್ಥ. ನಮಗೆಲ್ಲ ಜೇನುತುಪ್ಪದ ರುಚಿಯು

ಚೆನ್ನಾಗಿ ತಿಳಿದಿದೆ. ಕವಿವಾಣಿಯನ್ನು ಜೇನಿಗೆ ಹೋಲಿಸುವದು ಪ್ರಸಿದ್ಧವಾಗಿದೆ. ಹಾಗೆಯೇ ಮಧುರವಾದ ಅನುಭವಗಳನ್ನೆಲ್ಲ ಜೇನೆಂದು ಕರೆಯುವದು ಲೋಕವಾಡಿಕೆಯಾಗಿದೆ. ಪಂಚಾಮೃತಗಳಲ್ಲಿ ಜೇನು ಸೇರಿರುವದು, ದೇವರಿಗೆ ಹಾಗೂ ಅತಿಥಿಗಳಿಗೆ ಪೂಜೆ ಮಾಡುವಾಗ ಮಧುಪರ್ಕವನ್ನು ಅರ್ಪಿಸುವದು, ಮಗು ಹುಟ್ಟಿದಾಗ ಜಾತಕರ್ಮ ಸಂಸ್ಕಾರದಲ್ಲಿ ಜೇನನ್ನು ನೆಕ್ಕಿಸುವದು, ಶ್ರಾದ್ಧದಲ್ಲಿ ಜೇನನ್ನೇ ಪ್ರತ್ಯೇಕವಾಗಿ ಬಡಿಸುವದು–ಇತ್ಯಾದಿಗಳೆಲ್ಲ ಜೇನಿನ ಶಾಸ್ತ್ರೀಯಕರ್ಮಗಳ ಸಂಬಂಧವನ್ನು ತಿಳಿಸುತ್ತವೆ. ಆಯುರ್ವೇದೀಯ ಔಷಧಗಳನ್ನು ಜೇನಿನ ಮೂಲಕ ಸೇವಿಸುವದು, ಲೇಹ, ಪ್ರಾಶ–ಮುಂತಾದವುಗಳಿಗೆ ಅದನ್ನು ಬಳಸುವದು, ಮುಂತಾದದ್ದು ಜೇನಿನ ಉಪಯೋಗವನ್ನು ನಮಗೆ ಮನವರಿಕೆಮಾಡಿಕೊಡುತ್ತದೆ. ಆದ್ದರಿಂದ ಜೇನನ್ನು ನೆನಪಿಟ್ಟು ಕೊಳ್ಳುವದು ಕಷ್ಟವೇನಲ್ಲ. ಹಾಗೆಯೇ ಆಧಿದೈವಿಕಸೃಷ್ಟಿಯಲ್ಲಿ ಆದಿತ್ಯನು 'ಮಧು'ವಾಗಿರುವನು. ದೇವತೆಗಳಿಗೂ ಆತನು ಪ್ರಿಯನಾಗಿದ್ದು 'ದೇವಮಧು'ವೆನಿಸಿರುವನು. ಇಂಥ ಆದಿತ್ಯಮಧುವಿಗೆ ದ್ಯುಲೋಕವೇ ಅಡ್ಡಬಿದಿರು–ಎಂದು ಚಿಂತಿಸಬೇಕು. ಜೇನುಗಳು ಗೂಡುಕಟ್ಟಬೇಕಾದರೆ ಏನಾದರೊಂದು ಆಲಂಬನವು ಬೇಕು. ಕಾಡುಗಳಲ್ಲಿ ಅವು ಬಿದಿರು ಮೆಳೆಗಳು ಹರಡಿರುವಲ್ಲಿ ಅಡ್ಡಲಾಗಿ ಬಾಗಿರುವ ಸ್ಥಳದಲ್ಲಿ ಗೂಡುಕಟ್ಟುತ್ತವೆಯಲ್ಲವೆ? ಅದೇ ರೂಪಕದಿಂದ ಆದಿತ್ಯನೆಂಬ ಮಧುವಿಗೆ ದ್ಯುಲೋಕವೇ ಅಡ್ಡಬಿದಿರಾಗಿದೆ–ಎಂದು ತಿಳಿಸಿದೆ. ದ್ಯುಲೋಕವು ಅಡ್ಡಲಾಗಿರುವಂತೆ ಎಂದರೆ ಅಡ್ಡಡ್ಡಲಾಗಿ ಹರಡಿಕೊಂಡಿರುವಂತೆ ನಮಗೆ ಕಾಣುತ್ತದೆಯಲ್ಲವೆ? ಆದಿತ್ಯನು ಅಲ್ಲಿ ತೂಗುಹಾಕಲ್ಪಟ್ಟಿರುವಂತೆ ತೋರುವದರಿಂದ ಆಕಾಶವೆಂಬ ಅಡ್ಡಬಿದಿರಿಗೆ ಜೋತುಬಿದ್ದಿರುವ ಜೇನಿನ ಗೂಡಿನಂತೆ ಆದಿತ್ಯನು ಕಂಡುಬರುತ್ತಾನೆಂದು ಭಾವಿಸಿಕೊಳ್ಳಬೇಕು. ಹಾಗೆಯೇ ಅಂತರಿಕ್ಷವು ಜೇನುಹಟ್ಟಿಯೆಂದು ಭಾವಿಸಬೇಕು. ಆಕಾಶವೆಂದರೆ ನೀಲವಾಗಿ ಸುತ್ತಲೂ ಅಡ್ಡಲಾಗಿ ಹರಡಿದಂತಿರುವ ದೃಶ್ಯವನ್ನೂ ಅಂತರಿಕ್ಷವೆಂದರೆ ಖಾಲಿ ಜಾಗವನ್ನೂ ಮನಸ್ಸಿಗೆ ತಂದು ಕೊಳ್ಳಬೇಕು. ಆಗ ಆದಿತ್ಯನು ಜೇನುಹಟ್ಟಿಯು ಅಡ್ಡಬಿದಿರಿಗೆ ನೇತುಬಿದ್ದಿರುವಂತೆ–ಅಂತರಿಕ್ಷದಲ್ಲಿ ಕಂಡುಬರುತ್ತಾನೆಂಬ ಕಲ್ಪನೆಯು ಸಮಂಜಸವಾಗುವದು. ಹೀಗೆ ಮಧುವಾಗಿರುವ ಸೂರ್ಯನಿಗೆ ಕಿರಣಗಳೇ ಮರಿಗಳು. ಇಲ್ಲಿ ಕಿರಣಗಳೆಂದರೆ ಅವುಗಳಿಂದ ಆದಿತ್ಯನು ಸೆಳೆದುಕೊಂಡ ನೀರು ಎಂದರ್ಥ. ಅಂತರಿಕ್ಷವೆಂಬ ಹಟ್ಟಿಯಲ್ಲಿ ನೀರುಗಳು ಇರುವದರಿಂದ ಜೇನಿನ ಗೂಡಿನಲ್ಲಿ ಮರಿಗಳಿದ್ದಂತೆ–ಎಂದಾಗುತ್ತದೆ. ಹೀಗೆ ಜೇನಿನ ಕಲ್ಪನೆಯನ್ನು ಆಧಿದೈವಿಕಪ್ರಪಂಚಲ್ಲಿ ವಿರಾಜಮಾನನಾಗಿರುವ ಸೂರ್ಯನಲ್ಲಿ ಮಾಡುತ್ತಾ ಆದಿತ್ಯೋಪಾಸನೆಯನ್ನು ಕೈಗೊಳ್ಳಬೇಕು–ಎಂದು ಶ್ರುತಿಯು ತಿಳಿಸಿರುತ್ತದೆ.

ಆದಿತ್ಯೋಪಾಸನೆಯ ಇನ್ನೂ ಕೆಲವು ವಿಚಾರಗಳನ್ನು ಈಗ ಮನನಮಾಡೋಣ. ಸೂರ್ಯನ ಪೂರ್ವದಿಕ್ಕಿನ ರಶ್ಮಿಗಳಿವೆಯಲ್ಲ, ಅವು ಪೂರ್ವದ ಮಧುನಾಡಿಗಳು. ಅಲ್ಲಿ

ಮಧುವನ್ನು ಉತ್ಪತ್ತಿಮಾಡುವ ಋಕ್ಕುಗಳು–ಭ್ರಮರಗಳು (ದುಂಬಿಗಳು) ಸಂಚರಿಸಿ ಮಧುರಸವನ್ನು ಕೂಡಿಸುವಂತೆ ದುಂಬಿಗಳ ಸ್ಥಾನದಲ್ಲಿರುವ ಋಕ್ಕುಗಳೇ– ರಸೋತ್ಪತ್ತಿಯನ್ನು ಮಾಡುವವು. ದುಂಬಿಗಳು ರಸಸಂಗ್ರಹಮಾಡಲು ಹೂವುಗಳು ಬೇಕಾಗಿರುವಂತೆಯೇ ಇಲ್ಲಿಯೂ ಋಗ್ವೇದವೆಂಬುದೇ ಹೂವು–ಎಂದು ತಿಳಿಯಬೇಕು. ಸೂರ್ಯನ ಪೂರ್ವದಿಕ್ಕಿನ ರಶ್ಮಿಗಳು ಋಗ್ವೇದವಿಹಿತವಾದ ಕರ್ಮಗಳನ್ನು ಹೀರಿದ್ದರಿಂದ ಮಧುರಸವು ಉತ್ಪತ್ತಿಯಾಯಿತು–ಎಂದರ್ಥ. ಆ ರಸವೇ ಯಶಸ್ಸು, ವೀರ್ಯ, ತೇಜಸ್ಸು, ಅನ್ನಾದ್ಯಗಳೆಂಬ ರೂಪದಿಂದ ಜಗತ್ತಿಗೆ ಲಭಿಸಿತು. ಇದೇ ರೀತಿಯಾಗಿ ಸೂರ್ಯನ ದಕ್ಷಿಣದಿಕ್ಕಿನ ರಶ್ಮಿಗಳು ಯಜುರ್ವೇದವೆಂಬ ಹೂವನ್ನು–ಎಂದರೆ ಕರ್ಮವನ್ನು ಹೀರಿಕೊಂಡಾಗಲೂ ಯಶ ಆದಿ ರಸಗಳು ಹೊರಬಂದವು. ಅನಂತರ ಪಶ್ಚಿಮದಿಕ್ಕಿನ ರಶ್ಮಿಗಳು ಸಾಮವೇದಪುಷ್ಪವನ್ನು ಆಘ್ರಾಣಮಾಡಿದ್ದರಿಂದ ಅ ಮೂಲದಿಂದಲೂ ಯಶ ಆದಿ ರಸಗಳು ಹೊರಬಿದ್ದವು. ಹಾಗೆಯೇ ಆದಿತ್ಯನ ಉತ್ತರದಿಕ್ಕಿನ ರಶ್ಮಿಗಳು ಅಥರ್ವವೇದ–ಇತಿಹಾಸಪುರಾಣಾದಿ ಪುಷ್ಪಗಳನ್ನು ಸೇವಿಸಲಾಗಿ ಅಲ್ಲಿಂದಲೂ ಮಧುರಸವು ಉತ್ಪತ್ತಿಯಾಯಿತು. ಈ ರೀತಿಯಾಗಿ ಆದಿತ್ಯನ ಇಡಿಯ ಶರೀರವೇ ವೇದರಸಮಯವಾಗಿದ್ದು ವೇದೋಕ್ತಕರ್ಮಗಳ ಸಾರವೂ ಪ್ರಪಂಚದ ತಿರುಳೂ ಆಗಿ ಮಧುವೆನಿಸಲು ಯೋಗ್ಯವಾಗಿದೆ. ಇನ್ನು ಆದಿತ್ಯನ ಊರ್ಧ್ವಮುಖವಾದ ರಶ್ಮಿಗಳು ಸಹ ಗುಹ್ಯವಿದ್ಯೆಗಳಾದ ಉಪನಿಷದಾದಿಪುಷ್ಪಗಳನ್ನು ಸೇವಿಸಿದ್ದರಿಂದ ಅಲ್ಲಿಯೂ ರಸೋತ್ಪತ್ತಿಯಾಯಿತು.

ಆದಿತ್ಯನನ್ನು ಆಶ್ರಯಿಸಿ ತೃಪ್ತಿಯನ್ನು ಹೊಂದುತ್ತಿರುವ ದೇವತೆಗಳು ಯಾರು? ಎಂಬಿದನ್ನು ಈಗ ನೋಡೋಣ. ಮೊದಲನೆಯ ರಸದಿಂದ ಎಂದರೆ ಅಮೃತದಿಂದ ವಸುಗಳು ಎಂಬವರು ತೃಪ್ತರಾಗುತ್ತಾರೆ. ಹಾಗಾದರೆ ದೇವತೆಗಳ ಪಾನದಿಂದ ಆದಿತ್ಯನು ಸವೆದುಹೋಗಬೇಕಲ್ಲವೆ? ಎಂದರೆ ಹಾಗಲ್ಲ. ದೇವತೆಗಳಿಗೆ ಪಾನ–ಎಂದರೆ ನಾವು ಹಾಲು ಮುಂತಾದದ್ದನ್ನು ಕುಡಿಯುವಂತೆ ಗಂಟಲಿಗೆ ಸುರಿದುಕೊಳ್ಳುವದಲ್ಲ. ಮತ್ತೇನೆಂದರೆ ನೋಡುವದು ಮಾತ್ರ. ಹಾಗೆ ನೋಡಿದ್ದರಿಂದಲೇ ಅವರು ತೃಪ್ತರಾಗಿಬಿಡುವರು. ಆದ್ದರಿಂದಲೇ ದೇವರಿಗೆ ನೈವೇದ್ಯಸಮರ್ಪಣೆ ಎಂದರೆ ತೋರಿಸುವದು ಮಾತ್ರ ಅಷ್ಟರಿಂದಲೇ ದೇವತೆಗಳ ಭೋಜನವು ಪೂರೈಸುತ್ತದೆ. ಹೀಗೆ ವಸುದೇವತೆಗಳಿಗೆ ಆದಿತ್ಯನ ಪೂರ್ವದಿಕ್ಕಿನ ರಶ್ಮಿಕೃತವಾದ ಅಮೃತವು ಆಹಾರವಾಗಿರುತ್ತದೆ. ಈ ರಶ್ಮಿಗಳು ಪ್ರಾತಃಕಾಲದಲ್ಲಿ ಮಾತ್ರ ಇರುವವಾದ್ದರಿಂದ ವಸುದೇವತೆಗಳಿಗೆ ಬೆಳಗಿನ ವೇಳೆಯಲ್ಲಿ ಮಾತ್ರವೇ ಭೋಜನವು ದೊರಕುತ್ತದೆ. ಅಗ್ನಿಯಮೂಲಕ ಇದು ಅವರಿಗೆ ಲಭ್ಯವಾಗಿದೆ. ಹೀಗೆಂದು ಯಾವನು ಆದಿತ್ಯನನ್ನು ಉಪಾಸನೆಮಾಡುವನೋ ಅವನಿಗೆ ವಸುಲೋಕಪ್ರಾಪ್ತಿಯೂ ಸ್ವಾರಾಜ್ಯವೂ ದೊರಕುವದು. ಸೂರ್ಯನು ಎಲ್ಲಿಯವರೆಗೆ

ಉದಯಾಸ್ತಮಯಗಳನ್ನು ಹೊಂದುತ್ತಿರುವನೋ ಅಷ್ಟುಕಾಲವೂ ಉಪಾಸಕನು ಫಲವನ್ನನುಭವಿಸುವನು–ಎಂದರ್ಥ. ಇದರಂತೆಯೇ ಆದಿತ್ಯನ ದಕ್ಷಿಣದಿಕ್ಕಿನ ರಸಾಮೃತವು ಎರಡನೆಯದಾಗಿದ್ದು ರುದ್ರರೆಂಬ ದೇವತೆಗಳು ಈ ಅಮೃತವನ್ನು ಪಾನಮಾಡುವರು. ಇಂದ್ರನ ಮೂಲಕ ಈ ಅಮೃತವು ರುದ್ರರಿಗೆ ದೊರಕುವದು. ಉಳಿದ ವಿವರಗಳನ್ನು ಹಿಂದಿನಂತೆಯೇ ತಿಳಿಯಬೇಕು. ಯಾವನು ಆದಿತ್ಯನ ದಕ್ಷಿಣದಿಕ್ಕಿನ ರಸಾಮೃತವು ರುದ್ರರ ಆಹಾರವೆಂದು ಚಿಂತಿಸುವನೋ ಅವನಿಗೆ ರುದ್ರಲೋಕ ಪ್ರಾಪ್ತಿಯೂ ಸ್ವಾರಾಜ್ಯವೂ ದೊರಕುವದು. ಹಾಗೆಯೇ ಸೂರ್ಯನ ಪಶ್ಚಿಮರಶ್ಮಿಗಳಿಂದ ಸಿದ್ಧವಾದ ಅಮೃತವು ಮೂರನೆಯದಾಗಿದ್ದು ಅದನ್ನು ಆದಿತ್ಯರೆಂಬ ದೇವತೆಗಳು ಆಶ್ರಯಿಸಿಕೊಂಡಿರುವರು. ಅದಿತಿಯ ಮಕ್ಕಳೆಲ್ಲರೂ ಆದಿತ್ಯರೆನಿಸುವರು. ವರುಣನ ಮೂಲಕ ಈ ರಸವು ಅವರಿಗೆ ದೊರಕುವದು. ಹೀಗೆಂದು ಚಿಂತಿಸವವನಿಗೆ ಆದಿತ್ಯಸಾಯುಜ್ಯಪ್ರಾಪ್ತಿಯೆಂಬ ಫಲವಾಗುವದು. ಮುಂದುವರೆದು ವಿಚಾರಿಸಿದರೆ ಆದಿತ್ಯನ ಉತ್ತರರಶ್ಮಿಗಳ ಫಲವಾದ ಅಮೃತವು ನಾಲ್ಕನೆಯದಾಗಿದ್ದು ಅದನ್ನು ಮರುತ್ತರು ಉಪಜೀವಿಸಿಕೊಂಡಿರುವರು. ಇವರಿಗೆ ಚಂದ್ರನ ಮೂಲಕ ಅಮೃತವು ದೊರಕುವದು. ಹೀಗೆಂದು ಚಿಂತಿಸುವವನಿಗೆ ಮರುತ್ತರಲೋಕಪ್ರಾಪ್ತಿಯಾಗುವದು. ಊರ್ಧ್ವಮುಖ ವಾದ ಐದನೆಯದಾದ ರಶ್ಮಿಗಳ ಫಲವಾದ ಅಮೃತವು ಸಾಧ್ಯರೆಂಬ ದೇವತೆಗಳಿಗೆ ಆಹಾರವಾಗಿರುವದು. ಬ್ರಹ್ಮನ ಮೂಲಕ ಇವರಿಗೆ ಅಮೃತವು ದೊರಕುವದು. ಹೀಗೆಂದು ಚಿಂತಿಸುವವನಿಗೆ ಸಾಧ್ಯದೇವತೆಗಳ ಲೋಕಪ್ರಾಪ್ತಿ ಯಾಗುವದು. ಈ ರೀತಿಯಲ್ಲಿ ಆದಿತ್ಯನು ವಸುಗಳು, ರುದ್ರರು, ಆದಿತ್ಯರು, ಮರುತ್ತರು, ಸಾಧ್ಯರು–ಎಂಬ ದೇವತೆಗಳಿಗೆ ಮಧುರಸಾಮೃತವನ್ನು ದೊರಕಿಸಿಕೊಟ್ಟು 'ದೇವಮಧು'ವೆನಿಸಿರುವನು.

ಈಗ ಒಟ್ಟರ್ಥವನ್ನು ಮನನಮಾಡೋಣ. ಆದಿತ್ಯನು ಪ್ರತ್ಯಕ್ಷದೇವತೆ ಯಾಗಿರುವನು. ಆಧಿದೈವಿಕಪ್ರಪಂಚದಂತೆಯೇ ಆಧಿಭೌತಿಕಪ್ರಪಂಚವೂ ಆತನನ್ನೇ ಆಶ್ರಯಿಸಿರುವದು. ಸೂರ್ಯನು ಕಿರಣಗಳಿಂದ ನೀರನ್ನು ಸಂಗ್ರಹಿಸಿ ಮಳೆಯ ರೂಪವಾಗಿ ಸುರಿಸದೆಹೋದರೆ ನಮಗೆ ಜೀವನವೇ ಸಾಗಲಾರದು. ಸಮುದ್ರದ ಉಪ್ಪುನೀರನ್ನೆಲ್ಲ ಸ್ವೀಕರಿಸಿ ಸಿಹಿನೀರನ್ನು ಮಳೆಯಾಗಿ ಸುರಿಸುವ ಸೂರ್ಯನು ಪರಮೋಪಕಾರಿಯಾಗಿರು ವನು. ಸಸ್ಯಗಳ ಹಾಗೂ ಪ್ರಾಣಿಗಳ ಹುಟ್ಟುಬೆಳವಣಿಗೆಗಳೆಲ್ಲ ಸೂರ್ಯನ ಶಾಖದಿಂದಲೇ ಸಾಗಬೇಕಾಗಿದೆ. ಹಾಗೆಯೇ ಸೂರ್ಯನ ಉದಯಾಸ್ತಮಯಗಳನ್ನು ಅವಲಂಬಿಸಿ ಕೊಂಡೇ ವಾರ, ತಿಂಗಳು, ವರ್ಷ–ಮುಂತಾಗಿ ಕಾಲವನ್ನು ನಾವು ಪರಿಗಣಿಸುವೆವು. ಅವನ ಸಂಚಾರವು ದಕ್ಷಿಣೋತ್ತರವಾಗಿ ಹಾಗೂ ಉತ್ತರದಕ್ಷಿಣವಾಗಿ ಸಂಭವಿಸುವಾಗಲೆಲ್ಲ ಮಳೆಗಾಲ, ಚಳಿಗಾಲ, ಬೇಸಿಗೆಗಳಾಗುವವು. ಹೀಗೆ ಭೌತಿಕಪ್ರಪಂಚವನ್ನೆಲ್ಲ ತನ್ನ ಹಿಡಿತದಲ್ಲಿಟ್ಟುಕೊಂಡಿರುವ ಸೂರ್ಯನ ಪ್ರಯೋಜನವನ್ನು ವರ್ಣಿಸಲಾದೀತೆ? ಇನ್ನು

ಉಪನಿಷತ್ತೇ ತಿಳಿಸುವಂತೆ ನಾಲ್ಕು ವೇದಗಳ ಹಾಗೂ ಇತಿಹಾಸಪುರಾಣಾದಿವಿದ್ಯೆಗಳ ಸಾರನೂ ಕರ್ಮಗಳ ಸಾಕ್ಷಿಯೂ ಫಲದಾತನೂ ಆಗಿರುವ ಸೂರ್ಯನು ಈಗಾಗಲೇ ತಿಳಿಸಿರುವಂತೆ ದೇವತಾಮಯನೂ ದೇವಮಧುವೂ ಆಗಿದ್ದುಕೊಂಡು ಜಗತ್ಪೂಜ್ಯನಾಗಿರುವನು. ಕರ್ಮಿಗಳೂ ಉಪಾಸಕರೂ ಸೂರ್ಯನ ಮೂಲಕವೇ ಉದ್ಧಾರವಾಗಬೇಕಾಗಿದೆ. ಆದ್ದರಿಂದ ಆದಿತ್ಯನನ್ನು ನಾವು ಹೆಚ್ಚುಹೆಚ್ಚಾಗಿ ಚಿಂತಿಸಿದಂತೆಲ್ಲ ಅವನ ಮಹಿಮೆಯ ಅರಿವು ನಮಗಾಗಲಿದೆ.

ಸೂರ್ಯನನ್ನು ಉಪಾಸನೆಮಾಡುವ ಇನ್ನೂ ಹಲವು ಪ್ರಕಾರಗಳು ವೇದೇತಿಹಾಸಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಸಾಮಾನ್ಯವಾಗಿ ಎಲ್ಲರಿಗೂ ಪರಿಚಯವಿರುವ ಸೂರ್ಯನ ಆರಾಧನೆ–ಎಂದರೆ ಸೂರ್ಯನಮಸ್ಕಾರವು. ಭಾನುವು ನಮಸ್ಕಾರ ಪ್ರಿಯನೆಂದು ಹೊಗಳುವ ವಚನವೂ ಇದೆ. ಋಗ್ವೇದದಲ್ಲಿ ಸೂರ್ಯನನ್ನು ಸ್ತುತಿಸುವ ಸೂಕ್ತಗಳೂ ಯಜುರ್ವೇದದ ಆರಣ್ಯಕದಲ್ಲಿ 'ಅರುಣಪ್ರಶ್ನ'ವೆಂಬ ಮಂತ್ರಭಾಗವೂ ಸೂರ್ಯನಮಸ್ಕಾರ ಕಾಲದಲ್ಲಿ ಆಸ್ತಿಕರಿಂದ ಬಳಸಲ್ಪಡುತ್ತಿವೆ. ಶ್ರೀಮದ್ರಾಮಾಯಣದ ಸುಪ್ರಸಿದ್ಧ 'ಆದಿತ್ಯಹೃದಯಸ್ತೋತ್ರ'ವೂ ಮಹಾಭಾರತದ ಯುಧಿಷ್ಠಿರಕೃತ ಸೂರ್ಯಸ್ತೋತ್ರವೂ ಸೂರ್ಯಭಕ್ತರಿಗೆ ಕಾಮಧೇನುಗಳಂತಿವೆ. ಆದ್ದರಿಂದ ನಾವು ದೇವಮಧುವಾದ ಆದಿತ್ಯನನ್ನು ಪೌರಾಣಿಕವಿಧಿಗಳಿಂದಲಾದರೂ ಅರ್ಚಿಸಿ ನಮಸ್ಕರಿಸಿ ಸೇವಿಸಬೇಕು. ಅನಂತರ ಆತನನ್ನು ವೈದಿಕರೀತಿಯಿಂದ ಉಪಾಸನೆಮಾಡಬಹುದು. ಕಟ್ಟಕಡೆಗೆ 'ಸ್ವಾಮಿದೇವನೆ ಲೋಕಪಾಲನೆ' ಎಂಬ ಹಾಡಿನ ಅಂತರಾರ್ಥವನ್ನು ಚಿಂತಿಸಿದರೂ ಸಾಕು. ಸೂರ್ಯನ ಅನುಗ್ರಹಕ್ಕೆ ಪಾತ್ರರಾಗುವೆವು.

------

## ಗಾಯತ್ರೀ ಬ್ರಹ್ಮದ ಉಪಾಸನೆ

**ಓಮ್॥ ಗಾಯತ್ರೀ ವಾ ಇದಗ್ಂ ಸರ್ವಂ ಭೂತಂ ಯದಿದಂ ಕಿಂಚ ವಾಗ್ವೈ ಗಾಯತ್ರೀ ವಾಗ್ವಾ ಇದಗ್ಂ ಸರ್ವಂ ಭೂತಂ ಗಾಯತಿ ಚ ತ್ರಾಯತೇ ಚ ॥ 3–12–1.**

**ಭಾವಾರ್ಥ:**–ಇದು ಯಾವಯಾವದಿದೆಯೋ ಈ ಎಲ್ಲಾ ಭೂತವೂ ಗಾಯತ್ರಿಯೇ. ವಾಕ್ಕೇ ಗಾಯತ್ರಿ; ವಾಕ್ಕೇ ಎಲ್ಲಾ ಭೂತವೂ ಆಗಿರುತ್ತದೆ. (ಅದು) ಹೇಳುತ್ತದೆ; ಕಾಪಾಡುತ್ತದೆ.

(ಗಾಯತ್ರಿಯ ದ್ವಾರದಿಂದ ಬ್ರಹ್ಮವನ್ನು ಹೇಳುತ್ತಾ ಬ್ರಹ್ಮವು ಎಲ್ಲವೂ ಆಗಿರುವದರಿಂದ ಗಾಯತ್ರಿಯೇ ಎಲ್ಲವೂ ಎಂದು ತಿಳಿಯಬೇಕು. ಅದು ಬರಿಯ ಛಂದಸ್ಸಲ್ಲವೆಂದೂ ಛಂದೋರೂಪವಾದ ವಾಕ್ಕು ಎಂದೂ ಅರಿತುಕೊಂಡು ವಾಕ್ಕು ಎಲ್ಲವನ್ನೂ ಹೇಳುವದರಿಂದಲೂ ಎಲ್ಲವನ್ನೂ ಕಾಪಾಡುವದರಿಂದಲೂ ಗಾಯತ್ರಿಯೆನಿಸಿದೆ– ಎಂದು ಇಲ್ಲಿ ಸ್ತುತಿಮಾಡಿದೆ.)

# 17. ಗಾಯತ್ರೀಬ್ರಹ್ಮದ ಪರಮಾರ್ಥರೂಪ

ಈವರೆಗೆ ಆದಿತ್ಯೋಪಾಸನೆಯನ್ನು ವಿವರಿಸಿ ಆದಿತ್ಯನನ್ನು ಬ್ರಹ್ಮವೆಂದು ಚಿಂತಿಸಬೇಕೆಂದು ತಿಳಿಸಲಾಗಿತ್ತು. ಈಗ ಬ್ರಹ್ಮವನ್ನು ಗಾಯತ್ರೀರೂಪದಿಂದ ಉಪಾಸನೆ ಮಾಡುವ ವಿದ್ಯೆಯನ್ನು ವಿವರಿಸಲಾಗುವದು. ಇಲ್ಲಿ ಗಾಯತ್ರಿಯೆಂದರೆ ತಟ್ಟನೆ ನಮಗೆ ಸುಪ್ರಸಿದ್ಧ ಗಾಯತ್ರೀಮಂತ್ರ ನೆನಪಾಗುವದು ಸ್ವಾಭಾವಿಕ. ಆದರೆ ಅದರ ವಿಷಯಗಳು ಪ್ರಧಾನವಾಗಿ ಇಲ್ಲಿ ಪ್ರಸ್ತಾಪಿಸಲ್ಪಡುವದಿಲ್ಲ. ಮತ್ತೇನೆಂದರೆ ಬ್ರಹ್ಮವನ್ನು ಈ ಹಿಂದೆ ಉದ್ಗೀಥವೆಂದೂ ಓಂಕಾರವೆಂದೂ ಸಾಮವೆಂದೂ ಚಿಂತಿಸಿದಂತೆಯೇ ಈಗ ಗಾಯತ್ರಿಯೆಂದೂ ಚಿಂತಿಸಬಹುದಾಗಿದೆ– ಎಂಬಿದನ್ನು ಪ್ರಸ್ತಾಪಿಸಲಾಗುವದು.

ಛಾಂದೋಗ್ಯೋಪನಿಷತ್ತಿನಲ್ಲಿ ಬ್ರಹ್ಮದ ಉಪಾಸನೆಗಳು ನಾನಾಪ್ರಕಾರವಾಗಿ ವರ್ಣಿಸಲ್ಪಟ್ಟಿರುವವು. ಇವು ಮಂದಮಧ್ಯಮಾಧಿಕಾರಿಗಳಿಗೆ ಎಂದು ಹೇಳಿದ್ದರೂ ನಿಜವಾಗಿ ನೋಡಿದರೆ ಈಗಿನ ಜನಸಾಮಾನ್ಯರಿಗೆ ಇವುಗಳೇ ಬಹಳ ರಹಸ್ಯವೂ ಮೇಲ್ಮಟ್ಟದ್ದೂ ಆಗಿರುವವು. ಇವುಗಳನ್ನು ತಿಳಿದಂತೆಲ್ಲ ಮುಂದಿನ ಜ್ಞಾನಪ್ರಕರಣಕ್ಕೆ ಸಹಾಯವಾಗುವದು. ಜ್ಞಾನವಾಗಲಿ, ಉಪಾಸನೆಯಾಗಲಿ– ಎರಡೂ ಬ್ರಹ್ಮವಿದ್ಯೆಯೆಂದೇ ಕರೆಯಲ್ಪಡುವವು. ಉಪಾಸನೆಯು ಭಾವನಾಪ್ರಧಾನವಾಗಿದ್ದು ಕರ್ತೃತಂತ್ರವಾಗಿರುವದೊಂದು ವಿಶೇಷವು. ಪ್ರಕೃತದಲ್ಲಿ ಬ್ರಹ್ಮಕ್ಕೆ ಗಾಯತ್ರೀ ಎಂಬ ಹೆಸರೂ ಉಪಾಸನೆಯೂ ಹೊಂದುತ್ತದೆ. ಅದು ಹೇಗೆ? ಆ ಹೆಸರಿನಿಂದ ಬ್ರಹ್ಮವನ್ನು ಚಿಂತಿಸುವದರ ಮಹತ್ತ್ವವೇನು? ಎಂಬಿದನ್ನು ತಿಳಿಯೋಣ.

'ನೇತಿ ನೇತಿ' ಎಂಬ ಸ್ವರೂಪದ ಬ್ರಹ್ಮವು ದುರ್ಬೋಧವೂ ಸಾಮಾನ್ಯಬುದ್ಧಿಗೆ ಮೀರಿದ್ದೂ ಆಗಿರುವದರಿಂದ ಉಪಾಸಕರಿಗಾಗಿ ಅದನ್ನೇ ಗಾಯತ್ರಿಯೆಂದು ಭಾವಿಸುವದು ಅವಶ್ಯವಾಗಿರುತ್ತದೆ. ಇಲ್ಲಿ ಗಾಯತ್ರಿಯನ್ನು ಒಂದು ಛಂದಸ್ಸೆಂದು ಸ್ವೀಕರಿಸಲಾಗಿದೆ. ವೇದವು ಬಹಳಮಟ್ಟಿಗೆ ಗಾಯತ್ರಿಯಿಂದ ಮುಂದಿನ ಏಳು ಛಂದಸ್ಸುಗಳ ರೂಪದಲ್ಲಿದ್ದುಕೊಂಡಿರುವದು. ಆ ಏಳರಲ್ಲಿ ಈ ಛಂದಸ್ಸನ್ನೇ ಆರಿಸಿಕೊಂಡಿರುವದೇಕೆಂದರೆ : ಇದು ಉಳಿದ ಎಲ್ಲಾ ಛಂದಸ್ಸುಗಳನ್ನೂ ವ್ಯಾಪಿಸಿಕೊಂಡಿರುವದು. ಗಾಯತ್ರಿಗೆ ಯಜ್ಞದಲ್ಲಿ ಪ್ರಾಧಾನ್ಯವಿರುತ್ತದೆ. ಬ್ರಾಹ್ಮಣನಿಗೆ ಗಾಯತ್ರಿಯೇ ಸಾರವಾಗಿರುವದು. ಆದ್ದರಿಂದ ಇದನ್ನೇ ಬ್ರಹ್ಮದ್ವಾರವಾಗಿ ಸ್ವೀಕರಿಸಿದೆ. ಇದು ವೇದಮಾತೆಯೆಂದೂ ಸ್ತೋತ್ರಮಾಡಲ್ಪಟ್ಟಿದೆ. ತಾಯಿಗಿಂತ ದೊಡ್ಡ ದೇವರಿಲ್ಲ– ಎಂಬುದು ಎಲ್ಲರಿಗೂ ತಿಳಿದೇ ಇದೆ. ಹೀಗೆ ಬ್ರಹ್ಮದ ಉಪಾಸನೆಗೆ ಗಾಯತ್ರೀಛಂದಸ್ಸು ಯೋಗ್ಯವಾದ ಆಲಂಬನವಾಗಿರುತ್ತದೆ. ಇದನ್ನಾಶ್ರಯಿಸಿ ಈಗ ಬ್ರಹ್ಮದ ಉಪಾಸನೆಯನ್ನು ವಿವರಿಸಲಾಗುವದು. ಈ ಆಲಂಬನವು

ಉಪಾಯಮಾತ್ರವೇ ಹೊರತು ಉಪಾಸ್ಯವಾಗಿರುವದು ಎಂದಿನಂತೆ ಬ್ರಹ್ಮವೇ–ಎಂಬಿದನ್ನು ಮರೆಯಬಾರದು.

ಈಗ ಗಾಯತ್ರೀ ಎಂಬ ಶಬ್ದಾರ್ಥವನ್ನು ವಿಚಾರಿಸೋಣ. ಉಪನಿಷತ್ತಿನಲ್ಲಿ 'ವಾಗ್ವೈ ಗಾಯತ್ರೀ' ಎಂದು ವಾಕ್ಕನ್ನೆಲ್ಲ ಗಾಯತ್ರಿಯೆಂದು ಭಾವಿಸಬೇಕೆಂದೇ ತಿಳಿಸಿದೆ. ವಾಕ್ ಎಂಬಿದು ಶಬ್ದವು. ಇದು ಪ್ರಪಂಚದಲ್ಲಿರುವ ಎಲ್ಲಾ ವಸ್ತುಗಳನ್ನೂ ಹೆಸರಿಸುತ್ತದೆ. ಲೌಕಿಕಶಬ್ದಗಳ ರೂಪದಿಂದ ಹಸು, ಕುದುರೆ, ನಾಯಿ–ಮುಂತಾದ ಪ್ರಾಣಿಗಳಿಂದಾರಂಭಿಸಿ ಎಲ್ಲಾ ಪದಾರ್ಥಗಳನ್ನೂ ವಾಕ್ಕು ಹೇಳುತ್ತದೆ. ಹಾಗೆಯೇ ದೇವತೆಗಳು, ಯಜ್ಞ, ಮಂತ್ರ, ಛಂದಸ್ಸು–ಎಲ್ಲವೂ ವಾಕ್ಕಿನಿಂದಲೇ ವ್ಯವಹೃತವಾಗುತ್ತವೆ. ಆದ್ದರಿಂದ ವಾಕ್ ರೂಪದಿಂದ ಎಲ್ಲವೂ ಗಾಯತ್ರಿಯೇ ಆಗಿರುವದು–ಎಂದು ತಿಳಿಯಬೇಕು. ಗಾಯತ್ರೀ ಎಂಬ ಹೆಸರಿನಲ್ಲಿರುವ 'ಗಾ' ಎಂಬ ಅಕ್ಷರವು 'ಗಾಯತಿ' ಹೇಳುತ್ತದೆ–ಎಂಬರ್ಥವನ್ನೇ ಕೊಡುತ್ತದೆ. ಇನ್ನು 'ತ್ರೀ' ಎಂಬುದು ತ್ರಾಯತೇ–ಕಾಪಾಡುತ್ತದೆ–ಎಂಬರ್ಥವನ್ನು ಸೂಚಿಸುತ್ತದೆ. ವಾಕ್ಕು ಗಾಯತ್ರಿಯಾಗಿರುವದರಿಂದಲೇ ಎಲ್ಲರನ್ನೂ ಕಾಪಾಡುತ್ತದೆ. ಅಭಯವಚನವನ್ನು ಕೊಡುವದು–ಎಂಬುದು ಲೋಕಪ್ರಸಿದ್ಧವಾಗಿದೆ. ಯಾರಾದರೂ ಮಹನೀಯರು 'ಹೆದರಬೇಡ, ನಾನಿದ್ದೇನೆ' ಎಂದರೆ ಸಾಕು. ಆಶ್ರಿತನಾದವನಿಗೆ ಎಷ್ಟೋ ಆನಂದವಾಗುವದು. ಹಾಗೆಯೇ ಶ್ರೀಮಂತರೂ ಉದಾರಿಗಳೂ ಆದವರು 'ವಾಗ್ದಾನ' ಮಾಡಿದರೂ ಸಾಕು. ನಮ್ಮ ಕೆಲಸವಾದಂತೆಯೇ–ಎಂದು ಭಾವಿಸುವೆವು. ಶ್ರೀರಾಮನು ಕೇವಲ ಮಾತಿನಿಂದ ವಿಭೀಷಣನಿಗೆ 'ಅಭಯವನ್ನು ಕೊಟ್ಟಿರುವೆನು' ಎಂದಕೂಡಲೆ ಆತನು ಉದ್ಧಾರವಾದನಲ್ಲವೆ? ಹಾಗೆಯೇ ಇದು. ಅಂತೂ ಮಾತು ಎಂಬಿದು ಎಲ್ಲರನ್ನೂ ಕಾಪಾಡುತ್ತದೆಯಾದ್ದರಿಂದ ಗಾಯತ್ರಿಯೆನಿಸಿದೆ.

ಈಗ ಗಾಯತ್ರಿಯು ಪೃಥಿವೀರೂಪವಾಗಿದೆಯೆಂದು ತಿಳಿಸುತ್ತಾರೆ. ಪೃಥಿವಿಯು ಎಲ್ಲಾ ಸ್ಥಾವರಜಂಗಮಭೂತಗಳಿಗೂ ಆಶ್ರಯವಾಗಿರುತ್ತದೆ. ಜಗತ್ತಿನಲ್ಲಿರುವ ಎರಡು ಕಾಲಿನ ಹಾಗೂ ನಾಲ್ಕು ಕಾಲಿನ ಪ್ರಾಣಿಗಳು ಪಕ್ಷಿಕ್ರಿಮಿಕೀಟಾದಿಗಳೂ ಭೂಮಿಯನ್ನೇ ಆಶ್ರಯಿಸಿವೆ. ಭೂಮಿಯೇ ಈ ಎಲ್ಲಾ ಜೀವಿಗಳಿಗೂ ಆಧಾರವೂ ರಕ್ಷಕವೂ ಆಗಿರುತ್ತದೆ. ಆದ್ದರಿಂದ ಈ ಪೃಥಿವಿಯನ್ನೂ ಗಾಯತ್ರಿಯೆಂದು ಕರೆಯಬಹುದು. ಭೂತಗಳು ಈ ಪೃಥಿವಿಯ ಆಶ್ರಯವಿಲ್ಲವಾದಲ್ಲಿ ಬದುಕಿರಲೇ ಆರವು. ಅವುಗಳ ವಸತಿ ಹಾಗೂ ಅನ್ನ–ಇವೆಲ್ಲಕ್ಕೂ ಪೃಥಿವಿಯೇ ಮೂಲವು. ಯಾವದೇ ಪ್ರಾಣಿಯೂ ಪೃಥಿವಿಯ ಆಶ್ರಯವಿಲ್ಲದೆ ಬದುಕಿರಲಾರದು. ಆದ್ದರಿಂದ ಭೂತಗಳನ್ನು ತ್ರಾಣಮಾಡುವ ಗುಣವುಳ್ಳ ಭೂಮಿಯು ಗಾಯತ್ರೀ ಎಂದು ಕರೆಯಿಸಿಕೊಳ್ಳಲು ತಕ್ಕದ್ದಾಗಿರುವದು. ಭೂಮಿಯ ಮಹಿಮೆಯನ್ನು ಹೆಚ್ಚು ಹೆಚ್ಚಾಗಿ ಅರಿತಂತೆಲ್ಲ ಗಾಯತ್ರಿಯ ಮಹಿಮೆಯೂ ನಮಗೆ

ತಿಳಿದುಬರುವದು. ಆದ್ದರಿಂದ ಗಾಯತ್ರಿಯನ್ನು ಕೇವಲ ಛಂದಸ್ಸೆಂದು ಮಾತ್ರ ಭಾವಿಸದೆ ಪೃಥಿವಿಯ ರೂಪದಿಂದಲೂ ಕಂಡುಕೊಳ್ಳುವದು ಉಪಾಸಕನಿಗೆ ಅವಶ್ಯವೆನಿಸಿರುತ್ತದೆ.

ಈಗ ಗಾಯತ್ರಿಯೆಂದರೆ ಬೇರಾವುದೂ ಅಲ್ಲ ; ನಮ್ಮ ಶರೀರವೇ–ಎಂದೂ ಅದರೊಳಗೆ ಇರುವ ಹೃದಯವೇ ಎಂದೂ ತಿಳಿಸಲಾಗುತ್ತದೆ. ಶರೀರವು ಪಾರ್ಥಿವ ಎಂದರೆ ಪೃಥಿವಿಯ ಸಾರವಾದ ಅನ್ನದಿಂದುಂಟಾಗಿರುತ್ತದೆ. ಶರೀರವನ್ನಾಶ್ರಯಿಸಿಕೊಂಡೇ ಜೀವರುಗಳು ಇದ್ದುಕೊಂಡಿರುವರು. ಯಾವ ಜೀವನಿಗೂ ಶರೀರವಿಲ್ಲದೆ ವ್ಯವಹಾರವು ಸಿದ್ಧವಾಗುವದಿಲ್ಲ ಆದ್ದರಿಂದಲೇ ಜೀವನು ತನ್ನ ಕರ್ಮಗಳನ್ನು ಊಟಮಾಡಲು ಶರೀರವನ್ನು ಧರಿಸಿ ಅದು ಕೃಶವಾದರೆ ಅಥವಾ ನಾಶವಾದರೆ ಬೇರೊಂದು ಶರೀರವನ್ನು ಸ್ವೀಕರಿಸುವನು. ಇರಲಿ. ಹೀಗೆ ಪ್ರತಿಯೊಂದು ಪ್ರಾಣಿಗೂ ಅದರಲ್ಲಿಯೂ ವಿಚಾರಶೀಲ ನಾದ ಮನುಷ್ಯನಿಗಂತೂ ಶರೀರವೇ ಆತ್ಮನೆನಿಸಿಬಿಟ್ಟಿರುವದು. ಇಂಥ ದೇಹವು ಭೂಮಿಯ ಕಾರ್ಯವಾದ್ದರಿಂದ ಪೃಥಿವಿಯು ಗಾಯತ್ರಿಯು ಹೇಗೋ ಹಾಗೆ ಇದೂ ಗಾಯತ್ರಿಯೆನಿಸಿದೆ. ಇನ್ನು ಶರೀರಾಂತರ್ಗತವಾದ ಹೃದಯವನ್ನು ತೆಗೆದುಕೊಂಡರೆ ಅದು ಪ್ರಾಣಾಶ್ರಯವಾಗಿದ್ದು ತಾನೂ ಗಾಯತ್ರಿಯೆನಿಸಿರುವದು. ಉಸಿರಾಟವಿಲ್ಲದೆ ಜೀವನವಿಲ್ಲ, ಹೃದಯವಿಲ್ಲದೆ ಉಸಿರಾಟವಿಲ್ಲ ಆದ್ದರಿಂದ ಸೂಕ್ಷ್ಮವಾಗಿ ಚಿಂತಿಸಿದಂತೆಲ್ಲ ಗಾಯತ್ರಿಯು ಮೊದಲು ಪೃಥಿವಿಯಾಗಿಯೂ ಅನಂತರ ಶರೀರ, ಹಾಗೂ ಅದರಲ್ಲಿ ಹೃದಯ ರೂಪವಾಗಿಯೂ ನೆಲೆಸಿರುವದೆಂದು ತಿಳಿದುಬರುತ್ತದೆ. ಹೃದಯವು ಬ್ರಹ್ಮದ ವಾಸಸ್ಥಾನವೇ ಆಗಿದೆ. ಆ ಬ್ರಹ್ಮವೇ ಗಾಯತ್ರಿಯೆನಿಸಿರುತ್ತದೆ–ಎಂದು ಶ್ರುತಿಯು ತಿಳಿಸಿರುತ್ತದೆ. ಇಂಥ ಗಾಯತ್ರೀಬ್ರಹ್ಮವನ್ನು ಉಪಾಸಕನು ತನ್ನ ಹೃದಯದಲ್ಲಿ ಕ್ರಮವಾಗಿ ಚಿಂತಿಸುವದೇ ಗಾಯತ್ರೀ ಉಪಾಸನೆಯೆನಿಸಿರುತ್ತದೆ.

ಈಗ ಮತ್ತೊಂದು ಹೆಜ್ಜೆಯನ್ನು ಮುಂದಿಟ್ಟು ವಿಚಾರಮಾಡೋಣ, ಶ್ರುತಿಯು ಮುಂದುವರೆದು ಹೀಗೆ ತಿಳಿಸುತ್ತಿದೆ. 'ಈವರೆಗೆ ವರ್ಣಿಸಿದಂತೆ ಗಾಯತ್ರೀಬ್ರಹ್ಮವು ಉಪಾಸ್ಯವಾಗಿರುವದಷ್ಟೆ! ಇದು ನಾಲ್ಕು ಪಾದಗಳುಳ್ಳದ್ದಾಗಿಯೂ ಆರು ವಿಧವಾಗಿಯೂ ಇರುವದು. ಹೇಗೆಂದರೆ: ವಾಕ್ಕು, ಭೂತಗಳು, ಪೃಥಿವೀ, ಶರೀರ, ಹೃದಯ, ಪ್ರಾಣ– ಎಂಬೀ ರೂಪಗಳಿಂದ ತಾನೊಂದೇ ಆರಾಗಿ ಪ್ರಕಟವಾಗಿದೆ'. ಈ ವಿವರಣೆಯಿಂದ ತಿಳಿದು ಬರುವದೇನೆಂದರೆ: ಬ್ರಹ್ಮವನ್ನು ಗಾಯತ್ರಿ ಎಂಬ ನಾಮದಿಂದ ಆರು ವಿಧವಾಗಿ ಭಾವಿಸಿ ಒಂದೊಂದು ರೀತಿಯಿಂದಲೂ ಅನುಸಂಧಾನಮಾಡುವಾಗ ಆಯಾ ಉಪಾಧಿ ಗಳಾದ ಪೃಥಿವ್ಯಾದಿಭೂತಗಳ ಗುಣಗಳನ್ನೂ ವಿಸ್ತಾರವನ್ನೂ ಮಹಿಮೆಯನ್ನೂ ಚಿಂತಿಸುತ್ತಾ ಹೋಗಬೇಕು. ಹಾಗೆ ಚಿಂತಿಸಿದಾಗ ಬ್ರಹ್ಮವಲ್ಲದೆ ಬೇರೊಂದು ವಸ್ತುವು ಎಂದಿಗೂ ಪೃಥಿವ್ಯಾದಿಗಳ ರೂಪದಿಂದ ಇರಲಾರದು. ಆ ಬ್ರಹ್ಮವಾದರೊ, ಉಪಾಸಕನ

ಹೃದಯಾಂತರ್ವರ್ತಿಯಾದ ಚೈತನ್ಯವೇ ಆಗಿರುವದು-ಎಂದು ಗೊತ್ತಾಗುತ್ತದೆ. ಹೀಗೆ ಮಧ್ಯಮಾಧಿಕಾರಿಗಳಿಗೆ ಬ್ರಹ್ಮವು ಗಾಯತ್ರೀ ರೂಪದಿಂದಲೂ ನಾಮದಿಂದಲೂ ಚಿಂತಿಸಲು ಯೋಗ್ಯವಾಗಿದೆ ಎಂದಭಿಪ್ರಾಯ.

ಈ ಗಾಯಿತ್ರೀಬ್ರಹ್ಮದ ಪರಮಾರ್ಥಸ್ವರೂಪವು ಹೀಗಿದೆಃ-

**ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ।**
**ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ॥**

ಈ ಮಂತ್ರವು ಪುರುಷಸೂಕ್ತದ ಮೂರನೆಯ ಋಕ್ಕಿನಂತೆಯೇ ಇದೆ. ಆದರೆ ಇಲ್ಲಿ ಗಾಯತ್ರೀರೂಪದಿಂದ ಬ್ರಹ್ಮವನ್ನು ಚಿಂತಿಸುವವರಿಗಾಗಿ ಅದರ ಮಹಿಮೆಯನ್ನು ತಿಳಿಸಲು ಬಂದಿರುತ್ತದೆ. ಗಾಯತ್ರೀರೂಪದ ಬ್ರಹ್ಮವು (ಉಪಾಸ್ಯಬ್ರಹ್ಮವು) ನಮ್ಮೆಲ್ಲರ ದೃಷ್ಟಿಯಿಂದ ದೊಡ್ಡದೆಂಬುದು ನಿಜ. ತಹಸೀಲ್ದಾರನು ತಾಲ್ಲೂಕಿಗೇ ಒಡೆಯನೆಂಬುದು ಸರಿಯಾದರೂ ರಾಜ್ಯಪಾಲನಿಗಿಂತ ತೀರ ಚಿಕ್ಕವನೇ ಸರಿ. ಹಾಗೆಯೇ ಪೂರ್ಣಬ್ರಹ್ಮಕ್ಕೆ ಹೋಲಿಸಿದರೆ ಈ ಗಾಯತ್ರೀಬ್ರಹ್ಮವು ಕೇವಲ ನಾಲ್ಕನೆಯ ಒಂದಂಶವಾಗಿದೆ. ಈ ಒಂದೇ ಪಾದದಲ್ಲಿಯೇ ಎಲ್ಲಾ ಭೂತಗಳೂ ಅಡಕವಾಗಿರುವವು. ಪರಬ್ರಹ್ಮವಾದರೊ, ಇನ್ನೂ ಹೆಚ್ಚಿನದಾಗಿರುವದು. ನಿಜವಾಗಿ ನೋಡಿದರೆ ಪೂರ್ಣಬ್ರಹ್ಮವನ್ನೇ ನಾವು ಪಡೆದುಕೊಳ್ಳಬೇಕು. ಅದೇ ಮೋಕ್ಷವು. ಆ ಮಾರ್ಗದಲ್ಲಿ ಗಾಯತ್ರೀಬ್ರಹ್ಮವು ಒಂದು ಮೈಲಿಗಲ್ಲಾಗಿರುವದು. ಮತ್ತು ಗಾಯತ್ರೀದ್ವಾರದಿಂದ ಮೋಕ್ಷವನ್ನು ಸಾಧಿಸಲು ಸುಲಭವಾಗುವದು. ಬ್ರಹ್ಮಕ್ಕೆ ಮರ್ತ್ಯಲೋಕ, ದ್ಯುಲೋಕಗಳೆಂಬ ಪರಿಚ್ಛೇದವೇ ನಿಜವಾಗಿಲ್ಲ. ಅದು ಅನಂತವು, ಅಖಂಡವು, ಪರಿಪೂರ್ಣವು, ಸರ್ವಗತವೂ ಆಗಿರುವದು. ಆದ್ದರಿಂದ ಉಪಾಸಕನು ತನ್ನ ಉಪಾಸ್ಯದೇವತೆಯನ್ನು-ಅದು ಯಾವ ಹೆಸರಿನಿಂದಲೇ ಕರೆಯಲ್ಪಟ್ಟಿರಲಿ ಕಡೆಯಲ್ಲಿ ಅದು ಪರಬ್ರಹ್ಮವೆಂದೇ ಚಿಂತಿಸಬೇಕು. ದೇವತೆಗಳು ಕೂಡ ತಮ್ಮನ್ನು ಬ್ರಹ್ಮಕ್ಕಿಂತ ಬೇರೆ-ಎಂದು ಯಾರಾದರೂ ಭಾವಿಸಿದರೆ ಅಂಥವರನ್ನು ಹೊರಹಾಕಿಬಿಡುವರೆಂದೇ ಮತ್ತೊಂದು ಉಪನಿಷತ್ತಿನಲ್ಲಿ ತಿಳಿಸಿದೆ. ಹೀಗಿರುವಲ್ಲಿ ಗಾಯತ್ರಿಯು ಎಂದಾದರೂ ಬ್ರಹ್ಮಕ್ಕಿಂತ ಭಿನ್ನವಾಗಿ ಚಿಂತಿಸಲ್ಪಡಲು ಸಾಧ್ಯವೆ?

ವಾಚಕರೆ, ಈ ಗಾಯತ್ರಿಯ ಉಪಾಸನೆಯ ವಿವರವು ಇನ್ನೂ ಇದೆ. ಸದ್ಯಕ್ಕೆ ಗಾಯತ್ರೀ ಎಂಬ ಶಬ್ದವನ್ನು ನೆನಪಿಟ್ಟುಕೊಳ್ಳಿರಿ. ಗಾನಮಾಡಿದವರನ್ನು ತ್ರಾಣಮಾಡುವದೇ ಆ ದೇವತೆಯೆಂದು ಭಾವಿಸಿರಿ. ಅನಂತರ 'ಗಾಯತ್ರೀ ಬ್ರಹ್ಮಣೇ ನಮಃ' ಎಂದು ಜಪಮಾಡಿರಿ. ಇದಕ್ಕೆ ಯಾವ ಜಾತಿವಯೋನಿರ್ಬಂಧಗಳೂ ಇಲ್ಲ. ಬ್ರಹ್ಮವು ಗಾಯತ್ರಿಯಾಗಿ ಅವತಾರಮಾಡಿದೆ-ಎಂದು ಗೊತ್ತುಮಾಡಿಕೊಳ್ಳಿರಿ. ವೈದಿಕರಂತೂ ಗಾಯತ್ರೀಜಪದಿಂದ ಸಕಲಪುರುಷಾರ್ಥಗಳನ್ನೂ ಪಡೆಯಬಹುದಾಗಿದೆ.

--------

## ಗಾಯತ್ರೀಬ್ರಹ್ಮದ ಧ್ಯಾನ

**ಓಮ್ ॥ ಅಯಂ ವಾವ ಸ ಯೋಽಯಮನ್ತರ್ಹೃದಯ ಆಕಾಶ–ಸ್ತದೇತತ್ ಪೂರ್ಣಮಪ್ರವರ್ತಿ ಪೂರ್ಣಾಮಪ್ರವರ್ತಿನೀಗ್ಂ ಶ್ರೀಯಂ ಲಭತೇ ಯ ಏವಂ ವೇದ ॥ 3–12–9.**

ಭಾವಾರ್ಥ:– ಆ ಇದು ಪೂರ್ಣವು; ಅಪ್ರವರ್ತಿಯು. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಪೂರ್ಣವಾದ ಅಪ್ರವರ್ತಿಯಾದ ಶ್ರೀಯನ್ನು ಪಡೆದು ಕೊಳ್ಳುವನು.

(ಗಾಯತ್ರೀನಾಮಕಬ್ರಹ್ಮವನ್ನು ಸಾಧಕನು ತನ್ನ ಹೃದಯದಲ್ಲಿಯೇ ಚಿಂತಿಸಬೇಕು. ಅದು ಪೂರ್ಣವು; ಮತ್ತು ಅಪ್ರವರ್ತಿ ಎಂದರೆ ನಾಶರಹಿತವಾದದ್ದು. ಬ್ರಹ್ಮವನ್ನು ಹೀಗೆಂದು ಚಿಂತಿಸುವವನಿಗೂ ತುಂಬಿದ ಐಶ್ವರ್ಯವೂ ಸವೆಯದ ಸುಖಸಂಪತ್ತಿಗಳೂ ಲಭಿಸುವವು–ಎಂದಭಿಪ್ರಾಯ.)

## 18. ಗಾಯತ್ರೀಬ್ರಹ್ಮವು ಹೃದಯಾಕಾಶವೇ

ಈವರೆಗೆ ಗಾಯತ್ರೀ–ಎಂಬ ಹೆಸರಿನಿಂದ ಬ್ರಹ್ಮವನ್ನು ಚಿಂತಿಸಬೇಕೆಂದು ತಿಳಿಸಲಾಗಿತ್ತು. ಈಗ ಅದೇ ಉಪಾಸನೆಯ ಬಗ್ಗೆ ಮುಂದುವರಿದು ಕೆಲವು ವಿವರಗಳನ್ನು ನೀಡಲಾಗುವದು. ಮುಖ್ಯವಾಗಿ ಈ ಬ್ರಹ್ಮೋಪಾಸನೆಯು ಹೃದಯವೆಂಬ ಸ್ಥಾನದಲ್ಲಿ ಮಾಡತಕ್ಕದ್ದಾಗಿದೆ. ಬಹಳಮಟ್ಟಿಗೆ ಉಪಾಸನೆಗಳನ್ನು ಹೇಳುವಾಗ ಹೃದಯವನ್ನೇ ಸ್ಥಾನವಾಗಿ ಆರಿಸಿಕೊಳ್ಳುವದು ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುತ್ತದೆ. ಬ್ರಹ್ಮವು ಹೃದಯವೆಂದೇ ಕೆಲವುಕಡೆಗಳಲ್ಲಿ ಕರೆಯಲ್ಪಟ್ಟಿದೆ. ಹೃದಿ–ಅಯಮ್–ಹೃದಯಮ್–ಎಂದು ವ್ಯುತ್ಪತ್ತಿ ಮಾಡಿ ಈತನು ಹೃದಯದಲ್ಲಿರುವದರಿಂದ ಅದು ಹೃದಯವೆನಿಸಿದೆ–ಎಂದು ಒಂದು ಕಡೆ ವರ್ಣಿಸಿರುತ್ತದೆ. ಆದ್ದರಿಂದ ಗಾಯತ್ರೀಬ್ರಹ್ಮಕ್ಕೆ ಹೃದಯಾಕಾಶವೇ ಉಪಾಸನಾ ಸ್ಥಾನವಾಗಿದೆ. ಈ ಆಕಾಶವನ್ನು ಮೂರು ಬಗೆಯಾಗಿ ಇಲ್ಲಿ ವರ್ಣಿಸಿದೆ. ಅವು ಯಾವವೆಂಬುದನ್ನು ತಿಳಿಯೋಣ.

ಒಬ್ಬ ಮನುಷ್ಯನ ಶರೀರವನ್ನು ಇಲ್ಲಿ ಅಳತೆಗೋಲಾಗಿ ಮಾಡಿಕೊಂಡು ಆಕಾಶಭೇದಗಳನ್ನು ತಿಳಿಸಲಾಗಿದೆ. ಹೇಗೆಂದರೆ : ಮನುಷ್ಯರಾದ ನಾವೆಲ್ಲರೂ ಆಕಾಶದಲ್ಲಿ ಇರುತ್ತೇವೆಂಬುದು ಪ್ರಸಿದ್ಧವು. ಆದ್ದರಿಂದ ಒಬ್ಬ ಮನುಷ್ಯನು ತನ್ನ ಹೊರಗೆ ಆಕಾಶವಿದೆಯೆಂದು ವ್ಯವಹರಿಸುವಾಗ ಅದನ್ನು 'ಬಹಿರಾಕಾಶ' ವೆಂದು ಕರೆಯಲಾಗಿದೆ. ಇದು ಒಂದನೆಯದು. ಅನಂತರ ಆ ಮನುಷ್ಯನ ದೇಹಾಪೇಕ್ಷೆಯಿಂದ ಅವನ ಒಳಗೂ

ಒಂದು ಆಕಾಶವಿದೆಯೆಂಬುದು ಸ್ಪಷ್ಟವೇ ಆಗಿದೆ. ಏಕೆಂದರೆ ಊಟಮಾಡಿದ ಅನ್ನಾದಿಗಳು, ಕುಡಿದ ನೀರು–ಮುಂತಾದವುಗಳೆಲ್ಲ ದೇಹದೊಳಕ್ಕೆ ಸೇರುವಾಗ ಅಲ್ಲಿ ಸ್ಥಳವಿರಲೇಬೇಕಲ್ಲವೆ? ಅದೇ 'ಆಕಾಶ'ವು. ಇದು ಎರಡನೆಯದು. ಅನಂತರ ಆ ಮನುಷ್ಯನ ಹೃದಯವನ್ನು ಮಾತ್ರ ವಿವಕ್ಷೆಮಾಡಿದಾಗ ಶಾಸ್ತ್ರದೃಷ್ಟಿಯಿಂದ ಆ ಹೃದಯದ ಒಳಗೂ ಒಂದು ಸಣ್ಣ ಆಕಾಶವುಂಟು. ಇದು ಸಾಮಾನ್ಯಜನರ ಅರಿವಿಗೆ ಗೋಚರವಾಗದೆ ಇರಬಹುದು. ಯೋಗಿಗಳಿಗೂ, ಉಪಾಸಕರಿಗೂ ಇದು ಗೊತ್ತಿದೆ. ಶ್ರುತಿಗಳಲ್ಲಿಯೂ ಇದನ್ನು ಪ್ರತಿಪಾದಿಸಿದೆ. ಇದೇ 'ಹಾರ್ದಾಕಾಶವು', ಇದು ಮೂರನೆಯದು. ಹೀಗೆ ಒಂದೇ ಆಕಾಶದಲ್ಲಿಯೇ ಉಪಾಧಿಭೇದಗಳಿಂದ ಮೂರು ಭಾಗಗಳನ್ನು ಕಲ್ಪಿಸಿ ಹೃದಯಾಕಾಶವೆಂಬುದೇ ಗಾಯತ್ರೀಬ್ರಹ್ಮವೆಂದೂ ಅದು ಮನಷ್ಯನ ಒಳಗೆ ಇದೆಯೆಂದೂ ಉಪಾಸಕನಾದವನು ಈ ವ್ಯಾವಹಾರಿಕ ಹೃದಯಾಕಾಶದಲ್ಲಿ ಗಾಯಿತ್ರೀ ಎಂಬ ರೂಪದಿಂದ ಆ ಬ್ರಹ್ಮವನ್ನು ಚಿಂತಿಸಬೇಕೆಂದೂ ಇಲ್ಲಿ ವರ್ಣಿಸಿರುತ್ತದೆ.

ಇಲ್ಲಿ ಒಂದು ಪ್ರಶ್ನೆಗೆ ನಾವು ಉತ್ತರವನ್ನು ಕಂಡುಕೊಳ್ಳಬೇಕಾಗಿದೆ. ಏನೆಂದರೆ: ಆಕಾಶವು ಅಖಂಡವಾಗಿ ಒಂದೇ ಆಗಿರುವಾಗ ಅದರಲ್ಲಿ ಈ ಮೂರು ಭೇದಗಳನ್ನು ಕಲ್ಪಿಸುವದಾದರೂ ಏಕೆ? ಇದರಿಂದ ಪ್ರಯೋಜನವೇನು? ಎಂದು ಯಾರಾದರೂ ಕೇಳಬಹುದು. ಇದಕ್ಕೆ ಉತ್ತರವು ಹೀಗಿದೆ: ನಿಜ; ಆಕಾಶದಲ್ಲಿ ಒಳಹೊರಗುಗಳೆಂಬ ಯಾವ ಭೇದವೂ ಇರುವದಿಲ್ಲ. ಆದರೆ ಉಪಾಸನೆಗಾಗಿ ಈ ಭೇದವನ್ನು ಕಲ್ಪಿಸುವದು ಅಗತ್ಯವಾಗುತ್ತದೆ. ನಾವು ಎಚ್ಚರವಾಗಿರುವಾಗ ಮಾಡುವ ವ್ಯವಹಾರಕಾಲದಲ್ಲಿ ಒಳಗೆ ನಮಗೆ ಇಂದ್ರಿಯಮನೋಬುದ್ಧಿಗಳ ಚಾಂಚಲ್ಯದಿಂದ ದುಃಖಾನುಭವವೇ ಹೆಚ್ಚಾಗಿರುತ್ತದೆ. ಆದ್ದರಿಂದ ಬಹಿರಾಕಾಶ–ಅಂತರಾಕಾಶಗಳೆರಡೂ ಬ್ರಹ್ಮಚಿಂತನೆಗೆ ಒದಗದೆ ಇರುತ್ತವೆ. ಕೇವಲ ಮನೋವ್ಯಾಪಾರಮಾತ್ರವುಳ್ಳ ಸ್ವಪ್ನದಲ್ಲಿಯಾದರೊ, ಬಹಿರಾಕಾಶವು ಮರೆಯಾಗಿದ್ದರೂ ಅಂತರಾಕಾಶದಲ್ಲೇ ದೃಶ್ಯಗಳು ಹಾವಳಿ ಮಾಡುತ್ತಿರುವವಾದ್ದರಿಂದ ಆಗಲೂ ಬ್ರಹ್ಮೋಪಾಸನೆಯು ಸಾಧ್ಯವಾಗಲಾರದು. ಇನ್ನು ಕೇವಲ ಹಾರ್ದಾಕಾಶವೊಂದೇ ಬೆಳಗುತ್ತಿರುವ ಸುಷುಪ್ತಿಯಲ್ಲಾದರೊ, ಯಾವ ದುಃಖವೂ ಇಲ್ಲವಾದರೂ ವಿಷಯವಿಷಯಿ ವಿಭಾಗವಾಗಲಿ, ಉಪಾಸ್ಯೋಪಾಸಕವಿಭಾಗವಾಗಲಿ, ಅಲ್ಲಿ ಇಲ್ಲವಾದ್ದರಿಂದ ಚಿಂತನೆಯ ಸಂದರ್ಭವೇ ಇರುವದಿಲ್ಲ. ಇದು ಎಲ್ಲರ ಅನುಭವವು. ಆದ್ದರಿಂದ ಬ್ರಹ್ಮವನ್ನು ಉಪಾಸನೆಮಾಡುವದು ಎಚ್ಚರದಲ್ಲಿ ಮಾತ್ರ ಸಾಧ್ಯವಾಗಿದ್ದು, ಆ ಎಚ್ಚರವನ್ನು ಭಾವನೆಯಿಂದ ಸುಷುಪ್ತಿಯ ಅನುಭವದ ಸ್ವರೂಪಕ್ಕೆ ಹೋಲಿಸಿ–ಅಲ್ಲಿ ಒಂದಾಗಿ ಬ್ರಹ್ಮವನ್ನು ಚಿಂತಿಸಬೇಕೆಂದು ಹೇಳುವದಕ್ಕಾಗಿ ಈ ಆಕಾಶತ್ರಯಕಲ್ಪನೆಯನ್ನು ಶ್ರುತಿಯಲ್ಲಿ ಮಾಡಿರುತ್ತದೆ. ಉಪಾಸಕನು ಅನುಸಂಧಾನಮಾಡುವಾಗ ಹೀಗೆ ಚಿಂತಿಸಬೇಕು: ''ಯಾವದು ಹೊರಗಿನ ಆಕಾಶವೆನಿಸಿದೆಯೋ ಅದು ಒಳಗಿನ ಆಕಾಶವೇ.

ಏಕೆಂದರೆ ಒಳಗಿನ ಆಕಾಶಕ್ಕೆ ಅಧೀನವಾಗಿ ಹೊರಗಿನ ಆಕಾಶವು ತೋರುವದು. ಹಾಗೆಯೇ ಒಳಗಿನ ಆಕಾಶವೆಂಬುದೇನಿದೆಯೋ ಅದು ಹೃದಯಾಕಾಶವೇ. ಏಕೆಂದರೆ ಹೃದಯಾಕಾಶದ ಬೆಳಕಿನಲ್ಲಿಯೇ ಎಲ್ಲಾ ಆಕಾಶವೂ ಬೆಳಗುತ್ತಿದೆ; ಹೀಗಿರುವದರಿಂದ ಹೃದಯಾಕಾಶವೇ ಅತಿ ದೊಡ್ಡದು. ಅದರಲ್ಲಿಯೇ ಉಳಿದ ಆಕಾಶಗಳು ಕಲ್ಪಿತವಾಗಿರುವವು. ನಾನು ಹೃದಯಾಕಾಶವೆನಿಸಿರುವ ಬ್ರಹ್ಮವೇ ಆಗಿರುವೆನು. ಆದ್ದರಿಂದಲೇ ಪೂರ್ಣನೂ ಪರಿಣಾಮರಹಿತನೂ ಆಗಿರುವೆನು.'' ಇದು ಚಿಂತನೆಯ ಕ್ರಮವಾಗಿದೆ. ನಿಜವೇನೆಂದರೆ: ಬ್ರಹ್ಮವಿಲ್ಲದೆ ಹೃದಯಾಕಾಶವಿಲ್ಲ, ಅದಿಲ್ಲದೆ ಮನಸ್ಸಿಲ್ಲ; ಮನಸ್ಸಿಲ್ಲದೆ ದ್ವೈತವಿಲ್ಲ ; ವ್ಯವಹಾರವೂ ಇಲ್ಲ. ಆದ್ದರಿಂದ ಬ್ರಹ್ಮವು ಹೃದಯಾಕಾಶವೆಂದು ಚಿಂತಿಸಲ್ಪಡುವದು ಉಪಾಸನೆಯ ಮಟ್ಟದಿಂದಲೇ– ಎಂದು ಅಭಿಪ್ರಾಯ.

ಈಗ ಗಾಯತ್ರೀಬ್ರಹ್ಮೋಪಾಸನೆಯ ಹೆಚ್ಚಿನ ವಿವರಗಳನ್ನು ನೋಡೋಣ. ಗಾಯತ್ರೀಬ್ರಹ್ಮವನ್ನು ರಾಜನೆಂದು ಭಾವಿಸಿಕೊಳ್ಳಿರಿ. ರಾಜನ ಅರಮನೆಯ ನಾಲ್ಕು ಕಡೆಗಳಲ್ಲಿಯೂ ದ್ವಾರಪಾಲಕರುಗಳು ಇರುತ್ತಾರೆ. ದ್ವಾರಪಾಲಕರುಗಳನ್ನು ಒಲಿಸಿಕೊಂಡರೆ ರಾಜನ ದರ್ಶನವು ಸುಲಭವಾಗುವಂತೆ ಇಲ್ಲಿಯೂ ಬ್ರಹ್ಮಪ್ರಾಪ್ತಿಗೆ ಸಹಾಯವಾಗಿ ಐದು ಜನ ದ್ವಾರಪಾಲಕರ ಉಪಾಸನೆಯನ್ನು ಮಾಡಬೇಕೆಂದು ಹೇಳಿದೆ. ಅವರುಗಳು ಯಾರೆಂದರೆ : ಪೂರ್ವದ್ವಾರದಲ್ಲಿ ಪ್ರಾಣನು, ದಕ್ಷಿಣದಲ್ಲಿ ವ್ಯಾನನು, ಪಶ್ಚಿಮದಲ್ಲಿ ಅಪಾನನು, ಉತ್ತರದಲ್ಲಿ ಸಮಾನನು ಮತ್ತು ಊರ್ಧ್ವದ್ವಾರದಲ್ಲಿ ಉದಾನನು– ಹೀಗೆ ಐದು ದ್ವಾರಗಳಲ್ಲಿ ಐದು ಪ್ರಾಣದೇವತೆಗಳಿರುವರು. ಅವರೇ ದ್ವಾರಪಾಲಕರು. ಒಬ್ಬ ಮನುಷ್ಯನು ಪೂರ್ವಾಭಿಮುಖವಾಗಿ ನಿಂತುಕೊಂಡಾಗ ವ್ಯವರಿಸಲ್ಪಡುವ ಉಳಿದ ದಿಕ್ಕುಗಳಂತೆಯೇ ಈ ದ್ವಾರಪಾಲಕರ ದಿಕ್ಕನ್ನೂ ತಿಳಿಯಬೇಕು. ಪೂರ್ವದ್ವಾರದ ದ್ವಾರಪಾಲಕನಾದ ಪ್ರಾಣನನ್ನು ಚಕ್ಷುಸ್ಸೆಂದೂ, ಆದಿತ್ಯನೆಂದೂ ಚಿಂತಿಸಬೇಕು. ಏಕೆಂದರೆ ಕಣ್ಣು ಆದಿತ್ಯನ ಸಹಾಯದಿಂದ ಹೊರಗಿನ ವಸ್ತುಗಳನ್ನು ನೋಡುತ್ತದೆ. ಆದಿತ್ಯನನ್ನು ಹೊರಗಿನ ಪ್ರಾಣವೆಂದು ಶ್ರುತಿಯಲ್ಲಿಯೂ ಹೊಗಳಿದೆ. ಅದೇ ಆದಿತ್ಯನು ಕಣ್ಣಾಗಿ ದೇಹದಲ್ಲಿದ್ದುಕೊಂಡು ಪ್ರಾಣನ ಮೂಲಕ ಕ್ರಮವಾಗಿ ಹೃದಯ ಸಂಬದ್ಧನಾಗಿರುವನು. ಇಂಥ ಪ್ರಾಣನು ಅನ್ನಪ್ರದನೂ ಅನ್ನಾದನೂ ಆಗಿರುವನು. ಹೀಗೆಂದು ಉಪಾಸನೆಮಾಡುವವನು ತೇಜಸ್ವಿಯೂ ಅನ್ನಾದನೂ ಆಗುವನು– ಎಂದು ಫಲಶ್ರುತಿಯನ್ನೂ ಹೇಳಿದೆ.

ಈಗ ವ್ಯಾನನೆಂಬ ದಕ್ಷಿಣದ್ವಾರಪಾಲಕನ ಉಪಾಸನಾಕ್ರಮವನ್ನು ತಿಳಿಯೋಣ. ಈತನು ಶರೀರದಲ್ಲಿದ್ದುಕೊಂಡು ವೀರ್ಯವತ್ತಾದ ಕರ್ಮಗಳನ್ನು ಮಾಡುವನು. ಪ್ರಾಣಾಪಾನಗಳನ್ನು ಹಿಡಿದುಕೊಂಡೂ ಇರುತ್ತಾನೆ. ಈತನೇ ಕಿವಿಗಳ ರೂಪವಾಗಿಯೂ ಆಧಿದೈವಿಕವಾಗಿ ಚಂದ್ರನಾಗಿಯೂ ಇದ್ದಾನೆ. ಆದ್ದರಿಂದ ಇವನನ್ನು ಚಂದ್ರನೆಂದೂ

ಶ್ರೋತ್ರೇಂದ್ರಿಯಾಧಿದೇವತೆಯೆಂದೂ ಚಿಂತಿಸಬೇಕು. ಚಂದ್ರನು ಅನ್ನಪ್ರದನೂ ಶ್ರೋತ್ರವು ಜ್ಞಾನಪ್ರದವೂ ಆಗಿರುವದು. ಏನನ್ನಾದರೂ ಕೇಳಿಯೇ ಮನುಷ್ಯನು ಜ್ಞಾನವನ್ನುಂಟುಮಾಡಿಕೊಳ್ಳುತ್ತಾನಲ್ಲವೆ? ಆದ್ದರಿಂದ ಶ್ರೋತ್ರವಿಲ್ಲದೆ ಜ್ಞಾನವಿಲ್ಲ. ಜ್ಞಾನವೂ ಅನ್ನವೂ ಉಳ್ಳವನಿಗೆ ಶ್ರೀತ್ವವು ಬರುತ್ತವೆ–ಎಂದರೆ ಅವನು ಶ್ರೀಮಂತನೆನಿಸುವನು. ಹೀಗೆ ವ್ಯಾನಬ್ರಹ್ಮವನ್ನು ಉಪಾಸನೆಮಾಡುವವರು ಶ್ರೀಮಂತರೂ ಅನ್ನ ಸಮೃದ್ಧಿಯುಳ್ಳವರೂ ಆಗಿರುವರು.

ಈಗ ಅಪಾನನೆಂಬ ಪಶ್ಚಿಮದ್ವಾರಪಾಲಕನ ಉಪಾಸನೆಯನ್ನು ಅರಿತುಕೊಳ್ಳೋಣ. ಈತನು ಶರೀರದಲ್ಲಿರುವ ಮಲಗಳನ್ನೆಲ್ಲ ಹೊರಹಾಕುವನು. ಕೆಳಮುಖವಾಗಿಯೇ ವ್ಯಾಪಾರಮಾಡುವನು. ಈತನು ವಾಗ್ರೂಪನಾಗಿಯೂ ಅಗ್ನಿದೇವತಾಕನಾಗಿಯೂ ಇರುವನು. ಅಗ್ನಿಯು ವಾಕ್ಕಿನ ಮೂಲಕ ಹೃದಯಕ್ಕೆ ಸಂಬಂಧಪಟ್ಟಿದ್ದು ಅಲ್ಲಿ ಪ್ರತಿಷ್ಠಿತವಾಗಿರುವನು. ಹೀಗೆ ಅಪಾನವನ್ನು ಅಗ್ನಿಯೆಂದೂ ವಾಕ್ಕೆಂದೂ ಚಿಂತಿಸಬೇಕು. ವಾಕ್ಕು ಯಾವನಲ್ಲಿ ನೆಲಸಿರುವದೋ ಅವನು ತೇಜಸ್ವಿಯಾಗಿರುವನು. ಹೇಗೆಂದರೆ ವೇದವಾಕ್ಕುಗಳನ್ನು ಪಠಿಸುವವನು ತೇಜಸ್ವಿಯಾಗಿರುತ್ತಾನೆ. ಆದ್ದರಿಂದ ಈ ಅಪಾನನನ್ನು ವಾಕ್ಕೆಂದೂ ಅಗ್ನಿಯೆಂದೂ ಚಿಂತಿಸುವವನು ವಾಚಾಳಿಯೂ ತೇಜಸ್ವಿಯೂ ಆಗುವನು–ಎಂದಭಿಪ್ರಾಯ.

ಹೀಗೆಯೇ ಉತ್ತರದ್ವಾರಪಾಲಕನಾದ ಸಮಾನ–ನೆಂಬ ವಾಯುವನ್ನೂ ಉಪಾಸನೆಮಾಡಬೇಕು. ಇವನು ಮನೋರೂಪನಾಗಿಯೂ ಪರ್ಜನ್ಯದೇವತೆಯಾಗಿಯೂ ಇರುವನು. ಪರ್ಜನ್ಯವೆಂದರೆ ಮಳೆಯು. ಸಮಾನನ ಕಾರ್ಯವೇನೆಂದರೆ ಉಂಡದ್ದನ್ನೂ ಕುಡಿದದ್ದನ್ನೂ ಸಮಗೊಳಿಸುವನು. ಆಹಾರಾದಿಗಳು ಸರಿಯಾಗಿ ಅರಗಿ ಪುಷ್ಟ್ಯಾದಿಗಳು ಉಂಟಾಗುವಂತೆ ಅವುಗಳನ್ನು ಆಯಾ ಸ್ಥಾನಗಳಿಗೆ ಒಯ್ದು ಹದಗೊಳಿಸುವನು. ಈತನನ್ನು ಮನಸ್ಸೆಂದೂ ಪರ್ಜನ್ಯದೇವತೆಯೆಂದೂ ಚಿಂತಿಸಬೇಕು. ವಿರಾಟ್ಪುರುಷನ ಮನಸ್ಸಿನಿಂದ ನೀರು ಹಾಗೂ ವರುಣನು ಸೃಷ್ಟಿಯಾದರೆಂದು ಶ್ರುತಿಯಲ್ಲಿದೆ. ಮನಸ್ಸಿನ ಮೂಲಕ ಈ ಸಮಾನನೂ ಹೃದಯಲ್ಲಿ ನೆಲಸಿರುವನು. ಈತನನ್ನು ಕೀರ್ತಿಯೆಂದೂ ಕಾಂತಿಯೆಂದೂ ಚಿಂತಿಸುವ ಉಪಾಸಕನು ಕೀರ್ತಿವಂತನೂ ಕಾಂತಿವಂತನೂ ಆಗುವನು.

ಈಗ ಕಡೆಯದಾಗಿ ಊರ್ಧ್ವದ್ವಾರಪಾಲಕನಾದ ಉದಾನ–ನೆಂಬ ವಾಯುವಿನ ಉಪಾಸನೆಯನ್ನು ತಿಳಿಯೋಣ. ಈತನು ಉತ್ಕರ್ಷಾರ್ಥವಾದ ಕರ್ಮಗಳನ್ನು ನಿರ್ವಹಿಸುವನು. ವಾಯುವೆಂದೂ ಆಕಾಶವೆಂದೂ ಇವನನ್ನು ಚಿಂತಿಸಬೇಕು. ಏಕೆಂದರೆ ವಾಯ್ವಾಕಾಶಗಳು ಮೇಲ್ಭಾಗದಲ್ಲಿರುವವು. ಆ ದೇವತೆಗಳ ರೂಪವೇ ಉದಾನವೆಂದು

ಚಿಂತಿಸಬೇಕು. ಒಳಗಿನ ಆಕಾಶದ ಮೂಲಕ ಹೃದಯಕ್ಕೂ ಉದಾನನು ಸಂಬದ್ಧನಾಗಿರುವನು. ಈತನನ್ನು ಓಜಸ್ಸೆಂದೂ ಮಹವೆಂದೂ ಚಿಂತಿಸುವವನಿಗೆ ಆ ಗುಣಗಳು ಬರುವವು.

ಈ ದ್ವಾರಪಾಲಕರ ಉಪಾಸನೆಯ ಪ್ರಯೋಜನವೇನೆಂದರೆ: ಇಂದ್ರಿಯ ಪ್ರಾಣಾದಿಗಳು ಸ್ವಾಭಾವಿಕವಾಗಿ ಹೊರಮುಖವಾಗಿದ್ದು ಹಾರ್ದಬ್ರಹ್ಮಪ್ರಾಪ್ತಿಗೆ ಅಡ್ಡವಾಗಿ ಬಿಟ್ಟಿವೆ. ಕರಣಗಳನ್ನು ಸ್ವಾಧೀನಪಡಿಸಿಕೊಳ್ಳದೆ ಮನಸ್ಸನ್ನು ಬ್ರಹ್ಮದಲ್ಲಿ ನಿಲ್ಲಿಸಲಾಗುವದಿಲ್ಲ. ಆದ್ದರಿಂದ ಈ ಪ್ರಾಣಾದಿಕರಣಗಳನ್ನು ದ್ವಾರಪಾಲಕರಂತೆ ತಿಳಿದು ದೇವತಾಭಾವನೆಯಿಂದ ಚಿಂತಿಸಿದರೆ ಇವರುಗಳು ಬ್ರಹ್ಮಪ್ರಾಪ್ತಿಗೆ ಸಹಾಯವಾಗುವರು. ಭೋಜನಸಮಯದಲ್ಲಿ ಶಿಷ್ಟಾಚಾರಸಂಪನ್ನರಾದವರು ತಾವು ಊಟಮಾಡುವ ಅನ್ನಕ್ಕೆ ಪರಿಷೇಚನಮಾಡಿ ಅನಂತರ ಪ್ರಾಣಾಹುತಿರೂಪವಾಗಿ ಐದು ಬಾರಿ ಅನ್ನವನ್ನು ಸ್ವೀಕರಿಸುವರು. ಆಗ್ಗೆ 'ಪ್ರಾಣಾಯ ಸ್ವಾಹಾ' ಇತ್ಯಾದಿ ಮಂತ್ರಗಳನ್ನು ಹೇಳುವರು. ಒಂದು ರೀತಿಯಲ್ಲಿ ಇದು ಈ ದ್ವಾರಪಾಲಕರುಗಳ ಪೂಜೆಯಾಗುವದು. ಈ ಭೋಜನಕ್ರಮವನ್ನು ನಾವು ಭಾವನಾಪೂರ್ವಕವಾಗಿ ಮೊದಲು ಮಾಡಬೇಕು. ಅನಂತರ ಹೃದಯದಲ್ಲಿ ಗಾಯತ್ರೀ ರೂಪದಿಂದ ಬ್ರಹ್ಮಸ್ವರೂಪವನ್ನು ಸಾಧಕನು ಚಿಂತಿಸಬಹುದಾಗಿದೆ. ಕೀರ್ತಿ, ಯಶಸ್ಸು, ಅನ್ನ ಮುಂತಾದ ದೃಷ್ಟಫಲಗಳನ್ನು ಹೇಳಿರುವದು ಉಪಾಸನೆಯಲ್ಲಿ ಸಾಧಕರಿಗೆ ಅಭಿರುಚಿಯನ್ನುಂಟುಮಾಡುವದಕ್ಕಾಗಿ– ಎಂದು ತಿಳಿಯಬೇಕು. ಆದರೆ ಸಾಧಕನು ಬ್ರಹ್ಮಪ್ರಾಪ್ತಿಯಾಗುವವರೆಗೂ ಉಪಾಸನೆಯನ್ನು ಮಾಡಿ ಕೃತಕೃತ್ಯನಾಗಬೇಕು.

------

# ಜ್ಯೋತಿರ್ಬ್ರಹ್ಮೋಪಾಸನೆ

**ಓಮ್ ॥ ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷು ಇದಂ ವಾವ ತದ್ಯದಿದಮಸ್ಮಿನ್ನಂತಃ ಪುರುಷೇ ಜ್ಯೋತಿಃ ॥ 3–13–7.**

**ಭಾವಾರ್ಥ:**– ಇನ್ನು ಆ ದಿವಕ್ಕಿಂತ ಆಚೆಗೆ ವಿಶ್ವದ ಮೇಲುಗಡೆಯಲ್ಲಿ, ಎಲ್ಲಕ್ಕೂ ಮೇಲುಗಡೆಯಲ್ಲಿ ಅನುತ್ತಮವಾದ ಉತ್ತಮಲೋಕಗಳಲ್ಲಿ ಹೊಳೆಯುತ್ತಿರುವ ಜ್ಯೋತಿಯಿದೆಯಲ್ಲ, ಅದು ಪುರುಷನೊಳಗೆ ಇರುವ ಈ ಜ್ಯೋತಿ ಎಂಬಿದೇ– ಆಗಿರುವದು.

(ಬ್ರಹ್ಮವು ತೇಜೋಮಯವಾಗಿ ಹಿರಣ್ಯಗರ್ಭಲೋಕದಲ್ಲಿರುವಂತೆಯೇ ಈ ಲೋಕದಲ್ಲಿ ಮನುಷ್ಯಸಾಮಾನ್ಯನಲ್ಲಿಯೂ ಹೃದಯದಲ್ಲಿ ಶಾಖರೂಪದಿಂದಿದ್ದುಕೊಂಡು ಪ್ರತ್ಯಕ್ಷವಾಗಿರುವದು. ಇದನ್ನು ದೃಷ್ಟ, ಶ್ರುತ– ಎಂದು ಚಿಂತಿಸುವವನು ಸೂಕ್ಷ್ಮದೃಷ್ಟಿಯವನೂ ದೂರಶ್ರವಣವುಳ್ಳವನೂ ಆಗಿರುವನು– ಎಂದಭಿಪ್ರಾಯ.)

# 19. ಜ್ಯೋತಿರ್ಬ್ರಹ್ಮದ ವರ್ಣನೆ

ಪರಬ್ರಹ್ಮವನ್ನು ನಾನಾಪ್ರಕಾರವಾಗಿ ಉಪಾಸನೆಮಾಡುವ ಕ್ರಮಗಳನ್ನು ಛಾಂದೋಗ್ಯೋಪನಿಷತ್ತಿನಲ್ಲಿ ತಿಳಿಸುತ್ತಾ ಬಂದಿರುತ್ತದೆ. ಈಗ 'ಜ್ಯೋತಿ' ಎಂಬ ರೂಪದಿಂದ ಉಪಾಸನೆಮಾಡುವ ವಿಚಾರವನ್ನು ಪ್ರಸ್ತಾಪಿಸಲಾಗುತ್ತದೆ. ಹಿಂದೆ ಹೇಳಿರುವ ಗಾಯತ್ರೀಬ್ರಹ್ಮೋಪಾಸನೆಗೂ ಈಗ ವರ್ಣಿಸಲಿರುವ ಜ್ಯೋತಿರ್ಬ್ರಹ್ಮೋಪಾಸನೆಗೂ ಸಂಬಂಧವೇನೆಂದರೆ: ಬ್ರಹ್ಮದ ಉಪಾಸನೆಗೆ ನಂಬಿಕೆಯು ಬಹಳ ಮುಖ್ಯ. ಅಂಥ ನಂಬಿಕೆಯು ಅನುಭವಗಮ್ಯವೇ ಆಗಿದ್ದರೆ ಸಾಕ್ಷಾತ್ಕಾರಕ್ಕೆ ಬಹಳ ಸಹಾಯಕವಾಗುವದು. ಬ್ರಹ್ಮವಾದರೋ, ಎಲ್ಲಾ ಪುರುಷರ ಶರೀರಗಳಲ್ಲಿಯೂ ಔಷ್ಣ್ಯರೂಪದಿಂದ ಪ್ರತ್ಯಕ್ಷವಾಗಿಯೇ ಇದೆ. ಹಾಗೆಂದು ತೋರಿಸಿಕೊಡುವದರಿಂದ ಸಾಧಕರಿಗೆ ಶ್ರದ್ಧೆಯು ಬೆಳೆಯುತ್ತದೆ. ಆದ್ದರಿಂದ ಈ ಉಪಾಸನೆಯನ್ನು ಪ್ರಸ್ತಾಪಿಸಲಾಗಿದೆ–ಎಂದು ತಿಳಿಯಬೇಕು.

ಈಗ ಜ್ಯೋತಿರ್ಬ್ರಹ್ಮದ ವರ್ಣನೆಯನ್ನು ಕೇಳೋಣ. ಈ ಬ್ರಹ್ಮವು ದ್ಯುಲೋಕದಿಂದಾಚೆಗೂ ವ್ಯಾಪಿಸಿದ್ದು ಬೆಳಗುತ್ತಿರುತ್ತದೆ. ಅದು ಸ್ವಯಂಪ್ರಭವೂ ನಿತ್ಯ ಪ್ರಕಾಶಸ್ವರೂಪವಾದದ್ದೂ ಆಗಿರುವದು. ಆದರೆ ದೀಪ, ಬೆಂಕಿ–ಮುಂತಾದವುಗಳಂತೆ ಹೊಳೆಯುತ್ತಿರುವದು–ಎಂಬುದೇನೂ ವಿವಕ್ಷಿತವಲ್ಲ, ನಿಜವಾಗಿ ನೋಡಿದರೆ ದೀಪಾದಿಗಳಿಗೂ ಅವು ಬೆಳಗಲು ಆತ್ಮಚೈತನ್ಯಪ್ರಕಾಶದ ನೆರವು ಬೇಕೇ ಬೇಕು. ಹೀಗಿರುವಲ್ಲಿ ಬ್ರಹ್ಮವು ಮುಖ್ಯಾರ್ಥದಲ್ಲಿಯೇ ಹೊಳೆಯುತ್ತದೆ. (ದೀಪ್ಯತೇ) ಎಂದರ್ಥ ಮಾಡಬಾರದು. ಮತ್ತೇನೆಂದರೆ ಜಗತ್ತಿನಲ್ಲಿ ಹೊಳೆಯುತ್ತಿರುವ ಜ್ಯೋತಿಗಳಾದ ಸೂರ್ಯಚಂದ್ರನಕ್ಷತ್ರಾದಿಗಳ ಸಮೇತ ಎಲ್ಲಾ ಬೆಳಕುಗಳಿಗೂ ಮೂಲಭೂತವಾಗಿದ್ದು ಎಲ್ಲವನ್ನೂ ತನ್ನ ಸ್ವಪ್ರಕಾಶಚೈತನ್ಯಜ್ಯೋತಿಯಿಂದಲೇ ಬೆಳಗಿಸುತ್ತಾ ಎಲ್ಲಕ್ಕೂ ಆತ್ಮನಾಗಿರುವದೇ ಇದರ ಸ್ವಭಾವವಾಗಿದೆ. ಇಂಥ ಜ್ಯೋತಿಯಾದ ಪರಬ್ರಹ್ಮವು ವಿಶ್ವತಃ ಎಂದರೆ ಎಲ್ಲೆಲ್ಲಿಯೂ ಬೆಳಗುತ್ತಿದೆ–ಎಂಬಂತೆ ವ್ಯವಹರಿಸಲ್ಪಡುತ್ತಿದೆ. ಮತ್ತು ಅನುತ್ತಮವಾದ ಉತ್ತಮಲೋಕಗಳಲ್ಲಿಯೂ ಇದು ವ್ಯಾಪಿಸಿಕೊಂಡಿರುವದು. ಅನುತ್ತಮ ಎಂಬಲ್ಲಿ ಉತ್ತಮವಲ್ಲದ–ಎಂದರ್ಥಮಾಡಬಾರದು. ಮಿಗಿಲಿಲ್ಲದ ಎಂದರ್ಥಮಾಡ ಬೇಕು. ಹೇಗೆ ಅಮೂಲ್ಯ ಎಂದರೆ ಬೆಲೆಕಟ್ಟಲಾಗದ್ದುಎಂದರ್ಥವೋ ಹಾಗೆ ಮಿಗಿಲಿಲ್ಲದ ಉತ್ತಮಲೋಕಗಳಾದ ಸತ್ಯ, ವೈಕುಂಠ, ಕೈಲಾಸಾದಿಗಳಲ್ಲಿಯೂ ಈ ಪ್ರರಬ್ರಹ್ಮವೇ ಜ್ಯೋತಿಯಾಗಿ ಬೆಳಗುತ್ತಿದೆ–ಎಂದು ತಿಳಿಯಬೇಕು. ಅಂತೂ ಬ್ರಹ್ಮದಲ್ಲಿ ಜ್ಯೋತಿಃ ಎಂಬ ಶಬ್ದವು ಪ್ರಯೋಗಿಸಲ್ಪಟ್ಟಿದೆಯಾದರೂ ಸಚ್ಚಿದಾನಂದಸ್ವರೂಪವಾದ, ಅಸಾಧಾರಣವಾದ ನಿತ್ಯಪ್ರಕಾಶರೂಪವಾದ, ಬೆಳಕು, ಬೆಳಗಲ್ಪಡುವದು–ಎಂಬ ಭೇದರಹಿತವಾದ ಬ್ರಹ್ಮವೊಂದೇ ಪರಮಜ್ಯೋತಿಯು–ಎಂದು ಚಿಂತಿಸಬೇಕು.

ಈಗ ಉಪನಿಷತ್ತು ಆ ಪರಮಜ್ಯೋತಿಯನ್ನು ಸಾಕ್ಷಾತ್ತಾಗಿ ನಿರ್ದೇಶಿಸಹೊರಟಿದೆ ಹೇಗೆಂದರೆ: 'ಇದೊ, ಈ ಪುರುಷನ ಒಳಗಡೆ ಬೆಳಗುತ್ತಿದೆಯಲ್ಲ, ಇದೇ ಆ ಜ್ಯೋತಿಯಾಗಿರುವದು' ಎಂದು ದ್ಯುಲೋಕದಾಚೆಗೂ ಇರುವ ಜ್ಯೋತಿಗೂ ಮನುಷ್ಯನ ಶರೀರದಲ್ಲಿರುವ ಜ್ಯೋತಿಗೂ ಐಕ್ಯವನ್ನು ಹೇಳುತ್ತಿದೆ. ಪ್ರತಿಯೊಬ್ಬ ಮಾನವನಲ್ಲಿಯೂ ಶರೀರದೊಳಗೆ ಉಷ್ಣಾಂಶವು ಒಂದು (Temperature) ಸಮಪ್ರಮಾಣದಲ್ಲಿದ್ದು ಕೊಂಡೇ ಇರುವದು. ಅದು ಅತಿಯಾದರೂ ತೀರ ಕಡಿಮೆಯಾದರೂ ಮನುಷ್ಯನು ಮೃತ್ಯುವಶನಾಗಿಬಿಡುವನು. ಬದುಕಿರುವಾಗ ಈ ಔಷ್ಣ್ಯವೇ ಆತನನ್ನು ಜೀವಿಸಿರುವಂತೆ ಮಾಡಿರುವದು. ಶಾಸ್ತ್ರದೃಷ್ಟಿಯಿಂದ ನೋಡಿದಾಗ ಈ ಶಾಖವೇ ಜ್ಯೋತಿರ್ಬ್ರಹ್ಮವು. ಇದು ಜಠರಾಗ್ನಿರೂಪದಿಂದ ಹೊಟ್ಟೆಯಲ್ಲಿದ್ದುಕೊಂಡು ಇಡಿಯ ಶರೀರವನ್ನೇ ಶಾಖವಾಗಿಟ್ಟಿರುವದು. ಇಂದ್ರಿಯಗಳೆಲ್ಲ ತಮ್ಮ ತಮ್ಮ ಕೆಲಸಗಳನ್ನು ಮಾಡಲು ಈ ಶಕ್ತಿಯೇ ಕಾರಣವಾಗಿರುವದು. ಇದನ್ನು ನಾವು ಗಮನಿಸಿದಾಗ ನಿಜವಾಗಿಯೂ ಈ ಅಗ್ನಿತತ್ತ್ವವನ್ನಾಶ್ರಯಿಸಿ ನಾವು ಬದುಕಿದ್ದೇವೆ– ಎಂದು ಗೊತ್ತಾಗುವದು. ಎಲ್ಲಾ ಪ್ರಾಣಿಗಳ ಬದುಕಿಗೂ ಈ ಶಾಖವೇ ಮೂಲವು. ಶಾಖವಿಲ್ಲದೆ ಸೃಷ್ಟಿಯೇ ಇಲ್ಲವೆಂದರೂ ತಪ್ಪಾಗಲಾರದು. ಆಧಿದೈವಿಕವಾಗಿ ಇದೇ ಬಿಸಿಯು ಸೂರ್ಯ, ಚಂದ್ರ, ವಿದ್ಯುದಾದಿಗಳಲ್ಲಿಯೂ ಕಂಡು ಬರುವದು. ಇದು ಬೆಳಕೆಂದೂ ಸಂದರ್ಭಾನುಗುಣವಾಗಿ ಕರೆಯಲ್ಪಟ್ಟಿದೆ. ನಮ್ಮ ಹೊರಗಡೆಯೂ ವ್ಯವಹಾರದಲ್ಲಿ ಸೂರ್ಯ, ಅಗ್ನಿ, ವಿದ್ಯುಚ್ಛಕ್ತಿಗಳ ರೂಪದಿಂದ ಜ್ಯೋತಿರ್ಬ್ರಹ್ಮವೇ ಕಂಡುಬರುತ್ತಿರುವದು. ಈ ಬ್ರಹ್ಮದ ಅನುಗ್ರಹವು ಕ್ಷೀಣವಾಯಿತೆಂದರೆ ಎಲ್ಲಾ ರೀತಿಯಿಂದಲೂ ಮಾನವನ ಅವನತಿಯೇ ಆಗಿಬಿಡುವದು. ಈಗಲೂ ವಿದ್ಯುಚ್ಛಕ್ತಿ ಹಾಗೂ ಎಣ್ಣೆಗಳ ಕೊರತೆಯಿಂದ ಸರ್ಕಾರದವರು ಪಾಡುಹತ್ತಿರುವದನ್ನೂ ಜನರು ಕಷ್ಟಕ್ಕೊಳಗಾಗಿರುವದನ್ನೂ ನಾವು ಕಾಣಬಹುದಾಗಿದೆ. ಆದರೇನು? ಈ ಕೊರತೆಯು ಜ್ಯೋತಿರ್ಬ್ರಹ್ಮದ ತಿರಸ್ಕಾರದ ಫಲವೆಂದು ಯಾರಾದರೂ ಅರಿತುಕೊಂಡಿದ್ದಾರೆಯೆ? ಇಲ್ಲ, ಇದಕ್ಕೆ ಮಾನವನ ಅಹಂಕಾರ, ಅಜ್ಞಾನಗಳೇ ಕಾರಣ. ಇರಲಿ; ಯಾವನೊಬ್ಬ ಜೀವಿಯೂ ಜ್ಯೋತಿರ್ಬ್ರಹ್ಮದ ವ್ಯಾಪ್ತಿಗೆ ಹೊರತಾದವನಲ್ಲ, ಹೀಗಿರುವಾಗ ಬ್ರಹ್ಮ ಎಂದರೇನು? ಎಂದು ಕೇಳುವವನು ಮೂರ್ಖನೇ ಸರಿ. ಇನ್ನಾದರೂ ನಾವು ಜಂಭಕೊಚ್ಚಿಕೊಳ್ಳುವದನ್ನು ಬಿಟ್ಟು ಶಾಸ್ತ್ರದೃಷ್ಟಿಯನ್ನಾಶ್ರಯಿಸಿ ನಮ್ಮೊಳಗೇ ಅಡಗಿ ಕುಳಿತಿರುವ ಈ ಜ್ಯೋತಿರ್ಬ್ರಹ್ಮವನ್ನು ಮೊದಲು ಗುರುತಿಸಬೇಕು. ಅನಂತರ ಅದೇ ಸ್ವರೂಪವನ್ನು ಜಗತ್ತಿನ ಎಲ್ಲಾ ಭೌತಿಕ, ದೈವಿಕ–ಜ್ಯೋತಿಗಳಲ್ಲಿಯೂ ಅನುಸಂಧಾನ ಮಾಡಬೇಕು. ಇದು ಕೇವಲ ಕಲ್ಪನೆಯಲ್ಲ, ಮೂಢನಂಬಿಕೆಯಂತೂ ಅಲ್ಲವೇ ಅಲ್ಲ, ಅನುಭವಗಮ್ಯವಾದ ಈ ತತ್ತ್ವವು ಸಾಧಕನಿಗೆ ಉಪಾಸ್ಯವಾಗಿ ಅವನವನ ಹೃದಯದಲ್ಲಿಯೇ ಪ್ರತ್ಯಕ್ಷವಾಗಿದೆ– ಎಂದು ಶ್ರುತಿಯು ತಿಳಿಸುತ್ತಿದೆ.

ಈಗ ಈ ಜ್ಯೋತಿರ್ಬ್ರಹ್ಮವು ಹೃದಯದಲ್ಲಿದೆ–ಎಂಬಿದನ್ನು ಅನುಭವಾನುಸಾರಿಯಾದ ತರ್ಕದಿಂದ ತಿಳಿಸುತ್ತಾರೆ. ಹೇಗೆಂದರೆ : ಈ ಬ್ರಹ್ಮಕ್ಕೆ ದೃಷ್ಟಿ, ಶ್ರುತಿ–ಎಂಬ ಲಿಂಗಗಳಿವೆ. ದೃಷ್ಟಿಯೆಂದರೆ ದರ್ಶನವು. ದರ್ಶನ ಎಂದರೆ ಕಣ್ಣಿಗೆ ಕಾಣುವದು ಮಾತ್ರವೇ ಎಂದರ್ಥವಲ್ಲ. ಯಾವ ಇಂದ್ರಿಯಕ್ಕೆ ಗೋಚರವಾದರೂ ದರ್ಶನವೆಂದೇ ಅರ್ಥವು. ಈ ಜ್ಯೋತಿರ್ಬ್ರಹ್ಮವು ಸ್ಪರ್ಶೇಂದ್ರಿಯಪ್ರತ್ಯಕ್ಷವಾಗಿದೆ. ನಾವು ಯಾರನ್ನು ಮುಟ್ಟಿದರೂ ಬಿಸಿಯನ್ನು ಅನುಭವಿಸಬಹುದಾಗಿದೆ. ಬೆಂಕಿ, ವಿದ್ಯುದಾದಿಗಳ ರೂಪದಲ್ಲಿ ಜ್ಯೋತಿಯು ಚಾಕ್ಷುಷಪ್ರತ್ಯಕ್ಷವೂ ಆಗಿದೆ. ಇಲ್ಲಿಸ್ಪರ್ಶೇಂದ್ರಿಯಪ್ರಧಾನವಾಗಿಯೇ ಸ್ವೀಕರಿಸಿ ಶಾಖರೂಪದಿಂದ ಪ್ರತ್ಯಕ್ಷವಾಗಿರುವ ಈ ಬ್ರಹ್ಮವನ್ನು 'ದೃಷ್ಟ'ವೆಂದು ಹೆಸರಿಸಿ ಚಿಂತಿಸಬೇಕು– ಎಂದು ತಿಳಿಸಿದ್ದಾರೆ. ಇನ್ನು ಈ ಬ್ರಹ್ಮವನ್ನು ''ಶ್ರುತ''ವೆಂದು ಚಿಂತಿಸುವಂತೆಯೂ ಉಪನಿಷತ್ತು ತಿಳಿಸುತ್ತಿದೆ. ಹೇಗೆಂದರೆ: ನಾವು ಎರಡೂ ಕಿವಿಗಳನ್ನು ಭದ್ರವಾಗಿ ಮುಚ್ಚಿಕೊಂಡಾಗ ನಮ್ಮೊಳಗೇ ನಮಗೆ 'ಝೊಯ್' ಎಂಬ ಶಬ್ದವು ಯಾವಾಗಲೂ ಕೇಳಬರುತ್ತದೆ. ಈ ಶಬ್ದಕ್ಕೆ ವಿಶ್ರಾಂತಿಯೇ ಇಲ್ಲ. ಹೊರಗಿನ ಶಬ್ದಗಳ ಗದ್ದಲದಿಂದ ನಾವು ಇದನ್ನು ಗಮನಿಸದೆ ಇರುವೆವು. ಶಾಸ್ತ್ರವು ನಮ್ಮ ತಿಳಿವಳಿಕೆಯನ್ನು ತಿದ್ದಿ, ಒಳಗೆ ಕೇಳುತ್ತಿರುವ ಶಬ್ದದಕಡೆಗೆ ನಿಗಾಕೊಡಿರಿ–ಎಂದು ಎಚ್ಚರಿಸುತ್ತದೆ. ಆ ಧ್ವನಿಯೂ ಜ್ಯೋತಿರ್ಬ್ರಹ್ಮದ ಕೂಗುವಿಕೆಯೇ ಆಗಿರುತ್ತದೆ. ಇಷ್ಟು ಸುಲಭವಾಗಿ ಅರ್ಥಮಾಡಿಕೊಳ್ಳಬಹುದಾದ, ಅನುಭವಗಮ್ಯವಾದ ಬ್ರಹ್ಮವನ್ನು ನಾವು ತಿಳಿಯೆವು–ಎಂದರೆ ಅದೊಂದು ಸೋಜಿಗವೇ ಸರಿ. ನಿಜವೇನೆಂದರೆ : ಬ್ರಹ್ಮದ ಅರಿವಿನ ವಿಷಯಕ್ಕೆ ಮಾನವನಿಗೆ ಅಜ್ಞಾನಕ್ಕಿಂತಲೂ ಅವಹೇಳನವೇ ಹೆಚ್ಚಿನ ಅಡ್ಡಿಯಾಗಿದೆ. ಈ ಅವಹೇಳನವನ್ನು 'ದೇವತಾಪರಾಧ'ವೆಂದು ವೇದಗಳಲ್ಲಿ ತಿಳಿಸಲಾಗಿದೆ. 'ಯದ್ದೇವಾ ದೇವಹೇಳನಮ್'– ಎಂಬ ಯಜುರ್ವೇದ ಮಂತ್ರಗಳನ್ನೂ ಅವುಗಳ ಅರ್ಥವನ್ನೂ ಬಲ್ಲವರಲ್ಲಿ ಕೇಳಿರಿ. ಆಗ ನಾವು ಮಾಡುತ್ತಿರುವ ಅಪರಾಧಗಳ ಅರಿವಾಗುವದು. ಅನಂತರವೇ ನಾವು ಬ್ರಹ್ಮವಿದ್ಯೆಗೆ ತಕ್ಕವರಾಗುವೆವು. ಕೇವಲ ಭೌತಿಕದೃಷ್ಟಿಪ್ರಧಾನವಾದ, ದೇವತಾತಿರಸ್ಕಾರಮಯವಾದ ಜೀವನವು ಎಂದಿಗಾದರೂ ಮನುಷ್ಯನಿಗೆ ಸುಖಶಾಂತಿಗಳನ್ನು ಕೊಟ್ಟೀತೆ? ಅದು ಸಾಧ್ಯವಿಲ್ಲ. ಆದರೆ ದೇವತಾದೃಷ್ಟಿಯನ್ನು ಅಳವಡಿಸಿಕೊಂಡು ನಾವೇ ನಮ್ಮಲ್ಲೇ ನೋಡಿಕೊಂಡರೆ ಜ್ಯೋತಿರ್ಬ್ರಹ್ಮವು 'ಶ್ರುತ' (ಕೇಳಬರುವ ತತ್ತ್ವವು) ಎಂದು ಗೊತ್ತಾಗುವದು. ಇದಕ್ಕೆ ಯಾವ ಯೋಗಾಭ್ಯಾಸವಾಗಲಿ ಸಮಾಧಿನಿಷ್ಠೆಯಾಗಲಿ ಬೇಕಾಗಲಾರದು. ಆದ್ದರಿಂದ ಕಷ್ಟವೆಂದು ಯಾರೂ ಹೇಳುವಂತಿಲ್ಲ. ಜ್ಯೋತಿರ್ಬ್ರಹ್ಮದ ಇರುವಿಕೆಯನ್ನು ಗುರುತಿಸುವದೇ ವೇದಾಂತದೃಷ್ಟಿಯು. ಅನಂತರ ಅದರ ಸಾಕ್ಷಾತ್ಕಾರಕ್ಕೆ ಅಗತ್ಯವಾದ ಯೋಗಾದಿಗಳನ್ನೂ ಅಳವಡಿಸಿಕೊಳ್ಳಬಹುದು. ಹೇಗೇ ಆಗಲಿ. ಜ್ಯೋತಿರ್ಬ್ರಹ್ಮವು ಪ್ರತಿಯೊಂದು ಪ್ರಾಣಿಸಾಮಾನ್ಯದ ಆತ್ಮನೇ ಆಗಿದೆ–ಎಂಬಿದು ತತ್ತ್ವವು.

ಈಗ ಜ್ಯೋತಿರ್ಬ್ರಹ್ಮದ ಧ್ವನಿಯನ್ನು ಗುರುತಿಸಲು ಕೆಲವು ಹೋಲಿಕೆಗಳನ್ನು ಶ್ರುತಿಯಲ್ಲಿ ಕೊಟ್ಟಿರುವದನ್ನು ವಿಚಾರಿಸೋಣ. ಕಿವಿಗಳೆರಡನ್ನೂ ಮುಚ್ಚಿಕೊಂಡಾಗ ಎಂದರೆ ಬೆರಳುಗಳಿಂದ ಭದ್ರವಾಗಿ ಕಿವಿಗಳ ರಂಧ್ರವನ್ನು ಒತ್ತಿ ಹಿಡಿದುಕೊಂಡಾಗ ಒಮ್ಮೊಮ್ಮೆ ಬಂಡಿಯ ಗಾಲಿಯ ಸದ್ದಿನಂತೆ 'ದಡದಡ' ಎಂಬ ಶಬ್ದವು ಕೇಳುತ್ತದೆ. ಕೆಲವು ಬಾರಿ ಎತ್ತಿನ ಗುಟುರಿನಂತೆಯೂ ಶಬ್ದವು ಕೇಳಿಸುತ್ತದೆ. ಒಳಗೇ ಕೇಳಬರುವ ಈ ವಿಧವಾದ ಧ್ವನಿಯೇ ಜ್ಯೋತಿರ್ಬ್ರಹ್ಮದ ಶ್ರವಣವು. ಹೀಗೆ ಕಂಡು, ಕೇಳಿ ಅನುಭವಿಸಿದಮೇಲೂ ಬ್ರಹ್ಮದ ವಿಷಯಕ್ಕೆ ಸಂಶಯಪಡುವವನು ನಾಸ್ತಿಕನೇ ಸರಿ. ಇರಲಿ. ಜ್ಯೋತಿರ್ಬ್ರಹ್ಮದ ಉಪಾಸಕನಾಗಲಿರುವವನು ಹೀಗೆ ತನ್ನ ಅನುಭವವನ್ನು ಗಟ್ಟಿಮಾಡಿಕೊಂಡು ಬ್ರಹ್ಮವನ್ನು ದೃಷ್ಟವೆಂದೂ ಶ್ರುತವೆಂದೂ ಉಪಾಸನೆಮಾಡಬೇಕು. ಹೇಗೆಂದರೆಃ 'ಬ್ರಹ್ಮವು ತನ್ನ ಆತ್ಮನೇ ಆಗಿದೆ. ಅದು ಶಾಖರೂಪದಿಂದ ನನಗೆ ಕಂಡುಬರುತ್ತಿದೆ. ಜಗತ್ತಿನಲ್ಲಿ ಒಳ ಹೊರಗೆಲ್ಲ ವ್ಯಾಪಿಸಿರುವ ಶಾಖವೂ ಬೆಳಕೂ ನನ್ನ ಆತ್ಮನಾದ ಬ್ರಹ್ಮದ್ದೇ. ಸಕಲ ಪ್ರಾಣಿಗಳಲ್ಲಿಯೂ ಜಠರಾಗ್ನಿರೂಪದಿಂದ ಈ ಬ್ರಹ್ಮವೇ ಇದ್ದುಕೊಂಡಿದೆ. ಶರೀರದ ಶಾಖವು ಈ ಬ್ರಹ್ಮದ ದೃಷ್ಟತತ್ತ್ವವು; ಒಳಗೆ ಕೇಳಬರುತ್ತಿರುವ ಧ್ವನಿಯು ಈ ಬ್ರಹ್ಮದ ಶ್ರುತತತ್ತ್ವವು. ನಾನು ದೃಷ್ಟಶ್ರುತವಾದ ಬ್ರಹ್ಮವನ್ನು ಚಿಂತಿಸುವೆನು' ಎಂದು ಅನುಸಂಧಾನ ಮಾಡಬೇಕು. ನಿಜವಾಗಿಯೂ ಇಂಥ ಉಪಾಸಕನು ಲೋಕದಲ್ಲಿ ಉತ್ತಮವಾದ ಖ್ಯಾತಿಯನ್ನು ಪಡೆಯುವನು–ಎಂಬುದರಲ್ಲಿಸಂಶಯವಿಲ್ಲ.

ಈ ಉಪಾಸನೆಗೆ ದೃಷ್ಟಫಲವನ್ನೂ ಹೇಳಿರುತ್ತದೆ. ಏನೆಂದರೆ : ಈ ಉಪಾಸಕನು 'ಚಕ್ಷುಷ್ಯ'ನಾಗುವನು. ಚಕ್ಷುಸ್ಸು–ಎಂದರೆ ಕಣ್ಣು. ಚಕ್ಷುಷ್ಯನೆಂದರೆ ಉತ್ತಮದೃಷ್ಟಿ ಸಂಪನ್ನನೂ ಎಲ್ಲರ ಕಣ್ಣಿಗೂ ಆಕರ್ಷಣೀಯನಾಗಿ ಕಾಣುವವನೂ ಆಗುವನು. ಈಗಿನ ಕಾಲದಲ್ಲಿದೃಷ್ಟಿದೋಷವುಳ್ಳವರಿಗೆ 'ಕನ್ನಡಕ'ಗಳನ್ನು ಒದಗಿಸುವದು ಸಾಮಾನ್ಯವಾಗಿದೆ. ಆದರೆ ಜ್ಯೋತಿರುಪಾಸನೆಯನ್ನು ಹೇಳಿಕೊಟ್ಟರೆ ಕನ್ನಡಕಗಳ ಆವಶ್ಯಕತೆಯು ಕಡಿಮೆಯಾದೀತು. ಜೊತೆಗೆ ರೂಪಸಂಪತ್ತಿಯಂತೂ ಎಲ್ಲರಿಗೂ ಬೇಕಾದ ಫಲವೇ ಆಗಿರುವದು. 'ರೂಪದರ್ಶಿ'ಗಳನ್ನು ಕಲಾವಿದರು ಹುಡುಕುತ್ತಲೇ ಇರುವರಲ್ಲವೆ? ಇನ್ನೊಂದು ಫಲವೇನೆಂದರೆ ಉಪಾಸಕನು ಸೂಕ್ಷ್ಮಶ್ರವಣವುಳ್ಳವನಾಗುವನು. ಇದುಕೂಡ ಇಷ್ಟಫಲವೇ. ಗಟ್ಟಿಯಾಗಿ ಮಾತನಾಡುವುದಕ್ಕಿಂತ ಮೆಲ್ಲನೆ ಹಿತಮಿತವಾಗಿ ಮಾತನಾಡುವದೂ ಅದನ್ನು ಗ್ರಹಿಸಿಕೊಂಡು ಕಾರ್ಯತತ್ಪರನಾಗುವದೂ ಒಳ್ಳೆಯದೇ ಸರಿ. ಜ್ಯೋತಿರ್ಬ್ರಹ್ಮೋಪಾಸಕನಿಗೆ ಇಂಥ ಗುಣಗಳು ಬ್ರಹ್ಮದ ಪ್ರಸಾದದಿಂದ ಒದಗುತ್ತವೆ. ನಮ್ಮ ಯುವಜನಾಂಗದ ವಿದ್ಯಾರ್ಥಿಗಳೂ ಸಾಧಕರೂ ಮೊದಲು ಈ ಉಪಾಸನೆಯನ್ನು ಕೈಗೊಳ್ಳಬೇಕು. ಮುಂದೆ ಇಂಥವರು ಅಧ್ಯಾತ್ಮಜ್ಞಾನಿಗಳಾಗುವದರಲ್ಲಿ ಸಂಶಯವಿಲ್ಲ. ಉಳಿದವರೂ ಯಥಾ ಯೋಗ್ಯವಾಗಿ ಈ ಉಪಾಸನೆಯನ್ನು ಮಾಡಿ ಕೃತಾರ್ಥರಾಗಬಹುದಾಗಿದೆ.

## ಶಾಂಡಿಲ್ಯವಿದ್ಯೆ

**ಓಮ್ ॥ ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ । ಅಥ ಖಲು ಕ್ರತುಮಯಃ ಪುರುಷಃ ಯಥಾಕ್ರತುರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ॥ 3–14–1**

ಭಾವಾರ್ಥ:– ಇವೆಲ್ಲವೂ–ತಜ್ಜಲಾನ್ ಆಗಿರುವದರಿಂದ–ಬ್ರಹ್ಮವೇ; ಆದ್ದರಿಂದ ಶಾಂತನಾಗಿ ಉಪಾಸನೆಮಾಡಬೇಕು. ಇನ್ನು ಪುರುಷನು ಕ್ರತುಮಯನೇ; ಪುರುಷನು ಈ ಲೋಕದಲ್ಲಿ ಎಂಥ ಕ್ರತುವುಳ್ಳವನಾಗಿರುವನೋ ಇಲ್ಲಿಂದ ಹೊರಟು ಹೋದಬಳಿಕ ಹಾಗೆಯೇ ಆಗುತ್ತದೆ, ಅವನು ಕ್ರತುವನ್ನು ಮಾಡಬೇಕು.

(ಬ್ರಹ್ಮದಿಂದಲೇ ಜಗತ್ತಿನ ಜನ್ಮ–ಸ್ಥಿತಿ–ಲಯಗಳು ಆಗುವದರಿಂದ ಎಲ್ಲವೂ ಬ್ರಹ್ಮವೇ–ಎಂದು ಶಮದಮಾದಿಸಂಪನ್ನನಾಗಿ ಚಿಂತಿಸುತ್ತಿದ್ದರೆ ಸಂಕಲ್ಪಕ್ಕೆ ಅನುಗುಣವಾಗಿ ಶರೀರವನ್ನು ಬಿಟ್ಟು ತೆರಳಿದಮೇಲೂ ಬ್ರಹ್ಮವೇ ದೊರಕುವದು–ಎಂದು ಅಭಿಪ್ರಾಯ.)

## 20. ಮನೋಮಯತ್ವಾದಿಗುಣಕಬ್ರಹ್ಮೋಪಾಸನೆ

ಉಪಾಸನೆಗಳ ಭಂಡಾರವಾಗಿರುವ ಛಾಂದೋಗ್ಯೋಪನಿಷತ್ತಿನಲ್ಲಿ ಈಗ ಪರಬ್ರಹ್ಮವನ್ನು ಉಪಾಸನೆಮಾಡುವ ಮತ್ತೊಂದು ಪ್ರಕಾರವನ್ನು ತಿಳಿಸಲಾಗುವದು. ಈ ಉಪಾಸನಾ ಸಂಪ್ರದಾಯಪ್ರವರ್ತಕನಾದ ಋಷಿಯ ಹೆಸರು ಶಾಂಡಿಲ್ಯನೆಂದು ಪ್ರಸಿದ್ಧವಾಗಿರುವದರಿಂದ ಈ ಭಾಗವನ್ನು 'ಶಾಂಡಿಲ್ಯವಿದ್ಯೆ' ಎಂದು ಕರೆಯಲಾಗಿದೆ. ಶಾಂಡಿಲ್ಯನೆಂಬ ಹೆಸರು ಭಕ್ತಿಶಾಸ್ತ್ರಪ್ರವರ್ತಕನಾದ ಋಷಿಗೂ ಅನ್ವಯಿಸುತ್ತದೆ. ಋಷಿಗಳ ಇತಿಹಾಸವು ನಮಗೆ ಖಚಿತವಾಗಿ ತಿಳಿಯುವ ಸಂಭವವಿಲ್ಲವಾದ್ದರಿಂದ ಈ ಹೆಸರಿನ ಇಬ್ಬರು ಋಷಿಗಳೇ ಬೇರೆ ಬೇರೆಯಾಗಿಯೂ ಇರಬಹುದು; ಅಥವಾ ಒಬ್ಬನೇ ಇರಬಹುದು. ಇದರಿಂದ ವಿದ್ಯಾನುಸಂಧಾನಕ್ಕೇನೂ ಅಡ್ಡಿಯಿರುವದಿಲ್ಲ. ಪ್ರಕೃತ ಶಾಂಡಿಲ್ಯ ಋಷಿಯ ಉಪಾಸನಾ ವಿಧಾನವನ್ನು ಈಗ ವಿಚಾರಮಾಡೋಣ.

ಉಪಾಸ್ಯ ಹಾಗೂ ಜ್ಞೇಯವೆಂದು ಬ್ರಹ್ಮವನ್ನು ಎರಡುವಿಧವಾಗಿ ಅಧ್ಯಾತ್ಮ ಶಾಸ್ತ್ರಗಳಲ್ಲಿ ವಿಂಗಡಿಸಿರುತ್ತದೆ. ಆದರೂ ಬ್ರಹ್ಮವು ಮಾತ್ರ ಒಂದೇ ಆಗಿದೆ. ಹೇಗೆ ಕ್ರಿಮಿನಲ್ ಮೊಕದ್ದಮೆಗಳನ್ನು ವಿಚಾರಮಾಡುವಾಗ ಮ್ಯಾಜಿಸ್ಟ್ರೇಟ್ ಎಂದೂ ಸಿವಿಲ್ ಮೊಕದ್ದಮೆಗಳನ್ನು ವಿಚಾರಮಾಡಿದಾಗ ಮುನಸೀಫ್ ಎಂದೂ ಒಬ್ಬನೇ ನ್ಯಾಯಾಧಿ

ಪತಿಯನ್ನು ವ್ಯವಹರಿಸುವೆವೋ ಹಾಗೆ ಉಪಾಸನೆಯನ್ನು ವಿವಕ್ಷೆಮಾಡಿದಾಗ ಬ್ರಹ್ಮವನ್ನು ಉಪಾಸ್ಯವೆಂದೂ ಸ್ವರೂಪವನ್ನು ವಿವಕ್ಷೆಮಾಡಿದಾಗ ಜ್ಞೇಯವೆಂದೂ ಕರೆಯಲಾಗುತ್ತದೆ. ಇಲ್ಲಿ ಉಪಾಸೀತ ಎಂದು ವಿಧಿರೂಪಕ್ರಿಯಾಪದವೇ ಇರುವದರಿಂದ ಈ ವಾಕ್ಯವು ಉಪಾಸನಾಪ್ರಧಾನವೆಂದೂ ಇದಕ್ಕೆ ಅಂಗವಾಗಿ ಬ್ರಹ್ಮದ ಗುಣಗಳನ್ನು ಹೇಳಿದೆಯೆಂದೂ ನಿಜವಾಗಿ ನಿರ್ವಿಶೇಷ ಪರಬ್ರಹ್ಮವೇ ಎಲ್ಲಾ ಉಪನಿಷತ್ತುಗಳ ಸಿದ್ಧಾಂತವಾಗಿವೆಯೆಂದೂ ಶ್ರೀ ಶಂಕರಾಚಾರ್ಯರು ತಿಳಿಸಿರುತ್ತಾರೆ. ಉಪಾಸ್ಯ–ಜ್ಞೇಯಬ್ರಹ್ಮಗಳು ಒಂದೇ ಆಗಿದ್ದು ವೇದಾಂತವಾಕ್ಯಗಳೆಲ್ಲವೂ ಆತ್ಮೈಕತ್ವಪ್ರತಿಪಾದನಪರಗಳೇ ಆಗಿವೆ–ಎಂಬ ಆಚಾರ್ಯರ ಭಾಷ್ಯವು ಉಪನಿಷತ್ತುಗಳೆಂಬ ಅಮೃತಸರೋವರಗಳಿಗೆ ನಿರ್ಮಿಸಿರುವ ಸ್ಫಟಿಕಸೋಪಾನವಾಗಿದೆ. ಹೆಚ್ಚಿನವಿವರವನ್ನು ಬಯಸುವವರು ಈ ಉಪನಿಷತ್ತಿನ ಭಾಷ್ಯವನ್ನೂ ಬ್ರಹ್ಮಸೂತ್ರಭಾಷ್ಯದ ಸರ್ವತ್ರಪ್ರಸಿದ್ಧ್ಯಧಿಕರಣವನ್ನೂ ವ್ಯಾಸಂಗಮಾಡಬೇಕು. ಈಗ ಮನೋಮಯಬ್ರಹ್ಮದ ಉಪಾಸನೆಯನ್ನು ಅರಿತುಕೊಳ್ಳೋಣ.

ಇದೆಲ್ಲವೂ ಬ್ರಹ್ಮವೇ ಆದ್ದರಿಂದ 'ತಜ್ಜಲಾನ್' ಎಂದು ಬ್ರಹ್ಮವನ್ನು ಚಿಂತಿಸಬೇಕು– ಎಂದು ಇಲ್ಲಿ ತಿಳಿಸಿದೆ. ತಜ್ಜಲಾನ್ ಎಂದರೇನು? ಎಂಬಿದನ್ನು ಭಾಷ್ಯಕಾರರು ಹೀಗೆ ಬಿಡಿಸಿರುತ್ತಾರೆ. ತಜ್ಜ–ತಲ್ಲ–ತದನ–ಎಂಬಿದಕ್ಕೆ ಕ್ರಮವಾಗಿ ಅರ್ಥವೇನೆಂದರೆ ತಸ್ಮಾತ್ ಜಾತಂ, ತಸ್ಮಿನ್ನೇವ ಲೀಯತೇ, ತಸ್ಮಿನ್ನೇವ–ಅನಿತಿ (ಪ್ರಾಣಿತಿ) ಎಂದಭಿಪ್ರಾಯ. ಇಡಿಯ ಜಗತ್ತೆಲ್ಲವೂ ಬ್ರಹ್ಮದಿಂದಲೇ ಹುಟ್ಟಿರುತ್ತದೆ; ಬ್ರಹ್ಮದಲ್ಲಿಯೇ ಲಯವಾಗುತ್ತದೆ–ಬ್ರಹ್ಮವನ್ನೇ ಆಶ್ರಯಿಸಿಕೊಂಡು ಉಸಿರಾಡುತ್ತದೆ–ಎಂದರೆ ಬದುಕಿರುತ್ತದೆ. ಆದ್ದರಿಂದ ಜಗಜ್ಜನ್ಮಾದಿ ಕಾರಣವಾಗಿರುವದೇ ಬ್ರಹ್ಮವು ಎಂದು ಚಿಂತಿಸಬೇಕು. ಹೇಗೆ ಸಕ್ಕರೆಯ ಪಾಕದಿಂದ ಸಿದ್ಧಗೊಳಿಸಿದ ಒಂದು ಬೊಂಬೆಯು ಸಕ್ಕರೆಯಿಂದಲೇ ಹುಟ್ಟಿ, ಸಕ್ಕರೆಯನ್ನೇ ಆಶ್ರಯಿಸಿಕೊಂಡು ಬದುಕಿದ್ದು ನಾಶವಾದರೆ (ಮುರಿದು ಪುಡಿಪುಡಿಯಾದರೆ) ಮತ್ತೆ ಸಕ್ಕರೆಯೇ ಆಗಿಬಿಡುವದೋ ಬೊಂಬೆಯೆನಿಸಿಕೊಂಡಾಗಲೂ ಅದು ಸಕ್ಕರೆಯೇ ಆಗಿತ್ತೋ ಹಾಗೆಯೇ ಜಗತ್ತೂ ಪರಬ್ರಹ್ಮಕ್ಕಿಂತ ಅನನ್ಯವಾಗಿದ್ದು ಉತ್ಪತ್ತಿಸ್ಥಿತಿಲಯಗಳಲ್ಲಿ ಬೇರೆಯಾಗಿದ್ದಂತೆ ತೋರಿಕೊಳ್ಳುತ್ತದೆ. ಇದೊಂದು ರೀತಿಯಿಂದ ಬ್ರಹ್ಮದ ಜ್ಞಾನಕ್ಕೂ ಉಪಾಸನೆಗೂ ಉಪಕಾರವೇ ಆಗಿರುತ್ತದೆ. ಹೀಗೆ ಜಗಜ್ಜನ್ಮಾದಿನಿಮಿತ್ತವಾದ ಬ್ರಹ್ಮವು ಎಲ್ಲವೂ ಆಗಿದೆ–ಎಂದು ಶಾಂತನಾಗಿ ಚಿಂತಿಸಬೇಕು.

ಇಲ್ಲಿ ಶಾಂತನಾಗಿ ಚಿಂತಿಸಬೇಕು–ಎಂಬಲ್ಲಿ 'ಶಮದಮಾದಿಗುಣಸಂಪನ್ನನಾಗಿ' ಎಂಬರ್ಥವನ್ನು ಸ್ವೀಕರಿಸಬೇಕು. ಉಪಾಸನೆಯು ಮಾನಸಿಕಕರ್ಮವು. ಅದಕ್ಕೆ ಮನಸ್ಸು ಪ್ರಸನ್ನವಾಗಿರುವದು, ಏಕಾಗ್ರವಾಗಿರುವದು, ವಿಕ್ಷೇಪವಿಲ್ಲದಿರುವದು–ಅಗತ್ಯವು. ಈ ಗುಣಗಳಿಲ್ಲದಿದ್ದರೆ ಉಪಾಸನೆಯೇ ದಕ್ಕುವದಿಲ್ಲ. ಶಮಾದಿ ಎಂದರೆ ಆದಿಪದದಿಂದ ದಮ, ಉಪರತಿ, ತಿತಿಕ್ಷೆ, ಶ್ರದ್ಧೆ, ಸಮಾಧಾನಗಳನ್ನೂ ತೆಗೆದುಕೊಳ್ಳಬೇಕು. ಈ

ಒಂದೊಂದು ಗುಣವೂ ಅಮೂಲ್ಯವಾದುದು. ಈಗಿನ ಕಾಲಕ್ಕೆ ನಾವು ಧನವಂತರನ್ನೂ ಲೌಕಿಕವಿದ್ಯಾವಂತರನ್ನೂ ಬುದ್ಧಿಶಾಲಿಗಳನ್ನೂ ಚಾಕಚಕ್ಯತೆಯುಳ್ಳವರನ್ನೂ ಹೆಚ್ಚಾಗಿ ಕಾಣುತ್ತೇವೆ. ಆದರೆ ಸಮಾಧಾನ, ತೃಪ್ತಿ, ಸಂಯಮ, ಸಹನೆ, ಆಂತರಿಕವಾದ ಶ್ರದ್ಧೆ ಮುಂತಾದ ಗುಣವಿಶಿಷ್ಟರಾದವರನ್ನು ಕಾಣುವದೇ ಅಪರೂಪವಾಗಿದೆ. ಭಗವಚ್ಚಿಂತನೆಗಾಗಿಯೇ ಎಲ್ಲಾ ಲೌಕಿಕಕರ್ಮಗಳನ್ನೂ ತ್ಯಾಗಮಾಡಿ ಕುಳಿತಿರುವ ಸಂನ್ಯಾಸಿಗಳು ಕೂಡ ಕೆಲವು ವೇಳೆ ಅಶಾಂತರಾಗಿ, ಧನಸಂಗ್ರಹಮತಿಯುಳ್ಳವರಾಗಿ ಜಂಭ, ಹಟಗಳ ಬಂಧನಕ್ಕೆ ಸಿಕ್ಕಿ ಲೌಕಿಕವ್ಯವಹಾರನಿರತರಾಗಿರುವದುಂಟು. ಯಾರಾದರೂ ಶಾಂತ್ಯಾದಿಗಳನ್ನು ಬಯಸಿ ಅವರ ಬಳಿಗೆ ಹೋದರೆ ಅವರು ಸಂಸಾರಿಗಳಿಗಿಂತ ಹೆಚ್ಚು ದುಃಖಗಳಿಂದಾವೃತರಾಗಿ ಯಾವಾಗಲೂ ಧನಚಿಂತೆ, ಶತ್ರುನಾಶಾದಿಗಳ ಪ್ರಯತ್ನದಲ್ಲೇ ಇರುವದನ್ನು ಕಂಡಾಗ ನಿರಾಶೆಯೇ ಮೂಡುವದು. ಇದೆಂಥ ವಿಪರ್ಯಾಸವೆಂಬುದನ್ನು ಹೇಳಬೇಕಾದ್ದಿಲ್ಲ. ಇಂಥವರಾರಿಗೂ ಬ್ರಹ್ಮಚಿಂತನೆಯು ದಕ್ಕಲಾರದೆಂಬುದನ್ನು ಶಾಂತ ಉಪಾಸೀತ–ಎಂಬಿದು ತಿಳಿಸುತ್ತದೆ. ಆದ್ದರಿಂದ ನಾವು ಉಪಾಸಕರಾಗಲೇಬೇಕೆನಿಸಿದರೆ ಪ್ರಯತ್ನವನ್ನು ಮಾಡಿಯಾದರೂ ಶಮದಮಾದಿಗಳನ್ನು ಸಂಪಾದಿಸಿಕೊಳ್ಳಲೇಬೇಕು.

ಈಗ ಮತ್ತೊಂದು ವಿಷಯವನ್ನು ಶ್ರುತಿಯು ನಮ್ಮ ಮುಂದೆ ಇಡುತ್ತಿದೆ. ಕನ್ನಡದಲ್ಲಿ 'ಮನಸ್ಸಿನಂತೆ ಮಹಾದೇವ' ಎಂಬುದೊಂದು ಗಾದೆಯಿದೆ. ಅದರ ಅಭಿಪ್ರಾಯವನ್ನೇ ಇಲ್ಲಿ ಪ್ರಸ್ತಾಪಿಸಿ 'ಪುರುಷನು ಯಥಾಕ್ರತುವಾಗಿ ಬಾಳುವನು. ಸತ್ತಮೇಲೂ ಹಾಗೇ ಆಗುವನು' ಎಂದು ತಿಳಿಸಲಾಗಿದೆ. ಕ್ರತು ಎಂದರೆ ಭಾವನೆ, ನಿಶ್ಚಯ, ತೀರ್ಮಾನ ಎಂದರ್ಥ. ನಾವು ಏನೆಂದು ಭಾವಿಸುವೆವೋ ಪ್ರಪಂಚದಲ್ಲಿ ಅದಾಗುವದು. ಒಬ್ಬ ದುರ್ದೈವಿಯು ಹಾದಿಯಲ್ಲಿ ನಡೆಯುತ್ತಾ ಬಳಲಿ ಒಂದು ಮರದ ನೆರಳಿಗೆ ಬಂದು 'ಅಯ್ಯೋ, ಇಲ್ಲೊಂದು ಹಾಸಿಗೆ, ಮಂಚವಿರಬಾರದಿತ್ತೆ? ಎಂದುಕೊಂಡನಂತೆ. ಆ ಮರವು ಕಲ್ಪವೃಕ್ಷವಾಗಿದ್ದುದರಿಂದ ಅವನ ಸಂಕಲ್ಪದಂತೆ ಕೂಡಲೆ ಮಂಚಹಾಸಿಗೆಗಳು ಕಾಣಿಸಿಕೊಂಡವು. ಮುಂದುವರೆದು ಆತನು ಆಹಾರ, ಪಾನೀಯ, ಗೀತಧ್ವನಿಗಳನ್ನು ಬಯಸಿದಂತೆಲ್ಲ ಎಲ್ಲವೂ ಒದಗಿಬಂತು. ಕಡಗೆ ? ಅಯ್ಯೋ, ನಾನೊಬ್ಬನೇ ಇರುವೆನು 'ಹುಲಿ ಬಂದರೇನು ಗತಿ?' ಎಂದ ಕೂಡಲೆ ಹುಲಿಯೇ ಬಂದು ಅವನನ್ನು ತಿಂದುಹಾಕಿ ತಂತೆ. ಇದು ಕಟ್ಟುಕಥೆಯಾಗಿರಬಹುದಾದರೂ ನೀತಿಯಂತೂ ಸತ್ಯವೇ. ಆ ನತದೃಷ್ಟನು ಹುಲಿಯನ್ನೇಕೆ ಸಂಕಲ್ಪಿಸಿದನು? ಅದರ ಬದಲು ಗಂಧರ್ವಾಪ್ಸರೆಯರನ್ನಾದರೂ ನೆನೆಯಬಾರದಿತ್ತೆ? ಹಾಗೆಯೇ ಈ ಪ್ರಪಂಚವೂ ಒಂದು ಕಲ್ಪವೃಕ್ಷವೇ ಆಗಿದ್ದರೂ ನಾವು ಮಾಡುತ್ತಿರುವ ಕೆಟ್ಟ ಆಲೋಚನೆಗಳಿಂದ ನರಕವಾಗಿಬಿಟ್ಟಿದೆ. ಈ ದುರಾಲೋಚನೆ ಗಳಿಂದ ಮೊದಲು ಪಾರಾಗಲು ನಾವು ಕೂಡಲೆ ಸದಾಲೋಚನೆಗಳನ್ನಾರಂಬಿಸಬೇಕು.

ಇದೇ ಉಪಾಸನೆಯು. ನಾವು ಮಾಡುತ್ತಿದ್ದ ಯಾವ ಆಲೋಚನೆಗಳೇ ಆಗಲಿ, ಶರೀರವನ್ನು ಬಿಟ್ಟಮೇಲೂ ಹಿಂಬಾಲಿಸಿಯೇ ತೀರುವವು. ಅದನ್ನು ಇಲ್ಲಿ 'ತಥೇತಃ ಪ್ರೇತ್ಯ ಭವತಿ' ಎಂದು ತಿಳಿಸಲಾಗಿದೆ. ಆದ್ದರಿಂದ ನಮ್ಮ ಜೀವನವು ಸದಾಲೋಚನೆಗಳಿಂದಾರಂಭ ವಾದರೆ ಅವುಗಳೇ ಮುಂದುವರೆದು ಸಾಯುವಾಗಲೂ ಅವೇ ನಮ್ಮನ್ನು ಹಿಂಬಾಲಿಸುವವು. ಕಾಫೀಬೋರ್ಡಿನವರ ಜಾಹಿರಾತಿನಲ್ಲಿ 'ನಿಮ್ಮ ಪ್ರತಿದಿನದ ವ್ಯವಹಾರ ವನ್ನು ಒಂದು ಲೋಟ ಕಾಫಿಕುಡಿಯುವದರಿಂದಾರಂಭಿಸಿರಿ' ಎಂದಿರುವಂತೆ ಉಪನಿಷತ್ತಿನ ಜಾಹಿರಾತು ನಿಮ್ಮ ಜೀವನದ ಪ್ರತಿ ಪ್ರಾತಃಕಾಲವನ್ನೂ 'ಒಂದು ಸದಾಲೋಚನೆ ಯಿಂದಾರಂಭಿಸಿರಿ' ಎಂದು ಸಾರುತ್ತಿದೆ. ವೇದಗಳಲ್ಲಿರುವ ಪ್ರಾತಃಸೂಕ್ತವೆಂಬ ಮಂತ್ರಭಾಗವನ್ನೂ ಅದರರ್ಥವನ್ನೂ ಈಗಲೇ ವೇದಮೂರ್ತಿಗಳಿಂದ ಅರಿತುಕೊಳ್ಳಿರಿ.

ಇನ್ನು ಬ್ರಹ್ಮದ ಉಪಾಸನೆಯನ್ನು ಕೈಗೊಳ್ಳುವಾಗ ನಾವು ಅನುಸಂಧಾನ ಮಾಡಬೇಕಾದ ಬ್ರಹ್ಮದ ಗುಣಗಳಾವುವು? ಎಂಬಿದನ್ನು ನೋಡೋಣ. ಅವುಗಳನ್ನು ಉಪನಿಷತ್ತು ಹೀಗೆ ತಿಳಿಸುತ್ತಿದೆಃ (1)ಮನೋಮಯನು (2)ಪ್ರಾಣಶರೀರನು (3)ಭಾರೂಪನು (4)ಸತ್ಯಸಂಕಲ್ಪನು (5)ಆಕಾಶಾತ್ಮನು (6)ಸರ್ವಕರ್ಮನು (7)ಸರ್ವಕಾಮನು (8)ಸರ್ವಗಂಧನು (9)ಸರ್ವರಸನು (10)ಈ ಜಗತ್ತನ್ನೆಲ್ಲ ವ್ಯಾಪಿಸಿಕೊಂಡಿರುವವನು (11)ಅವಾಕಿಯು (12)ಅನಾದರನು–ಹೀಗೆ ಹನ್ನೆರಡು ಗುಣಗಳಿಂದ ವಿಶಿಷ್ಟನಾಗಿರುವವನು–ಎಂದು ಚಿಂತಿಸಬೇಕು. ಈ ಗುಣಗಳ ಅಭಿಪ್ರಾಯವನ್ನು ಮನನಮಾಡುವದರಿಂದ ಲಾಭವಿದೆ. ಮನೋಮಯನೆಂದರೆ ಮನಸ್ಸೆಂಬ ಉಪಾಧಿಯನ್ನಾಶ್ರಯಿಸಿ ತೋರಿಕೊಳ್ಳುತ್ತಿರುವ ಚೈತನ್ಯಸ್ವರೂಪನು. ಪ್ರಾಣಶರೀರನೆಂದರೆ ಪ್ರಾಣವನ್ನೇ ಶರೀರವನ್ನಾಗಿ ಉಳ್ಳವನು. ಈ ಸೂಕ್ಷ್ಮಶರೀರದ ಮೂಲಕ ದೇಹದಿಂದ ದೇಹಕ್ಕೆ ಸಂಚರಿಸುವವನಾಗಿರುವ ಆತ್ಮನು–ಎಂದರ್ಥ. ಭಾರೂಪನೆಂದರೆ ತೇಜೋಮಯವಾದ ಸ್ವರೂಪದವನು. ಸತ್ಯಸಂಕಲ್ಪನು ಹೇಗೆಂದರೆಃ ಪರಬ್ರಹ್ಮದ ಸಂಕಲ್ಪಗಳು ಎಂದಿಗೂ ವ್ಯರ್ಥವಾಗುವದಿಲ್ಲ. 'ಹರಿ ಚಿತ್ತ ಸತ್ಯ' ಎಂದು ದಾಸರು ಹಾಡಿರುವದನ್ನು ಕೇಳಿದ್ದೀರಲ್ಲವೆ? ಭಗವಂತನ ಇಚ್ಛೆಯೇ ಕೊನೆಗೂ ನಡೆಯತಕ್ಕದ್ದಾಗಿದೆ. ಇನ್ನು ಆಕಾಶಾತ್ಮನೆಂದರೆಃ ಆಕಾಶದಂತೆ ಅಸಂಗವಾದ ಸ್ವರೂಪವುಳ್ಳ ವನು. ಸರ್ವಕರ್ಮನೆಂದರೆ ಜಗತ್ತೆಲ್ಲವೂ ಈಶ್ವರನಿಂದಲೇ ಮಾಡಲ್ಪಟ್ಟಿರುವದರಿಂದ ಎಲ್ಲವೂ ಅವನ ಸೃಷ್ಟಿಯೇ ಎಂದರ್ಥ. ಸರ್ವಕಾಮನೆಂದರೆ ದೋಷರಹಿತವಾದ ಧರ್ಮಾವಿರುದ್ಧವಾದ ಎಲ್ಲಾ ಕಾಮಗಳೂ ಇವನ ಅಧೀನದಲ್ಲೇ ಇರುವವು. ಮತ್ತು ಈತನು ಪರಿಪೂರ್ಣಕಾಮನು–ಎಂದು ಅಭಿಪ್ರಾಯ. ಸರ್ವಗಂಧನೂ ಸರ್ವರಸನೂ ಆಗಿರುವನೆಂದರೆ ಪೃಥಿವಿಯಲ್ಲಿರುವ ಪುಣ್ಯಗಂಧರಸಗಳು ಈತನ ಅಂಶವೇ ಎಂದರ್ಥ. ಹೀಗೆ ಸಕಲಕಲ್ಯಾಣಗುಣಾಕರನಾಗಿದ್ದು ಭಗವಂತನೆನಿಸಿರುವ ಈ ಆತ್ಮನು ಈ

ಜಗತ್ತೆಲ್ಲವನ್ನೂ ಅಭಿವ್ಯಾಪಿಸಿಕೊಂಡಿರುವನು. ಎಲ್ಲೆಲ್ಲಿಯೂ ತನ್ನ ಸಾನ್ನಿಧ್ಯವನ್ನು ನೆಲೆಗೊಳಿಸಿರುವನು. ಅವಾಕಿ ಎಂದರೆ ಮಾತಿಲ್ಲದವನು ಎಂದು ಸಾಮಾನ್ಯಾರ್ಥವಾದರೂ ವಾಗಿಂದ್ರಿಯಕ್ಕೂ ಪ್ರೇರಕನಾಗಿದ್ದು ಅದನ್ನು ತನ್ನ ಚೈತನ್ಯಶಕ್ತಿಯಿಂದಲೇ ವ್ಯಾಪಾರಮಾಡಿಸುವ ಕೂಟಸ್ಥ ರೂಪನಾಗಿರುತ್ತಾನೆ–ಎಂದಭಿಪ್ರಾಯ. ಇದರಂತೆಯೇ ಉಳಿದ ಎಲ್ಲಾ ಕರಣಗಳ ವ್ಯಾಪಾರಗಳಿಗೂ ಈತನೇ ಸಾಕ್ಷಿಯೆಂದು ತಿಳಿಯಬೇಕು. ಇನ್ನು ಅನಾದರನೆಂದರೆ ಸಂಭ್ರಮವಿಲ್ಲದವನು. ಏಕೆಂದರೆ ಆಪ್ತಕಾಮನಾಗಿರುವದರಿಂದ ಏನನ್ನೂ ಪಡೆದುಕೊಳ್ಳಬೇಕಾದದ್ದಿಲ್ಲವಾಗಿ ಸಂಸಾರಿಗಳಂತೆ ಈತನು ಚಡಪಡಿಸ ಬೇಕಾಗಿಲ್ಲ. ಹೀಗೆ ಗುಣವಿಶಿಷ್ಟನೆಂದೂ ಜಗಜ್ಜನ್ಮಾದಿಕಾರಣನೆಂದೂ ಆತ್ಮನನ್ನು ಚಿಂತಿಸ ಬೇಕು. ಆತ್ಮ–ಬ್ರಹ್ಮ ಎಂಬ ಶಬ್ದಗಳಿಗೆ ಒಂದೇ ಅರ್ಥವಿರುವದರಿಂದ ಬ್ರಹ್ಮವನ್ನು ಈ ಗುಣವಿಶೇಷಗಳಿಂದೊಡಗೂಡಿ ಉಪಾಸನೆಮಾಡಬೇಕೆಂದು ಹೇಳಿದೆ–ಎಂದರೂ ಇದೇ ಅಭಿಪ್ರಾಯವು.

ಬ್ರಹ್ಮೋಪಾಸನೆಯ ಪ್ರಕರಣದಲ್ಲಿ ಈ ಸಗುಣೋಪಾಸನೆಯ ವಿವರವು ಸಾಧಕರಿಗೆ ಬಹಳ ಉಪಯುಕ್ತವಾಗಿದ್ದು ಗುಣಗಳ ಅನುಸಂಧಾನದ ಮೂಲಕ ಬ್ರಹ್ಮದಲ್ಲಿ ಮನಸ್ಸನ್ನು ನೆಲೆಗೊಳಿಸಲು ಅನುಕೂಲವಾಗಿದೆ. ಉಪಾಸಕರಾಗಲಿರುವವರು ಈ ವೈದಿಕೋಪಾಸನೆಯ ಕಡೆಗೆ ಲಕ್ಷ್ಯವಿಡಬೇಕಾಗಿ ಪ್ರಾರ್ಥನೆ.

———————

## ಶಾಂಡಿಲ್ಯವಿದ್ಯೆ–2

**ಓಮ್ ॥ ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವಮಿದಮಭ್ಯಾತ್ತೋ ಅವಾಕೀ ಅನಾದರಃ ಏಷ ಮ ಆತ್ಮಾ ಅನ್ತರ್ಹೃದಯೇ ಏತದ್ ಬ್ರಹ್ಮ ಏತಮಿತಃ ಪ್ರೇತ್ಯ ಅಭಿಸಂಭವಿತಾಸ್ಮಿ ಇತಿ.....ಹ ಸ್ಮಾಹ ಶಾಂಡಿಲ್ಯಃ ಶಾಂಡಿಲ್ಯಃ ॥ 3–14–4.**

**ಭಾವಾರ್ಥಃ**– ಸರ್ವಕರ್ಮನು, ಸರ್ವಕಾಮನು; ಸರ್ವಗಂಧನು; ಸರ್ವರಸನು; ಇದೆಲ್ಲದರಲ್ಲಿಯೂ ಅಭ್ಯಾತ್ತನಾಗಿರುವನು; ಅವಾಕಿಯು; ಅನಾದರನು; ಹೃದಯದೊಳಗಿರುವ ಇವನು ನನ್ನ ಆತ್ಮನು. ಇವನನ್ನು ಇಲ್ಲಿಂದ ಹೊರಟುಹೋಗಿ ಸೇರುವವನಾಗಿರುವೆನು–ಎಂದು ಹೇಳುತ್ತಾನೆ, ಶಾಂಡಿಲ್ಯನು.

(ಮನೋಮಯತ್ವಾದಿಗುಣವಿಶಿಷ್ಟನೂ ಅತ್ಯಂತ ಸೂಕ್ಷ್ಮನೂ ಹಾಗೂ ಅತಿ ದೊಡ್ಡವನೂ ಆಗಿರುವ ಆತ್ಮನೇ ನನ್ನ ಆತ್ಮನು. ನಾನು ಈ ಉಪಾಸನೆಯಿಂದ ಇಂಥ ಗುಣವಿಶಿಷ್ಟವಾದ ಬ್ರಹ್ಮವನ್ನೇ ಶರೀರವು ಬಿದ್ದ ಮೇಲೆ ಸೇರಲಿರುವೆನು–ಎಂದು ಶಾಂಡಿಲ್ಯನೆಂಬ ಋಷಿಯು ಉಪಾಸನೆಮಾಡುತ್ತಿದ್ದನು–ಎಂದಭಿಪ್ರಾಯ.)

# 21. ಸಗುಣಬ್ರಹ್ಮದ ಉಪಾಸನೆ

ಶಾಂಡಿಲ್ಯವಿದ್ಯೆಯನ್ನು ಕುರಿತು ಹಿಂದಿನ ಲೇಖನದಲ್ಲಿ ಕೆಲವು ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ವಾಚಕರು ಅವನ್ನು ಮತ್ತೆಮತ್ತೆ ಮನನಮಾಡಬೇಕು. ಇದು ಉಪಾಸನೆಯಾದರೂ ಜ್ಞಾನಕ್ಕೆ ಸಹಾಯಕವಾಗಿದ್ದು ಸಾಧಕರಿಗೆ ಬಹಳ ಉಪಯುಕ್ತವಾಗಿರುತ್ತದೆ. ಏಕೆಂದರೆ ಒಂದೇ ಬ್ರಹ್ಮವೇ ಉಪಾಸ್ಯವೂ ಜ್ಞೇಯವೂ ಆಗಿರುವದರಿಂದ ಸಾಧಕನು ತನ್ನ ಚಿತ್ತವನ್ನು ಬ್ರಹ್ಮದ ಗುಣಗಳ ಅನುಸಂಧಾನದಲ್ಲಿಯೇ ಮುಳುಗಿಸಿದಂತೆಲ್ಲ ಅದು ಸಕ್ಕರೆಯಪಾಕದಲ್ಲಿ ಅದ್ದಿದ ಜಿಲೇಬಿಯಂತೆ ಬ್ರಹ್ಮಗುಣಗಳೊಡನೆ ತಾದಾತ್ಮ್ಯವನ್ನೇ ಪಡೆಯುತ್ತಾ ಹೋಗುತ್ತದೆ. ಅದರ ಕಷಾಯ–ಚಾಂಚಲ್ಯ–ಪ್ರಮಾದಗಳೆಲ್ಲ ಕಡಿಮೆಯಾಗಿ ಬ್ರಹ್ಮಪ್ರಾಪ್ತಿಗೆ ಅದು ತಕ್ಕದ್ದಾಗುತ್ತಾ ಹೋಗುವದು. ಆದ್ದರಿಂದ ನಿರ್ಗುಣಬ್ರಹ್ಮದ ಪ್ರಾಪ್ತಿಗೆ ಸಗುಣಬ್ರಹ್ಮದ ಚಿಂತನೆಯು ಸೋಪಾನವಾಗಿರುತ್ತದೆ. ಕೆಲವರು ನಿರ್ಗುಣವೆಂದರೆ ಗುಣಗಳಿಲ್ಲದ್ದು–ಎಂದು ಭಾವಿಸಿ ಸಗುಣಚಿಂತನೆಯು ನಿರ್ಗುಣಬ್ರಹ್ಮಪ್ರಾಪ್ತಿಗೆ ಹೇಗೆ ಸಾಧನವಾದೀತು? ಬ್ರಹ್ಮವು ಸಗುಣವೂ ನಿರ್ಗುಣವೂ ಆಗಿರುವದು ಹೇಗೆ ಸಾಧ್ಯ? ಒಂದೇ ವಸ್ತುವಿನಲ್ಲಿ ಎರಡು ವಿರುದ್ಧಧರ್ಮಗಳಿರಲಾರವಲ್ಲವೆ? ಎಂದು ಕೇಳುತ್ತಿರುವರು. ಅದಕ್ಕೆ ಉತ್ತರವೇನೆಂದರೆ: ಸಮುದ್ರವು ನದಿಗಳಿಲ್ಲದ್ದು–ಎಂದರೆ ಹೇಗೋ ಹಾಗೆ–ಎಂದು ಹೇಳಬಹುದು. ನದಿ–ಎಂಬ ವ್ಯವಹಾರದಲ್ಲಿ ಕಾವೇರಿ–ಮುಂತಾದ ಹೆಸರು, ಪಶ್ಚಿಮವಾಹಿನಿ–ಮುಂತಾಗಿ ತೀರ್ಥಗಳು ಹೇಗೆ ಭೇದಗಳಿರುವಂತೆ ಕಂಡುಬರುತ್ತದೆ. ಆದರೆ ಎಲ್ಲಾ ನದಿಗಳೂ ಸಮುದ್ರದಲ್ಲಿ ಒಂದಾಗಿಬಿಟ್ಟಾಗ ಸಮುದ್ರವನ್ನು ಕಾವೇರ್ಯಾದಿನಾಮರೂಪಗಳಿಂದ ಕರೆಯಲು ಸಾಧ್ಯವೇ? ಇಲ್ಲವಾದರೆ ಕಾವೇರ್ಯಾದಿಗಳು ಸಮುದ್ರದಲ್ಲಿಲ್ಲವೆ? ನಿಜವೇನೆಂದರೆ ಹೆಸರುಗಳು ಮಾತ್ರ ಇಲ್ಲವಾದವೇ ಹೊರತು ಸಮಸ್ತತೀರ್ಥಗಳೂ ಸಮುದ್ರದಲ್ಲಿದ್ದೇ ಇವೆ. ಹಾಗೆಯೇ ಬ್ರಹ್ಮ–ಎಂದಿಷ್ಟು ಮಾತ್ರವೇ ಅರಿತಾಗ ಅದು ಗುಣ–ಜಾತಿ–ಕ್ರಿಯಾ–ದ್ರವ್ಯತ್ವಾದಿಗಳನ್ನು ಮೀರಿ ಕೇವಲ ಸಚ್ಚಿನ್ಮಾತ್ರವಾಗಿ ಕಂಡುಬರುವದು. ಇದನ್ನು ನಿರ್ಗುಣವೆಂದದ್ದರಿಂದ ಅಪರಾಧವೇನೂ ಆಗಿಲ್ಲ. ನಿರ್ಗುಣ–ಎಂದರೆ ಗುಣಗಳಿಲ್ಲದ್ದು–ಎಂಬರ್ಥವು ಸರಿಯಲ್ಲ; ಮತ್ತೇನೆಂದರೆ ಗುಣಗಳನ್ನು ಮೀರಿದ್ದು–ಎಂದರ್ಥ. ಹೇಗೆ ಒಂದು ಪದಾರ್ಥವನ್ನು "ಅಮೂಲ್ಯ" ವೆಂದು ಕರೆದರೆ "ಬೆಲೆಯಿಲ್ಲದ್ದು" ಎಂಬರ್ಥವಾಗಲಾರದೋ, "ಬೆಲೆಕಟ್ಟಲಾಗದ್ದು" ಎಂಬರ್ಥವು ಸರಿಯೋ ಹಾಗೆಯೇ 'ನಿರ್ಗುಣ' ವೆಂದರೆ ಗುಣಗಳನ್ನೂ ದಾಟಿ ನಿಂತಿರುವದು–ಎಂದು ಅಭಿಪ್ರಾಯ. ಹೀಗಿರುವದರಿಂದ ಗುಣಾತೀತವಾಗಿರುವ ಬ್ರಹ್ಮವನ್ನು ಗ್ರಹಣಮಾಡಲಾರದವರು ಗುಣವಿಶಿಷ್ಟವಾಗಿ ಗ್ರಹಿಸಿದರೆ ಅದೇನೂ ಬ್ರಹ್ಮವಲ್ಲದೆ ಹೋಗಲಾರದು. ಮುಂದೆ ಅವರೇ ಗುಣಗಳನ್ನು

ಕಳಚಿ ಬ್ರಹ್ಮವನ್ನೇ ಉಳಿಸಿಕೊಂಡರಾದರೆ ಅಂಥವರು ಖಂಡಿತ ತತ್ತ್ವಜ್ಞಾನಿಗಳಾಗುವದೇ ದಿಟ. ಬ್ರಹ್ಮದಲ್ಲಿ ಗುಣಗುಣಿಭಾವವೇನೂ ಇರುವದಿಲ್ಲ. ಉಪಾಸಕರು ತಮ್ಮ ಇಚ್ಛಾನುಸಾರವಾಗಿ ಗುಣಗಳನ್ನು ಬ್ರಹ್ಮಕ್ಕೆ ಲಗತ್ತಿಸಿದರೆ ಅವುಗಳೇನೂ ಬ್ರಹ್ಮವನ್ನು ವಿಕಾರಗೊಳಿಸಲಾರವು. ಹಾಗೆಯೇ ಗುಣಗಳು ಕಣ್ಮರೆಯಾದರೂ ಬ್ರಹ್ಮಕ್ಕೆ ಏನೂ ಕೊರತೆಯಾಗುವದಿಲ್ಲ. ಅಂತೂ ಬ್ರಹ್ಮವು ತಾನಿದ್ದಂತೆಯೇ ನಿರ್ವಿಕಾರವೂ ಕೂಟಸ್ಥವೂ ಆಗಿದ್ದುಕೊಂಡು ಗುಣಗಳೆಲ್ಲವೂ ತೋರಿಕೊಳ್ಳಲು ಆಶ್ರಯವಾಗಿರುವದು–ಎಂದೇ ಜ್ಞಾನಿಗಳ ಹೇಳಿಕೆಯಿದೆ.

ಇಂಥ ಜ್ಞಾನಿಗಳಲ್ಲೊಬ್ಬರಾದ ಶಾಂಡಿಲ್ಯರು ಲೋಕಾನುಗ್ರಹಾರ್ಥವಾಗಿ ಹಾಗೂ ಬಹುಜನರಿಗೆ ಸಗುಣಬ್ರಹ್ಮದ ಚಿಂತನೆಯೇ ಬೇಗನೆ ಬುದ್ಧಿಗೆ ಹತ್ತುವದರಿಂದ ಮನೋಮಯತ್ವಾದಿ ಹನ್ನೆರಡುಗುಣಗಳಿಂದ ಕೂಡಿದ ಬ್ರಹ್ಮವನ್ನು ಚಿಂತಿಸಬೇಕೆಂದು ಉಪದೇಶಿಸಿರುತ್ತಾರೆ. ಈ ಗುಣಗಳ ವಿವರವನ್ನು ಹಿಂದೆ ಕೊಡಲಾಗಿದೆ. ಈಗ ಈ ಬ್ರಹ್ಮವು ಅಣುವೂ ಬೃಹತ್ತೂ ಆಗಿದೆ–ಎಂಬುದನ್ನು ತಿಳಿಸಿಸುತ್ತಾರೆ. ಅಣುವೆಂದರೆ ಚಿಕ್ಕದು. ಎಷ್ಟು ಚಿಕ್ಕದೆಂಬುದನ್ನು ಹೋಲಿಕೆಯಿಂದ ವಿವರಿಸುತ್ತಾರೆ. ಹೇಗೆಂದರೆ: ಬತ್ತದ ಕಾಳಿಗಿಂತ, ಜವೆ (ಗೋಧಿ)ಯ ಕಾಳಿಗಿಂತ, ಸಾಸುವೆಕಾಳಿಗಿಂತ, ಅಥವಾ ಸಾವೆಯ ಅಕ್ಕಿಯ ಕಾಳಿಗಿಂತ ಈ ಆತ್ಮನು ಚಿಕ್ಕವನು–ಎಂದು ತಿಳಿಸಲಾಗಿದೆ. ಹಾಗೆಯೇ ಆತ್ಮನು ಅತಿ ದೊಡ್ಡವನು. ಹೇಗೆಂದರೆ: ಭೂಮಿಗಿಂತಲೂ, ಅಂತರಿಕ್ಷಕ್ಕಿಂತಲೂ ಈ ಎಲ್ಲಾ ಲೋಕಗಳಿಗಿಂತಲೂ ದೊಡ್ಡವನು–ಎಂದೂ ವರ್ಣಿಸಲಾಗಿದೆ. ಇವುಗಳ ಸಮನ್ವಯವನ್ನು ನಾವು ಮನಸ್ಸಿಗೆ ತಂದುಕೊಳ್ಳಬೇಕು. ಯಾವದೇ ವಸ್ತುವು ಅತಿ ಚಿಕ್ಕದಾಗಿಯೂ ಅತಿ ದೊಡ್ಡದಾಗಿಯೂ ಒಮ್ಮೆಗೇ ಇರಲಾರದಾದರೂ ಅಮೂರ್ತವೂ ನಿರುಪಾಧಿಕವೂ ಆದ ವಸ್ತುವು ಸಾಪೇಕ್ಷವಾಗಿ ಹಾಗಿರಬಹುದು. ಉದಾಹರಣೆಗೆ: ಸೂಜಿಯ ಕಣ್ಣಿನಲ್ಲಿರುವ ಆಕಾಶವು ಅತಿ ಚಿಕ್ಕದೆಂದೂ ಕತ್ತೆತ್ತಿನೋಡಿದಾದ ನಮ್ಮ ತಲೆಯ ಮೇಲೆ ಹರಡಿರುವ ಆಕಾಶವು ಅತಿ ದೊಡ್ಡದೆಂದೂ ವ್ಯವಹರಿಸಲ್ಪಡುತ್ತದೆಯಷ್ಟೆ! ಆದರೆ ಆಕಾಶದಲ್ಲಿ ನಿಜವಾಗಿ ಈ ಎರಡು ಪರಿಮಾಣಗಳೂ ಇರುವದಿಲ್ಲ. ಅದು ದೊಡ್ಡದು, ಚಿಕ್ಕದು–ಎಂಬ ವ್ಯವಹಾರವನ್ನೇ ಮೀರಿದ್ದಾಗಿರುವದು. ಹಾಗೆಯೇ ಪರಬ್ರಹ್ಮವು ಆಕಾಶಕ್ಕೂ ಆತ್ಮನಾಗಿರುವದರಿಂದ ಉಪಾಧಿಗಳ ಅಪೇಕ್ಷೆಯಿಂದಲೇ ಚಿಕ್ಕದೆಂದೂ ದೊಡ್ಡದೆಂದೂ ಚಿಂತಿಸಲು ಬರುವಂತಿದೆ. ಅದನ್ನೇ ಇಲ್ಲಿ ತಿಳಿಸಿರುತ್ತಾರೆ. ಆದ್ದರಿಂದ ಬ್ರಹ್ಮಚಿಂತಕರು ತಮ್ಮ ಹೃದಯಕಾಶದಲ್ಲಿಯೇ ಆ ವಸ್ತುವನ್ನು ಚಿಂತಿಸುವದಾದರೆ ಅದು ಅತೀವ ಸಣ್ಣದಾಗಿರುವದು. ಭೌತಿಕವಾಗಿ ಚಿಂತಿಸುವದಾದರೆ ಎಲ್ಲಕ್ಕಿಂತಲೂ ದೊಡ್ಡದೇ ಆಗಿರುವದು. ಬೇರೊಂದು ಶ್ರುತಿಯಲ್ಲಿಯೂ ಬ್ರಹ್ಮವನ್ನು ವರ್ಣಿಸುವಾಗ ಚಿಕ್ಕದಕ್ಕಿಂತ

ಚಿಕ್ಕದೂ ದೊಡ್ಡದಕ್ಕಿಂತ ಅತಿ ದೊಡ್ಡದೂ ಆಗಿರುವ ಬ್ರಹ್ಮವು ಈ ಪ್ರಾಣಿಗಳ ಹೃದಯದಲ್ಲಿದ್ದುಕೊಂಡಿರುವದು– ಎಂದೇ ವಿವರಿಸಿರುತ್ತದೆ.

ಈ ಶಾಂಡಿಲ್ಯವಿದ್ಯೆಯಲ್ಲಿ ''ಸರ್ವಕರ್ಮಾ......'' ಮುಂತಾದ ಗುಣಗಳನ್ನು ಎರಡೆರಡು ಬಾರಿ ಹೇಳಿರುತ್ತದೆ. ಇದರ ಅಭಿಪ್ರಾಯವೇನೆಂದರೆ ಮನೋಮಯತ್ವಾದಿ ಗುಣೋಪಲಕ್ಷಿತವಾದ ಬ್ರಹ್ಮವನ್ನು ಚಿಂತನೆಮಾಡಬೇಕೇ ಹೊರತು ಆ ಗುಣಗಳಿಂದ ಯಾವಾಗಲೂ ಒಡಗೂಡಿಯೇ ಇರುವ ಈಶ್ವರನನ್ನು ಚಿಂತಿಸಬೇಕು– ಎಂದೇನೂ ಅಲ್ಲ– ಎಂಬುದನ್ನು ತಿಳಿಸುವದಕ್ಕಾಗಿ ಎರಡುಬಾರಿ ಹೇಳಿದೆ. ಹೇಗೆಂದರೆ ಯಾರಾದರೊಬ್ಬರು ರಾಜಬೀದಿಯಲ್ಲಿ ಹೋಗುತ್ತಿರುವಾಗ ಒಬ್ಬನನ್ನು 'ರಾಮರಾಯರ ಮನೆ ಯಾವದು?' ಎಂದು ಕೇಳಿದರೆಂದಿಟ್ಟುಕೊಳ್ಳಿ, ಆತನು 'ಅದೊ, ಆ ಕಾರು ನಿಂತಿರುವದಲ್ಲವೆ, ಅದರ ಪಕ್ಕದ ಗೇಟುಬಾಗಿಲಿನ ಮನೆ' ಎಂದು ಹೇಳಿದನೆಂದು ಇಟ್ಟುಕೊಳ್ಳಿ. ಇಲ್ಲಿ ರಾಮರಾಯರ ಮನೆಗೂ ಕಾರು ನಿಂತಿರುವದಕ್ಕೂ ಯಾವ ಸಂಬಂಧವೂ ಇಲ್ಲ. ಆದರೆ ಮನೆಯನ್ನು ಗುರುತಿಸುವದಕ್ಕೆ ಅದು ಆ ಸಮಯಕ್ಕೆ ಸಹಾಯಕವಾಯಿತು. ಒಂದು ವೇಳೆ ಅವರು ಮನೆಯ ಸಮೀಪಕ್ಕೆ ಹೋಗುವ ವೇಳೆಗಾಗಲೇ ಕಾರು ಮುಂದಕ್ಕೆ ಹೋಗಿರಲೂಬಹುದು. ಹಾಗೆಯೇ ಇಲ್ಲಿಯೂ ಸರ್ವಕರ್ಮನೇ ಮುಂತಾದ ಗುಣಗಳು ಬ್ರಹ್ಮವನ್ನು ಗುರುತಿಸುವ ದಕ್ಕೆ ಸಹಾಯಕವಾಗಿವೆ. ಈ ಗುಣಗಳು ಯಾವಾಗಲೂ ಬ್ರಹ್ಮದಲ್ಲಿದ್ದುಕೊಂಡೇ ಇರಬೇಕೆಂಬ ನಿಯಮವಿಲ್ಲ. ಇಲ್ಲಿ ಬ್ರಹ್ಮದ ಉಪಾಸನೆಯು ಪ್ರಧಾನವೇ ಹೊರತು ಗುಣಗಳ ವಿಧಾನವು ಪ್ರಧಾನವಲ್ಲ– ಎಂದು ತಿಳಿಯಬೇಕು.

ಹಾಗಾದರೆ ಈ ಗುಣಗಳನ್ನು ಬ್ರಹ್ಮದಲ್ಲಿ ಎರಡು ಬಾರಿ ವಿಧಾನಮಾಡಿರುವದೇಕೆ? ಬ್ರಹ್ಮದಲ್ಲಿ ಆ ಗುಣಗಳು ಇಲ್ಲವೆ? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವೇನೆಂದರೆ : ಸಗುಣವಾಕ್ಯಗಳು ಯಾವಾಗಲೂ ವಿಧಿಪರವಾಗಿರುತ್ತವೆ; ಎಂದರೆ ಮನೋಮಯತ್ವಾದಿಗುಣಕವಾದ ಬ್ರಹ್ಮವನ್ನು ಉಪಾಸನೆಮಾಡಬೇಕು– ಎಂಬಲ್ಲಿ 'ಉಪಾಸನೆಮಾಡಬೇಕು' ಎಂಬ ವಿಷಯದಲ್ಲಿಯೇ ಅವುಗಳ ತಾತ್ಪರ್ಯವೂ ಅವಧಾರಣೆಯೂ ಇರುತ್ತದೆ. ಅಷ್ಟೇ ಹೊರತು ಮನೋಮಯತ್ವಾದಿಗುಣಗಳು ಬ್ರಹ್ಮದಲ್ಲಿ ನಿಜವಾಗಿಯೂ ಇವೆ–ಎಂಬ ವಿಷಯದಲ್ಲಿಯೂ ಅವುಗಳ ತಾತ್ಪರ್ಯ ವಿರುವದಿಲ್ಲ. ಹೇಗೆ ಯಾವನಾದರೊಬ್ಬನು ''ಹೆಚ್ಚೆಗೆ ಸಾವಿರವರಹಗಳನ್ನು ಕೊಟ್ಟರೂ ನಾನು ಅವನ ಮನೆಗೆ ಹೋಗುವದಿಲ್ಲ'' ಎಂದು ಹೇಳಿದರೆ 'ಹೋಗುವದಿಲ್ಲ'– ಎಂಬುದರಲ್ಲಿ ತಾತ್ಪರ್ಯವೇ ಹೊರತು ಸಾವಿರದ ಬದಲು ಸಾವಿರದಹತ್ತುವರಹಗಳನ್ನು ಕೊಟ್ಟರೆ ಹೋಗುತ್ತಾನೆ–ಎಂದೇನೂ ಅರ್ಥವಿಲ್ಲವೋ ಹಾಗೆಯೇ ಈ ವಾಕ್ಯಗಳಲ್ಲಿ 'ಉಪಾಸನೆ ಮಾಡಬೇಕು' ಎಂಬಲ್ಲಿ ತಾತ್ಪರ್ಯವೇ ಹೊರತು ಗುಣಗಳು ಇದೇ ಬ್ರಹ್ಮದಲ್ಲಿ

ಸತ್ಯವಾಗಿಯೂ ಇವೆ–ಎಂಬುದು ತಾತ್ಪರ್ಯವೆಂದು ಕಲ್ಪಿಸಲು ಬರುವಂತಿಲ್ಲ. 'ಸರ್ವಂ ವಾಕ್ಯಂ ಸಾವಧಾರಣಮ್' ಎಂಬ ನ್ಯಾಯದಂತೆ ಒಂದೊಂದು ವಾಕ್ಯಕ್ಕೂ ಒಂದೊಂದು ವಿಷಯದಲ್ಲಿ ಮಾತ್ರವೇ ಅವಧಾರಣೆಯಿರುತ್ತದೆ. ಇಲ್ಲಿ 'ಉಪಾಸೀತ' ಎಂಬುದರಲ್ಲಿ ಅವಧಾರಣೆಯಿದೆ.

ಈವರೆಗೆ ತಿಳಿಸಿರುವಂತೆ ಈ ಉಪನಿಷದ್ಭಾಗವು ಉಪಾಸನಾಪರವಾದದ್ದೇ–ಎಂಬುದಕ್ಕೆ ಇಲ್ಲಿಯೇ ಮಂತ್ರದಲ್ಲಿ ಸೂಚನೆಯಿರುತ್ತದೆ. ''ಏತಮಿತಃ ಪ್ರೇತ್ಯ ಅಭಿಸಂಭವಿತಾಸ್ಮಿ'' –ಎಂಬುದೇ ಅದು. 'ಈ ದೇಹವನ್ನು ಬಿಟ್ಟು ತೆರಳಿದ ಅನಂತರ ಈತನನ್ನು ಸೇರಲಿರುವೆನು'–ಎಂಬ ವಾಕ್ಯದಲ್ಲಿ ಈ ಉಪಾಸನಾಫಲವು ಲೋಕಾಂತರಗಳಲ್ಲಾಗುವದೆಂದು ಸ್ಪಷ್ಟವಾಗಿ ಹೇಳಿರುತ್ತದೆ. ಜ್ಞಾನಫಲವಾದರೆ ಹೀಗೆ ಭವಿಷ್ಯತ್ಕಾಲವನ್ನು ಕಾಯಬೇಕಾದದ್ದಿರುವದಿಲ್ಲ. ಅದು ಸದ್ಯಃಫಲವನ್ನೇ ವರ್ತಮಾನ ಕಾಲದಲ್ಲಿಯೇ ಉಂಟುಮಾಡತಕ್ಕದ್ದಾಗಿರುತ್ತದೆ. ಆದ್ದರಿಂದ ಈ ಭಾಗವು ಉಪಾಸನಾಪರವೆಂದು ನಿರ್ಣಯಿಸಲು ಯಾವ ಅಡ್ಡಿಯೂ ಇರುವದಿಲ್ಲ. ಉಪಾಸನೆಗಾಗಿ ಹೇಳಿರುವ ಗುಣಗಳೂ ಬ್ರಹ್ಮದ ಗುರುತಿಗಾಗಿ–ಎಂಬುದೂ ಇದರಿಂದ ಸಿದ್ಧವಾಗುತ್ತದೆ. ಆದ್ದರಿಂದ ಉಪನಿಷತ್ತುಗಳಲ್ಲಿ 'ಬ್ರಹ್ಮವು ನಿರ್ಗುಣನಿರಾಕಾರವಾಗಿದೆ–ಎಂದು ಬರೆದಿರುವ ಕಡೆಗಳಲ್ಲಿ 'ತತ್ಪರ'ವೆಂದೂ, ಗುಣ ವಿಶಿಷ್ಟವಾಗಿದೆ ಎಂದು ಬರೆದಿರುವ ಕಡೆಗಳಲ್ಲಿ 'ಅತತ್ಪರ'ವೆಂದೂ, ಬ್ರಹ್ಮಸೂತ್ರಗಳಲ್ಲಿ ನಿರ್ಣಯಿಸಿರುತ್ತದೆ. ಇದರಿಂದ ಉಪಾಸನೆಗೇನೂ ಕೊರತೆಯಾಗುವದಿಲ್ಲ–ಎಂದು ತಿಳಿಯಬೇಕು.

ಹೀಗೆ ಶಾಂಡಿಲ್ಯವಿದ್ಯೆಯು ಬ್ರಹ್ಮೋಪಾಸಕರಿಗೆ ಒಂದು ವರಪ್ರದಾನದಂತಿದೆ. ಇಂಥ ಉಪಾಸನೆಗಳು ಜ್ಞಾನನಿಷ್ಠೆಯ ಕಡೆಗೆ ಸಾಧಕರನ್ನು ಅವಶ್ಯವಾಗಿ ಕರೆದೊಯ್ಯಬಲ್ಲವು. ಬ್ರಹ್ಮದ ಗುಣಗಳ ಚಿಂತನೆಯು ಮಾನವನನ್ನು ಪ್ರಾಪಂಚಿಕವಿಷಯಗಳ ಚಿಂತನೆಯ ಕೆಸರಿನಿಂದ ಬಿಡಿಸಿ ಪರಿಶುದ್ಧಿಗೊಳಿಸುವದು. ಗುಣವೀರ್ಯತೇಜೋಶಕ್ತಿ ಬಲಾದಿಗಳು ಜಗತ್ತಿನಲ್ಲಿ ತೋರಿಕೊಳ್ಳುತ್ತಿರುವವೆಲ್ಲವೂ ಬ್ರಹ್ಮವೆಂಬ ಮೂಲದಿಂದಲೇ ಹೊರಹೊಮ್ಮಿರುವವು. ಬ್ರಹ್ಮದ ಅಪಾರವಾದ ಮಹಿಮೆಯೂ ಶಕ್ತಿಯೂ ಈ ಗುಣಗಳ ವರ್ಣನೆಯಿಂದ ಸಾಧಕನಿಗೆ ಮನದಟ್ಟಾಗುವದು. ಯಾವ ಸಾಧಕನೇ ಆಗಲಿ, ಮೊದಲು ಸಗುಣೋಪಾಸಕನಾಗಿಯೇ ಅನಂತರ ನಿರ್ಗುಣೋಪಾಸಕನಾಗಬೇಕಾಗಿದೆ. ಬ್ರಹ್ಮದ ದೃಷ್ಟಿಯಿಂದ ಯಾವ ಗುಣಗಳೂ ಬ್ರಹ್ಮಕ್ಕಿಂತ ಭಿನ್ನವಾಗಿ ಇಲ್ಲವಾದರೂ ಪ್ರಪಂಚದ ದೃಷ್ಟಿಯಿಂದ ಸರ್ವಜ್ಞವೂ ಸರ್ವಶಕ್ತವೂ ಜಗತ್ಕಾರಣವೂ ಆದ ಬ್ರಹ್ಮವೊಂದೇ ಸಕಲರಿಗೂ ಉಪಾಸ್ಯವಾಗಿರುವದು. ಆದ್ದರಿಂದ ಸಗುಣ–ನಿರ್ಗುಣಗಳ ಸಮನ್ವಯವನ್ನು ಒಂದೇ ಬ್ರಹ್ಮದಲ್ಲಿ ಕಂಡುಕೊಳ್ಳುವ ಶಾಸ್ತ್ರೀಯವಾದ ತಿಳಿವಳಿಕೆಯನ್ನು ಸಾಧಕರು

ಸಂಪಾದಿಸಿಕೊಳ್ಳಬೇಕು. ಹಾಗೆಯೇ ಜ್ಞಾನೋಪಾಸನೆಗಳೆರಡೂ ಸಾಧನಗಳೇ ಆದರೂ, ಮಾನಸಿಕವೇ ಆದರೂ ಜ್ಞಾನವು ವಸ್ತುತಂತ್ರವೂ ಉಪಾಸನೆಯು ಕರ್ತೃತಂತ್ರವೂ ಆಗಿರುವವೆಂಬುದನ್ನೂ ವೇದಾಂತಾಚಾರ್ಯರುಗಳ ಉಪದೇಶದಿಂದ ಅರಿತುಕೊಳ್ಳ ಬೇಕು. ಕಡೆಯಲ್ಲಿ ಉಪಾಸ್ಯಬ್ರಹ್ಮವೇ ಜ್ಞೇಯಬ್ರಹ್ಮವೆಂಬುದನ್ನು ಮನವರಿಕೆಮಾಡಿ ಕೊಂಡು ಕೇವಲ ಬ್ರಹ್ಮಮಾತ್ರನಾಗಿ ಉಳಿದುಕೊಳ್ಳುವ ಮುಕ್ತಿಯನ್ನು ಪಡೆದುಕೊಳ್ಳಬೇಕು.

## ಪುರುಷವಿದ್ಯಾಸ್ತುತಿ

ಓಮ್ ॥ ಉದ್ವಯಂ ತಮಸಸ್ಪರಿ ಜ್ಯೋತಿಃ ಪಶ್ಯಂತ ಉತ್ತರಗ್ಂ ಸ್ವಃ ಪಶ್ಯಂತ ಉತ್ತರಂ ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮ್ ॥
3–17–7.

ಭಾವಾರ್ಥಃ– ನಾವು ತಮಸ್ಸಿನ ಆಚೆಯಿರುವ ಉತ್ತರವಾದ ನಮ್ಮ ಜ್ಯೋತಿಯನ್ನು ಕಾಣುತ್ತಾ ದೇವತೆಗಳಲ್ಲಿರುವ ದೇವನಾದ ಉತ್ತಮ ಜ್ಯೋತಿಯಾದ ಸೂರ್ಯನನ್ನು ಮೇಲೇರಿ ಸೇರಿದೆವು.

(ಪುರುಷನು ತಾನೇ ಯಜ್ಞವೆಂದು ಭಾವಿಸಿಕೊಂಡವನಾಗಿ ತನ್ನ ಆಯುಷ್ಯವನ್ನೆಲ್ಲ ಶಾಸ್ತ್ರದ ತಿಳಿವಳಿಕೆಯಂತೆ ವಿಭಾಗಿಸಿಕೊಂಡು ಆದಿತ್ಯಾದಿದೇವತೆಗಳ ರೂಪನಾದ ಪ್ರಾಣನ ಉಪಾಸನೆ ಯನ್ನು ಕೈಗೊಂಡರೆ ಅವನ ಪ್ರಸಾದದಿಂದ ಬ್ರಹ್ಮವನ್ನೇ ಸೇರಿ ಅಮೃತನಾಗುವನು. ಏಕೆಂದರೆ ಆದಿತ್ಯನೇ ಮೊದಲಾದ ದೇವತೆಗಳು ಪರಬ್ರಹ್ಮವೇ–ಎಂದಭಿಪ್ರಾಯ.)

# 22. ದೀರ್ಘಾಯುಸ್ಸಿಗಾಗಿ ಉಪಾಸನೆ

ಛಾಂದೋಗ್ಯೋಪನಿಷತ್ತಿನಲ್ಲಿ ಆರನೆಯ ಅಧ್ಯಾಯವು ಪ್ರಾರಂಭವಾಗುವ ವರೆಗೂ ಉಪಾಸನೆಗಳೇ ಮುಂದುವರೆಯುವವು. ಶಾಂಡಿಲ್ಯವಿದ್ಯೆಯ ಅನಂತರ ಪುತ್ರನ ದೀರ್ಘಾಯುಸ್ಸಿಗಾಗಿ ಒಂದು ಉಪಾಸನೆಯನ್ನು ಹೇಳಿದ ಬಳಿಕ ಈಗ ಮಾನವನಿಗೆ ತನ್ನ ಸ್ವಂತ ಜೀವನದಲ್ಲಿ ದೀರ್ಘಕಾಲದ ಬದುಕಿಗಾಗಿ ಒಂದು ಉಪಾಸನೆಯನ್ನು ಹೇಳಲಾರಂಭಿಸಿದ್ದಾರೆ. ಅದರ ವಿವರವನ್ನು ನೋಡೋಣ.

'ಪುರುಷನೇ ಯಜ್ಞವು'–ಎಂದು ಇದರ ಆರಂಭವು. ಮನುಷ್ಯನಿಗೆ ಹುಟ್ಟಿದಾಗಿನಿಂದ ತಾನು ಬಹುಕಾಲದವರೆಗೆ ಬದುಕಬೇಕೆಂಬ ಆಶೆಯಿದ್ದೇ ಇರುತ್ತದೆ. ಆದರೆ ಅದಕ್ಕಾಗಿ ವೈದಿಕೋಪಾಸನೆಗಳನ್ನಾಗಲಿ ಇತರ ಶಾಸ್ತ್ರೀಯಸಾಧನಗಳನ್ನಾಗಲೀ ಮಾಡಲು ಆತನು ಸಿದ್ಧನಾಗಿಲ್ಲ, ಅಷ್ಟೇ ಅಲ್ಲ, ಯಾವ ಸಾಧನವನ್ನು ಹೇಗೆ ಮಾಡ

ಬೇಕೆಂಬುದೂ ತಿಳಿದಿರುವದಿಲ್ಲ. ಆದ್ದರಿಂದ ಶ್ರದ್ಧಾಭಕ್ತಿಯುಳ್ಳವನಾಗಿದ್ದು ದೀರ್ಘಾಯುಸ್ಸನ್ನು ಹೊಂದಲು ಇಚ್ಛೆಯುಳ್ಳವನಿಗೆ ಈಗ ಒಂದು ಉಪಾಸನೆಯನ್ನು ತಿಳಿಸಲಾಗುತ್ತದೆ. ಇಲ್ಲಿ ಮನುಷ್ಯನ ಆಯುಸ್ಸಿನ ಪರಮಾವಧಿಯನ್ನು 116 ವರ್ಷಗಳೆಂದು ಇಟ್ಟುಕೊಂಡು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಭಾಗಕ್ಕೆ 24 ವರ್ಷಗಳೆಂದೂ ಎರಡನೆಯ ಭಾಗಕ್ಕೆ 44 ವರ್ಷಗಳೆಂದೂ ಮೂರನೆಯ ಭಾಗಕ್ಕೆ 48 ವರ್ಷಗಳೆಂದೂ ಗೊತ್ತುಮಾಡಲಾಗಿದೆ. ಇವುಗಳನ್ನು ಯಜ್ಞಕರ್ಮದ ಪರಿಭಾಷೆಗೆ ಅನುಗುಣವಾಗಿ ಪ್ರಾತಃಸವನ, ಮಾಧ್ಯಂದಿನಸವನ, ತೃತೀಯ ಸವನವೆಂದೂ ಕರೆದಿರುತ್ತಾರೆ. ಮನುಷ್ಯನ ಆಯುಷ್ಯದ ಮೊದಲನೆಯ 24 ವರ್ಷಗಳು ಪ್ರಾತಃ ಸವನವೆನಿಸುವದು. ಯಜ್ಞದಲ್ಲಿ ತ್ರಿಕಾಲಗಳಲ್ಲಿಯೂ ಹೋಮ, ಆಹುತಿಪ್ರದಾನಗಳಿದ್ದೇ ಇರುವವು. ಬೆಳಗಿನ ವೇಳೆಯಲ್ಲಿ ಅನುಷ್ಠಿಸುವದನ್ನು ಪ್ರಾತಃಸವನವೆನ್ನುವರು. ಹಾಗೆಯೇ ಪ್ರಾರಂಭದ 24 ವರ್ಷಗಳನ್ನು ಉಪಾಸಕನು ತಾನೇ ಯಜ್ಞವೆಂದೂ ತನ್ನ ಆಯುಸ್ಸಿನ ಮೊದಲನೆಯ ಭಾಗವು ಪ್ರಾತಃ ಸವನವೆಂದೂ ಚಿಂತಿಸಬೇಕು. ಯಜ್ಞದಲ್ಲಿ ಪ್ರಾತಃಸವನಕ್ಕೆ ದೇವತೆಗಳಿರುವಂತೆಯೇ ಪುರುಷಯಜ್ಞದಲ್ಲಿಯೂ ಪ್ರಾಣಗಳೆಂಬ ವಸುದೇವತೆಗಳಿರುತ್ತಾರೆ. ಪ್ರಾಣಗಳನ್ನು ವಸುಗಳೆಂದು ಕರೆದಿರುವದೇಕೆಂದರೆ–ಪ್ರಾಣಗಳಿದ್ದರೇ ವಾಕ್ಕು, ಚಕ್ಷುಸ್ಸು, ಶ್ರೋತ್ರಾದಿ ಕರಣಗಳು –ದೇಹದಲ್ಲಿ ವಾಸಮಾಡಿಕೊಂಡಿರುವವು. ಹೀಗೆ ವಾಗಾದಿಗಳ ವಾಸಕ್ಕೆ ಕಾರಣರಾಗಿದ್ದು ಅವುಗಳು ವಾಸಮಾಡುವಂತೆ ಪ್ರಾಣಗಳು ಏರ್ಪಡಿಸುವದರಿಂದ ಪ್ರಾಣಗಳನ್ನು ವಸುಗಳೆಂದಿದೆ. ಈ ಪ್ರಾಣದೇವತೆಗಳನ್ನು ಪ್ರತಿದಿನವೂ ಸಾಧಕನು ಬೆಳಗಿನ ವೇಳೆಯಲ್ಲಿ ಚಿಂತಿಸಬೇಕು. ಹೇಗೆಂದರೆ: 'ಪ್ರಾಣದೇವತೆಗಳಿರಾ, ನೀವು ನನ್ನ ಆಯುಸ್ಸಿನ ಮೊದಲ ಭಾಗದ ದೇವತೆಗಳಾಗಿರುವಿರಿ; ನಿಮ್ಮ ಅನುಗ್ರಹದಿಂದ ಈ 24 ವರ್ಷಗಳನ್ನು ನಾನು ಯಾವ ಅಡ್ಡಿ ಆತಂಕಗಳಿಲ್ಲದೆ ದಾಟಲಿರುವೆನು. ನೀವು ಅನುಗ್ರಹಮಾಡಿರಿ' ಎಂದು ಕೇಳಿಕೊಳ್ಳಬೇಕು.

ಇಲ್ಲಿ ಪುರುಷನ ಆಯುಷ್ಯದ ಮೊದಲನೆಯ ಭಾಗವನ್ನು 24 ವರ್ಷಗಳೆಂದು ಗೊತ್ತುಮಾಡಲು ಕಾರಣವೇನು? ಎಂದರೆ ವೇದದಲ್ಲಿರುವ ಕೆಲವು ಮಂತ್ರಗಳಲ್ಲಿ ಗಾಯತ್ರೀ ಎಂಬ ಛಂದಸ್ಸು ಹೆಣೆದುಕೊಂಡಿದೆ. ಆ ಛಂದಸ್ಸಿಗೆ 24 ಅಕ್ಷರಗಳು. ಗಾಯತ್ರೀಛಂದಸ್ಸಿನ ಬಹುಪಾಲು ಮಂತ್ರಗಳು ಯಜ್ಞದಲ್ಲಿ ಉಪಯೋಗಿಸಲ್ಪಡುತ್ತವೆ. ಈ ಸಾದೃಶ್ಯದಿಂದ ಪುರುಷಯಜ್ಞದ ಪ್ರಾತಃಸವನವನ್ನೂ 24 ವರ್ಷಗಳೆಂದು ಗೊತ್ತು ಮಾಡಲಾಗಿರುತ್ತದೆ. ಇದೇ ರೀತಿಯಾಗಿ ವೇದದಲ್ಲಿ ಮತ್ತೆ ಕೆಲವು ಮಂತ್ರಗಳು ತ್ರಿಷ್ಟುಪ್– ಎಂಬ ಛಂದಸ್ಸಿನಲ್ಲಿರುವವು. ಆ ಛಂದಸ್ಸಿಗೆ 44 ಅಕ್ಷರಗಳು ನಿಗದಿಯಾಗಿರುವವು. ಆದ್ದರಿಂದ ಪುರುಷಯಜ್ಞದ ದ್ವಿತೀಯಸವನವನ್ನು 44 ವರ್ಷಗಳೆಂದು ಗೊತ್ತುಪಡಿಸಿದ್ದಾರೆ. ಹೀಗೆಯೇ ಮತ್ತೆ ಕೆಲವು ಯಾಜ್ಞಿಕಮಂತ್ರಗಳು ಜಗತೀ

ಛಂದಸ್ಸಿನಲ್ಲಿರುವವು. ಆ ಛಂದಸ್ಸು 48 ಅಕ್ಷರಗಳುಳ್ಳದ್ದು. ಆದ್ದರಿಂದ ಮರುಷಯಜ್ಞದ ತೃತೀಯಸವನವೂ 48 ವರ್ಷಗಳ ಅವಧಿಯುಳ್ಳದ್ದಾಗಿರುವದು. ಈ ರೀತಿಯಾಗಿ ಯಜ್ಞದಲ್ಲಿ ಬಳಸುವ ವೇದಮಂತ್ರಗಳ ಛಂದೋಕ್ಷರಸಂಖ್ಯೆಗಳಿಗೆ ಅನುಗುಣವಾಗಿ ಮರುಷಯಜ್ಞದ ಆಯುರ್ಭಾಗವನ್ನೂ ಗೊತ್ತುಪಡಿಸಲಾಗಿದೆ. ಮೇಲೆ ತಿಳಿಸಿದ ಮೂರು ಛಂದಸ್ಸುಗಳಲ್ಲಿಯೇ ಬಹಳಮಟ್ಟಿಗೆ ವೇದಮಂತ್ರಗಳು ಅಡಕವಾಗಿರುವವು. ಆದ್ದರಿಂದ ಏಳು ವೈದಿಕಛಂದಸ್ಸುಗಳಲ್ಲಿ ಪ್ರಧಾನವಾಗಿರುವ ಗಾಯತ್ರೀ, ತ್ರಿಷ್ಟುಪ್, ಜಗತೀ–ಎಂಬ ಮೂರನ್ನೂ ಸ್ವೀಕರಿಸಿ ಮರುಷಯಜ್ಞವನ್ನು ಸಂಪಾದಿಸಲಾಗಿದೆ. ಸಂಪಾದನೆ ಎಂದರೆ ಒಂದು ಆಲಂಬನದಲ್ಲಿ ಅದಕ್ಕಿಂತ ಉತ್ಕೃಷ್ಟ ವಸ್ತುವಿನ ದೃಷ್ಟಿಯನ್ನು ಮಾಡುವದು–ಎಂದರ್ಥ. ಪ್ರಕೃತದಲ್ಲಿ ಮರುಷನ ಆಯುಸ್ಸಿನಲ್ಲಿ ಯಜ್ಞದೃಷ್ಟಿಯನ್ನು ಅಳವಡಿಸಲಾಗಿದೆ. ಈ ಉಪಾಸನೆಯ ವಿವರದಂತೆ ಮರುಷನ ಪೂರ್ಣಾಯುಸ್ಸು 116 ವರ್ಷಗಳಾಗುತ್ತವೆ.

ಈಗ ಉಪಾಸನೆಯ ವಿವರಗಳನ್ನು ಮತ್ತಷ್ಟು ತಿಳಿಯೋಣ. ಮೊದಲನೆಯ 24 ವರ್ಷಗಳಲ್ಲಿ ಏನಾದರೂ ಜ್ವರಾದಿರೋಗಗಳುಂಟಾಗಿ ಅವು ಪ್ರಾಣಾಂತಕವಾಗುವಂಥ ಸಂದರ್ಭವು ಬಂದರೆ ಆಗ ಉಪಾಸಕನು 'ಎಲೈ ಪ್ರಾಣವಸುಗಳೆ, ಈ ಸಮಯವು ನನ್ನ ಜೀವನದ ಪ್ರಾತಃಸವನವು. ಇಲ್ಲಿಂದ ನಾನು ಮಾಧ್ಯಂದಿನ ಸವನಕ್ಕೆ ಸಂಬಂಧಿಯಾಗುವಂತೆ ಮಾಡಿರಿ. ಎಂದರೆ ನನ್ನ ಜೀವನವನ್ನು ಮುಂದುವರಿಸಿರಿ. ಯಜ್ಞನಾದ ನಾನು ಪ್ರಾಣವಸುಗಳಾದ ನಿಮ್ಮೊಡನೆ–ಎಂದರೆ ನಿಮ್ಮ ಯಜಮಾನಿಕೆಯಲ್ಲಿ ನಾಶವಾಗದಂತೆ ನೋಡಿಕೊಳ್ಳಿರಿ. ಕಾಪಾಡಿರಿ'–ಎಂದು ಬೇಡಿಕೊಳ್ಳಬೇಕು. ಆಗ ಉಪಾಸಕನು ರೋಗಾದಿಗಳಿಂದ ಬಿಡಲ್ಪಟ್ಟವನಾಗುವನು; ಮತ್ತು ಪ್ರಾಣವಸುದೇವತೆಗಳ ದಯೆಯಿಂದ ಮುಂದಿನ ಸವನಾಯುಷ್ಯವನ್ನು ತಲುಪುವನು. ಇದೊಂದು ವೈದಿಕವಾದ ಉಪಾಸನೆಯು. ಆದರೂ ಯಾರೇ ಆಗಲಿ–ಹೀಗೆ ಜ್ವರಾದಿರೋಗಗಳು ಬಂದು ಹಾಸಿಗೆಯಲ್ಲಿ ಮಲಗಿದಾಗ ಪ್ರಾಣದೇವತೆಗಳನ್ನು ಪ್ರಾರ್ಥಿಸಬೇಕು. ಆ ಸಮಯಕ್ಕೆ ಪೂರ್ಣವಾಗಿ ಬಿಡುವಿರುವದರಿಂದ ಮನಸ್ಸಿನಲ್ಲಿ ದೇವತೆಗಳ ಚಿಂತನೆಯನ್ನು ಮಾಡಲು ಸಾಧ್ಯವಿದೆ. ಜೊತೆಗೆ ಆಗ್ಗೆ ಆಹಾರಾದಿಗಳು ಸೇರುವದಿಲ್ಲವಾದ್ದರಿಂದ ಉಪವಾಸವನ್ನೂ ಆಚರಿಸಿದಂತಾಗುವದು. ಮೈಯಲ್ಲಿ ಉಂಟಾಗುವ ತಾಪ, ನೋವು–ಮುಂತಾದವುಗಳು ತಪಸ್ಸೆನಿಸುವವು. ಹೀಗೆ ರೋಗಾದಿಗಳು ಸಂಭವಿಸಿದಾಗಲೂ ಕಾಲವನ್ನು ವ್ಯರ್ಥ ಮಾಡದೆ ಭಗವಚ್ಚಿಂತನೆಗೆ ಅಳವಡಿಸಿಕೊಳ್ಳಬೇಕು. ಆದರೆ ಆರೋಗ್ಯವಾಗಿರುವಾಗಲೇ ಉಪಾಸನೆಯು ಕಷ್ಟಸಾಧ್ಯವಾಗಿರುವಲ್ಲಿ ರೋಗವುಂಟಾದಾಗ ಇದು ಹೇಗೆ ಸಾಧ್ಯ? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವೇನೆಂದರೆ: ಆರೋಗ್ಯವಾಗಿರುವಾಗಲೇ ಪರಮಾತ್ಮನ ಚಿಂತನೆಯನ್ನು ಅಭ್ಯಾಸಮಾಡಿ ಕೊಂಡಿದ್ದವನಿಗೆ ರೋಗವುಂಟಾದಾಗಲೂ ಅಂಥವನು ಶರೀರವನ್ನು ನಿರ್ಲಕ್ಷಿಸಿ ಉಪಾಸನೆಯನ್ನು ಮಾಡ

ಬಹುದು. ಉದಾಹರಣೆಗೆ : ಭೀಷ್ಮಾಚಾರ್ಯರು ಶರಪಂಜರದಲ್ಲಿ ಮಲಗಿದ್ದಾಗಲೂ ಭಗವಂತನನ್ನು ಚಿಂತಿಸುತ್ತಲೇ ಇದ್ದರಲ್ಲವೆ? ಹಾಗೆಯೇ ಅಭ್ಯಾಸ ಬಲದಿಂದ ಎಲ್ಲವೂ ಸಾಧ್ಯವೆಂದು ತಿಳಿಯಬೇಕು.

ಈಗ ಎರಡನೆಯ ಸವನವನ್ನು ವಿಚಾರಮಾಡೋಣ. ಈ ಸವನಕ್ಕೆ 44 ವರ್ಷಗಳೆಂದು ಈಗಾಗಲೇ ತಿಳಿಸಿದ್ದಾಗಿದೆ. ಇಂಥ ವಯಸ್ಸಿನಲ್ಲಿಯೂ ರೋಗಾದಿಗಳು ಸಂಭವಿಸಬಹುದು. ಆಗ ರುದ್ರದೇವತೆಗಳನ್ನು ನೆನೆಯಬೇಕು. ಪ್ರಾಣದೇವತೆಗಳೇ ರುದ್ರರೆಂದೂ ವ್ಯವಹರಿಸಲ್ಪಟ್ಟಿದ್ದಾರೆ. ಏಕೆಂದರೆ ಅವರು ಮನುಷ್ಯನನ್ನು ಅಳುವಂತೆಯೂ ಮಾಡಬಲ್ಲರು. ಪ್ರಸನ್ನರಾದರೆ ಅಳುವನ್ನು ಓಡಿಸಲೂಬಲ್ಲರು. ಆದ್ದರಿಂದ ಎರಡನೆಯ ಸವನದ ಈ ಅವಧಿಯಲ್ಲಿ ಪ್ರಾಣಗಳನ್ನು ರುದ್ರರೆಂದು ಚಿಂತಿಸುತ್ತಾ ಹಿಂದೆ ತಿಳಿಸಿದಂತೆಯೇ ಪ್ರಾರ್ಥಿಸಿಕೊಳ್ಳಬೇಕು. 'ರುದ್ರರುಗಳಿರಾ, ನಾನು ವಿಚ್ಛೇದವಿಲ್ಲದೆ ಮೂರನೆಯ ಸವನವನ್ನು ತಲುಪುವಂತೆ ನೀವು ಆಯುಷ್ಯವನ್ನು ದಯಪಾಲಿಸಿರಿ' ಎಂದು ಬೇಡಿಕೊಳ್ಳಬೇಕು. ಇದು ಪುರುಷಯಜ್ಞದ ದ್ವಿತೀಯ ಸವನವೆನಿಸುವದು.

ಇನ್ನು ಮೂರನೆಯ ಸವನದಲ್ಲಿ ಜೀವನದ ಕಡೆಯ 48 ವರ್ಷಗಳು ಬಂದೊದಗುವವು. ಆ ಕಾಲಕ್ಕೆ ಆದಿತ್ಯರು ಒಡೆಯರು. ಆದಿತ್ಯರೆಂದರೂ ಪ್ರಾಣಗಳೇ. 'ಆದದತೇ ಇತ್ಯಾದಿತ್ಯಾಃ' ಎಂಬರ್ಥದಲ್ಲಿ ಪ್ರಾಣಗಳು ಶಬ್ದಾದಿಗಳನ್ನು ಸ್ವೀಕರಿಸುವರಾದ್ದರಿಂದ ಆದಿತ್ಯರೆಂದು ಕರೆಯಲ್ಪಡುವರು. ತೃತೀಯಸವನದೇವತೆಗಳಾದ ಇವರನ್ನು ಕಡೆಯ ಪರ್ಯಾಯದ ಆಯುಷ್ಯದಲ್ಲಿ ಉಪಾಸನೆಮಾಡಬೇಕು. ಹಿಂದಿನಂತೆಯೇ ಈ ಅವಧಿ ಯಲ್ಲಿಯೂ ರೋಗಾದಿಗಳುಂಟಾದಾಗ 'ಎಲೈ ಪ್ರಾಣಾದಿತ್ಯರುಗಳೇ, ನನ್ನ ಈ ತೃತೀಯಸವನವು ವಿಚ್ಛೇದವಾಗದಂತೆ ನಡೆಯಿಸಿಕೊಡಿರಿ' ಎಂದು ಪ್ರಾರ್ಥಿಸಿಕೊಳ್ಳ ಬೇಕು. ಅಂತೂ ವಸುರುದ್ರಾದಿತ್ಯರೂಪರಾದ ಪ್ರಾಣಗಳು ಮಾನವನ ದೀರ್ಘಾಯುಷ್ಯದ ಯಜಮಾನರುಗಳೂ—ಎಂದರ್ಥ.

ಈಗ ಈ ಪುರುಷಯಜ್ಞದ ಒಟ್ಟು ತಾತ್ಪರ್ಯವನ್ನು ತಿಳಿಯೋಣ. 116 ವರ್ಷಗಳ ಆಯುಷ್ಯವು ನಿಜವಾಗಿಯೂ ಒಬ್ಬ ಮಾನವನಿಗೆ ಪ್ರಾಪ್ತಿಯಾಯಿತೆಂದರೆ ಅದೊಂದು ಹೆಚ್ಚುಗಾರಿಕೆಯೇ ಸರಿ. ಆದರೆ ರಷ್ಯಾದೇಶದಲ್ಲಿಯೋ ಅಮೇರಿಕಾದೇಶದಲ್ಲಿಯೋ ನಾವಿದ್ದುಕೊಂಡು ಈ ಆಯುಃಪ್ರಮಾಣವನ್ನು ಪಡೆದರೂ ಪ್ರಯೋಜನವಿಲ್ಲ. ಆದ್ದರಿಂದಲೇ ಭಾರತದೇಶದಲ್ಲಿಯೇ ಇದ್ದರೂ ಪುರುಷಯಜ್ಞೋಪಾಸನೆಯ ರಹಸ್ಯವು ತಿಳಿಯದವರಿಗೂ ಇದು ವ್ಯರ್ಥವೇ ಸರಿ. ಹೀಗಿರುವದರಿಂದ ನಾವು ನೇರಾಗಿ ವೇದವಾಕ್ಯಗಳ ಮೂಲಕ ಈ ಉಪಾಸನೆಯನ್ನೂ ಮಂತ್ರಗಳನ್ನೂ ಗ್ರಹಿಸುವ ಅಧಿ ಕಾರವುಳ್ಳವರಾಗಿದ್ದಲ್ಲಿ ಅವಶ್ಯವಾಗಿ ಪಡೆದುಕೊಳ್ಳಬೇಕು. ಹಾಗಿಲ್ಲವಾದರೆ ಈ ಯಜ್ಞದ

ಅಭಿಪ್ರಾಯವನ್ನಾದರೂ ಮನನಮಾಡಬೇಕು. ಅನೇಕ ರೋಗಿಗಳಿಗೆ ಇದರಿಂದ ಉಪಯೋಗವಾಗಬಹುದಾದರೂ ಶಾಸ್ತ್ರಸಂಸ್ಕಾರವಿಲ್ಲದವರಿಗೆ ಈ ಉಪಾಸನೆಯು ಹಿಡಿಸಲಾರದು. ಆ ಪ್ರಾಣವು ಸರ್ವಸಾಧಾರಣವಾಗಿರುವದು. ಅದರ ಮಹಿಮೆಯನ್ನರಿಯಲು ಯಾರಿಗೂ ಯಾವ ಅಡ್ಡಿಯೂ ಇರುವದಿಲ್ಲ. ಪ್ರಾಣಗಳು ವಸುರುದ್ರಾದಿತ್ಯರೆನಿಸಿ ಪ್ರತಿಯೊಬ್ಬ ಮಾನವನ ಆಯುಸ್ಸನ್ನೂ ವ್ಯಾಪಿಸಿರುವರೆಂಬ ಉದಾತ್ತಭಾವನೆಯು ನಮಗೆ ಬಂದದ್ದೇ ಆದರೆ ನಾವು ನಿಜವಾಗಿಯೂ ಉದ್ಧಾರವಾದೇವು.

ಈಗ ಉಪಾಸನೆಯ ಫಲವನ್ನು ಕೇಳೋಣ. ಮಹಿದಾಸ ಐತರೇಯನೆಂಬ ಋಷಿಯು ಈ ಉಪಾಸನೆಯನ್ನು ಕೈಗೊಂಡಿದ್ದನಂತೆ. ಅವನು ತನಗೆ ರೋಗಗಳುಂಟಾದಾಗ ಲೆಲ್ಲ ''ಎಲೈ ರೋಗವೆ, ಹೀಗೇಕೆ ನನ್ನನ್ನು ಪೀಡಿಸುತ್ತಿದ್ದೀಯೆ? ನನ್ನನ್ನೇಕೆ ಸಂಕಟಗೊಳಿಸುವೆ? ನಾನು ಪುರುಷಯಜ್ಞೋಪಾಸಕನಾಗಿರುವೆನು. ಪ್ರಾಣದೇವತೆಯ ಕೃಪೆಯು ನನ್ನ ಮೇಲಿದೆ. ನೀನು ಮಾಡುವ ಉಪತಾಪ (ತೊಂದರೆ)ಯಿಂದ ನಾನು ಸಾಯುವದಿಲ್ಲ; ನಿನ್ನ ಶ್ರಮವು ವ್ಯರ್ಥ'' ಎಂದು ನುಡಿದನಂತೆ. ಇದರಿಂದ ಅವನ ರೋಗಾದಿಗಳೆಲ್ಲವೂ ಹಿಮ್ಮೆಟ್ಟಿದವುಗಳಾಗಿ ಅವನು 116 ವರ್ಷಗಳು ಬದುಕಿದ್ದನಂತೆ. ಹೀಗೆ ಈ ಉಪಾಸನೆಗೆ ಪ್ರತ್ಯಕ್ಷಫಲವನ್ನೂ ತಿಳಿಸಲಾಗಿದೆ.

ಈಗ ಉಪನಷತ್ತಿನಲ್ಲಿ ಈ ಪುರುಷಯಜ್ಞೋಪಾಸನೆಯ ಕಡೆಯಲ್ಲಿ ಕೊಟ್ಟಿರುವ ಎರಡು ಋಕ್ಕುಗಳ ಅಭಿಪ್ರಾಯವನ್ನು ಮನನಮಾಡೋಣ. 'ಉದ್ವಯಮ್' ಎಂಬ ಒಂದು ಋಕ್ಕನ್ನು ಸ್ವಲ್ಪ ಬದಲಾವಣೆಯೊಡನೆ ಯಜುರ್ವೇದಿಗಳು ಮಾಧ್ಯಾಹ್ನಿಕ ಸಂಧ್ಯಾಕಾಲಕ್ಕೆ ಪಠಿಸುತ್ತಾರೆ. ಇದು ಸೂರ್ಯನ ಸ್ತೋತ್ರರೂಪವಾಗಿದ್ದು ಪರಬ್ರಹ್ಮಕ್ಕೂ ಅನ್ವಯಿಸುವಂತಿದೆ. ಅಜ್ಞಾನನಾಶಕವಾದ ಆತ್ಮಜ್ಯೋತಿಯನ್ನು ಕಂಡುಕೊಂಡವರು ಧನ್ಯರು–ಎಂದು ಇದರ ಅಭಿಪ್ರಾಯ. ''ಈ ಜ್ಯೋತಿಯು ಕತ್ತಲೆಯ ಆಚೆಗೆ ಇರುವದು. ಹಾಗೂ ಕತ್ತಲೆಯನ್ನು ನಾಶಗೊಳಿಸತಕ್ಕದ್ದೂ ಆಗಿದೆ. ಉತ್ಕೃಷ್ಟತರವಾಗಿದ್ದುಕೊಂಡು ಅಥವಾ ಎಲ್ಲಕ್ಕೂ ಮೇಲಿದ್ದುಕೊಂಡು ಬೆಳಗುತ್ತಿರುವ ಈ ಜ್ಯೋತಿಯನ್ನು ಉಪಾಸನೆಯಿಂದ ನಾವು ಸೇರಿರುತ್ತೇವೆ. ಸರ್ವದೇವತೆಗಳಲ್ಲಿಯೂ ಇರುವ ಸೂರ್ಯನೆಂಬ ಹೆಸರಿನ ಈ ಪ್ರಾಣಜ್ಯೋತಿಯನ್ನು ನಾವು ಚಿಂತಿಸುವೆವು. ರಶ್ಮಿಗಳನ್ನೂ ಜೀವರುಗಳೆಲ್ಲರ ಪ್ರಾಣಗಳನ್ನೂ ಪ್ರೇರಿಸುವದರಿಂದ ಇದು ಸೂರ್ಯನೆನಿಸಿರುವದು; ಇಂಥ ಅತ್ಯುತ್ತಮವಾದ ಪರಂಜ್ಯೋತಿಯನ್ನು ನಾವು ಸೇರಿಕೊಂಡೆವು'' ಎಂದು ಈ ಋಕ್ಕಿನ ಅಭಿಪ್ರಾಯವು.

ಮತ್ತೊಂದು ಋಕ್ಕು ಋಗ್ವೇದದ ಸಂಹಿತಾಭಾಗದಲ್ಲಿ 8–2–6–30ರಲ್ಲಿ ಇದೆ. ''ಆದಿತ್ಪ್ರತ್ನಸ್ಯ ರೇತಸೋ ಜ್ಯೋತಿಃ ಪಶ್ಯನ್ತಿ ವಾಸರಮ್ । ಪರೋ ಯದಿಧ್ಯತೇ ದಿವಿ''

ಎಂದು ಇದರ ಪೂರ್ಣಪಾಠ. ಹಿಂದಿನ ಋಕ್ಕನ್ನೂ ಈ ಋಕ್ಕನ್ನೂ ಪುರುಷಯಜ್ಞದ ಕಡೆಯಲ್ಲಿ ವಿದ್ಯಾಸ್ತುತಿಗಾಗಿ ಕೊಡಲಾಗಿದೆ. ಇರಲಿ. 'ಚಿರಂತನವಾದ ಹಳೆಯದಾದ ರೇತಸ್ಸಿನ ಎಂದರೆ ಪ್ರಪಂಚಬೀಜದ ಕಾರಣವಾದ ಸತ್ತೆಂಬ ಜ್ಯೋತಿಯನ್ನು ಉಪಾಸಕರು ಕಾಣುತ್ತಾರೆ– ಎಂದರೆ ಬಲ್ಲವರಾಗಿರುತ್ತಾರೆ. ಹೇಗೆಂದರೆ: ಬ್ರಹ್ಮಚರ್ಯವೇ ಮುಂತಾದ ನಿವೃತ್ತಿಸಾಧನಗಳಿಂದ ಶುದ್ಧವಾದ ಅಂತಃಕರಣವುಳ್ಳವರಾಗಿ ಜ್ಯೋತಿಯ ಸಾಕ್ಷಾತ್ಕಾರವನ್ನು ಹೊಂದಿರುತ್ತಾರೆ. ಆ ಜ್ಯೋತಿಯು ದ್ಯುಲೋಕದಲ್ಲಿ ಎಂದರೆ ಪರಬ್ರಹ್ಮದಲ್ಲಿದ್ದುಕೊಂಡು ಹತ್ತಿ ಉರಿಯುತ್ತಿರುವದು'' ಎಂದು ಈ ಋಕ್ಕಿನ ತಾತ್ಪರ್ಯ. ಇಲ್ಲಿ 'ಇಧ್ಯತೇ' ಎಂಬುದರ ಅಕ್ಷರಾರ್ಥವನ್ನು ಹೀಗೆ ಸಮನ್ವಯಮಾಡಿಕೊಳ್ಳಬೇಕು. ಸೂರ್ಯಚಂದ್ರಾದಿಗಳ ರೂಪದಿಂದ ಹೊಳೆಯುತ್ತಿರುವ ತೇಜಸ್ಸು ಪರಬ್ರಹ್ಮವೇ. ಅದು ಬೆಳಕುಗಳಿಗೆಲ್ಲ ಬೆಳಕಾಗಿರುವದು. ಅಮೃತವಾಗಿರುವದು. ಆದ್ದರಿಂದ ಅದನ್ನು ಸೂರ್ಯಾದ್ಯುಪಾಧಿಗಳ ಮೂಲಕ ಚಿಂತಿಸುವವನು ತಾನೂ ಸಂಸಾರಧರ್ಮಗಳನ್ನು ಮೀರಿನೆಲೆನಿಲ್ಲುವನು. ಅದು ನಕ್ಷತ್ರಗ್ರಹತಾರೆಗಳನ್ನೆಲ್ಲ ವ್ಯಾಪಿಸಿಕೊಂಡಿರುವದು. ಇದು ಜಗತ್ತಿನ ಮೂಲಬೆಳಕಾಗಿದ್ದು ಜೀವರುಗಳ ಆಯುಸ್ಸಿನ ರೂಪವಾಗಿರುವ ಬ್ರಹ್ಮವೆನಿಸಿ ಅನುಭವಿಗಳಿಗೆ ಗೋಚರವಾಗಿರುತ್ತದೆ– ಎಂದು ತಿಳಿಯಬೇಕು.

ಈಗಿನ ವಿಜ್ಞಾನಯುಗದಲ್ಲಿ ಬಹಳಮಟ್ಟಿಗೆ ಎಲ್ಲರಿಗೂ ಒಂದಲ್ಲ ಒಂದು ರೀತಿಯ ಶಾರೀರಕತಾಪಗಳೂ ರೋಗಗಳೂ ಅಂಟಿಕೊಂಡೇ ಇವೆ. ಆದ್ದರಿಂದ ಸ್ತ್ರೀಯರಾಗಲಿ, ಪುರುಷರಾಗಲಿ– ಯಾರಾದರೂ ಸರಿ– ರೋಗಗಳ ಪರಿಹಾರಕ್ಕಾಗಿ ಈ ಪುರುಷಯಜ್ಞ ವನ್ನು ಕೈಗೊಳ್ಳಬಹುದಾಗಿದೆ. ಇದು ಉಪಾಸನೆಯಾದ್ದರಿಂದ ಮಾನಸಿಕದಾರ್ಢ್ಯವು ಬಹು ಮುಖ್ಯ. ಅದನ್ನು ಮತ್ತೆ ಭಗವಚ್ಚಿಂತನೆಯಿಂದಲೇ ಪಡೆದುಕೊಳ್ಳಬೇಕು. ಸದ್ಯಕ್ಕೆ ರೋಗಿಗಳೆಲ್ಲರೂ ಈ ಉಪಾಸನೆಯ ಸ್ಥಾನದಲ್ಲಿ ಈ ಪದ್ಯವನ್ನು ಪಠಿಸಬಹುದು. ''ಶರೀರೇ ಜರ್ಝರೀಭೂತೇ ವ್ಯಾಧಿಗ್ರಸ್ತೇ ಕಳೇಬರೇ । ಔಷಧಂ ಜಾಹ್ನವೀತೋಯಂ ವೈದ್ಯೋ ನಾರಾಯಣೋ ಹರಿಃ'' ಈ ಮಂತ್ರಪಠನವನ್ನು ಸದ್ಯಕ್ಕೆ ಜಾರಿಗೆ ತರೋಣ.

---

## ಮನ ಆಕಾಶಬ್ರಹ್ಮಗಳ ಉಪಾಸನೆ

**ಓಮ್ ॥ ಮನೋ ಬ್ರಹ್ಮೇತ್ಯುಪಾಸೀತ ಇತ್ಯಧ್ಯಾತ್ಮಮ್ । ಅಥಾಧಿ ದೈವತಮ್ ಆಕಾಶೋ ಬ್ರಹ್ಮೇತ್ಯುಭಯಮಾದಿಷ್ಟಂ ಭವತಿ ಅಧ್ಯಾತ್ಮಂ ಚಾಧಿದೈವತಂ ಚ ॥**

**3–18–1**

ಭಾವಾರ್ಥ:– ಮನಸ್ಸು ಬ್ರಹ್ಮವೆಂದು ಉಪಾಸನೆಮಾಡಬೇಕು. ಇದು ಅಧ್ಯಾತ್ಮವು. ಇನ್ನು ಅಧಿದೈವತವು. ಆಕಾಶವು ಬ್ರಹ್ಮವೆಂದು (ಉಪಾಸನೆ ಮಾಡಬೇಕು). ಹೀಗೆ ಅಧ್ಯಾತ್ಮ, ಅಧಿದೈವತ–ಈ ಎರಡನ್ನೂ ಉಪದೇಶಮಾಡಿದಂತಾಯಿತು.

(ಮನಸ್ಸು ಇಂದ್ರಿಯಗಳಲ್ಲೆಲ್ಲ ಅತ್ಯಂತ ಸೂಕ್ಷ್ಮವಾದುದು. ಆಕಾಶವು ಮಹಾಭೂತಗಳಲ್ಲೆಲ್ಲ ಸೂಕ್ಷ್ಮವಾದುದು. ಇವೆರಡೂ ಬ್ರಹ್ಮಕ್ಕೆ ಉಪಾಧಿಗಳಾಗಿದ್ದುಕೊಂಡು ಬ್ರಹ್ಮೋಪಾಸನೆಗೆ ಸಹಾಯಕವಾಗಿವೆ. ಆದ್ದರಿಂದ ಮನ–ಆಕಾಶಗಳಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಿ ಧ್ಯಾನಿಸಬೇಕೆಂದು ಅಭಿಪ್ರಾಯ.)

## 23. ಬ್ರಹ್ಮೋಪಾಸನೆಯ ಪ್ರಕಾರಗಳು

ಛಾಂದೋಗ್ಯೋಪನಿಷತ್ತು ಈಗ ನಮಗೆ ಮತ್ತೊಂದು ಬಗೆಯ ಬ್ರಹ್ಮೋಪಾನೆಯನ್ನು ತಿಳಿಸಿಕೊಡುತ್ತಿದೆ. ನಮಗೆಲ್ಲ ಗೊತ್ತಿರುವ ಹಾಗೂ ಅನೇಕಬಾರಿ 'ನಾನು' ಎಂದುಕೊಂಡೇ ವ್ಯವಹರಿಸುತ್ತಿರುವ ಮನಸ್ಸನ್ನು ಬ್ರಹ್ಮವೆಂದು ಉಪಾಸನೆ ಮಾಡಬೇಕು–ಎಂಬುದು ಒಂದು ವಿಧದ ಬ್ರಹ್ಮಚಿಂತನೆಯಾಗಿರುತ್ತದೆ. ಹಾಗೆಯೇ ಆಕಾಶವನ್ನು ಬ್ರಹ್ಮವೆಂದು ಚಿಂತಿಸಬೇಕೆಂಬುದು ಮತ್ತೊಂದು ಬ್ರಹ್ಮೋಪಾಸನೆಯಾಗಿರುತ್ತದೆ. ಮನೋ ಬ್ರಹ್ಮಕ್ಕೂ ಆಕಾಶ ಬ್ರಹ್ಮಕ್ಕೂ ನಾಲ್ಕು ಪಾದಗಳಿವೆ–ಎಂದೂ ಉಪನಿಷತ್ತಿನಲ್ಲಿಯೇ ತಿಳಿಸಿರುತ್ತದೆ. (1)ವಾಕ್ಕು, (2)ಪ್ರಾಣ (3)ಚಕ್ಷುಸ್ಸು (4)ಶ್ರೋತ್ರ–ಇವು ಮನೋಬ್ರಹ್ಮದ ಪಾದಗಳೆಂದೂ (1) ಅಗ್ನಿ (2)ವಾಯು (3)ಆದಿತ್ಯ (4)ದಿಕ್ಕುಗಳು–ಇವು ಆಕಾಶಬ್ರಹ್ಮದ ಪಾದಗಳೆಂತಲೂ ಅಲ್ಲಿ ವಿವರಣೆಯಿರುತ್ತದೆ. ಈ ಉಪಾಸನೆಗಳ ವಿವರವನ್ನು ನೋಡೋಣ.

'ಉಪಾಸನೆ' ಎಂಬುದೇ ಮಾನಸಿಕಕರ್ಮವಾಗಿರುತ್ತದೆ. ಸಾಮಾನ್ಯವಾಗಿ ದೇವತೆಯೂ ಕರ್ಮವೂ ಒಂದೇ ಪದಾರ್ಥವಾಗಿರುವದಿಲ್ಲ. ಇಲ್ಲಿ ಮನಸ್ಸೇ ಬ್ರಹ್ಮವೆಂದೂ ಹಾಗೆಂದು ಮನಸ್ಸಿನಿಂದಲೇ ಚಿಂತಿಸಬೇಕೆಂದೂ ಹೇಳಿರುವದು ಹೇಗೆ ಸರಿ? ಎಂದು ಶಂಕೆಯುಂಟಾಗಬಹುದು. ಆದರೆ ನಮ್ಮ ಮನಸ್ಸಿಗೆ ಹಾಗೆ ಚಿಂತ್ಯವೂ ಚಿಂತನಸಾಧನವೂ ಎರಡೂ ಆಗುವ ಶಕ್ತಿಯಿದೆ. ಇದು ನಮಗೆ ಗೊತ್ತೇ ಇಲ್ಲ. ನಿಜವಾಗಿ ನೋಡಿದರೆ ಮನಸ್ಸಿನ ಅಪಾರವಾದ ಶಕ್ತಿಗಳನ್ನು ನಾವು ಕಂಡುಕೊಂಡೇ ಇಲ್ಲ. ಅದು ಬ್ರಹ್ಮವೇ ಆಗಿದೆ–ಎಂಬುದಂತೂ ಖಂಡಿತ ನಮಗೆ ತಿಳಿದಿಲ್ಲ. ಆದ್ದರಿಂದ ಇಲ್ಲಿ ಮನೋಬ್ರಹ್ಮವನ್ನು ಪ್ರಸ್ತಾಪಿಸಿ ಇದು ನಾಲ್ಕು ಪಾದಗಳುಳ್ಳ ಪರಬ್ರಹ್ಮವೆಂದೇ ಚಿಂತಿಸಬೇಕೆಂದು ಅಪ್ಪಣೆಮಾಡಿರುತ್ತದೆ. ಮನಸ್ಸು ಭಗವಂತನ ವಿಭೂತಿಗಳಲ್ಲಿ ಒಂದೆಂದು ಗೀತೆಯಲ್ಲಿ ಹೇಳಿ ಉಪಾಸನೆಯನ್ನು ವಿಧಿಸಿರುವದಕ್ಕೆ ಈ ಉಪನಿಷತ್ತಿನ ಸಂದೇಶವೇ

ಆಧಾರವಾಗಿರುತ್ತದೆ. ಆದ್ದರಿಂದ ಶಾಸ್ತ್ರದೃಷ್ಟಿಯಿಂದ ಮನಸ್ಸಿನ ಮಹಿಮೆಯನ್ನು ಈಗ ಅರಿತುಕೊಳ್ಳಬೇಕಾಗಿದೆ. ಮನೋಮಯ ಬ್ರಹ್ಮದ ವಿವರಣೆಯು ತೈತ್ತಿರೀಯೋಪನಿಷತ್ತಿನಲ್ಲಿಯೂ ಇದೆ. ಅಲ್ಲಿ ತಿಳಿಸಿರುವಂತೆ ಈ ಬ್ರಹ್ಮಕ್ಕೆ ಯಜುರ್ವೇದವೇ ತಲೆಯು. ಋಗ್ವೇದವೇ ಬಲಪಕ್ಕವು. ಸಾಮವೇದವು ಎಡಪಕ್ಕವು. ವೇದಗಳಲ್ಲಿನ ಬ್ರಾಹ್ಮಣ ಭಾಗಗಳೇ ಆತ್ಮವು. ಅಥರ್ವವೇದವು ಪುಚ್ಛವು–ಹೀಗೆ ವರ್ಣನೆಯಿದೆ. ಇಲ್ಲಿಯಾದರೊ, ಮನೋಬ್ರಹ್ಮಕ್ಕೆ ವಾಗಾದಿಪಾದಗಳನ್ನು ತಿಳಿಸಿ ಅಧ್ಯಾತ್ಮವಾಗಿ ಅದು ಹೃದಯದಲ್ಲಿ ಉಪಾಸ್ಯವೆಂದು ತಿಳಿಸಲಾಗಿದೆ. ಮನೋಮಯಾತ್ಮನೆಂಬವನೇ ತೈಜಸನೆಂದೂ ಹಿರಣ್ಯಗರ್ಭನೆಂದೂ ಮಾಂಡೂಕ್ಯದಲ್ಲಿ ಉಪದೇಶಿಸಿದೆ. ಆ ತತ್ತ್ವಗಳನ್ನು ಅನುಸಂಧಾನಮಾಡಿಕೊಂಡರಂತೂ ಮನೋಬ್ರಹ್ಮವು ಎಂಥ ಮಹಿಮಾನ್ವಿತ ವಾದದ್ದೆಂಬುದು ತಿಳಿದಾಗ ನಾವು ಬೆರಗಾಗುವೆವು. ಇದಿಷ್ಟೂ ಶಾಸ್ತ್ರದೃಷ್ಟಿಯಾಯಿತು.

ಈಗ ಸಾಧಕರ ದೃಷ್ಟಿಯಿಂದ ಮನಸ್ಸನ್ನು ವಿಚಾರಿಸೋಣ. ಆಧ್ಯಾತ್ಮಸಾಧಕನಿಗೆ ಮನಸ್ಸಿಗಿಂತಲೂ ಗೆಲ್ಲಬೇಕಾದಂಥ ಬೇರೊಂದು ಶತ್ರುವಿಲ್ಲ–ಎನ್ನಬಹುದು. ಹೇಗೆ ಲಕ್ಷ್ಮಣನಿಗೆ ಇಂದ್ರಜಿತ್ತನ್ನು ಗೆಲ್ಲುವದು ಮಹಾಸಾಹಸದ ಕೆಲಸವಾಗಿತ್ತೋ, ಕಟ್ಟಕಡೆಗೆ ರಾಮನಮೇಲೆ ಆಣೆಯಿಟ್ಟೇ ಬಾಣಪ್ರಯೋಗಮಾಡಿ ಗೆಲ್ಲಬೇಕಾಯಿತೋ, ಅದಕ್ಕೆ ಮುಂಚೆ ಹದಿನಾಲ್ಕು ವರ್ಷಗಳ ಕಾಲ ನಿದ್ರಾಹಾರಗಳಿಲ್ಲದೆ ತಪಸ್ಸುಮಾಡಬೇಕಾಯಿತೋ, ಶ್ರೀರಾಮನ ಸತತ ಸೇವೆ, ಬ್ರಹ್ಮಚರ್ಯ, ಸತ್ಸಂಗಗಳಿಂದ ಕಾರ್ಯಸಾಧನೆಮಾಡ ಬೇಕಾಯಿತೋ ಹಾಗೆ–ನಿಜವಾದ ಸಾಧಕನು ಮನಸ್ಸನ್ನು ಗೆಲ್ಲಲು ನಾನಾರೀತಿಯ ಪ್ರಯತ್ನಗಳನ್ನು ಮಾಡಬೇಕಾಗಿರುತ್ತದೆ. ಎಷ್ಟೋ ಸಾಧಕರು ಹಠಯೋಗಾದಿಗಳಿಂದ ಮನಸ್ಸನ್ನು ಗೆದ್ದು ಸ್ವಾಧೀನಪಡಿಸಿಕೊಂಡಮೇಲೂ ಅದು ವಾಕ್ಸಿದ್ಧಿ ಪವಾಡ–ಮುಂತಾದವುಗಳಿಗೆ ಸಿಲುಕಿಬಿದ್ದು ಕೊನೆಗೆ ಮತ್ತೆಸಾಧಕರನ್ನೇ ಸೋಲಿಸಿರುವದೂ ಉಂಟು. ಹೀಗೆ ಮನಸ್ಸನ್ನು ಜಯಿಸಲಾರದ ಸಾಧಕರು ಹೇರಳವಾಗಿದ್ದಾರೆ. ಇನ್ನು ಜನಸಾಮಾನ್ಯರ, ಸಂಸಾರಿಗಳ ಪಾಡಂತೂ ಹೇಳತೀರದು. ಅಂಥವರೆಲ್ಲರನ್ನೂ ಮನಸ್ಸು ಗೆದ್ದುಕೊಂಡು ತಾನೇ ಕಾಮಾದಿವೃತ್ತಿಗಳ ರೂಪವನ್ನು ಧರಿಸಿ ಶ್ರೇಯಸ್ಸಿನಿಂದ ಹಿಮ್ಮೆಟ್ಟಿಸಿರುತ್ತದೆ. ಈಗಲೂ ಸಾಧಕರಿಗೆ ಮನಸ್ಸಿನದೇ ಭಯವಾಗಿರುತ್ತದೆ. ಏಕೆಂದರೆ ಅದು ಎಂಥ ಸಾಧಕರನ್ನೂ–ಉದಾಹರಣೆಗೆ ವಿಶ್ವಾಮಿತ್ರನಂಥವರನ್ನೂ–ಬಿಡದೆ ಕೆಡವಿಬಿಡುತ್ತದೆ. ಈಗಲೂ ಸಾಧಕರಿಗೆ ಇನ್ನುಳಿದಿರುವದೆಂದರೆ ಈ ಇಂದ್ರಜಿತ್ತನ್ನು ಗೆಲ್ಲಲು ಭಗವದ್ಭಕ್ತಿಯೊಂದೇ ದಾರಿ. ಈ ಪರಿಸ್ಥಿತಿಯಲ್ಲಿಮನೋಬ್ರಹ್ಮದ ಉಪಾಸನೆಯು ಸಾಧಕರಿಗೊಂದು ಆಶಾಕಿರಣವಾಗಿರುತ್ತದೆ. ಹೇಗೆಂದರೆ: ಸಾಧಕನು ಮನಸ್ಸನ್ನು ಶತ್ರುವೆಂದು ಭಾವಿಸುವ ಬದಲು ಅದೇ ಬ್ರಹ್ಮವೆಂದು ಭಾವಿಸಿ ಬ್ರಹ್ಮದ ಸಮಸ್ತಕಲ್ಯಾಣಗುಣಗಳನ್ನೂ ಅದರಲ್ಲಿಯೇ ಆರೋಪಿಸಿ ಚಿಂತಿಸುವದು. ಇಂಥ ಚಿಂತನೆಯಿಂದ ಮನಸ್ಸು ತಾನಾಗಿಯೇ

ಒಲಿದು ಬ್ರಹ್ಮಪ್ರಾಪ್ತಿಗೆ ದ್ವಾರವಾಗಿಬಿಡುತ್ತದೆ. ಆದ್ದರಿಂದಲೇ ಬಲ್ಲವರು ಹೇಳುವ ದೇನೆಂದರೆ: 'ಮನಸ್ಸನ್ನು ದ್ವೇಷಿಸಬೇಡಿರಿ; ಹಾಗೂ ಗೆಲ್ಲಬೇಕೆಂಬ ಹಟವನ್ನೂ ತೊಡದಿರಿ; ಮನಸ್ಸನ್ನೇ ಉಪಯೋಗಿಸಿಕೊಂಡು ಭಗವಂತನೆಡೆಗೆ ಹೆಜ್ಜೆಯಿಡಿರಿ'. ಈ ಉಪದೇಶವೇ ರೂಪಾಂತರದಿಂದ ಮನೋಬ್ರಹ್ಮೋಪಾಸನೆಯೆನಿಸಿರುತ್ತದೆ.

ಈಗ ಮನೋಬ್ರಹ್ಮದ ನಾಲ್ಕು ಪಾದಗಳನ್ನು ವಿಚರಿಸೋಣ. ಮಾತು ಎಂಬುದು ಇದರ ನಾಲ್ಕನೆಯ ಪಾದವೆಂದು ಉಪನಿಷತ್ತಿನಲ್ಲಿ ತಿಳಿಸಿದೆ. ಹೇಳಬೇಕಾದ ವಿಷಯಗಳನ್ನು ಮಾತುಗಳ ಮೂಲಕವೇ ನಾವು ಬೇರೆಯವರಿಗೆ ತಿಳಿಸುತ್ತೇವೆ. ಆದ್ದರಿಂದ ಎಂದರೆ ತಿಳಿಸಲು ಸಾಧನವಾದ್ದರಿಂದ ಅದು ಪಾದವೆನಿಸಿರುತ್ತದೆ. ಇದೇ ರೀತಿಯಾಗಿ ಶರೀರಧಾರಣೆಯು ಪ್ರಾಣಗಳ ಸಾನ್ನಿಧ್ಯದಿಂದ ನಡೆಯುವದರಿಂದ ಅವುಗಳೂ ಪಾದವೆನಿಸುವವು. ನೋಡುವದಕ್ಕೆ ಸಾಧನವಾಗಿರುವ ಕಣ್ಣುಗಳೂ ಕೇಳುವದಕ್ಕೆ ಕರಣವಾಗಿರುವ ಕಿವಿಗಳೂ ಪಾದಗಳೆಂದು ಗ್ರಹಿಸಲ್ಪಟ್ಟಿವೆ. ಹೀಗೆ ನಾಲ್ಕುಪಾದಗಳಿಂದ ವಿಶಿಷ್ಟವಾಗಿರುವ ಮನೋಬ್ರಹ್ಮವು ಉಪಾಸ್ಯವಾಗಿರುತ್ತದೆ. ಇಲ್ಲಿ ವಾಕ್ಕು ಮುಂತಾದವುಗಳನ್ನು ಕೇವಲ ಇಂದ್ರಿಯಗಳೆಂದು ತಿಳಿಯಬಾರದು. ಅವುಗಳ ಅಭಿಮಾನಿಗಳಾದ ವಾಗಾದಿದೇವತೆಗಳನ್ನೇ ಸ್ವೀಕರಿಸಬೇಕು. ಬ್ರಹ್ಮವೆಂಬುದು ಸರ್ವದೇವತಾಮಯವಲ್ಲವೆ? ಮನೋಬ್ರಹ್ಮವು ಕೂಡ ಹೀಗೆ ಸಕಲದೇವತಾಮಯವೆಂದೇ ಭಾವಿಸಿ ಚಿಂತಿಸಬೇಕು.

ಈಗ ಆಕಾಶಬ್ರಹ್ಮದ ಉಪಾಸನೆಯನ್ನು ವಿಚಾರಿಸೋಣ. ಆಕಾಶವೆಂಬುದು ಪಂಚಮಹಾಭೂತಗಳಲ್ಲಿ ಅಮೂರ್ತವೂ ವ್ಯಾಪಕವೂ ಆದ ತತ್ತ್ವವಾಗಿರುತ್ತದೆ. ಮನುಷ್ಯನ ಶರೀರದ ಹೊರಗೆ ಆಕಾಶವಿರುವಂತೆಯೇ ಒಳಗೂ ಅದು ಇದ್ದುಕೊಂಡಿರುತ್ತದೆ. ಉಪಾಸಕನು ಆಧಿದೈವಿಕವಾದ ಭೂತಾಕಾಶವನ್ನೇ ಇಲ್ಲಿ ಆಲಂಬನವಾಗಿ ಮಾಡಿಕೊಂಡು ಬ್ರಹ್ಮದೃಷ್ಟಿಯನ್ನು ಮಾಡಬೇಕೆಂದು ತಿಳಿಸಲಾಗಿದೆ. ಈ ಆಕಾಶಬ್ರಹ್ಮವೂ ನಾಲ್ಕು ಪಾದಗಳಿಂದ ಕೂಡಿರುವದು. ಅಗ್ನಿ, ವಾಯು, ಆದಿತ್ಯ, ದಿಕ್ಕುಗಳೆಂಬಿವೇ ಆ ಪಾದಗಳು. ಈ ದೇವತೆಗಳೆಲ್ಲರೂ ಆಕಾಶಬ್ರಹ್ಮದ ಅಂಶಗಳೇ ಆಗಿರುತ್ತಾರೆ. ಹೀಗೆಂದು ಭಾವಿಸಿ ಆಕಾಶವನ್ನು ಬ್ರಹ್ಮದ ಗುಣಗಳೊಡನೆ ಕೂಡಿ ಚಿಂತಿಸುವದೇ ಆಕಾಶಬ್ರಹ್ಮೋಪಾಸನೆಯೆನಿಸಿರುವದು.

ಈಗ ಮನೋಬ್ರಹ್ಮಕ್ಕೂ ಆಕಾಶಬ್ರಹ್ಮಕ್ಕೂ ಐಕ್ಯವನ್ನು ಹೇಳುತ್ತಾರೆ. ಹೇಗೆಂದರೆ ಮನೋಬ್ರಹ್ಮದ ವಾಕ್ಕು ಎಂಬ ಪಾದವೇ ಆಕಾಶಬ್ರಹ್ಮದ ಅಗ್ನಿಯೆಂಬ ಪಾದದೊಡನೆ ಒಂದಾಗಿರುತ್ತದೆ. ಅಗ್ನಿಯು ವಾಕ್ಕಾಗಿ ಪುರುಷನ ಮುಖವನ್ನು ಪ್ರವೇಶಮಾಡಿರುತ್ತಾನೆಂದು ಐತರೇಯಶ್ರುತಿಯಲ್ಲಿದೆ. ಹೀಗೆಯೇ ವಾಯುವು ಪ್ರಾಣನಾಗಿಯೂ ಆದಿತ್ಯನು

ಚಕ್ಷುಸ್ಸಾಗಿಯೂ ದಿಕ್ಕುಗಳೂ ಶ್ರೋತ್ರವಾಗಿಯೂ ಒಂದಾಗಿರುತ್ತವೆ. ಕಡೆಯಲ್ಲಿ ಆಕಾಶವೆಂಬುದು ಮನಸ್ಸೇ ಆಗಿದ್ದು ಮನಸ್ಸೆಂಬುದು ಬ್ರಹ್ಮವೇ ಆಗಿರುವದೆಂದು ಚಿಂತಿಸುವದೇ ಮನೋಬ್ರಹ್ಮದ ಉಪಾಸನೆಯಾಗಿರುವದು. ಹೀಗೆ ಮನ–ಆಕಾಶಗಳು ಬೇರೆಬೇರೆಯ ತತ್ತ್ವಗಳೆಂದು ಮೊದಲಿಗೆ ಕಂಡುಬಂದರೂ ಚಿಂತನೆಮಾಡಿದಂತೆಲ್ಲ ಒಂದೇ ಎಂಬುದು ಗೊತ್ತಾಗುವದು. ಯಾವ ಉಪಾಸನೆಯೇ ಆಗಲಿ, ಉತ್ಕೃಷ್ಟದೃಷ್ಟಿ ವಿಧಾಯಕವಾಗಿಯೇ ಇರುವದು. ಜಗತ್ತಿನಲ್ಲೆಲ್ಲ ಅತ್ಯಂತ ಉತ್ಕೃಷ್ಟವೂ ಸಕಲಕಲ್ಯಾಣ ಗುಣಾಕರವೂ ಆಗಿರುವದು ಬ್ರಹ್ಮವೊಂದೇ. ಯಾವದೇ ಉತ್ಕೃಷ್ಟೋಪಾಧಿಯಲ್ಲಾದರೂ ಬ್ರಹ್ಮದೃಷ್ಟಿಯನ್ನು ಮಾಡಬಹುದಾಗಿದೆ. ಸಮಸ್ತದೇವತೆಗಳೂ ಬ್ರಹ್ಮದ ಕಡೆಯಿಂದಲೇ ತಮ್ಮ ಅಸಾಧಾರಣ ಗುಣಗಳನ್ನು ಪಡೆದುಕೊಂಡಿರುತ್ತಾರೆ. ಪಂಚಮಹಾಭೂತಗಳಲ್ಲಿ ಕಂಡುಬರುವ ಶಬ್ದಾದಿಗುಣಗಳೂ ಬ್ರಹ್ಮದ್ದೇ ಆಗಿವೆ. ಹೀಗಿರುವಲ್ಲಿ ಆಕಾಶವು ಬ್ರಹ್ಮವೆಂದು ಚಿಂತಿಸಲ್ಪಡುವದರಲ್ಲಿ ಯಾವ ವಿಪರ್ಯಾಸವೂ ಇಲ್ಲ.

ಈಗ ಮನ–ಆಕಾಶಾದಿಗಳ ಸಂಬಂಧವನ್ನೂ ಕುರಿತು ವಿಚಾರಮಾಡ ಬಹುದಾಗಿದೆ. ಒಂದು ದೃಷ್ಟಿಯಿಂದ ಆಕಾಶಕ್ಕಿಂತ ಮನಸ್ಸೇ ದೊಡ್ಡದು. ಹೇಗೆಂದರೆ ವ್ಯವಹಾರದಲ್ಲಿ ಕಂಡುಬರುವಂತೆ ಆಕಾಶದ ಏಕದೇಶದಲ್ಲಿ ನಾವಿರುವದು ನಿಜವಾದರೂ ಅವಸ್ಥೆಗಳ ದೃಷ್ಟಿಯಿಂದ ನೋಡುವಾಗ ಆಕಾಶವೇ ನಮ್ಮೊಳಗಿರುವದು. ಕನಸಿನಲ್ಲಿ ನಾವು ಕಾಣುತ್ತಿದ್ದ ಹಾಗೂ ವ್ಯವಹಾರ ಮಾಡುತ್ತಿದ್ದ ಆಕಾಶಾದಿಗಳು ಆಗ್ಗೆ ನಮ್ಮ ಚಿತ್ತದಲ್ಲೇ ಕಲ್ಪಿತವಾಗಿದ್ದವಲ್ಲವೆ? ಆಗ ಚಿತ್ತವೇ ಪ್ರಭುವೂ ವ್ಯಾಪಕವೂ ಆಗಿದ್ದುದು ಅನುಭವದಲ್ಲಿದೆಯಷ್ಟೆ? ಹೀಗೆಯೇ ಪಂಚಮಹಾಭೂತಗಳೂ ಇಂದ್ರಿಯಗಳ ಸಾರವೇ ಆಗಿದ್ದು ಇಂದ್ರಿಯಗಳೂ ಮನಸ್ಸಿನ ಸಾರವಾದ್ದರಿಂದ ಮನಸ್ಸನ್ನು ಬ್ರಹ್ಮವೆಂದು ಕರೆಯಲು ಅಡ್ಡಿಯಿಲ್ಲ. ಈ ಮನಸ್ಸು ಸ್ವಪ್ನದಲ್ಲಿ ತಾನೊಂದೇ ಇದ್ದುಕೊಂಡು ಉಳಿದೆಲ್ಲವನ್ನೂ ವಿಕಲ್ಪಿಸಿರುತ್ತದೆ. ಈ ಅಭಿಪ್ರಾಯದಲ್ಲಿ ಚಿತ್ತಾಕಾಶವು ಭೂತಾಕಾಶಕ್ಕಿಂತ ವ್ಯಾಪಕವು. ಇದೇ ತತ್ತ್ವದ ಆಧಾರದಿಂದ ಅಧಿದೈವತಾಕಾಶವು ಅಧ್ಯಾತ್ಮವಾದ ಮನಸ್ಸಿನಲ್ಲೇ ಅಡಕವಾಗಿರುವದನ್ನು ಮನಗಂಡು ಮನೋಬ್ರಹ್ಮವನ್ನು ಉಪಾಸನೆಮಾಡಲು ಇಲ್ಲಿ ವಿಧಿಸಿರುತ್ತದೆ. ಮನಸ್ಸನ್ನು ಇಲ್ಲಿ ನಾವು ವ್ಯಷ್ಟಿಯಾಗಿ (ಬಿಡಿಯಾಗಿ) ಗ್ರಹಿಸಬಾರದು. ಅದನ್ನು ಇಡಿಯಾಗಿ ತೆಗೆದುಕೊಂಡಲ್ಲಿ ಹಿರಣ್ಯಗರ್ಭನೇ ಆಗಿರುವದು. ಆ ಹಿರಣ್ಯಗರ್ಭತತ್ತ್ವವೂ ಪರಬ್ರಹ್ಮದ ವಿಭೂತಿಯೇ ಆಗಿರುವದು. ಮುಂದುವರೆದು ಚಿತ್ತಾಕಾಶವನ್ನು ಚಿದಾಕಾಶವಾಗಿ ಕಂಡುಕೊಂಡು ಚಿತ್ತವನ್ನು ಚಿದ್–ಬ್ರಹ್ಮದಲ್ಲಿಯೇ ಲಯಮಾಡಿಕೊಂಡರೆ ಚಿದ್ ಬ್ರಹ್ಮಪ್ರಾಪ್ತಿಯೇ ಆಗುವದು. ಹೀಗೆ ಬ್ರಹ್ಮಪ್ರಾಪ್ತಿಗಾಗಿ ಮಾಡುವ ಉಪಾಸನೆಗೆ ಮನಸ್ಸು–ಆಕಾಶಗಳಿಗಿಂತ ಸೂಕ್ಷ್ಮವಾದ ಆಲಂಬನಗಳು ಬೇರಾವವೂ ಇರುವದಿಲ್ಲ.

ವಾಚಕರೆ, ಈ ಉಪಾಸನೆಗಳ ತತ್ತ್ವವೇನೇ ಇರಲಿ, ನೀವು ನಿಜವಾದ ಅಧ್ಯಾತ್ಮಸಾಧಕರಾಗಿ ನಿಮ್ಮ ಮನಸ್ಸನ್ನು ನೀವು ಸ್ವಾಧೀನದಲ್ಲಿರಿಸಿಕೊಳ್ಳಬೇಕಾದರೆ ಮೊಟ್ಟಮೊದಲು ನಿಮ್ಮ ಮನಸ್ಸನ್ನು ದೇವರೆಂದೇ ಭಾವಿಸಿರಿ. ಎಲ್ಲಾ ದೇವರಗಳೂ ನಿಮ್ಮ ಮನಸ್ಸಿನಲ್ಲೇ ಇರುತ್ತಾರೆಂಬುದು ಆಗ ತಿಳಿಯುವದು. ಹೇಗೆಂದರೆ: ಮನಸ್ಸಿನಲ್ಲಿ ಭಾವನೆಯಿಲ್ಲದೆ ನೀವು ಯಾವ ದೇವರ ಸನ್ನಿಧಿಗೆ ಹೋದರೂ ಅಲ್ಲಿ ಏನೂ ಸಿಗುವದಿಲ್ಲ. ಆದ್ದರಿಂದಲೇ ಮೊದಲು ಮನಸ್ಸಿನಲ್ಲಿರುವ ದೆವ್ವವನ್ನು ಹೊಡೆದೋಡಿಸಿ ದೇವರನ್ನು ತಂದುಕೊಳ್ಳಬೇಕು. ಇದಕ್ಕೆ ಸತ್ಪುರುಷರ ಮನಸ್ಸಿನ ಆದರ್ಶವನ್ನು ಅನುಸಂಧಾನ ಮಾಡಬೇಕು. ಮನಸ್ಸು ದೇವರಾಗಿರದಿದ್ದರೆ ಈ ಪ್ರಪಂಚದಲ್ಲಿ ಯಾವ ದೇವರೂ ಇರುತ್ತಲೇ ಇರಲಿಲ್ಲ. ಹೀಗಿರುವಲ್ಲಿ ನಿಮ್ಮೊಳಗಿರುವ, ನೀವೇ ಆಗಿರುವ ಮನೋಬ್ರಹ್ಮವನ್ನು ಒಮ್ಮೆ ನೀವು ಅನುಸಂಧಾನ ಮಾಡಬಾರದೇಕೆ? ನಿಮ್ಮ ಮನಸ್ಸಿನ ಮಹತ್ತ್ವವನ್ನು ಅರಿತುಕೊಳ್ಳಬಾರದೇಕೆ? ಈ ಮೂಲಕ ಮನೋಬ್ರಹ್ಮೋಪಾಸಕರಾಗಬಾರದೇಕೆ?

------

## ಆದಿತ್ಯಬ್ರಹ್ಮೋಪಾಸನೆ

**ಓಮ್ ॥ ಆದಿತ್ಯೋ ಬ್ರಹ್ಮೇತ್ಯಾದೇಶಃ ತಸ್ಯೋಪವ್ಯಾಖ್ಯಾನಮ್ । ಅಥ ಯತ್ತದಜಾಯತ ಸೋऽಸಾವಾದಿತ್ಯಃ ॥ 3–19–1,3.**

**ಭಾವಾರ್ಥ:**– ಆದಿತ್ಯನು ಬ್ರಹ್ಮವೆಂದು ಆದೇಶವು. ಅದರ ಉಪವ್ಯಾಖ್ಯಾನವನ್ನು ಮಾಡಲಾಗುವದು. ಇನ್ನು ಆಗ ಹುಟ್ಟಿತಲ್ಲ, ಅದೇ ಈ ಆದಿತ್ಯನು.

(ಸೃಷ್ಟಿಯ ಪೂರ್ವದಲ್ಲಿ ಅವ್ಯಾಕೃತವಾಗಿದ್ದ ಬ್ರಹ್ಮಾಂಡವು ಸೃಷ್ಟಿಕಾಲಕ್ಕೆ ಅಂಡ ರೂಪದಿಂದ ಕಾಣಿಸಿಕೊಂಡು ಒಡೆದುಕೊಂಡಿತು. ಅದರ ಕಪಾಲಗಳಿಂದ ರಜತಸುವರ್ಣಾದಿ ದ್ರವ್ಯಗಳು ಹೊರಬಂದ ಮೇಲೆ ಗರ್ಭರೂಪವಾಗಿ ಹುಟ್ಟಿದವನೇ ಆದಿತ್ಯನು. ಸೃಷ್ಟಿಯಲ್ಲಿ ಅವನು ಪ್ರಥಮನೂ ಶ್ರೇಷ್ಠನೂ ಆಗಿರುವನು– ಎಂದಭಿಪ್ರಾಯ.)

## 24. ಆದಿತ್ಯೋಪಾಸನೆಯ ವಿವರ

ಛಾಂದೋಗ್ಯೋಪನಿಷತ್ತಿನ ಮೂರನೆಯ ಅಧ್ಯಾಯದ ಕೊನೆಯಲ್ಲಿರುವ ಈ ಉಪಾಸನೆಯನ್ನು ವಿಚಾರಮಾಡುವದರ ಮೂಲಕ ಅಧ್ಯಾತ್ಮಪ್ರಕಾಶ ಪತ್ರಿಕೆಯ 52ನೆಯ ಸಂಪುಟದಲ್ಲಿ ಪ್ರಕಟಿತವಾದ ಅಧ್ಯಾತ್ಮಸಂದೇಶಗಳನ್ನು ಉಪಸಂಹಾರಮಾಡುವೆನು. ಇನ್ನು ಮುಂದೆ ಹೊಸ ಸಂಪುಟದಲ್ಲಿ ನಾಲ್ಕನೆಯ ಅಧ್ಯಾಯವು ಪ್ರಾರಂಭವಾಗಿ ರೈಕ್ವನ ಕಥೆಯ ಮೂಲಕ ಸಂವರ್ಗವಿದ್ಯೆಯನ್ನು ವಿವರಿಸಲಾಗುವದು. ಈಗ ಆದಿತ್ಯೋಪಾಸನೆಯನ್ನು ಪ್ರಸ್ತಾಪಮಾಡೋಣ.

'ಈ ಆದಿತ್ಯನೇ ಬ್ರಹ್ಮವು' ಎಂಬರ್ಥದ ಮಂತ್ರವನ್ನು ದ್ವಿಜರು ಸಂಧ್ಯಾವಂದನೆಯ ಕಾಲಕ್ಕೆ ಉಪಯೋಗಿಸುತ್ತಾರೆ. ದ್ವಿಜರಿಗೆ ದೇವರು ಎಂದರೆ ಅಗ್ನಿ–ಆದಿತ್ಯರುಗಳೇ ಆಗಿದ್ದಾರೆ. ಇವರಿಬ್ಬರೂ ಪ್ರತ್ಯಕ್ಷದೇವತೆಗಳು. ಈ ಇಬ್ಬರಿಗೂ ಮೈಲಿಗೆಯಾಗುವ ಸಂಭವವೇ ಇಲ್ಲ. ಆದ್ದರಿಂದ ದೇವಾಲಯಗಳಲ್ಲಿ ಪೂಜಿಸುವ ಬೇರೆಬೇರೆಯ ದೇವರುಗಳ ವಿಷಯಕ್ಕೆ ಸಮಾಜದಲ್ಲಿ ಈಗ ಏನೇನು ವಾದವಿವಾದಗಳು ಹಾಗೂ ಹಕ್ಕಿನ ಪ್ರಶ್ನೆಗಳು ಎದ್ದುಕೊಂಡಿವೆಯೋ ಅವೆಲ್ಲವೂ ದ್ವಿಜರಿಗೆ ಅನವಶ್ಯವೇ ಆಗಿವೆ. ದ್ವಿಜರ ದೇವರಿಗೆ ಯಾವ ದೋಷಸಂಪರ್ಕವೂ ಇಲ್ಲವಾದ್ದರಿಂದ ನಿಶ್ಚಿಂತೆಯಿಂದ ದ್ವಿಜರು ತಮ್ಮ ದೇವತೆಗಳ ಆರಾಧನೆ, ಉಪಾಸನೆಗಳನ್ನು ಯಾವ ಕಾಲದಲ್ಲಿಯಾದರೂ ಮಾಡಬಹುದಾಗಿದೆ. ಇರಲಿ. ಈಗ ಆದಿತ್ಯನ ವಿಷಯವನ್ನು ನೋಡೋಣ. ಸೂರ್ಯೋದಯವಿಲ್ಲದೆ ಯಾವ ಶುಭಕಾರ್ಯಗಳೂ ನೆರವೇರುವಂತಿಲ್ಲ. ಮತ್ತು ಪ್ರಪ್ರಥಮವಾಗಿ ಸೂರ್ಯೋಪಾಸನೆಯೇ ಎಲ್ಲಾ ವೈದಿಕಕರ್ಮಗಳಿಗೂ ಮೂಲವಾಗಿದೆ. ಹೇಗೆಂದರೆ ನಿತ್ಯಕರ್ಮವೆನಿಸಿರುವ ಸಂಧ್ಯಾವಂದನೆಯೇ ಸೂರ್ಯಾರಾಧನೆಯಾಗಿದೆ. ಅದಿಲ್ಲದೆ ಯಾವಕರ್ಮಗಳಿಗೂ ಅಧಿಕಾರವು ಪ್ರಾಪ್ತವಾಗುವಂತಿಲ್ಲ. ಸಂಧ್ಯಾಕಾಲದಲ್ಲಿ ಆದಿತ್ಯನನ್ನು ಧ್ಯಾನಮಾಡುವ ಉಪಾಸಕನು ಎಲ್ಲಾ ವಿಧವಾದ ಶ್ರೇಯಸ್ಸನ್ನೂ ಪಡೆಯವನೆಂದು ವೇದವು ಘೋಷಣೆಮಾಡುತ್ತಿದೆ. ಈ ಆದಿತ್ಯನು ಹುಟ್ಟಿದ್ದನ್ನು ಉಪನಿಷತ್ತಿನಲ್ಲಿ ವರ್ಣಿಸಿರುವ ಬಗೆಯನ್ನು ಈಗ ತಿಳಿಯೋಣ.

ಮೊದಲು ಸೃಷ್ಟಿಯ ಆರಂಭಕಾಲಕ್ಕೆ ಜಗತ್ತು ಅವ್ಯಾಕೃತವಾಗಿತ್ತು. ಅನಂತರ ಸತ್ತಾಯಿತು–ಎಂದರೆ ವ್ಯಾಕೃತಾವಸ್ಥೆಗೆ ಅಭಿಮುಖವಾಯಿತು. ಆಗ ಒಂದು ಮೊಟ್ಟೆಯ ಆಕಾರವನ್ನು ಅದು ಹೊಂದಿತು. ಕೆಲವು ಕಾಲದ ಅನಂತರ ಚಲನೆಯನ್ನು ಹೊಂದಿ ಒಡೆದುಕೊಂಡಿತು. ಹೇಗೆ ಹಕ್ಕಿಯ ಮೊಟ್ಟೆಗಳು ಸಮಯ ಬಂದಾಗ ಒಡೆದುಕೊಂಡು ಮರಿಗಳು ಹೊರಬರುವವೋ ಹಾಗೆ–ಜಗತ್ತಿನ ಮೊಟ್ಟೆಯು ಒಡೆದುಕೊಂಡಾಗ ಎರಡು ಪಾಲಾಗಿ ವಿಕಾರವನ್ನು ಹೊಂದಿತು. ಅವುಗಳಲ್ಲಿ ಒಂದು ಹೋಳು ಚಿನ್ನವಾಗಿಯೂ ಮತ್ತೊಂದು ಹೋಳು ಬೆಳ್ಳಿಯಾಗಿಯೂ ತೋರಿಕೊಂಡವು. ಬೆಳ್ಳಿಯೆಂಬುದೇ ಈ ಭೂಲೋಕವೂ, ಚಿನ್ನವೆಂಬುದೇ ದ್ಯುಲೋಕವೂ ಆದವು. ಮೊಟ್ಟೆಯೊಳಗಿನ ಗರ್ಭವನ್ನು ಆವರಿಸಿದ್ದ ಪದರವೇ ಪರ್ವತಗಳಾದವು. ತೆಳುವಾದ ಪದರವು ಮೋಡ ಹಾಗೂ ಇಬ್ಬನಿಗಳಾದವು. ಗರ್ಭದೊಳಗಿದ್ದ ನಾಡಿಗಳು ನದಿಗಳಾದವು. ಮೂತ್ರಾಶಯ ದಲ್ಲಿದ್ದ ನೀರು ಸಮುದ್ರವಾಯಿತು. ಅನಂತರ ಗರ್ಭದಿಂದ ಹೊರಬಂದ ಉಂಡೆಯೇ ಸೂರ್ಯನಾಗಿ ತೋರಿಕೊಂಡಿತು. ಹಾಗೆ ತೋರಿಕೊಂಡಾಗ ಬಹಳ ಗದ್ದಲವನ್ನುಂಟು ಮಾಡುವ ಶಬ್ದಗಳು ಕೇಳಬಂದವು. ಐಶ್ವರ್ಯವಂತನಾದ ರಾಜನಿಗೆ ಮಗನು ಹುಟ್ಟಿದಾಗ ಹೇಗೆ ರಾಜಧಾನಿಯಲ್ಲೆಲ್ಲ ಗದ್ದಲವಾಗುವದೋ ಹಾಗೆ ಆದಿತ್ಯನ

ಹುಟ್ಟುವಿಕೆಯ ಕಾಲಕ್ಕೆ ಹೆಚ್ಚಿನ ಶಬ್ದಗಳಾದವು. ಇದು ಈಗಲೂ ನಡೆಯುತ್ತಿದೆ. ಹೇಗೆಂದರೆ ಪ್ರತಿದಿನವೂ ಸೂರ್ಯನು ಹುಟ್ಟುವ ವೇಳೆಗೆ ಹಕ್ಕಿಗಳೆಲ್ಲವೂ ಚಿಲಿಪಿಲಿ ಧ್ವನಿಯನ್ನು ಮಾಡುತ್ತಾ ಗದ್ದಲಮಾಡುವವು. ಇದು ಸೂರ್ಯನ ಮಹಿಮಾ ವಿಶೇಷವು. ಅನಂತರ ಪ್ರಾಣಿಗಳು ಬಯಸುವ ಅನ್ನವಸ್ತ್ರಾದಿಕಾಮಗಳೆಲ್ಲವೂ ಆದಿತ್ಯನ ಜನ್ಮನಿಮಿತ್ತವಾಗಿ ಹೊರಬಂದವು. ಹೀಗೆ ಸೂರ್ಯನ ಮಹಿಮೆಯನ್ನು ಅರಿತವನಿಗೆ ಹಾಗೂ ಉಪಾಸಕನಿಗೆ ಆದಿತ್ಯಲೋಕ ಪ್ರಾಪ್ತಿಯಾಗುವದು. ದೃಷ್ಟಫಲವಾಗಿ ಮಂಗಳಕರವಾದ ಧ್ವನಿಗಳೂ (ಸಂಗೀತ–ವೇದಾದಿ) ಭೋಗಸಾಮಗ್ರಿಗಳೂ ಒದಗುವವು–ಎಂದು ಉಪನಿಷತ್ತಿನಲ್ಲಿ ವರ್ಣಿಸಿದೆ.

ಈಗ ಆದಿತ್ಯನ ಉದಯದಿಂದ ಅಸ್ತಮಾನದವರೆಗಿನ ಕಾಲದಲ್ಲಿ ಅವನನ್ನು ಕುರಿತು ಪುರಾಣಗಳಲ್ಲಿ ಹೊಗಳಿರುವದನ್ನು ವಿಚಾರಿಸೋಣ. ಉದಯಕಾಲಕ್ಕೆ ಬ್ರಹ್ಮನೆನಿಸಿ ಮಧ್ಯಾಹ್ನ ಕಾಲಕ್ಕೆ ಮಹೇಶ್ವರನೆನಿಸಿ ಅಸ್ತಮಾನಕಾಲಕ್ಕೆ ವಿಷ್ಣುವೆನಿಸಿಕೊಂಡು ಸೂರ್ಯನು ಮೂರ್ತಿತ್ರಯಾತ್ಮಕನಾಗಿ ವಿರಾಜಮಾನನಾಗಿರುವನು–ಎಂದು ಒಂದು ಕಡೆ ಸ್ತೋತ್ರ ಮಾಡಿದೆ. ಈತನೇ ಬ್ರಹ್ಮನು, ವಿಷ್ಣುವು, ಶಿವನು, ಸ್ಕಂದನು, ಪ್ರಜಾಪತಿಯು, ಇಂದ್ರನು–ಇತ್ಯಾದಿ ಎಲ್ಲಾ ದೇವತೆಗಳ ರೂಪದಲ್ಲಿರುವನು–ಎಂದು ಮತ್ತೊಂದು ಕಡೆ ಹೊಗಳಿದೆ. ಬ್ರಹ್ಮನೆಂದರೆ ಸೃಷ್ಟಿಕರ್ತನೆಂದು ಭಾವಿಸಿದರೆ ಆದಿತ್ಯನು ಸವಿತಾ ಎಂಬ ಹೆಸರಿನಿಂದ ಹೊಗಳಿಸಿಕೊಳ್ಳಲು ತಕ್ಕವನಾಗಿರುವನು. 'ಸೂಯತೇ ಇತಿ ಸೂರ್ಯಃ'–ಎಂಬ ವ್ಯುತ್ಪತ್ತಿಯಂತೆಯೂ ಸೂರ್ಯಶಬ್ದವಾಚ್ಯನಾಗಿರುವದೂ ಅವನಿಗೆ ಅನ್ವರ್ಥನಾಗಿರುವದು. ಜಗತ್ತಿನಲ್ಲಿರುವ ಪ್ರಾಣಿಗಳೆಲ್ಲ ಶಾಖದಿಂದಲೇ ಹುಟ್ಟುವವು. ಉಷ್ಣಾಂಶವು ಆದಿತ್ಯನ ಶಕ್ತಿಯೇ ಆಗಿರುವದು. ಸ್ಥಾವರಜಂಗಮರೂಪಾತ್ಮಕವಾದ ಪ್ರಪಂಚವು ಆದಿತ್ಯನ ಶಾಖದಿಂದಲೇ ಹೊರಬಂದಿದೆ. ಆದ್ದರಿಂದ ಬ್ರಹ್ಮನೆನಿಸಲು ಆದಿತ್ಯನು ಅರ್ಹನಾಗಿರುವನು. ಇನ್ನು ಪೋಷಣೆಯ ಭಾಗವನ್ನು ತೆಗೆದುಕೊಂಡರೆ ಸೂರ್ಯನ ಕಿರಣಗಳಿಂದಲೇ ಸಸ್ಯಗಳೂ ಗಿಡಮರಗಳು ಪ್ರಾಣಿಗಳೂ ವೃದ್ಧಿಹೊಂದುವವು. ಕಾಲವು ಸೂರ್ಯನ ಚಲನೆಯಿಂದಲೇ ಅಳೆಯಲ್ಪಡುವದರಿಂದ ಪ್ರಾಣಿಗಳ ಬೆಳವಣಿಗೆಗೆ ಸೂರ್ಯನು ಕಾರಣನಾಗಿರುವನು. ಏಕೆಂದರೆ ಕಾಲವಶವಾಗಿಯೇ ಭೂತಗಳೂ ಪರಿಣಾಮವನ್ನು ಹೊಂದುವವು. ಔಷಧಿವನಸ್ಪತಿಗಳು ಪಕ್ವವಾಗಲು ಸೂರ್ಯನ ಬೆಳಕೇ ಅವಶ್ಯವಾಗಿರುವದು. ಅವುಗಳನ್ನು ತಿಂದೇ ಪ್ರಾಣಿಗಳು ಬದುಕಬೇಕಾಗಿದೆ. ಈ ರೀತಿಯಾಗಿ ಸೂರ್ಯನು ಜಗತ್ತಿನ ಪೋಷಕನಾಗಿ ಪೂಷಾ–ಎಂಬ ಅನ್ವರ್ಥನಾಮವನ್ನು ಹೊಂದಿರುವನು. ಇದರಿಂದ ಆತನು ವಿಷ್ಣುವೆನಿಸಿದಂತಾಯಿತು. ಇನ್ನು ಭೂತಗಳ ಪ್ರಲಯಕ್ಕೂ ಆತನೇ ಕಾಲರೂಪದಿಂದಲೂ ಆಯುಷ್ಯರೂಪದಿಂದಲೂ ನಿಮಿತ್ತನಾಗಿದ್ದು

ಯಮನೆನಿಸಿರುವನು. ತನ್ನ ಕಿರಣಗಳನ್ನು ತಾನೇ ಸೆಳೆದುಕೊಳ್ಳುವದರಿಂದ ಸಂಯಮನ ಕಾರ್ಯದಿಂದ ಯಮನೆನಿಸಿರುವನೆಂದೂ ಭಾಷ್ಯಕಾರರು ಅರ್ಥಮಾಡಿದ್ದಾರೆ. ಆದರೆ ಸರ್ವಹರನಾದ ಮೃತ್ಯುವೆಂಬ ಯಮನೂ ಸೂರ್ಯನೇ ಎಂದೂ ತಿಳಿಯಬೇಕು. ಇದರಿಂದ ಮಹೇಶ್ವರನೆನಿಸಿದಂತಾಯಿತು. ಹೀಗೆ ಮೂರ್ತಿತ್ರಯಾತ್ಮಕನಾಗಿ ಸೂರ್ಯ ಭಗವಂತನು ಜಗತ್ತಿನ ತಿರುಳಾಗಿ ಕಂಗೊಳಿಸುತ್ತಿರುವನು.

ಈಗ ಸೂರ್ಯನನ್ನು ಏಕರ್ಷಿ ಎಂದು ಉಪನಿಷತ್ತಿನಲ್ಲಿ ಕರೆದಿರುವದನ್ನು ವಿಚಾರಿಸೋಣ. ಏಕ ಏವ–ತಾನೊಬ್ಬನೇ, ಋಷತಿ–ಗಚ್ಛತಿ–ಹೋಗುತ್ತಾನಾದ್ದರಿಂದ ಏಕರ್ಷಿಯೆನಿಸಿರುವನು. ಜಗತ್ತಿಗೆಲ್ಲ ದೇವರು ಒಬ್ಬನೇ ಎಂಬುದನ್ನು ಸೂರ್ಯನು ಉದಾಹರಣೆಯಿಂದಲೇ ತಿಳಿಯಬಹುದಾಗಿದೆ. ಏಕೆಂದರೆ ಎಲ್ಲಾ ದೇಶಗಳಿಗೂ ಎಲ್ಲಾ ಭೂಭಾಗದ ಜನರಿಗೂ ಸೂರ್ಯನು ಒಬ್ಬನೇ ಆಗಿರುತ್ತಾನೆ. ನದಿಯ ನೀರು, ಸಮುದ್ರ ತೀರಗಳು, ಅಷ್ಟೇಕೆ? ವಾಯಮಂಡಲ, ಭೂಮಿ–ಇವುಗಳನ್ನು ಆಯಾ ದೇಶದವರು ತಮ್ಮ ತಮ್ಮ ಭಾಗಗಳೆಂದು ಹಂಚಿಕೊಂಡಂತೆ ಸೂರ್ಯನನ್ನು ಮಾತ್ರ ಯಾರೊಬ್ಬರೂ ತಮ್ಮ ದೇಶದವನೆಂದೂ ತಮಗೇ ಸೇರಿದವನೆಂದೂ ಹಂಚಿಕೊಳ್ಳಲಾಗಿಲ್ಲ. ಆದ್ದರಿಂದ ಸೂರ್ಯನು ಎಲ್ಲರಿಗೂ ಸೇರಿದವನು. ಎಲ್ಲರಿಗೂ ದೇವನಾಗಿರುತ್ತಾನೆ. ಚಂದ್ರ, ಅಗ್ನಿ, ವಿದ್ಯುತ್, ಗ್ರಹನಕ್ಷತ್ರಗಳೇ ಮುಂತಾದ ತೇಜಸ್ಸುಗಳೂ ಸೂರ್ಯನ ಸನ್ನಿಧಿಯಲ್ಲಿ ಮಂಕಾಗಿಬಿಡುವವು. ಸೂರ್ಯನನ್ನು ಬಿಟ್ಟರೆ ನಮಗೆ ಅದಕ್ಕಿಂತ ಅಧಿಕವಾದ ತೇಜಸ್ಸಿರುವದಿಲ್ಲ. ಆತನು ಒಬ್ಬನೇ ಪ್ರತಿದಿನವೂ ಪೂರ್ವದಿಂದ ಪಶ್ಚಿಮಕ್ಕೆ ಸಂಚರಿಸುತ್ತಾ ಉದಯಾಸ್ತಮಾನಗಳನ್ನು ಹೊಂದಿದಂತೆ ಕಂಡುಬರುತ್ತಾ ಲೋಕಾನುಗ್ರಹವನ್ನು ಮಾಡುತ್ತಿರುವನು. ಯಾರು ತಡಮಾಡಿದರೂ ಸೂರ್ಯನು ತಡಮಾಡುವದಿಲ್ಲ. ಆತನ ಸಂಚಾರವು ಕರಾರುವಾಕ್ಕಾಗಿದ್ದು ವಕ್ರಗತಿಯೇ ಇಲ್ಲದೇ ಸದಾ ಮುಂದುವರೆದಿರುವದು. ಬ್ರಹ್ಮಾಂಡಕಪಾಲದಿಂದ ಇಂಥ ಮಹನೀಯನ ಉದಯವು ಆದಾಗ ಗದ್ದಲವಾದದ್ದರಲ್ಲಿ ಆಶ್ಚರ್ಯವೇನಿದ್ದೀತು?

ಈಗ ಮನುಷ್ಯರಾದ ನಮ್ಮಗಳ ದೃಷ್ಟಿಯಿಂದ ಸೂರ್ಯನಿಂದಾಗುವ ಪ್ರಯೋಜನಗಳನ್ನು ವಿಚಾರಿಸೋಣ. ನಮ್ಮ ಜೀವನದಲ್ಲಿ ಅನೇಕ ಕಾಮಗಳ ಒತ್ತಡ ವಿರುವದು. ಮುಖ್ಯವಾಗಿ ಆರೋಗ್ಯ , ಶಕ್ತಿ, ಪುಷ್ಟಿ , ತೃಪ್ತಿ, ಶಾಂತಿ– ಮುಂತಾದವುಗಳು ಎಲ್ಲರಿಗೂ ಬೇಕೆನಿಸಿರುವವು. ಇವುಗಳೆಲ್ಲವನ್ನೂ ದಯಪಾಲಿಸುವವನು ಸೂರ್ಯನೇ ಆಗಿರುವನು. ಸೂರ್ಯನು ಅನುಗ್ರಹಮಾಡಿದರೆ ಮಾತ್ರ ದೇಹವು ಶಾಖವಾಗಿದ್ದು ರಕ್ತಸಂಚಾರವು ನಿಯತವಾಗಿದ್ದು, ಕಣ್ಣುಗಳು ಚೆನ್ನಾಗಿ ಕಾಣಿಸುತ್ತಿದ್ದು ನಾವು ವ್ಯವಹಾರಕ್ಕೆ ತಕ್ಕವರಾಗಿರುವೆವು. ಆರೋಗ್ಯವೊಂದಿಲ್ಲವಾದರೆ ಏನೇನು ಐಶ್ವರ್ಯಗಳಿದ್ದರೂ

ವ್ಯರ್ಥವೇ ಸರಿ. ಅದು ಮಾತ್ರ ಸೂರ್ಯನಿಂದಲೇ ದೊರಕಬೇಕಾಗಿದೆ. ಇನ್ನು ಎರಡನೆಯದಾಗಿ ಮನುಷ್ಯನಿಗೆ ಮುಖ್ಯವಾಗಿರುವದು ಬುದ್ಧಿಶಕ್ತಿ, ಉಳಿದ ಪ್ರಾಣಿಗಳಿಗೂ ಮನುಷ್ಯನಿಗೂ ಇರುವ ಹೆಚ್ಚುಗಾರಿಕೆಯೇನೆಂದರೆ ಈ ಬುದ್ಧಿಯ ಕೊಡುಗೆಯೊಂದೇ ಆಗಿರುತ್ತದೆ. ಇದರ ಬಲದಿಂದ ಮಾನವನು ಸೃಷ್ಟಿಯಲ್ಲಿನ ಅನೇಕ ಸ್ಥಾವರಜಂಗಮ ಪದಾರ್ಥಗಳನ್ನು ವಶಪಡಿಸಿಕೊಂಡು ತನ್ನದಾಗಿ ಮಾಡಿಕೊಂಡು ಉಪಯೋಗಿಸಿ ಕೊಳ್ಳುತ್ತಿರುವನು. ಆದರೆ ಈ ಬುದ್ಧಿಯು ದುರ್ಬುದ್ಧಿಯಾಗಿ ಸ್ವಾರ್ಥಮಯವಾಗಿಬಿಟ್ಟರೆ ಸ್ವಪರವಿನಾಶಕ್ಕೇ ಕಾರಣವಾದೀತು. ಹಾಗಾಗದಂತೆ ಸದ್ಬುದ್ಧಿಯ ರೂಪದಿಂದ ಮಾನವ ನನ್ನು ಅನುಗ್ರಹಿಸುವವನು ಸೂರ್ಯನೇ ಆಗಿರುತ್ತಾನೆ. ಆತನನ್ನು ಧ್ಯಾನಮಾಡುತ್ತಿರುವ ಭಕ್ತರಿಗೆ ಎಂದಿಗೂ ಕೆಟ್ಟಬುದ್ಧಿಯುಂಟಾಗುವ ಸಂಭವವಿರುವದಿಲ್ಲ. ಆದ್ದರಿಂದಲೇ ನಾಲ್ಕು ವೇದಗಳಲ್ಲಿಯೂ ಪ್ರಸಿದ್ಧವಾಗಿರುವ ಗಾಯತ್ರೀಮಂತ್ರವನ್ನು ದ್ವಿಜರೆಲ್ಲರೂ ಪ್ರತಿದಿನವೂ ಜಪಮಾಡಬೇಕೆಂದೂ ಉಳಿದವರು ಅದರ ಅಭಿಪ್ರಾಯವನ್ನೇ ರೂಪಾಂತರದಿಂದ ಮನನಮಾಡುತ್ತಾ ಸೂರ್ಯೋಪಾಸಕರಾಗಿ ಕೃತಾರ್ಥರಾಗಬೇಕೆಂದೂ ಜಗತ್ಪೂಜ್ಯರಾದ ಋಷಿಗಳು ತಿಳಿಸಿದ್ದಾರೆ.

ಈ ರೀತಿಯಾಗಿ ಸೂರ್ಯೋಪಾಸನೆಯು ಈಗಲೂ ಒಂದಲ್ಲ ಒಂದು ರೀತಿಯಿಂದ ನಮ್ಮಲ್ಲಿ ನಡೆದುಕೊಂಡೇ ಬಂದಿದೆ. ಕರ್ಮಿಗಳಾಗಲಿ, ಉಪಾಸಕರಾಗಲಿ, ಜ್ಞಾನಿ ಗಳಾಗಲಿ– ಯಾರೊಬ್ಬರೂ ಸೂರ್ಯಭಗವಂತನ ತತ್ತ್ವದಿಂದ ಹೊರತಾದವರಲ್ಲ. ಜ್ಞಾನಿಗಳಿಗೆ ಸೂರ್ಯನೆಂದರೆ ಪರಬ್ರಹ್ಮವೇ ಆಗಿವೆ. ಉಪಾಸಕರಿಗೆ ಸೂರ್ಯನೆಂದರೆ ದಿವ್ಯತೇಜೋಮಯನಾದ ಹಿರಣ್ಯಗರ್ಭನೇ ಆಗಿದ್ದಾನೆ. ಕರ್ಮಿಗಳಿಗೆ ಅವನೇ ಕಾಲಾತ್ಮನೂ ಯಜ್ಞಪುರುಷನೂ ಆಗಿರುವನು. ಲೌಕಿಕರಿಗೆಲ್ಲ ಹಾಗೂ ವಿಜ್ಞಾನಿಗಳಿಗೆಲ್ಲ ಆತನು ವ್ಯವಹಾರಕಾರಣನೂ ಸಕಲಕಾಮಪ್ರದನೂ ಆಗಿರುವನು. ಇಂಥ ದೇವನು ಎಲ್ಲರಿಗೂ ಪ್ರತ್ಯಕ್ಷಗೋಚರನಾಗಿರುವದಂತೂ ಆತನ ಕೃಪೆಯ ಪರಮಾವಧಿಯಾಗಿದೆ. ನಾವೆಲ್ಲರೂ ಆದಿತ್ಯೋಪಾಸಕರಾಗಿ ಬಾಳಿ ಉದ್ಧಾರವಾಗೋಣ.



# ನಾಲ್ಕನೆಯ ಅಧ್ಯಾಯ

## (ಸಂವರ್ಗವಿದ್ಯೆ–ಷೋಡಶಕಲವಿದ್ಯೆ–ಉಪಕೋಶಲವಿದ್ಯೆ)

## ಸಂವರ್ಗವಿದ್ಯೆ

**ಓಮ್ ॥ ಜಾನಶ್ರುತಿರ್ಹ ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ ಬಹುಪಾಕ್ಯ ಆಸ ಸ ಹ ಸರ್ವತ ಆವಸಥಾನ್ ಮಾಪಯಾಂಚಕ್ರೇ ಸರ್ವತ ಏವ ಮೇಽನ್ನಮತ್ಸ್ಯನ್ತೀತಿ ॥ 4–1–1.**

ಭಾವಾರ್ಥ:– ಜಾನಶ್ರುತಿಪೌತ್ರಾಯಣನು ಶ್ರದ್ಧಾದೇಯನೂ ಬಹುದಾಯಿಯೂ ಬಹುಪಾಕ್ಯನೂ ಆಗಿದ್ದನು. ಅವನು ಎಲ್ಲಾ ಕಡೆಯಲ್ಲಿಯೂ 'ನನ್ನ ಅನ್ನವನ್ನು ಜನರು ತಿನ್ನಲಿ'! ಎಂದು ಆವಸಥಗಳನ್ನು ನಿರ್ಮಾಣಮಾಡಿಸಿದ್ದನು.

(ಜಾನಶ್ರುತಿ ಎಂಬ ರಾಜನು ಬಹಳ ಶ್ರದ್ಧೆಯಿಂದ ಜನರಿಗೆ ಅನ್ನದಾನಮಾಡುವದಕ್ಕಾಗಿ ಛತ್ರಗಳನ್ನು ತನ್ನ ರಾಜ್ಯದಲ್ಲಿ ಎಲ್ಲೆಲ್ಲಿಯೂ ಏರ್ಪಡಿಸಿದ್ದನು. ಅನ್ನದಾನ, ಶ್ರದ್ಧೆ, ತನ್ನನ್ನು ತಾನು ಹೊಗಳಿಕೊಳ್ಳದಿರುವದು–ಮುಂತಾದ ಆತ್ಮಗುಣಗಳು ಬ್ರಹ್ಮವಿದ್ಯಾಪ್ರಾಪ್ತಿಗೆ ಉಪಾಯಗಳೆಂದು ಭಾವ.)

## 25. ಜಾನಶ್ರುತಿಯ ಗುಣಕಥನ

ಈಗ ಛಾಂದೋಗ್ಯದ ನಾಲ್ಕನೆಯ ಅಧ್ಯಾಯದ ಮಂತ್ರಗಳನ್ನು ವಿಚಾರಮಾಡೋಣ. ಈ ಅಧ್ಯಾಯವೂ ಮುಖ್ಯವಾಗಿ ಪ್ರಾಣೋಪಾಸನೆಯೇ ಮುಂತಾದ ಉಪಾಸನಾ ವಿಷಯಗಳನ್ನೇ ಒಳಗೊಂಡಿದೆ. ಪ್ರಾರಂಭದಲ್ಲಿ 'ಸಂವರ್ಗವಿದ್ಯೆ' ಎಂಬ ಹೆಸರಿನಿಂದ ವಾಯುದೇವತೆಯ ರೂಪವಾದ ಬ್ರಹ್ಮದ ಉಪಾಸನೆಯನ್ನು ವಿವರಿಸಲಾಗುವದು. ಅದರ ಸ್ತುತಿಗಾಗಿ ಜಾನಶ್ರುತಿ–ಎಂಬ ಮಹಾರಾಜನ ಕಥೆಯನ್ನು ಈಗ ಪ್ರಸ್ತಾಪಿಸಲಾಗುತ್ತದೆ.

ಜನಶ್ರುತ–ಎಂಬುವನ ಮಗನಾದ, ಪುತ್ರನೆಂಬುವನ ಮೊಮ್ಮಗನೂ ಆದ ಜಾನಶ್ರುತಿ ಎಂಬ ರಾಜನೊಬ್ಬನಿದ್ದನು. ಆತನು ತನ್ನ ರಾಜ್ಯದಲ್ಲಿ ಹೆಚ್ಚಾಗಿ ಅನ್ನಸತ್ರಗಳನ್ನು ಏರ್ಪಡಿಸಿದ್ದನು. ಇದರಿಂದ ಬಹುಪಾಕ್ಯನು–ಎಂದರೆ ಅನ್ನದಾನಕ್ಕಾಗಿ ಬಹಳವಾಗಿ ಅಡಿಗೆಮಾಡಿಸುವವನು–ಎಂದು ಹೆಸರುವಾಸಿಯಾಗಿದ್ದನು. ಮತ್ತು ಶ್ರದ್ಧೆಯಿಂದ ಅನ್ನದಾನ ಮಾಡುತ್ತಿದ್ದನು. ಹೆಚ್ಚಿನ ಪ್ರಮಾಣದಲ್ಲಿ ಹೀಗೆ ಅನ್ನದಾಯಿಯಾಗಿದ್ದುದರಿಂದ ಬಹುದಾಯೀ–ಎಂದರೆ ಬಹಳವಾಗಿ ದಾನಮಾಡುವವನೆಂದೂ ಪ್ರಸಿದ್ಧನಾಗಿದ್ದನು. ಒಂದು

ದಿನ ರಾತ್ರಿಯಲ್ಲಿ ಆ ರಾಜನು ಬೇಸಗೆಯ ತಾಪಪರಿಹಾರಕ್ಕಾಗಿ ತಂಪಾದ ಗಾಳಿಯಲ್ಲಿ ವಿಶ್ರಾಂತಿ ಮಾಡುವ ಸಲುವಾಗಿ ಎತ್ತರವಾದ ಉಪ್ಪರಿಗೆಯ ಮೇಲೆ ಕುಳಿತಿದ್ದನು. ಆಗ ಆಕಾಶದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರಿಹೋಗುತ್ತಿರುವ ಹಂಸಗಳ ಹಿಂಡನ್ನು ನೋಡಿದನು. ಅವು ಈ ರಾಜನು ಕುಳಿತಿದ್ದ ಉಪ್ಪರಿಗೆಯ ಮೇಲೆಯೇ ಹಾದು ಹೋಗುತ್ತಿದ್ದವು. ಅವುಗಳಲ್ಲಿ ಒಂದು ಹಂಸವು ತನಗಿಂತ ಮುಂದೆ ಹಾರುತ್ತಿದ್ದ ಹಂಸವನ್ನು ಕುರಿತು ''ಎಲೈ ಅಲ್ಪದೃಷ್ಟಿಯವನೆ, ಜೋಕೆ! ಜಾನಶ್ರುತಿಯ ಅನ್ನದಾನ ಪ್ರಭಾವದಿಂದ ಹರಡಿರುವ ಜ್ಯೋತಿಯು ನಿನ್ನನ್ನು ಸುಟ್ಟೀತು; ಕಾಲನ್ನು ಚಾಚಬೇಡ'' ಎಂದಿತು. ಆಗ ಮುಂದುಗಡೆ ಇದ್ದ ಹಂಸವು 'ಓಹೋ, ಇವನೇನು ಮಹಾ ದೊಡ್ಡ ಮನುಷ್ಯನೊ? ಆ ಪ್ರಸಿದ್ಧನಾದ ರೈಕ್ವನೆಂಬ ಉಪಾಸಕನಂತೆ ಇವನನ್ನು ಭಾವಿಸಿ ಹೀಗೆ ನುಡಿಯುತ್ತಿರುವೆ?' ಎಂದಿತು. ಆಗ ಹಿಂದುಗಡೆಯ ಹಂಸವು 'ಎಲೈ ಸ್ನೇಹಿತನೆ, ಆ ರೈಕ್ವನೆನ್ನುವವನು ಯಾರು? ಅವನ ಮಹಿಮೆಯೇನು?' ಎಂದು ಕೇಳಲು ಮುಂದಿನ ಹಂಸವು ಹೀಗೆಂದು ಹೇಳಲಾರಂಭಿಸಿತು.

''ಹೇಗೆ ಪಗಡೆಯಾಟದಲ್ಲಿ ಕೃತವೆಂಬ ಗರವು ಬಿದ್ದರೆ ಉಳಿದವುಗಳನ್ನೂ ಗೆದ್ದುಕೊಂಡಂತಾಗುವದೋ ಹಾಗೆಯೇ ಪ್ರಜೆಗಳು ಏನೇನು ಒಳ್ಳೆಯದನ್ನು ಮಾಡುವರೋ ಅವುಗಳನ್ನೆಲ್ಲ ಈ ಉಪಾಸಕನು ಪಡೆದುಕೊಂಡಿರುವನು; ಎಂದರೆ ಸತ್ಕರ್ಮಗಳ ಫಲಗಳೆಲ್ಲವೂ ಈತನನ್ನೇ ಸೇರುವವು. ರೈಕ್ವನೆಂಬವನು ಇಂಥ ಮಹಿಮಾಶಾಲಿಯಾದವನು. ತಿಳಿಯಿತೊ?'' ಎಂದಿತು. ಇಷ್ಟು ಮಾತುಗಳನ್ನೂ ಜಾನಶ್ರುತಿಯು ಕೇಳಿದವನಾಗಿ ''ಆಹಾ! ಆ ರೈಕ್ವನೆಂಬವನು ಯಾರಿರಬಹುದು? ಅವನನ್ನು ಕಂಡುಹಿಡಿದು ಆತನು ಅರಿತಿರುವ ಉಪಾಸನಾವಿದ್ಯೆಯನ್ನು ನಾನೂ ಪಡೆದುಕೊಂಡು ಕೃತಾರ್ಥನಾಗುವೆನು. ಕೇವಲ ಅನ್ನದಾನಾದಿಸತ್ಕರ್ಮಗಳಿಂದ ಇಹಪರಲೋಕಗಳಲ್ಲಿ ಕೀರ್ತಿಯುಲಭಿಸುವದಾದರೂ ದೇವತಾಸಾಯುಜ್ಯರೂಪವಾದ ಅಮೃತತ್ವವು ಲಭಿಸಲಾರದು; ಅದು ಈಗ ನಾನು ಪಡೆದುಕೊಂಡಿರುವ ಪುಣ್ಯಕ್ಕಿಂತಲೂ ಹೆಚ್ಚಿನದು'' ಎಂದುಕೊಂಡು ರೈಕ್ವನನ್ನು ಹುಡುಕಿಸಲು ಆರಂಭಿಸಿದನು.

ಈಗ ಕೃತವೆಂಬ ಗರದ ವಿವರವನ್ನೂ ಆ ದೃಷ್ಟಾಂತದ ಮೂಲಕ ಸಂವರ್ಗ ವಿದ್ಯೆಯ ಹೆಚ್ಚುಗಾರಿಕೆಯನ್ನೂ ತಿಳಿದುಕೊಳ್ಳೋಣ. ಹಿಂದಿನಕಾಲದಲ್ಲಿ ಪಗಡೆಯಾಟ ವಾಡುವಾಗ ಕೃತ, ತ್ರೇತ, ದ್ವಾಪರ, ಕಲಿ–ಎಂಬ ಗರಗಳನ್ನು ಬಳಸುತ್ತಿದ್ದರು. ಕಲಿ ಎಂದರೆ ಒಂದು, ದ್ವಾಪರ–ಎರಡು, ತ್ರೇತ–ಮೂರು, ಕೃತ–ನಾಲ್ಕು, ಎಂದು ಸಂಜ್ಞೆಯು. ನಾಲ್ಕು ಎಂಬ ಸಂಖ್ಯೆಯಲ್ಲಿ ಉಳಿದ ಮೂರು ಸಂಖ್ಯೆಗಳು ಅಡಕವಾಗಿರುವದರಿಂದ ಕೃತವೆಂಬ ಗರವು ಬಿದ್ದರೆ (4+3+2+1) ಹತ್ತುಗರಗಳನ್ನು ನಡೆಯಿಸಬೇಕೆಂದು ಆಟದ

ನಿಯಮವನ್ನು ಗೊತ್ತುಮಾಡಲಾಗಿತ್ತು. ಹೀಗೆ ದೊಡ್ಡಗರವು ಬಿದ್ದಾಗ ಉಳಿದ ಸಣ್ಣಗರಗಳೆಲ್ಲವೂ ಹೇಗೆ ಬಿದ್ದಂತೆಯೇ ಆಗಿ ಹತ್ತು ಗರಗಳಾಗುತ್ತಿದ್ದವೋ ಹಾಗೆಯೇ ಸಂವರ್ಗವೆಂಬ ಹೆಸರಿನ ವಾಯುದೇವತೆಯ ಉಪಾಸನೆಯನ್ನು ಬಲ್ಲವನಿಗೆ ಸಜ್ಜನರು ಅನುಷ್ಠಿಸಬಹುದಾದಂಥ ಎಲ್ಲಾ ಪುಣ್ಯಕರ್ಮಗಳ ಫಲವೂ ದೊರಕುವದೆಂದು ಶಾಸ್ತ್ರಗಳ ಅಭಿಪ್ರಾಯವಾಗಿದೆ. ಇಂಥ ವಿದ್ಯೆಯನ್ನು ಆಗಿನ ಕಾಲಕ್ಕೆ ರೈಕ್ವನೆಂಬನು ಮಾತ್ರ ಬಲ್ಲವನಾಗಿದ್ದನು. ಆದ್ದರಿಂದ ಜಾನಶ್ರುತಿರಾಜನು ಆ ಮಹಾತ್ಮನು ಯಾರೆಂಬುದನ್ನು ಗೊತ್ತು ಮಾಡಿ ತಾನೂ ಆ ವಿದ್ಯೆಯನ್ನು ಸಂಪಾದಿಸಿಕೊಳ್ಳಬೇಕೆಂದೇ ದೃಢಮನಸ್ಸುಮಾಡಿದನು.

ಮಾರನೆಯ ದಿನ ತನ್ನ ಸೇವಕನನ್ನು ಕರೆದು ರಾಜನು 'ಎಲೈ ಕ್ಷತ್ತೃವೆ, ಬಂಡಿಯ ರೈಕ್ವನೆಂಬ ಬ್ರಾಹ್ಮಣನ ವಿಚಾರವಾಗಿ ರಾತ್ರೆಯಲ್ಲಿ ಹಂಸಗಳು ಮಾತನಾಡಿಕೊಳ್ಳುತ್ತಿದ್ದವು. ಅವನು ಯಾರೆಂಬುದನ್ನು ಹುಡುಕಿ ಕರೆದುಕೊಂಡು ಬಾ' ಎಂದು ಅಪ್ಪಣೆಮಾಡಿದನು. ಆ ಸೇವಕನು ರಾಜ್ಯದಲ್ಲಿ ಮುಖ್ಯಸ್ಥಳಗಳಲ್ಲೆಲ್ಲ ಹುಡುಕಿ ಯಾರೂ ರೈಕ್ವನೆಂಬವನು ಸಿಗಲಿಲ್ಲವೆಂದು ಹಿಂದಿರುಗಿಬಂದನು. ಪುನಃ ರಾಜನು ''ತಪಸ್ವಿಗಳನ್ನೂ ಧ್ಯಾನನಿಷ್ಠರನ್ನೂ ಹುಡುಕುವದು ಪೇಟೆಯ ಬೀದಿಗಳಲ್ಲಲ್ಲ. ಏಕಾಂತಸ್ಥಳಗಳಲ್ಲಿ ಹುಡುಕು'' ಎಂದನು. ಆಗ ಆ ಜಾಣನಾದ ಸೇವಕನು ನಿರ್ಜನಪ್ರದೇಶಗಳಲ್ಲಿ ಹುಡುಕುತ್ತಾ ಕಡೆಗೆ ಮುರಿದು ಹೋಗಿದ್ದ ಒಂದು ಬಂಡಿಯ ಹತ್ತಿರ ಕಜ್ಜಿಯನ್ನು ಕೆರೆಯುತ್ತಾ ವಿಲಕ್ಷಣವಾಗಿ ಕುಳಿತಿದ್ದ ಒಬ್ಬನನ್ನು ಕಂಡು ವಿನಯದಿಂದ ಬಳಿಸಾರಿದವನಾಗಿ ''ಸ್ವಾಮಿ, ಸಯುಗ್ವರೈಕ್ವನೆಂಬ ಹೆಸರಿನ ಬ್ರಾಹ್ಮಣನು ತಾವೆಯೊ?'' ಎಂದನು. ಆಗ ರೈಕ್ವನು ಅನಾದರದಿಂದಲೇ 'ಹೌದೋ, ನಾನೇ ಕಾಣೋ!' ಎಂದನು. ರಾಜಪುರುಷನು ಬಹಳ ಸಂತೋಷ ಗೊಂಡವನಾಗಿ ಹಿಂದಿರುಗಿ ತನ್ನ ಯಜಮಾನನಿಗೆ ಈ ವಿಷಯವನ್ನು ತಿಳಿಸಿದನು.

ಕೂಡಲೆ ರಾಜನು ಆರುನೂರು ಗೋವುಗಳು, ಚಿನ್ನದ ಕಂಠಹಾರ, ಒಂದು ರಥ–ಇಷ್ಟನ್ನೂ ಕಾಣಿಕೆಯಾಗಿ ತೆಗೆದುಕೊಂಡು ರೈಕ್ವನಿದ್ದಲ್ಲಿಗೆ ಹೋದನು. ಅವುಗಳನ್ನು ಒಪ್ಪಿಸಿ 'ಪೂಜ್ಯರೆ, ತಾವು ತಿಳಿದಿರುವ ಸಂವರ್ಗವಿದ್ಯೆಯನ್ನು ನನಗೆ ತಿಳಿಸಿಕೊಡಬೇಕು' ಎಂದು ಬೇಡಿಕೊಂಡನು. ತ್ರಿಕಾಲಜ್ಞನಾದ ಆ ಬ್ರಾಹ್ಮಣನು ಈ ರಾಜನು ಹಂಸಗಳ ಮಾತಿನಿಂದ ಪ್ರೇರಿತನಾಗಿ 'ಆಹಾ, ನಾನು ಸಂವರ್ಗವಿದ್ಯೆಯನ್ನು ತಿಳಿದಿಲ್ಲವಲ್ಲ!' ಎಂದು ಶೋಕದಿಂದ ನನ್ನಲ್ಲಿಗೆ ಬಂದಿರುವನಲ್ಲವೆ? ಮತ್ತು ವಿದ್ಯಾಪ್ರಾಪ್ತಿಗಾಗಿ ಗುರುಶುಶ್ರೂಷೆಯನ್ನು ಕೈಗೊಳ್ಳದೆ ಶೂದ್ರನಂತೆ ಕೇವಲ ಹಣದಿಂದಲೇ ಅದನ್ನು ಪಡೆಯಲು ಯತ್ನಿಸಿರುವನಲ್ಲವೆ? ಇದರಿಂದ ನನಗೇನಾಗಬೇಕು?' ಎಂದುಕೊಂಡು ರಾಜನನ್ನು ಕುರಿತು 'ಎಲಾ ಶೂದ್ರನೆ, ನಿನ್ನ ಪದಾರ್ಥಗಳನ್ನು ನೀನೇ ಇಟ್ಟುಕೋ, ನನಗೆ ಬೇಡ' ಎಂದುಬಿಟ್ಟನು.

ಜಾನಶ್ರುತಿಯು ಕ್ಷತ್ರಿಯನೆಂಬುದು ಪ್ರಸಿದ್ಧವು. ರೈಕ್ವನಿಗೂ ಅದು ಗೊತ್ತು, ಆದ್ದರಿಂದ ಇಲ್ಲಿ ಶೂದ್ರನೆಂದು ಮಾಡಿರುವ ಸಂಬೋಧನೆಗೆ ಶುಕ್ ಎಂದರೆ ಶೋಕದಿಂದ, ದುದ್ರಾವ–ಓಡಿಬಂದನು ಎಂದು ಅವಯವಾರ್ಥಮಾಡಿ ಶೂದ್ರಶಬ್ದಕ್ಕೆ ವ್ಯಾಖ್ಯಾನ ಮಾಡಬೇಕೆಂದು ಶ್ರೀಶಂಕರಾಚಾರ್ಯರು ಬಾದರಾಯಣರ ಸೂತ್ರಾನುಸಾರವಾಗಿ ಅರ್ಥ ಮಾಡಿರುತ್ತಾರೆ. ಮತ್ತು ಈಗಿನ ಕಾಲದ ಜನರಿಗೂ ಅನ್ವಯಿಸುವಂತೆ ಒಂದು ವಿಷಯವನ್ನು ತಿಳಿಸಿದ್ದಾರೆ. ಏನೆಂದರೆ 'ಹಣವಿದ್ದುಬಿಟ್ಟರೆ ಬೇಕಾದದ್ದನ್ನೆಲ್ಲ ಕೊಂಡು ಬಿಡಬಹುದು' ಎಂಬ ಜನರ ಅಭಿಪ್ರಾಯವು ತಪ್ಪು–ಎಂಬಿದೇ ಅದು. ಬ್ರಹ್ಮವಿದ್ಯೆಯು ಎಂದಿಗೂ ಹಣಮಾತ್ರದಿಂದ ದೊರಕುವದಿಲ್ಲ. ಏಕೆಂದರೆ ಅದನ್ನು ಬಲ್ಲವನು ಹಣದಾಸೆಯನ್ನು ಮೊದಲೇ ಬಿಟ್ಟಿರುತ್ತಾನೆ. ಅಂಥವನಲ್ಲಿ ಅಡಗಿರುವ ವಿದ್ಯೆಯನ್ನು ಪಡೆದುಕೊಳ್ಳಬೇಕಾದರೆ ಸೇವಾ–ಶುಶ್ರೂಷೆಗಳೇ ಬೇಕು. ಹೇಗೆಂದರೆ: ಕಾಮನನ್ನೇ ಸುಟ್ಟು ಬೂದಿಮಾಡಿರುವ ಪರಮೇಶ್ವರನನ್ನು ಪಾರ್ವತಿಯು ತನ್ನ ರೂಪಸೌಂದರ್ಯ ಹಾವಭಾವ ವಿಲಾಸಗಳಿಂದ ವಶಪಡಿಸಿಕೊಳ್ಳಲಾಯಿತೆ? ಇಲ್ಲ. ಅದಕ್ಕಾಗಿ ಆಕೆಯು ದುಷ್ಕರವಾದ ತಪಸ್ಸನ್ನೇ ಮಾಡಬೇಕಾಯಿತು. ಹಾಗೆಯೇ ಜನರು ಕೂಡ ಹಣದಿಂದಲೇ ಚತುರ್ವಿಧ ಪುರುಷಾರ್ಥಗಳೂ ದೊರಕಿಯಾವೆಂಬ ಭ್ರಾಂತಿಯನ್ನು ಕೈಬಿಟ್ಟು ಗುರುಗಳನ್ನು ಸೇವಾದಿಗಳಿಂದಲೇ ತೃಪ್ತಿಗೊಳಿಸಬೇಕು. ಒಂದು ವೇಳೆ ಅವರ ಅವಶ್ಯಕತೆಗಳಿಗೆ ಹಣವು ಬೇಕೆಂಬುದು ಗೊತ್ತಾದರೆ ಅವರು ಕೇಳದೆ ಇದ್ದರೂ ಶಿಷ್ಯನು ತನ್ನ ಉದ್ಧಾರಕ್ಕಾಗಿ ಉದಾರವಾಗಿ ಕಾಣಿಕೆಗಳನ್ನು ಒಪ್ಪಿಸಬೇಕು–ಎಂದೂ ತಿಳಿಸಿದಂತಾಗಿದೆ.

ಈಗ ಕಥೆಯನ್ನು ಮುಂದುವರಿಸೋಣ. ಜಾನಶ್ರುತಿಯು ರೈಕ್ವನ ತಿರಸ್ಕಾರದಿಂದ ವಿಚಲಿತನಾಗಲಿಲ್ಲ. ಮತ್ತು ತಾನು ಸಮರ್ಪಿಸಿದ ಕಾಣಿಕೆಯು ಅಲ್ಪವಾಗಿರಬಹುದು; ಆದ್ದರಿಂದ ಇನ್ನೂ ಹೆಚ್ಚಿನ ಕಾಣಿಕೆಯನ್ನು ಒಪ್ಪಿಸಿ ಶ್ರದ್ಧೆಯಿಂದ ಬಳಿಸಾರಿ ವಿದ್ಯೆಯನ್ನು ಪಡೆದುಕೊಳ್ಳುವೆನು–ಎಂದು ಆಲೋಚಿಸಿ ಒಂದು ಸಾವಿರ ಗೋವುಗಳನ್ನೂ ರತ್ನಹಾರವನ್ನೂ ಒಂದು ಗ್ರಾಮವನ್ನೂ ಜೊತೆಗೆ ತನ್ನ ಮಗಳನ್ನೂ ಕರೆತಂದು ಎಲ್ಲವನ್ನೂ ಒಪ್ಪಿಸಿಕೊಂಡು ವಿದ್ಯೋಪದೇಶವನ್ನು ಮಾಡುವಂತೆ ಬೇಡಿಕೊಂಡನು. ಆಗ ರೈಕ್ವನು ಆ ರಾಜನು ಸಮರ್ಪಿಸಿದ ಕಾಣಿಕೆಯನ್ನು ಸ್ವೀಕರಿಸಿ ವಿದ್ಯೋಪದೇಶವನ್ನು ಮಾಡಿದನು. ರಾಜನು ರೈಕ್ವನಿಗೆ ಬಳುವಳಿಯಾಗಿ ಕೊಟ್ಟ ಊರು ಮಹಾವೃಷವೆಂಬ ದೇಶದಲ್ಲಿ ರೈಕ್ವಪರ್ಣಗಳೆಂದು ಪ್ರಸಿದ್ಧವಾಯಿತು.

ಈ ಸಂದರ್ಭದಲ್ಲಿ ರೈಕ್ವನು ಕಾಣಿಕೆಗಳನ್ನು ಸ್ವೀಕರಿಸಿದ್ದು ಸರಿಯೆ? ಎಂಬಿದು ವಿಚಾರಣೀಯವಾಗಿ ಈಗಿನ ಜನರಿಗೆ ತೋರಬಹುದು. ನಿಜವೇನೆಂದರೆ: ರೈಕ್ವನು ಈವರೆಗೂ ಬ್ರಹ್ಮಚಾರಿಯಾಗಿದ್ದನು. ರಾಜನು ಮೊದಲು ಒಪ್ಪಿಸಿದ ಧನವನ್ನು ವಿಚಾರ

ಮಾಡದೆ ಒಮ್ಮೆಗೇ ಸ್ವೀಕರಿಸಿದರೆ ಅದನ್ನು ವಿನಿಯೋಗಿಸುವದು ಹೇಗೆ? ಎಂಬ ಯೋಚನೆಯು ಆತನಿಗೆ ಬಂದಿತು. ಅದಕ್ಕಾಗಿ ಯಜ್ಞದಾನಾದ್ಯನುಷ್ಠಾನಗಳನ್ನು ಕೈಗೊಳ್ಳಬೇಕಾದರೆ ಅವನು ಬ್ರಹ್ಮಚರ್ಯದಿಂದ ಗಾರ್ಹಸ್ಥ್ಯಕ್ಕೆ ಏರಬೇಕು. ಆಗ ಗೃಹಸ್ಥಾಶ್ರಮಕರ್ಮಗಳನ್ನು ಮಾಡಿ ಧನವನ್ನು ಸದ್ವಿನಿಯೋಗಮಾಡಬಹುದು. ಆದರೆ ರಾಜನು ಮೊದಲು ಅರ್ಪಿಸಿರುವ ಅಲ್ಪಧನವು ಆತನು ಗೃಹಸ್ಥನಾಗಲು ಸಾಲದು. ಏಕೆಂದರೆ ವಸತಿಗೆ ಜಾಗವಾಗಲಿ, ಗೃಹಿಣಿಯಾಗುವಂಥ ಸ್ತ್ರೀಯಾಗಲಿ ಇಲ್ಲದೆ ಗಾರ್ಹಸ್ಥ್ಯವನ್ನು ಸಂಪಾದಿಸುವದು ಹೇಗೆ? ಇದರ ಬದಲು ಬ್ರಹ್ಮಚಾರಿಯಾಗಿಯೇ ಉಳಿದುಕೊಳ್ಳುವದು ಮೇಲಲ್ಲವೆ? ಆದಕ್ಕಾಗಿಯೇ ರೈಕ್ವನು ಮೊದಲು ಬೇಡವೆಂದನು. ಕೆಲವರು 'ದೀಪದಾನ' ಮಾಡುತ್ತಾರೆ. ಆದರೆ ತೆಗೆದುಕೊಳ್ಳುವವನಿಗೆ ಪ್ರತಿದಿನವೂ ಆ ಸೊಡಿಲುಗಳಿಗೆ ಎಣ್ಣೆಯನ್ನು ಹಾಕಿ ದೇವರ ಮುಂದೆ ದೀಪಗಳನ್ನು ಹಚ್ಚುವ ಸಾಮರ್ಥ್ಯವಿರಬೇಕಲ್ಲವೆ? ಇಲ್ಲವಾದರೆ ತೆಗೆದುಕೊಳ್ಳುವದು ಹೇಗೆ? ಹಾಗೆಯೇ ರೈಕ್ವನು ಯೋಚಿಸಿ ಧನವನ್ನು ಮೊದಲು ಬೇಡವೆಂದನೇ ಹೊರತು ರಾಜನು ಇನ್ನೂ ಹೆಚ್ಚಾಗಿ ಕೊಡಲಿ– ಎಂಬ ದುರಾಶೆಯಿಂದಲ್ಲ. ಆದರೆ ವಿದ್ಯಾಪೇಕ್ಷಿಯಾದ ರಾಜನು ಈ ಗುಟ್ಟನ್ನರಿತು ಎರಡನೆಯ ಬಾರಿಗೆ ಗ್ರಾಮವನ್ನೂ ಪತ್ನಿಯಾಗಲಿರುವ ಸ್ತ್ರೀಯನ್ನೂ ಒಪ್ಪಿಸಿ ಗಾರ್ಹಸ್ಥ್ಯ ಧರ್ಮಪರಿಪಾಲನೆಗೆ ಸಾಕಷ್ಟು ಧನವನ್ನೂ ಅರ್ಪಿಸಿದ್ದರಿಂದ ರೈಕ್ವನು ಸ್ವೀಕರಿಸಿ ವಿದ್ಯೋಪದೇಶವನ್ನು ಮಾಡಿದನು. ದಾನಮಾಡುವವರು ಯಾರಿಗೆ ಕೊಡುತ್ತೇವೆ? ಏತಕ್ಕೆ ಕೊಡುತ್ತೇವೆ? ಎಂಬುದನ್ನಾಲೋಚಿಸಿ ತಮ್ಮ ಯೋಗ್ಯತೆಗೆ ತಕ್ಕಂತೆ ದಾನಮಾಡುವದನ್ನು ಇದರಿಂದ ಕಲಿಯಬೇಕು.

## ಸಂವರ್ಗವಿದ್ಯೆ

**ಓಮ್ ॥ ತೌ ವಾ ಏತೌ ದ್ವೌ ಸಂವರ್ಗೌ ವಾಯುರೇವ ದೇವೇಷು ಪ್ರಾಣಃ ಪ್ರಾಣೇಷು ॥** **4–3–4.**

**ಭಾವಾರ್ಥ:–** ಆ ಈ ಎರಡು ಸಂವರ್ಗಗಳು. ವಾಯುವೇ ದೇವತೆಗಳಲ್ಲಿ ಪ್ರಾಣವೇ ಪ್ರಾಣಗಳಲ್ಲಿ (ಸಂವರ್ಗವೆನಿಸಿರುವವು.)

(ಆಧಿದೈವಿಕವಾಗಿ ವಾಯುದೇವತೆಯು ಸಂವರ್ಗವು. ಆಧ್ಯಾತ್ಮಿಕವಾಗಿ ಪ್ರಾಣವು ಸಂವರ್ಗವು. ಸಂವರ್ಗವೆಂದರೆ ಸಂವರ್ಜನ (ಎಲ್ಲವನ್ನೂ ಒಳಕ್ಕೆ ತೆಗೆದುಕೊಳ್ಳುವದು) ವೆಂಬ ಗುಣವುಳ್ಳದ್ದು– ಎಂದರ್ಥ. ಈ ವಾಯು– ಪ್ರಾಣದೇವತೆಗಳನ್ನು ಸಂವರ್ಗವೆಂದು ಚಿಂತಿಸಬೇಕೆಂದು ರೈಕ್ವನು ಜಾನಶ್ರುತಿಗೆ ಉಪದೇಶಿಸಿರುತ್ತಾನೆ– ಎಂದು ತಿಳಿಯಬೇಕು.)

# 26. ಅಧಿದೈವ–ಅಧ್ಯಾತ್ಮಸಂವರ್ಗಗಳು

ರೈಕ್ವನು ಜಾನಶ್ರುತಿಯನ್ನು ಶಿಷ್ಯನನ್ನಾಗಿ ಸ್ವೀಕರಿಸಿದನೆಂಬುದನ್ನು ತಿಳಿಸಿದೆ. ಈಗ ರೈಕ್ವನು ಉಪದೇಶಮಾಡಿರುವ ಸಂವರ್ಗವಿದ್ಯೆಯನ್ನು ಕುರಿತು ವಿಚಾರಮಾಡೋಣ. ಸಂವರ್ಜನವೆಂಬ ಗುಣವುಳ್ಳ ವಾಯುದೇವತೆಯನ್ನು ಅಧ್ಯಾತ್ಮವಾಗಿಯೂ ಅಧಿದೈವವಾಗಿಯೂ ಉಪಾಸನೆಮಾಡಬೇಕೆಂದು ಇಲ್ಲಿ ತಿಳಿಸಲಾಗಿದೆ. ಪಂಚಮಹಾಭೂತಗಳಲ್ಲಿ ಆಕಾಶವನ್ನು ಬಿಟ್ಟರೆ ಪೃಥಿವ್ಯಾದಿಗಳಿಗಿಂತ ವಾಯುವೇ ದೊಡ್ಡದು. ಜಗತ್ತು ಪ್ರಲಯವಾಗುವಾಗ ಉತ್ಪತ್ತಿಕ್ರಮಕ್ಕೆ ವಿಪರೀತವಾಗಿ ಆಗುವದು ಸುಪ್ರಸಿದ್ಧವು. ಇದನ್ನು ಪುರಾಣಗಳಲ್ಲಿ ವರ್ಣಿಸಿಯೂ ಇರುತ್ತದೆ. ಹೇಗೆಂದರೆ ಭೂಮಿಯು ತನ್ನ ಕಾರಣವಾದ ನೀರಿನಲ್ಲಿ ಒಂದಾಗುತ್ತದೆ. ಅನಂತರ ನೀನು ಬೆಂಕಿಯಲ್ಲಿಯೂ ಬೆಂಕಿ ಗಾಳಿಯಲ್ಲಿಯೂ ಒಂದಾಗುವವು. ಮಣ್ಣೆಲ್ಲ ಕರಗಿ ನೀರಾಗುವದು, ನೀರು ಕಾಯ್ದು ಆವಿಯಾಗಿ ಲಯವಾಗಿಬಿಡುವದು, ಹಾಗೆಯೇ ತೇಜಸ್ಸು ಚಲನೆಯಿಂದ ಕಣ್ಮರೆಯಾಗುವದು–ಇದೇ ಲಯಕ್ರಮವು. ಕಡೆಯಲ್ಲಿ ವಾಯುರೂಪದಿಂದಲೇ ಪೃಥಿವಿ, ಅಪ್ಪು, ತೇಜಸ್ಸುಗಳು ನೆಲೆಗೊಳ್ಳುವವು. ಹೀಗೆ ವಾಯುದೇವತೆಯು ಎಲ್ಲಾ ಭೂತಗಳನ್ನೂ ನುಂಗುವ ಗುಣವುಳ್ಳದ್ದಾಗಿರುವದರಿಂದ ಸಂವರ್ಗವೆಂದು ಉಪನಿಷತ್ತಿನಲ್ಲಿ ಸ್ತುತಿಸಲಾಗಿದೆ. 'ವಾಯುರ್ವಾವ ಸಂವರ್ಗಃ' ಎಂಬಲ್ಲಿ ವಾಯುವೇ ಸಂವರ್ಗವು–ಎಂದು ಅವಧಾರಣೆ ಮಾಡಿರುವದೇಕೆಂದರೆ: ಪೃಥಿವ್ಯಾದಿಗಳನ್ನು ತನ್ನೊಳಕ್ಕೆ ಸೆಳೆದುಕೊಳ್ಳುವ ಕಾರ್ಯವು ವಾಯುವಿನದೇ ಆಗಿರುತ್ತದೆ–ಎಂದು ತಿಳಿಸುವದಕ್ಕೆಂತ ಭಾವಿಸಬೇಕು. ಈ ತತ್ತ್ವವನ್ನು ರೈಕ್ವನು ಬಲ್ಲವನಾಗಿದ್ದುದರಿಂದ ಹಂಸಗಳು ಮಾತನಾಡಿಕೊಳ್ಳುವಾಗ ಕೃತವೆಂಬ ಗರದ ದೃಷ್ಟಾಂತವನ್ನು ಕೊಟ್ಟಿದ್ದವು. ನಾಲ್ಕರಲ್ಲಿ ಉಳಿದ ಮೂರು ಸಂಖ್ಯೆಗಳೂ ಅಡಕವಾಗಿರುವಂತೆ ನಾಲ್ಕನೆಯ ಮಹಾಭೂತವಾದ ವಾಯುವಿನಲ್ಲಿ ಉಳಿದ ಮೂರು ಮಹಾಭೂತಗಳೂ ಅಡಕವಾಗುತ್ತವೆ–ಎಂದಭಿಪ್ರಾಯ.

ಈಗ ಸಂವರ್ಜನಗುಣವುಳ್ಳ ವಾಯುವಿನ ಮಹಿಮೆಯನ್ನು ಮತ್ತಷ್ಟು ತಿಳಿಯೋಣ. ಒಂದು ಉದಾಹರಣೆಯಿಂದ ಈ ವಿಷಯವನ್ನು ಉಪನಿಷತ್ತಿನಲ್ಲಿ ವರ್ಣಿಸಿದೆ. ತೇಜೋದ್ರವ್ಯಗಳಲ್ಲಿ ಸೂರ್ಯನು ಪ್ರಧಾನವೆಂಬುದು ಎಲ್ಲರಿಗೂ ಗೊತ್ತಿರುವ ವಿಷಯವು. ಯಾವದೇ ಹೊಳೆಯುವ ವಸ್ತುವನ್ನಾದರೂ 'ಸೂರ್ಯನಂತೆ ಹೊಳೆಯುತ್ತದೆ'–ಎಂದು ಹೇಳುವ ವಾಡಿಕೆಯಿದೆ. ಭಗವಂತನ ಕಾಂತಿಯನ್ನು ಪುರಾಣಗಳಲ್ಲಿ ವರ್ಣಿಸುವಾಗ 'ಕೋಟಿಸೂರ್ಯಸಮಪ್ರಭ' ನೆಂದು ಸ್ತುತಿಸಿರುವದನ್ನು ನೆನಪುಮಾಡಿಕೊಳ್ಳಬಹುದು. ಅಂತೂ ಸೂರ್ಯನು ತೇಜಸ್ಸೆಂಬ ಮಹಾಭೂತದ ಸಾರನೆಂದರೆ ತಪ್ಪಾಗಲಾರದು. ಇಂಥ ಸೂರ್ಯನು ಉದಯಾಸ್ತಮಾನಗಳನ್ನು ಪ್ರತಿದಿನವೂ ಹೊಂದುತ್ತಿರುವದನ್ನು ನಾವು

ಕಾಣುವೆವು. ವಿಜ್ಞಾನಿಗಳ ಅಭಿಪ್ರಾಯದಂತೆ ಭೂಮಿಯೇ ಸೂರ್ಯನ ಸುತ್ತಲೂ ತಿರುಗುತ್ತದೆಯೆಂದಿಟ್ಟುಕೊಂಡರೂ ಸೌರವ್ಯೂಹದ ರಚನೆಯಂತೆ ಎಲ್ಲಾ ಗ್ರಹಗಳ ಸಂಚಾರಕ್ಕೂ ಸೂರ್ಯನೇ ಕಾರಣವಾಗಿರುತ್ತಾನೆಂಬುದು ಶಾಸ್ತ್ರಪರಿಶೀಲನೆಯಿಂದ ತಿಳಿದುಬರುತ್ತದೆ. ಹಾಗೆಯೇ ಸೂರ್ಯನೂ ಒಂದು ಗ್ರಹವಾಗಿರುವಲ್ಲಿ ಉಳಿದ ಗ್ರಹಗಳಂತೆ ಅವನಿಗೂ ಚಲನೆಯೂ ಆ ಮೂಲಕ ನಾಶವೂ ಇರಲೇಬೇಕೆಂದು ಊಹಿಸಲೂಬಹುದಾಗಿದೆ. ಕೋಟಿಗಟ್ಟಲೆ ವರ್ಷಗಳಷ್ಟು ದೀರ್ಘಕಾಲವನ್ನು ತೆಗೆದುಕೊಂಡಾದರೂ ಸೂರ್ಯನು ಒಂದು ಕಾಲಕ್ಕೆ ಅದೃಶ್ಯವಾಗುವ ಸಾಧ್ಯತೆಯಿದೆ. ಈ ಸಂದರ್ಭದಲ್ಲಿ ಸೂರ್ಯನನ್ನೂ ನುಂಗುವಂಥ ಹಾಗೂ ಅವನನ್ನು ಉದಯಾಸ್ತಮಾನಗಳಿಂದ (ಸೃಷ್ಟಿ–ಲಯಗಳಿಂದ) ನಿಯಂತ್ರಣಮಾಡುವಂಥ ತತ್ತ್ವವು ಯಾವದು? ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಂಡಿದ್ದ ರೈಕ್ವನು 'ವಾಯುವೇ ಸಂವರ್ಗವು' ಎಂದು ಹೇಳಿದನೆಂದು ಉಪನಿಷತ್ತಿನಲ್ಲಿ ತಿಳಿಸಿದೆ. ಶ್ರೀಶಂಕರಾಚಾರ್ಯರು ಈ ಸಂದರ್ಭದಲ್ಲಿ ತಮ್ಮ ಭಾಷ್ಯದಲ್ಲಿ ಹೀಗೆಂದಿರುತ್ತಾರೆ: 'ವಾಯುದೇವತೆಯಲ್ಲಿ ಸೂರ್ಯಚಂದ್ರರು ಅಡಕವಾಗುತ್ತಾರೆ–ಎಂಬುದು ನಿಜತತ್ತ್ವವೇ ಆಗಿದೆ. ಸಾಮಾನ್ಯದೃಷ್ಟಿಯಿಂದ ನೋಡಿದರೆ ಸೂರ್ಯಚಂದ್ರರು ಸ್ವತಂತ್ರರಾಗಿರುವಂತೆಯೂ ವಾಯುಸಂಚಾರಕ್ಕೂ ಸೂರ್ಯಾದಿಗಳ ಉದಯಾಸ್ತಮಾನಗಳಿಗೂ ಸಂಬಂಧವೇನೂ ಇಲ್ಲವೆಂಬಂತೆಯೂ ಕಂಡುಬರುತ್ತದೆ. ಆದರೆ ಚಲನೆಯಿಲ್ಲದೆ ನಾಶವಿಲ್ಲ. ಅಚಲವಾದದ್ದು ಬ್ರಹ್ಮವೊಂದೇ ಸರಿ. ಚಲನಸ್ವಭಾವವು–ಬೆಂಕಿಗೆ ಬಿಸಿಯು ಹೇಗೋ ಹಾಗೆ–ವಾಯುವಿನದಾಗಿರುವದು. ಇಂಥ ವಾಯುವೇ ಎಲ್ಲಾ ಜೀವಿಗಳ ಪ್ರಲಯಸ್ಥಾನವು. ಹೀಗೆ ಪ್ರಲಯಕಾಲದಲ್ಲಿ ಸೂರ್ಯಚಂದ್ರರು ವಾಯುವಿನಲ್ಲೇ ಒಂದಾಗುವರು.' ಈ ಅಭಿಪ್ರಾಯವನ್ನು ನಾವು ಮನನಮಾಡಿಕೊಂಡಂತೆಲ್ಲ ಮಹಾದೇವತೆಯಾದ ವಾಯುವಿನ ಸಂವರ್ಜನಗುಣದ ಹೆಚ್ಚುಗಾರಿಕೆಯು ನಮಗೆ ಮನದಟ್ಟಾಗುವದು. ಆದ್ದರಿಂದಲೇ ದೇವತೆಗಳಲ್ಲಿ ವಾಯುವು ಪ್ರಧಾನನೆನಿಸಿದ್ದು ಅಧ್ಯಾತ್ಮವಾಗಿ ಮುಖ್ಯಪ್ರಾಣನೆಂದೂ ಪ್ರಸಿದ್ಧನಾಗಿರುವನು.

ಈಗ 'ಅಧ್ಯಾತ್ಮವಾಗಿ ಪ್ರಾಣನೇ ಸಂವರ್ಗವು'–ಎಂಬ ತತ್ತ್ವವನ್ನು ಕುರಿತು ವಿಚಾರಮಾಡೋಣ. ಮಾನವನ ಜೀವನವು ಉಸಿರಾಟದಿಂದ ಪ್ರಾರಂಭವಾಗುತ್ತದೆ. ಉಸಿರು ನಿಂತಾಗ ಕೊನೆಗೊಳ್ಳುತ್ತದೆ. ನಡುವೆ ಮಾತ್ರವೇ ಮಾತನಾಡುವದು, ಮುಟ್ಟುವದು, ಮೂಸುವದು–ಇತ್ಯಾದಿ ಇಂದ್ರಿಯಗಳ ವ್ಯಾಪಾರಗಳೆಲ್ಲವೂ ನಡೆಯುವವು. ನಿದ್ರೆಮಾಡುವಾಗ ಈ ವಾಗಾದಿಕರಣಗಳ ಪ್ರಾಣಗಳು ವಿಶ್ರಾಂತವಾಗಿದ್ದರೂ ಮುಖ್ಯಪ್ರಾಣನು ಮಾತ್ರ ಕೆಲಸಮಾಡುತ್ತಲೇ ಇರುವನು. ಇವನಿಗೆ ಶ್ರಮವಾಗಲಿ ವಿಶ್ರಾಂತಿಯಾಗಲಿ ಇಲ್ಲ. ಈ ದೇವತೆಯನ್ನು 'ಅನಸ್ತಮಿತಾ ದೇವತಾ'

ಎಂದೇ ಮತ್ತೊಂದು ಕಡೆ ಸ್ತುತಿಸಿರುತ್ತದೆ. ಈ ಮಹಾಪ್ರಾಣನ ಅನುಗ್ರಹವಿಲ್ಲದೆ ಯಾವ ಕರಣಗಳೂ ಕೆಲಸ ಮಾಡಲಾರವು. ಇದೇ ಮುಖ್ಯ ಪ್ರಾಣನು. ಪ್ರಾಣಿಗಳು ನಿದ್ರಿಸುತ್ತಿರುವಾಗ ಉಳಿದ ಎಲ್ಲಾ ಕರಣದೇವತೆಗಳನ್ನೂ ತನ್ನಲ್ಲಿಯೇ ಅಡಗಿಸಿಕೊಂಡಿರುವನು. ಎಚ್ಚತ್ತಾಗ ಹೊರಹಾಕುವನು. ಈ ಸಂವರ್ಜನಗುಣವೇ ಇಲ್ಲಿ ಉಪಾಸ್ಯವಾಗಿ ಹೇಳಲ್ಪಟ್ಟಿದೆ. ಈ ವಿಷಯವನ್ನು ಗೌಡಪಾದಕಾರಿಕೆಯಲ್ಲಿಯೂ ವಿವರಿಸಿದೆ. ಮಾನವನ ಜೀವನಾಧಾರನಾದ ಮುಖ್ಯಪ್ರಾಣನು ತನ್ನ ಅನುಗ್ರಹವನ್ನು ಕಸಿದುಕೊಂಡನೆಂದರೆ ಸರಿ–ಎಂಥ ಚಕ್ರವರ್ತಿಯ ಅಥವಾ ರಾಷ್ಟ್ರಾಧ್ಯಕ್ಷನ ಕಥೆಯೂ ಪೂರೈಸಿತೆಂದೇ ತಿಳಿಯಬೇಕು. ಜೀವನವೇ ಕೊನೆಗಂಡಾಗ ಉಳಿದ ಭೋಗಸಾಮಗ್ರಿಗಳಿಂದಾಗಲಿ, ತಾನು ಎಂದುಕೊಂಡೇ ಇದ್ದ ದೇಹದಿಂದಾಗಲಿ ಪುರುಷಾರ್ಥವೇನಿದ್ದೀತು? ಆದ್ದರಿಂದ ಅಧ್ಯಾತ್ಮವಾಗಿ ಮುಖ್ಯಪ್ರಾಣನೆನಿಸಿರುವ ವಾಯುವೇ ಸಂವರ್ಗದೇವತೆಯಾಗಿ ವಿರಾಜಮಾನನಾಗಿರುವನು. ಈ ತತ್ತ್ವದ ಆಧಾರದಿಂದಲೇ ಶ್ರೀ ಮಧ್ವಾಚಾರ್ಯರ ಸಿದ್ಧಾಂತವನ್ನು ಅನುಸರಿಸುವವರು ಮುಖ್ಯಪ್ರಾಣದೇವರನ್ನು ತಮ್ಮ ಉಪಾಸ್ಯದೈವವಾಗಿ ಅಂಗೀಕರಿಸಿದ್ದಾರೆ. ಆದರೆ ಈತನೂ ಸ್ವತಂತ್ರನಲ್ಲ, ಶ್ರೀಹರಿಗೆ ಅಧೀನನೆಂದೂ ಆ ಮತಾನುಯಾಯಿಗಳ ಅಭಿಪ್ರಾಯವಿದೆ. ಅದು ಕೂಡ ಉಪನಿಷತ್ತಿಗೆ ಅನುಗುಣವಾಗಿಯೇ ಇದೆ. ಹೇಗೆಂದರೆ: 'ಪ್ರಾಣನಿಗೂ ಪ್ರಾಣವೇ ಪರಬ್ರಹ್ಮ' ಎಂದೇ ಉಪನಿಷತ್ತುಗಳಲ್ಲಿ ವರ್ಣಿಸಿದೆ. ಪರಬ್ರಹ್ಮದ ಜ್ಞಾನಶಕ್ತಿಯನ್ನು ಹಿರಣ್ಯಗರ್ಭನೆಂದೂ ಕ್ರಿಯಾಶಕ್ತಿಯನ್ನು ವಾಯುವೆಂದೂ ಉಪನಿಷತ್ತುಗಳಲ್ಲಿ ತಿಳಿಸಿದೆ. ಹೀಗೆ ವಾಯುವು ತನ್ನ ಸಂವರ್ಜನಗುಣದಿಂದ ಸರ್ವಪೂಜ್ಯನೂ ಜೀವೋತ್ತಮನೂ ಆಗಿದ್ದುಕೊಂಡಿರುವನು.

ಈಗ ಈ ಸಂವರ್ಗವಿದ್ಯೆಯ ಸ್ತುತಿಗಾಗಿ ಒಂದು ಕಥೆಯನ್ನು ಪ್ರಸ್ತಾಪಿಸಲಾಗುವದು. ಒಮ್ಮೆ ಶೌನಕ, ಕಾಕ್ಷಸೇನಿ–ಎಂಬಿಬ್ಬರು ಗೃಹಸ್ಥಋಷಿಗಳು ಒಟ್ಟಾಗಿ ಊಟಕ್ಕೆ ಕುಳಿತಿದ್ದರು. ಆ ಸಮಯಕ್ಕೆ ಸರಿಯಾಗಿ ಒಬ್ಬ ಬ್ರಹ್ಮಚಾರಿಯು ಬಂದು ಭಿಕ್ಷೆಯನ್ನು ಬೇಡಿದನು. ಅವನು ಬಹಳ ತೇಜಸ್ವಿಯಾಗಿದ್ದನು. ಈತನು ಎಷ್ಟರ ಮಟ್ಟಿಗೆ ಬ್ರಹ್ಮವನ್ನು ಬಲ್ಲವನಾಗಿರುವನೋ ನೋಡೋಣ–ಎಂಬ ಉದ್ದೇಶದಿಂದ ಋಷಿಗಳೂ ತಮಗೆ ಬಡಿಸುತ್ತಿದ್ದ ಅಡಿಗೆಯವನಿಗೆ 'ಬ್ರಹ್ಮಚಾರಿಗೆ ಈಗಲೇ ಭಿಕ್ಷೆಯನ್ನು ನೀಡಬೇಡ' ಎಂದು ಸೂಚಿಸಿದರು. ಆಗ ಬ್ರಹ್ಮಚಾರಿಯು ಹೀಗೆಂದನು: 'ಎಲೈ ಕಾಪೇಯನೆ, ಅಭಿಪ್ರತಾರಿಯೆ, (ಇವೆರಡೂ ಶೌನಕಕಾಕ್ಷಸೇನಿಗಳ ಮತ್ತೊಂದು ಹೆಸರೇ ಆಗಿದೆ) ಕೇಳಿರಿ. ನಾಲ್ವರು ಮಹಾತ್ಮರನ್ನೂ ಒಬ್ಬನೇ ದೇವನಾದ 'ಕ' ಎಂಬುವನು ನುಂಗಿರುತ್ತಾನೆ. ಅವನೇ ಈ ಬ್ರಹ್ಮಾಂಡದ ರಕ್ಷಕನು. ಬಹುಪ್ರಕಾರದಿಂದ ಇರುವ ಆತನನ್ನು ಈ ಮನುಷ್ಯರು ಕಾಣರು. ಯಾವನಿಗೋಸ್ಕರ ಈ ಅನ್ನವೋ ಅವನಿಗೇ ಇದನ್ನು ನೀವು ಕೊಡಲಿಲ್ಲವೇಕೆ?' ಹೀಗೆನ್ನಲು ಆ ಋಷಿಗಳು 'ಓಹೋ, ಇವನು ವಾಯುವಿಗೂ ಆತ್ಮನಾದ ಪ್ರಜಾಪತಿಯ ತತ್ತ್ವವನ್ನು ಬಲ್ಲವನು' ಎಂದು ತಿಳಿದುಕೊಂಡರು. ಅವರಲ್ಲೊಬ್ಬನಾದ ಶೌನಕನು

ಬ್ರಹ್ಮಚಾರಿಯನ್ನು ಕುರಿತು ಹೀಗೆಂದನು: ''ಅಯ್ಯಾ, ಯಾರನ್ನು ಮನುಷ್ಯ ಸಾಮಾನ್ಯರು ಅರಿಯರೋ ಆ ಪ್ರಜಾಪತಿದೇವನನ್ನು ನಾವು ಬಲ್ಲೆವು. ಅವನು ಸ್ಥಾವರಜಂಗಮಗಳಿಗೆ ಆತ್ಮನು. ಅವನು ಅಗ್ನ್ಯಾದಿದೇವತೆಗಳನ್ನೆಲ್ಲ ತನ್ನಲ್ಲಿ ಅಡಗಿಸಿಕೊಂಡು ಮತ್ತೆ ವಾಯುರೂಪದಿಂದಲೂ ಪ್ರಾಣರೂಪದಿಂದಲೂ ಹೊರಗೆಡಹುವವನು. ಅವನು ಅಮೃತಮಯವಾದ ಕೋರೆದಾಡೆಗಳುಳ್ಳವನು. ಭಕ್ಷಣಶೀಲನು, ಮೇಧಾವಿಯು, ಅವನ ಮಹಿಮೆಯು ಅಳತೆಯಿಲ್ಲದ್ದು. ಅವನನ್ನೇ ನಾವು ಉಪಾಸನೆ ಮಾಡುವೆವು. ಅವನಲ್ಲಿಯೇ ಈ ವಾಯುವೂ ಒಂದಾಗಿರುವನು. ನೀನು ಈ ತತ್ತ್ವವನ್ನು ಬಲ್ಲವನಾಗಿರುವೆಯಲ್ಲವೆ?'' ಎಂದು ಹೊಗಳಿದನು. ಅನಂತರ ಆ ಬ್ರಹ್ಮಚಾರಿಗೆ ಭಿಕ್ಷೆಯನ್ನು ನೀಡಿದನು.

ಈಗ ವಾಯು–ಪ್ರಜಾಪತಿಗಳೆಂಬ ಎರಡು ಹೆಸರುಗಳಿಂದಲೂ ಒಂದೇ ತತ್ತ್ವವೇ ಇದ್ದುಕೊಂಡಿದೆಯೆಂಬುದನ್ನು ನಾವು ತಿಳಿಯೋಣ. ಕ–ಎಂದರೆ ವೇದದಲ್ಲಿ ಪ್ರಜಾಪತಿದೇವತೆಯೆಂದು ಅರ್ಥಮಾಡಿದೆ. ಮುಖ್ಯವಾಗಿ ಈ ದೇವತೆಯನ್ನು 'ಅನ್ನಪತಿ'ಯೆಂದು ಕರೆಯಲಾಗಿದೆ. ವೈದಿಕರು ಭೋಜನವನ್ನಾರಂಭಿಸುವ ಸಮಯಕ್ಕೆ ಹೇಳುವ 'ಪ್ರಜಾಪತೇ.... ಸ್ಯಾಮ ಪತಯೋ ರಯೀಣಾಮ್' ಎಂಬ ಮಂತ್ರವನ್ನು ನೀವು ಕೇಳಿರಬಹುದು. ಅದರ ಅರ್ಥವು ಹೀಗೆದೆ:– ''ಎಲೈ ಪ್ರಜಾಪತಿಯೆ, ನಿನ್ನನ್ನು ಬಿಟ್ಟರೆ ಬೇರಾವನೊಬ್ಬನೂ ಈ ವಿಶ್ವದಲ್ಲಿ ಎಲ್ಲೆಲ್ಲೂ ಹುಟ್ಟಿರುವನಾಗಿರುವದಿಲ್ಲ. (ಹುಟ್ಟಿರುವ ವಸ್ತುಗಳಲ್ಲೆಲ್ಲ ನೀನೇ ವ್ಯಾಪಿಸಿಕೊಂಡಿರುತ್ತೀಯೆ) ನಮ್ಮ ಆಶೋತ್ತರಗಳೇನಿವೆಯೋ ಅವೆಲ್ಲವನ್ನೂ ನಿನ್ನಲ್ಲಿಯೇ ಅರ್ಪಿಸುವೆವು. ಅವುಗಳು ನಿಜರೂಪದಿಂದ ನಮಗೆ ಭೋಗಕ್ಕಾಗಿ ಒದಗಲಿ! ನಾವು ಅನ್ನಕ್ಕೆ ಒಡೆಯರಾಗುವಂತೆ ನೀನು ದಯಪಾಲಿಸುವವನಾಗು''. ಈ ಮಂತ್ರದಲ್ಲಿ ಅನ್ನವೆಂದರೆ ಸಮಸ್ತಭೋಗ್ಯವಸ್ತುಗಳಿಗೂ ಉಪಲಕ್ಷಣವೆಂದಿಟ್ಟುಕೊಂಡರೆ ಐಹಿಕಾಮುಷ್ಮಿಕಭೋಗ ಭಾಗ್ಯಗಳೆಲ್ಲವನ್ನೂ ಪ್ರಜಾಪತಿಯೇ ಕೊಡುತ್ತಾನೆಂದೂ ಅವನನ್ನೇ ನಾವು ಆರಾಧಿಸಬೇಕೆಂದೂ ಸಿದ್ಧವಾಗುತ್ತದೆ.

ಕಡೆಯದಾಗಿ ಈ ಸಂವರ್ಗವಿದ್ಯೆಗೆ ದೃಷ್ಟಫಲವನ್ನು ಹೀಗೆ ತಿಳಿಸಿದ್ದಾರೆ: ವಿರಾಟ್ ಎಂಬ ಛಂದಸ್ಸು. ಹತ್ತಕ್ಷರವುಳ್ಳದ್ದು. ವಿರಾಟ್ ಎಂದರೆ ಅನ್ನವೆಂದೂ ವೇದದಲ್ಲಿ ತಿಳಿಸಿದೆ. ದಶದೇವತೆಗಳ ರೂಪನಾದ ವಾಯುವನ್ನು ಹೀಗೆ ಉಪಾಸನೆಮಾಡುವವನಿಗೆ ಎಂದರೆ 'ವಾಯುಪ್ರಾಣಗಳು ಸಂವರ್ಜನಗುಣವುಳ್ಳವರೂ ಅನ್ನಾನ್ನಾದರೂ ಆಗಿರುವರು' ಎಂದು ಚಿಂತಿಸುವವನಿಗೆ ಹತ್ತು ದಿಕ್ಕುಗಳಿಂದಲೂ ಅನ್ನವು ಬಂದು ಸೇರುವದು. ಇನ್ನು ಅದೃಷ್ಟಫಲವೋ, ಎಂದರೆ ವಾಯುದೇವತಾಕನಾದ ಪ್ರಜಾಪತಿಯ ಸಾಯುಜ್ಯ ಪ್ರಾಪ್ತಿಯೇ ಆಗಿರುವದು–ಎಂದು ಫಲಕೀರ್ತನೆಯನ್ನೂ ಮಾಡಿದೆ. ಸಂವರ್ಗವಿದ್ಯೆಗೂ ಅದರ ಆಚಾರ್ಯನಿಗೂ ಉಪಾಸಕನಿಗೂ ನಾವು ನಮಿಸೋಣ.

————————

## ಷೋಡಶಕಲವಿದ್ಯೆ–1

ಓಮ್ ॥ ಸತ್ಯಕಾಮೋ ಹ ಜಾಬಾಲೋ ಜಬಾಲಾಂ ಮಾತರ–ಮಾಮಂತ್ರಯಾಂಚಕ್ರೇ ಬ್ರಹ್ಮಚರ್ಯಂ ಭವತಿ ವಿವತ್ಸ್ಯಾಮಿ ಕಿಂ ಗೋತ್ರೋ ನ್ವಹಮಸ್ಮೀತಿ ॥ 4–4–1.

ಭಾವಾರ್ಥಃ– ಸತ್ಯಕಾಮಜಾಬಾಲನು ತಾಯಿಯಾದ ಜಬಾಲೆಯನ್ನು "ಅಮ್ಮ ಬ್ರಹ್ಮಚರ್ಯವನ್ನು ಮಾಡಬೇಕೆಂದಿರುವೆನು; ನಾನು ಯಾವ ಗೋತ್ರದವನಾಗಿರುವೆನು?" ಎಂದು ಕೇಳಿದನು.

(ಬ್ರಹ್ಮವಿದ್ಯೆಯನ್ನು ಯಾವ ಮೇಧಾವಿಯೂ ತಾನೇ ಅಧ್ಯಯನಮಾಡುವಂತಿಲ್ಲ, ಗುರುವಿನಿಂದಲೇ ಕಲಿಯಬೇಕು. ಆದರೆ ಗುರುವಿನ ಬಳಿಗೆ ಹೋಗುವಾಗ ತನ್ನ ಗೋತ್ರವು ತಿಳಿದಿರಬೇಕು. ಆದ್ದರಿಂದ ಇಲ್ಲಿ ಸತ್ಯಕಾಮನು ತನ್ನ ಗೋತ್ರವು ಯಾವದೆಂದು ತಾಯಿಯನ್ನು ಕೇಳಿದ್ದಾನೆ. ಹೀಗೆ ಕೇಳಿರುವದರಿಂದಲೇ ಬಾಲ್ಯದಲ್ಲಿಯೇ ಈತನಿಗೆ ಪಿತೃವಿಯೋಗವಾಗಿತ್ತು ಎಂದು ಅಭಿಪ್ರಾಯ.)

## 27. ಸತ್ಯಕಾಮನ ಉಪಾಖ್ಯಾನ

ಛಾಂದೋಗ್ಯೋಪನಿಷತ್ತಿನ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಖಂಡವನ್ನು ಈಗ ವಿಚಾರಮಾಡಬೇಕಾಗಿದೆ. ಇದರಲ್ಲಿ ಷೋಡಶಕಲವಿದ್ಯೆ–ಎಂಬ ಹೆಸರಿನ ಬ್ರಹ್ಮೋಪಾಸನೆಯು ಇದೆ. ಬ್ರಹ್ಮದ ಹದಿನಾರು ಕಲೆ (ಅಂಶ)ಗಳನ್ನು ಅವು ನಾಲ್ಕು ದಿಕ್ಕುಗಳೇ ಮುಂತಾದ ರೀತಿಯಿಂದ ಇವೆಯೆಂದರಿತುಕೊಂಡು ಚಿಂತಿಸುವ ವಿದ್ಯೆಯೇ ಇದು. ಇದರ ಸ್ತುತಿಗಾಗಿ ಸತ್ಯಕಾಮನೆಂಬ ಬ್ರಹ್ಮಚಾರಿಯೊಬ್ಬನ ಕಥೆಯನ್ನು ಇಲ್ಲಿ ಕೊಡಲಾಗಿದೆ. ಸತ್ಯವೆಂಬ ವ್ರತವುಳ್ಳವನೂ ಹಾಗೂ ಗುರುಶುಶ್ರೂಷೆಯಲ್ಲಿ ಪೂರ್ಣವಾದ ಶ್ರದ್ಧೆಯುಳ್ಳವನೂ ದೇವತಾಭಕ್ತನೂ ಆಗಿರುವವನೇ ಈ ವಿದ್ಯೆಗೆ ಅಧಿಕಾರಿಯೆಂದು ಕಥೆಯಿಂದ ತಿಳಿದುಬರುತ್ತದೆ. ಈಗ ಕಥೆಯನ್ನು ಕೇಳೋಣ.

ಜಬಾಲೆ ಎಂಬವಳಿಗೆ ಸತ್ಯಕಾಮನೆಂಬ ಹೆಸರಿನ ಮಗನಿದ್ದನು. ಅವನ ಚಿಕ್ಕ ವಯಸ್ಸಿನಲ್ಲೇ ತಂದೆಯು ಮೃತನಾಗಿಬಿಟ್ಟಿದ್ದನು. ಆದ್ದರಿಂದ ಅವನು ವಿಧ್ಯಾಭ್ಯಾಸಕ್ಕಾಗಿ ಹಾರಿದ್ರುಮತರೆಂಬ ಗುರುಗಳ ಬಳಿಗೆ ಹೊರಟನು. ಹೊರಡುವಾಗ ತಾಯಿಯನ್ನು ಕುರಿತು 'ಅಮ್ಮಾ, ಗುರುಗಳು ನನ್ನನ್ನು ಕೇಳಿದರೆ ಯಾವ ಗೋತ್ರದವನೆಂದು ಹೇಳಲಿ?' ಎಂದು ಕೇಳಿದನು. ಏಕೆಂದರೆ ಹಿಂದಿನ ಕಾಲಕ್ಕೆ ಶಿಷ್ಯನ ಕುಲಗೋತ್ರಗಳನ್ನು ವಿಚಾರಿಸದೆ ಅವನನ್ನು ಪರೀಕ್ಷಿಸದೆ ಯಾವ ಗುರುಗಳೂ ವಿದ್ಯೆಯನ್ನು ಹೇಳಿಕೊಡುತ್ತಿರಲಿಲ್ಲ. ಆಗ ತಾಯಿಯು

"ಮಗು, ನಿನ್ನ ತಂದೆಯು ಬಹುಬೇಗ ದಿವಂಗತನಾದನು. ನಾನಾದರೊ, ಮನೆಯ ಕೆಲಸಗಳಲ್ಲೇ ಹೆಚ್ಚುಕಾಲ ನಿರತಳಾಗಿರುತ್ತಿದ್ದೆನು. ಗೋತ್ರದ ವಿಷಯವಾಗಿ ನಿಮ್ಮ ತಂದೆಯೊಡನೆ ಮಾತನಾಡುವ ಪ್ರಸಂಗವು ಒದಗಲಿಲ್ಲ. ನೀನಿನ್ನೂ ಬಹಳ ಚಿಕ್ಕವನಾಗಿದ್ದೆಯಷ್ಟೆ! ಆದ್ದರಿಂದ ಹೀಗಾಯಿತು. ಇರಲಿ; ನನ್ನ ಹೆಸರು ಜಬಾಲೆ; ನೀನು ಸತ್ಯಕಾಮ. ಆದ್ದರಿಂದ ಗುರುಗಳಲ್ಲಿ ನಿನ್ನ ವಿಚಾರವನ್ನು ತಿಳಿಸಿ ಸತ್ಯಕಾಮಜಾಬಾಲನು ನಾನು–ಎಂದು ಹೇಳಿಬಿಡು" ಎಂದಳು. ಅದರಂತೆಯೇ ಅವನು ಗುರುಗಳ ಬಳಿಗೆ ಬಂದು ತಾಯಿಯು ತಿಳಿಸಿದ್ದಂತೆಯೇ ಎಲ್ಲಾ ವಿಷಯಗಳನ್ನೂ ಸತ್ಯವಾಗಿ ನುಡಿದನು. ಗುರುಗಳು ಬಹಳ ಸಂತೋಷಗೊಂಡರು. "ಬ್ರಾಹ್ಮಣನಲ್ಲದವನು ಹೀಗೆ ಎಂದಿಗೂ ನಿಜವನ್ನು ನುಡಿಯಲಾರನು. ನೀನು ಬಹಳ ಸರಳತನದಿಂದ ಇದ್ದದ್ದನ್ನೇ ನುಡಿಯುತ್ತಿರುವೆ; ಆದ್ದರಿಂದ ನಿನಗೆ ಉಪನಯನ ಮಾಡುತ್ತೇನೆ" ಎಂದು ಹಾರಿದ್ರುಮತರು ಸತ್ಯಕಾಮನನ್ನು ಹೊಗಳಿ ಉಪನಯನಮಾಡಿ ಶಿಷ್ಯನನ್ನಾಗಿ ಸ್ವೀಕರಿಸಿದರು. ಇದರಿಂದ ತಿಳಿಯಬರುವದೇನೆಂದರೆ: ಹಿಂದಿನ ಕಾಲಕ್ಕೆ ಸ್ತ್ರೀಯರು ಚಿಕ್ಕ ವಯಸ್ಸಿನಲ್ಲೇ ವಿವಾಹಿತರಾಗಿ ಪತಿಗೃಹವನ್ನು ಸೇರುತ್ತಿದ್ದರು. ಮಕ್ಕಳಾದ ಮೇಲೂ ಗಂಡನೊಡನೆ ಸರಿಗಟ್ಟಿ ನಿಂತು ಹೆಚ್ಚು ಮಾತನಾಡುತ್ತಿರಲಿಲ್ಲ. ನಾಚಿಕೆಯೇ ಅವರಿಗೆ ಒಂದು ದೊಡ್ಡ ಒಡವೆಯಾಗಿತ್ತು. ಯಜಮಾನನ ಹಾಗೂ ಮನೆಗೆ ಬಂದ ಅತಿಥಿಗಳ ಸೇವೆ, ಯಜಮಾನನ ಅಗ್ನಿಹೋತ್ರಾದಿಕರ್ಮಗಳಿಗೆ ಸಿದ್ಧತೆ, ಹಿರಿಯರ ಶುಶ್ರೂಷಾದಿಗಳಲ್ಲಿಯೇ ಕಾಲವನ್ನು ಕಳೆಯುತ್ತಿದ್ದರು. ಪ್ರಸಂಗಬಾರದೆ ಇದ್ದಾಗ ಯಾವ ವಿಷಯವನ್ನೂ ತನ್ನ ಪತಿಯೊಡನೆ ಕೂಡ ಚರ್ಚಿಸುತ್ತಿರಲಿಲ್ಲ. ಇಂಥ ಸನ್ನಿವೇಶಕ್ಕೆ ಒಳಗಾದ್ದರಿಂದಲೇ ಜಬಾಲೆಗೆ ತನ್ನ ಪತಿಯ ಗೋತ್ರವನ್ನು ತಿಳಿಯಲಾಗಲಿಲ್ಲ. ಆದರೆ ಆಕೆಯು ನಿಜವನ್ನೇ ತಾನು ನುಡಿದು ಮಗನಿಗೂ ಸತ್ಯವನ್ನೇ ಹೇಳುವಂತೆ ಕಟ್ಟುಮಾಡಿದಳು. ಇದು ಹಾರಿದ್ರುಮತರಿಗೂ ಒಪ್ಪಾಯಿತು. ಇಂಥ ಆದರ್ಶವು ಷೋಡಶಕಲವಿದ್ಯೆಗೆ ಅವಶ್ಯವೆಂದು ತಿಳಿಸಿದಂತಾಗಿದೆ.

ಈಗ ಹಾರಿದ್ರುಮತರು ಸತ್ಯಕಾಮನಿಗೆ ಏನು ಹೇಳಿದರೆಂಬುದನ್ನು ಮುಂದುವರೆದು ತಿಳಿಯೋಣ. ಸತ್ಯಕಾಮನಿಗೆ ಉಪನಯನವನ್ನು ಮಾಡಿ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಹಾರಿದ್ರುಮತರು 'ಅಯ್ಯಾ, ಈ ನಾಲ್ಕುನೂರು ಗೋವುಗಳನ್ನು ನಿನಗೆ ಒಪ್ಪಿಸಿದ್ದೇನೆ; ಇವುಗಳನ್ನು ಕಾಯ್ದು ಮೇಯಿಸಿಕೊಂಡು ಬರುವವನಾಗು' ಎಂದರು. ಗುರುಗಳು ಹಾಗೆ ಹೇಳುವಾಗ ತೀರಬಡಕಲಾಗಿದ್ದ ಗೋವುಗಳನ್ನೇ ಆರಿಸಿ ತೆಗೆಯಿಸಿ ಸತ್ಯಕಾಮನ ವಶಕ್ಕೆ ಕೊಟ್ಟು ಗೋಸೇವೆಯನ್ನು ಮಾಡಬೇಕೆಂದು ತಿಳಿಸಿದ್ದರು. ಆತನು ಆಗಲಿ! ಎಂದು ಒಪ್ಪಿಕೊಂಡು ಗೋವುಗಳೊಡನೆ ಕಾಡಿಗೆ ಹೊರಟನು. ಹೊರಡುವಾಗಲೇ ಹೀಗೆಂದುಕೊಂಡನು. "ಈ ಗೋವುಗಳು ಒಂದು ಸಾವಿರವಾಗುವವರೆಗೆ ಹಿಂದಿರುಗಲಾರೆನು, ಅನಂತರವೇ ಗುರುಗಳಿಗೆ ಇವನ್ನು ಸಮರ್ಪಿಸಿ ವಿದ್ಯೆಯನ್ನು

ಕಲಿಯುವೆನು'' ಎಂದು ದೃಢಸಂಕಲ್ಪವುಳ್ಳವನಾಗಿದ್ದನು. ಹೀಗೆ ನಿಶ್ಚಯಿಸಿ ಕಾಡಿಗೆ ಹೋಗಿ ಶ್ರದ್ಧೆಯಿಂದ ಗುರುಗಳ ಗೋವುಗಳನ್ನು ಕಾಪಾಡುತ್ತಿದ್ದನು. ಸತ್ಯಕಾಮನ ಉಪಚಾರಗಳಿಂದ ಗೋವುಗಳು ವೃದ್ಧಿಯಾಗತೊಡಗಿದವು. ಹೇಗೆಂದರೆ ಹುಲುಸಾದ ಭೂಮಿಯಲ್ಲಿ ನೀರು, ನೆರಳು, ಮೇವು–ಉಳ್ಳಂಥ ಪ್ರದೇಶಗಳಲ್ಲಿ ಗೋವುಗಳನ್ನು ಹಿಂಡಾಗಿ ಕೂಡಿಸಿದನು. ಅವು ಚೆನ್ನಾಗಿ ಮೇವು ತಿಂದು ಪುಷ್ಟಿಯಾದವು. ಗೋ ಶಬ್ದಕ್ಕೆ ಸಂಸ್ಕೃತ ಭಾಷೆಯಲ್ಲಿ ಹಸು, ಗೂಳಿ–ಎಂಬೆರಡರ್ಥವು ಇದೆ. ಗುರುಗಳು ಕೊಟ್ಟಿದ್ದ ನಾಲ್ಕು ನೂರು ಗೋವುಗಳಲ್ಲಿ ಕೆಲವು ಗೂಳಿಗಳು ಇದ್ದವು. ಆದ್ದರಿಂದ ಕಾಲಕಾಲಕ್ಕೆ ಋತುಧರ್ಮದಂತೆ ಹಸುಗಳು ಕರುಹಾಕಿದವು. ಹೀಗೆ ಗೋವುಗಳ ಸಂಖ್ಯೆಯು ಬೆಳೆಯುತ್ತಾ ಬಂದಿತು. ಸತ್ಯಕಾಮನಿಗೆ ಬಹಳ ಆನಂದವಾಗಿತ್ತು, ತನ್ನ ಜೀವನವನ್ನು ಗೋವುಗಳೊಡನೆಯೇ ಹೊಂದಿಸಿಕೊಂಡುಬಿಟ್ಟಿದ್ದನು. ಅವನ ನಿಷ್ಕಳಂಕವಾದ ಗುರು ಭಕ್ತಿಯೂ ವಿದ್ಯೆಯನ್ನು ಕಲಿಯಬೇಕೆಂಬ ಶ್ರದ್ಧೆಯೂ ಸಹಾಯಕವಾದವು. ದೈವಾನುಗ್ರಹದಿಂದ ಒಂದು ಸಮಯಕ್ಕೆ ಅವುಗಳ ಸಂಖ್ಯೆಯು ಒಂದು ಸಾವಿರವನ್ನು ಮುಟ್ಟಿತು. ಆಗ ನಡೆದದ್ದೇನು? ಎಂಬುದನ್ನು ಉಪನಿಷತ್ತಿನಲ್ಲಿ ಮುಂದೆ ವಿವರಿಸಿದೆ. ಅದನ್ನು ಈಗ ತಿಳಿಯೋಣ.

ಸತ್ಯಕಾಮನ ಶ್ರದ್ಧಾತಪಸ್ಸುಗಳ ಫಲವಾಗಿ ವಾಯುದೇವತೆಯು ಸಂತುಷ್ಟನಾಗಿಬಿಟ್ಟನು. ಆತನು ಸತ್ಯಕಾಮನಿಗೆ ವಿದ್ಯೋಪದೇಶವನ್ನು ಮಾಡುವದಕ್ಕಾಗಿ ಒಂದು ವೃಷಭದ ಶರೀರವನ್ನು ಪ್ರವೇಶಿಸಿಬಿಟ್ಟನು. ಆಗ ಗೋವುಗಳ ಗುಂಪಿನಲ್ಲಿದ್ದ ಒಂದು ಎತ್ತು 'ಸತ್ಯಕಾಮನೆ' ಎಂದು ಕರೆಯಿತು. ಕೂಡಲೆ 'ಪೂಜ್ಯನೆ, ಏನು?' ಎಂದನು. ಆಗ ವೃಷಭವು ''ನಾವು ಒಂದು ಸಾವಿರ ಸಂಖ್ಯೆಯನ್ನು ಮುಟ್ಟಿರುವೆವು. ಇನ್ನು ನೀನು ನಮ್ಮನ್ನು ಗುರುಗಳ ಮನೆಗೆ ಸೇರಿಸು'' ಎಂದಿತು. ಆಗಲಿ–ಎಂದು ಉತ್ತರಿಸಿದ ಸತ್ಯಕಾಮನು ಗೋವುಗಳನ್ನೆಲ್ಲ ಗುರುಗಳ ಮನೆಯ ಕಡೆಗೆ ಅಭಿಮುಖಮಾಡಿಕೊಂಡು ಹೊರಟನು. ಆಗ ದಾರಿಯಲ್ಲಿಯೇ ವಾಯುದೇವತೆಯು ಒಳಹೊಕ್ಕಿದ್ದ ವೃಷಭವು ಹೀಗೆಂದಿತು: 'ಮಗು, ನಿನಗೆ ಬ್ರಹ್ಮದ ಒಂದು ಪಾದವನ್ನು ಹೇಳಿಕೊಡಲೆ?' ಎನ್ನಲು 'ಪೂಜ್ಯರಾದ ತಾವು ದಯಮಾಡಿ ತಿಳಿಸಿಕೊಡಬೇಕು' ಎಂದನು. ಇದರಿಂದ ತಿಳಿದುಬರುವದೇನೆಂದರೆ: ಶ್ರದ್ಧೆಯೂ, ಶುಶ್ರೂಷೆಯೂ, ಬ್ರಹ್ಮಚರ್ಯೆಯೂ ಇದ್ದುದೇ ಆದರೆ ಗುರುಗಳನ್ನು ವಿದ್ಯೆಗಾಗಿ ಹುಡುಕಬೇಕಾದದ್ದಿಲ್ಲ, ಭಗವಂತನೇ ಯಾವದಾದರೊಂದು ರೂಪದಿಂದ ಒಲಿದು ಜಿಜ್ಞಾಸುವಿನ ಇಚ್ಛೆಯನ್ನು ಪೂರ್ತಿಗೊಳಿಸಿಬಿಡುತ್ತಾನೆ. ''ದೇವತೆಗಳು ಈಗಲೂ ಎಲ್ಲೆಲ್ಲಿಯೂ ಇದ್ದೇ ಇರುತ್ತಾರೆ. ಯಾರು ಯಾರನ್ನು ಮೋಕ್ಷಕ್ಕೆ ಭಾಗಿಗಳನ್ನಾಗಿ ಮಾಡಲು ಇಚ್ಛಿಸುವರೋ ಅಂಥವರಿಗೆ ಶ್ರದ್ಧಾದಿಗಳನ್ನು ದಯಪಾಲಿಸಿ ಬ್ರಹ್ಮೋಪದೇಶವನ್ನೂ ಮಾಡುತ್ತಾರೆ. ಆದ್ದರಿಂದ ಮುಮುಕ್ಷುವಾದವನು

ದೇವತಾರಾಧನತತ್ಪರನಾಗಿರಬೇಕು.'' ಎಂದೇ ಶ್ರೀಶಂಕರಾಚಾರ್ಯರು ಬೃಹದಾರಣ್ಯಕ ಭಾಷ್ಯದಲ್ಲಿ ತಿಳಿಸಿರುತ್ತಾರೆ. ಆದ್ದರಿಂದ ನಾವು ದೇವತಾರಾಧನರೂಪವಾದ ವೈದಿಕಕರ್ಮಗಳನ್ನು ಮಾಡುತ್ತಿರಬೇಕು. ಹೀಗೆ ಸತ್ಯಕಾಮನಿಗೆ ಪ್ರಸನ್ನನಾದ ವಾಯುದೇವತೆಯು ಬ್ರಹ್ಮದ ಒಂದು ಪಾದವನ್ನು ತಿಳಿಸಿಕೊಟ್ಟಿತು. ಪಾದವೆಂದರೆ ಕಾಲು ಭಾಗ. ಪ್ರತಿಯೊಂದು ಪಾದದಲ್ಲಿಯೂ ನಾಲ್ಕು ಉಪವಿಭಾಗ (ಕಲೆ)ಗಳಿರುವವು. ಈ ರೀತಿಯಾಗಿ ಪೂರ್ಣತತ್ತ್ವವನ್ನು ತಿಳಿಯುವ ವೇಳೆಗೆ ಹದಿನಾರು ಕಲೆಗಳಾಗುವವು. ಈ ಷೋಡಶಕಲವಿದ್ಯೆಯು ದೇವತೆಗಳ ಪ್ರಸಾದದಿಂದ ಸತ್ಯಕಾಮನಿಗೆ ಲಭ್ಯವಾಯಿತು. ಈಗ ವಾಯುದೇವತೆಯು ಉಪದೇಶಮಾಡಿದ ಬ್ರಹ್ಮದ ಒಂದು ಪಾದದ ವಿವರವನ್ನು ಉಪನಿಷದನುಸಾರವಾಗಿ ತಿಳಿಯೋಣ.

ವಾಯುದೇವತೆಯು (ಆ ದೇವತೆಯ ಅಂತಃಪ್ರವೇಶವನ್ನು ಪಡೆದಿದ್ದ ವೃಷಭವು) ಹೀಗೆಂದಿತು: ''ಮಗು, ಬ್ರಹ್ಮದ ಮೊದಲನೆಯ ಪಾದದ ನಾಲ್ಕು ಕಲೆಗಳೇ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ–ಎಂಬ ದಿಕ್ಕುಗಳು, ಈ ದಿಕ್ಕುಗಳಲ್ಲೆಲ್ಲ ಬ್ರಹ್ಮವೇ ಇದ್ದುಕೊಂಡಿದೆ. ಅದು ತೇಜೋಮಯವಾಗಿದೆ. ಪ್ರಕಾಶವೇ ಅದರ ಗುಣವು. ಆದ್ದರಿಂದ ಬ್ರಹ್ಮವು ಪ್ರಕಾಶವಾನ್ ಎನಿಸಿಕೊಂಡಿರುವದು. ಹಾಗೆಂದು ನೀನು ಚಿಂತಿಸುವವನಾಗು'' ಎಂದಿತು. ವಾಯುವು ಎಲ್ಲಾ ದಿಕ್ಕುಗಳಲ್ಲಿಯೂ ಬೀಸುತ್ತದೆ. ಎಲ್ಲೆಲ್ಲಿಯೂ ತುಂಬಿಕೊಂಡಿರುವದು. ನಾವು ಯಾವ ಕಡೆಗೆ ತಿರುಗಿದರೂ ವಾಯುಸಾನ್ನಿಧ್ಯವು ಇದ್ದೇ ಇರುವದು. ನಮ್ಮ ದೃಷ್ಟಿಯಿಂದ ಎಡ, ಬಲ, ಹಿಂದು, ಮುಂದು–ಎಂದುಕೊಳ್ಳುವೆವು. ಈ ವ್ಯವಹಾರವನ್ನೇ ದಿಕ್ಕು ಎನ್ನವರು. ಸೂರ್ಯನ ಉದಯಾಸ್ತಮಗಳ ನಿಮಿತ್ತದಿಂದಲೂ ಪೂರ್ವಾದಿದಿಕ್ಕುಗಳನ್ನು ಗುರುತಿಸುವೆವು. ಆದರೆ ನಾವು ದಿಕ್ಕುಗಳು ಗೊತ್ತಿಲ್ಲದ ಜಾಗಕ್ಕೆ ರಾತ್ರೆಯಲ್ಲಿ ಹೋದಾಗ ದಿಕ್ಕುಗಳ ವಿಜ್ಞಾನಕ್ಕಾಗಿ ನಮ್ಮ ಎಡಬಲಗಳನ್ನೇ ಪರಿಗಣಿಸಬೇಕಾಗುವದು. ಇದೇನೂ ತಪ್ಪಲ್ಲ. ಅಂತೂ ಬ್ರಹ್ಮದಲ್ಲಿಯೇ ಈ ದಿಕ್ಕುಗಳ ವ್ಯವಹಾರವು ಕಲ್ಪಿತವಾಗಿದ್ದು ವಾಯುದೇವತೆಯು ಸರ್ವದಿಕ್ಕುಗಳಲ್ಲೂ ವ್ಯಾಪಿಸಿರುವದರಿಂದ ಬ್ರಹ್ಮವನ್ನು ವಾಯುವಿನ ರೂಪದಿಂದ ಪೂರ್ವಾದಿದಿಕ್ಕುಗಳಲ್ಲೆಲ್ಲ ಇದೆಯೆಂದು ಚಿಂತಿಸಬೇಕು. ಈ ವಿಜ್ಞಾನವನ್ನೇ ವಾಯುವು ಸತ್ಯಕಾಮನಿಗೆ ಉಪದೇಶಿಸಿರುತ್ತಾನೆ. ಇಷ್ಟಾದರೂ ಇದು ಪೂರ್ಣವಾಗಿ ಬ್ರಹ್ಮವಲ್ಲ–ಬ್ರಹ್ಮದ ಒಂದು ಪಾದವು ಮಾತ್ರ–ಎಂದು ತಿಳಿಯಬೇಕು.

ನಮ್ಮ ಮತಧರ್ಮದಲ್ಲಿ ದಿಕ್ಕುಗಳ ವಿಷಯಕ್ಕೆ ಬಹಳವಾದ ಪ್ರಾಶಸ್ತ್ಯವಿದೆ. ಮನುಷ್ಯನು ತನ್ನ ನಿತ್ಯಕರ್ಮಗಳನ್ನು ಅನುಷ್ಠಾನಮಾಡುವಾಗ–ಅದರಲ್ಲಿಯೂ ಶುಭ ಕರ್ಮಗಳಿಗೆ ಇಂಥ ದಿಕ್ಕು, ಅಶುಭಕರ್ಮಗಳಿಗೆ ಇಂಥ ದಿಕ್ಕಿಗೆ ತಿರುಗಿಕೊಂಡೇ ಮಾಡಬೇಕೆಂದು ನಿಯಮವಿದೆ. ಇವುಗಳಲ್ಲದೆ ನಾಲ್ಕು ವಿದಿಕ್ಕುಗಳನ್ನೂ (ಈಶಾನ್ಯ,

ಆಗ್ನೇಯ, ನೈಋತ್ಯ, ವಾಯವ್ಯ) ನಾವು ಗುರುತಿಸುತ್ತೇವೆ. ಈ ದಿಕ್ಕುಗಳ ಅಧಿಪತಿಗಳಿಗೆ ದಿಕ್ಪಾಲಕರೆಂದೇ ಹೆಸರು. ಇಂದ್ರ, ಅಗ್ನಿ, ಯಮ, ನಿಋಋತಿ, ವರುಣ, ವಾಯು, ಕುಬೇರ, ಈಶಾನ–ರೆಂಬವರೇ ಈ ದೇವತೆಗಳು. ನವಗ್ರಹಾರಾಧನೆಯ ಕಾಲಕ್ಕೆ ಈ ದೇವತೆಗಳನ್ನು ನಾವು ಪೂಜಿಸುತ್ತೇವೆ. ಶುಭಕರ್ಮಗಳ ಅಂಗವಾಗಿ ಅಗ್ನಿಯಲ್ಲಿ ಹೋಮಮಾಡುವಾಗ ಹಾಗೂ ಎಲ್ಲಾ ಶ್ರೌತಸ್ಮಾರ್ತಅಗ್ನಿಕರ್ಮಗಳ ಸಮಯಕ್ಕೂ ಪೂರ್ವಕ್ಕೆ ತಿರುಗಿಕೊಂಡೇ ಮಾಡುವೆವು. ಸಂಧ್ಯಾವಂದನೆಯಲ್ಲಿಯೂ ದಿಗ್ದೇವತೆಗಳಿಗೆ ನಮಸ್ಕಾರಮಾಡುವ ಪದ್ಧತಿಯಿದೆ. ಹೀಗೆ ದಿಕ್ಕುಗಳು ನಮಗೆ ಪೂಜ್ಯವಾಗಿವೆ. ಜ್ಯೋತಿಷ್ಕರು ಪ್ರಯಾಣಕಾಲಕ್ಕೂ ಇಂಥಿಂಥ ವಾರಗಳಲ್ಲಿ ಇಂಥಿಂಥ ದಿಕ್ಕುಗಳಿಗೆ ಪ್ರಯಾಣವು ಶುಭಾಶುಭಗಳೆಂದು ನಿರ್ಣಯಿಸಿದ್ದಾರೆ. ಈಗಿನ ಕಾಲಕ್ಕೆ ಇಂಥ ನಂಬಿಕೆಗಳನ್ನು ಕೈಬಿಟ್ಟರೂ ದಿಗ್ದೇವತೆಗಳನ್ನು ಮಾತ್ರ ಮರೆಯಬಾರದು. ಏಕೆಂದರೆ ಅವರುಗಳು ಷೋಡಶಕಲಬ್ರಹ್ಮದ ಅಂಶಗಳಾಗಿರುತ್ತಾರೆ. ಈ ದೇವತೆಗಳ ರೂಪದಲ್ಲಿ ಬ್ರಹ್ಮವನ್ನು ಚಿಂತಿಸುವದರಿಂದ ಉಪಾಸಕನು ಎಲ್ಲಾ ದಿಕ್ಕುಗಳಲ್ಲಿಯೂ ಪ್ರಖ್ಯಾತನಾಗುವನು. ಹಾಗೆಯೇ ದಿಗ್ದೇವತಾಸಾಯುಜ್ಯಪ್ರಾಪ್ತಿಯೆಂಬ ಅದೃಷ್ಟಫಲವು ಉಪಾಸಕನಿಗೆ ದೊರಕುತ್ತದೆ. ಇಂಥ ಬ್ರಹ್ಮೋಪಾಸನೆಯ ಕಾಲುಭಾಗವನ್ನು ಒಂದು ಎತ್ತು ಸತ್ಯಕಾಮನಿಗೆ ಉಪದೇಶಮಾಡಿತು.

## ಷೋಡಶಕಲವಿದ್ಯೆ–2

**ಓಮ್ ॥ ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ ಆಚಾರ್ಯಾದ್ಧ್ಯೈವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪದಿತಿ ತಸ್ಮೈ ಹೈತದೇವೋವಾಚ ಅತ್ರ ಹ ನ ಕಿಂಚನ ವೀಯಾಯ. 4–9–3**

ಭಾವಾರ್ಥಃ– (ಸತ್ಯಕಾಮನು) 'ಆಚಾರ್ಯನಿಂದಲೇ ಅರಿತುಕೊಂಡ ವಿದ್ಯೆಯು ಸಾಧಿಷ್ಠವನ್ನು ಹೊಂದುತ್ತದೆ–ಎಂದು ಭಗವಂತನಂಥವರಿಂದ ಕೇಳಿದ್ದೇ ನನ್ನಲ್ಲಿದೆ' (ಎಂದನು.) ಅವನಿಗೆ ಇದನ್ನೇ ಆಚಾರ್ಯನು ಹೇಳಿಕೊಟ್ಟನು. ಇದರಲ್ಲಿ ಒಂದಿಷ್ಟೂ ಹೋಗಲಿಲ್ಲ.

(ಗೋಸೇವೆಯ ಪ್ರಭಾವದಿಂದ ಷೋಡಶಕಲವಿದ್ಯೆಯನ್ನು ದೇವತೆಗಳ ಮೂಲಕವೇ ಪಡೆದುಕೊಂಡ ಸತ್ಯಕಾಮನು ಗುರುವಿನಿಂದ ಸರಿಯೆನಿಸಿಕೊಂಡಲ್ಲದೆ ಇದು ಪೂರ್ಣವಾಗಲಾರದೆಂದು ತಿಳಿದು ಗುರುವಿನ ಬಳಿಗೆ ಬಂದು ಅದೇ ಉಪದೇಶಗಳನ್ನೇ ಮತ್ತೆ ಪಡೆದು ಕೃತಕೃತ್ಯನಾದನು–ಎಂದಭಿಪ್ರಾಯ.)

# 28. ಆಚಾರ್ಯೋಪದೇಶದ ಮಹತ್ತ್ವ

ಸತ್ಯಕಾಮನ ಕಥೆಯನ್ನು ಈಗ ಮುಂದುವರಿಸೋಣ. ಷೋಡಶಕಲವಿದ್ಯೆಯ ನಾಲ್ಕನೆಯ ಒಂಧು ಭಾಗವನ್ನು ಉಪದೇಶಮಾಡಿದ ಎತ್ತು ಕಡೆಯಲ್ಲಿ 'ಸತ್ಯಕಾಮನೆ, ನಿನಗೆ ಮುಂದಿನ ಪಾದ (ಕಾಲುಭಾಗ)ವನ್ನು ಅಗ್ನಿಯು ಹೇಳಿಕೊಡಲಿರುವನು' ಎಂದಿತು. ಅವನು ಗೋವುಗಳನ್ನು ಹೊಡೆದುಕೊಂಡು ಎರಡನೆಯ ದಿನವೂ ಗುರುಗಳ ಮನೆಯ ಕಡೆಗೆ ಪ್ರಯಾಣವನ್ನು ಮುಂದುವರೆಸಿದನು. ಆ ದಿನ ಸಾಯಂಕಾಲವಾಗಲು ಗೋವುಗಳನ್ನು ಒಂದು ಕಡೆ ನೆಲೆಗೊಳಿಸಿ ಅಗ್ನಿಯನ್ನು ಹೊತ್ತಿಸಿದನು. ಸಮಿದಾಧಾನವನ್ನು ಮಾಡಿ ಪೂರ್ವಾಭಿಮುಖವಾಗಿ ಕುಳಿತುಕೊಂಡು ಎತ್ತುಹೇಳಿದ್ದನ್ನು ಸ್ಮರಿಸಿಕೊಳ್ಳುತ್ತಿದ್ದನು. ಆಗ ಅಗ್ನಿಯು ಪ್ರತ್ಯಕ್ಷನಾಗಿ ಸತ್ಯಕಾಮನೆ, ಎಂದು ಕರೆದನು. ಪೂಜ್ಯರೆ, ಇಲ್ಲಿದ್ದೇನೆ–ಎಂದು ಉತ್ತರಕೊಟ್ಟನು. ಆಗ ಅಗ್ನಿದೇವನು 'ಸೋಮ್ಯನೆ, ನಿನಗೆ ಬ್ರಹ್ಮದ ಎರಡನೆಯ ಪಾದವನ್ನು ಹೇಳಿಕೊಡುವೆನು' ಎಂದು ಉಪಕ್ರಮಿಸಿ 'ಪೃಥಿವಿ, ಅಂತರಿಕ್ಷ, ದ್ಯುಲೋಕ, ಸಮುದ್ರ–ಎಂಬೀ ನಾಲ್ಕು ಕಲೆಗಳೇ ಬ್ರಹ್ಮದ ಎರಡನೆಯ ಪಾದವು. ಇದನ್ನು 'ಅನಂತವಾನ್' (ಅಂತವಿಲ್ಲದ್ದು) ಎಂದು ಉಪಾಸನೆಮಾಡು'– ಎಂದು ಉಪದೇಶಿಸಿದನು. ಅಗ್ನಿಯು ಪೃಥಿವ್ಯಾದಿಗಳ ಸಂಬಂಧವುಳ್ಳ ದೇವತೆಯಾಗಿರುತ್ತದೆ. ಆದ್ದರಿಂದ ಪೃಥಿವ್ಯಾದಿಗಳ ರೂಪದಲ್ಲಿ ಬ್ರಹ್ಮವನ್ನು ಉಪಾಸನೆಮಾಡು–ಎಂದು ಅದು ಹೇಳಿಕೊಟ್ಟಿತು. ಬ್ರಹ್ಮವು ಸರ್ವವ್ಯಾಪಕವೂ ಸರ್ವಾಂತರ್ಯಾಮಿಯೂ ಆಗಿರುವದು. ಉಪಾಸನೆಗಾಗಿ ಅದನ್ನು ಸ್ವೀಕರಿಸಿದಾಗ ಉಪಾಧಿಗಳ ಮೂಲಕವೇ–ವಿದ್ಯುಚ್ಛಕ್ತಿಯನ್ನು ಬಲ್ಬ್‌ಗಳಲ್ಲಿ ಕಾಣುವಂತೆ–ಕಂಡುಕೊಳ್ಳಬೇಕಾಗಿರುತ್ತದೆ. ಇಲ್ಲಿ ಪೃಥಿವ್ಯಾದಿಗಳನ್ನು ಬ್ರಹ್ಮದ ಪಾದಗಳೆಂದಿರುವದು ಉಪಾಧಿದೃಷ್ಟಿಯಿಂದಲೇ ಆಗಿರುತ್ತದೆ. ಭೂಮಿಯನ್ನು ನಾವು ಚೆನ್ನಾಗಿ ಆಂತರಿಕವಾದ ದೃಷ್ಟಿಯಿಂದ ನೋಡಿದರೆ ಅದು ಜಡವಲ್ಲವೆಂದೂ ದೇವತೆಯೆಂದೂ ತಿಳಿದುಬರುತ್ತದೆ. ನಮಗೆ ಗೊತ್ತಿರುವಂತೆ ಭೂಮಿಯು ಸಾಕಷ್ಟು ವಿಶಾಲವಾಗಿದೆ. ನಾವೆಲ್ಲರೂ ಮನೆ ಮಠ–ಊರುಗಳನ್ನು ನಿರ್ಮಿಸಿಕೊಂಡಮೇಲೂ ಭೂಮಿಯು ಇನ್ನೂ ಬೇಕಾದಷ್ಟು ಉಳಿದಿದೆ. ಈಗಲೂ ಭೂಮಿಯ ಕೆಲವು ಗಹನವಾದ ಭಾಗಗಳಿಗೆ ಮನುಷ್ಯರು ಹೋಗಲು ಸಾಧ್ಯವಾಗಿಲ್ಲ. ಇನ್ನು ಭೂಗರ್ಭದಲ್ಲಿ ಏನೇನು ವಿಚಿತ್ರಗಳು ಅಡಗಿವೆಯೋ ದೇವರೇ ಬಲ್ಲನು. ಇಂಥ ಭೂಮಿಯು ಷೋಡಶಕಲ ಬ್ರಹ್ಮದ ಒಂದಂಶವಾಗಿರುವದು. ಹಾಗೆಯೇ ಅಂತರಿಕ್ಷಲೋಕವನ್ನೂ ಗ್ರಹಿಸಬೇಕು. ಅಂತರಿಕ್ಷವು ನಿರಾಲಂಬನವಾಗಿದ್ದು ಹಕ್ಕಿಪಕ್ಷಿಗಳ ಹಾಗೂ ವಾಯುಯಾನಗಳ ಸಂಚಾರಕ್ಕೆ ತೆರವಾಗಿರುವದು. ಇದು ಭೌತಿಕದೃಷ್ಟಿಯಾಯಿತು. ಆದರೆ ದೇವತಾದೃಷ್ಟಿಯಿಂದ ಕಂಡಾಗ ವಾಯುಮಂಡಲವೂ ಪರ್ಜನ್ಯ–ಗ್ರಹನಕ್ಷತ್ರಾದಿಗಳೂ ಇದರಲ್ಲಿ ಕಂಡು

ಬರುವವು. ಈ ದೇವತೆಗಳೆಲ್ಲರ ಆಶ್ರಯವಾಗಿರುವ ಹಾಗೂ ವಿಷ್ಣುವಿನ ಪಾದದಿಂದ ಅಳೆಯಲ್ಪಟ್ಟಿರುವ ಈ ಪವಿತ್ರಲೋಕವು ಬ್ರಹ್ಮದ ಒಂದು ಕಲೆಯೆಂದು ಹೇಳುವದರಲ್ಲಿ ಆಶ್ಚರ್ಯವೇನಿದೆ? ಹಾಗೆಯೇ ದ್ಯುಲೋಕವು ಸಹ ಒಂದು ಕಲೆಯಾಗಿರುತ್ತದೆ. ದ್ಯುಲೋಕವನ್ನು ನಾವು ಕಂಡಿಲ್ಲವಾದರೂ ಅಲ್ಲಿರುವ ಇಂದ್ರಾದಿದೇವತೆಗಳ ವಿಷಯವಾಗಿ ಪುರಾಣಗಳಲ್ಲಿ ನಾವು ಕೇಳಿರುತ್ತೇವೆ. ಈ ಲೋಕವು ಕೂಡ ವಿಷ್ಣು ಪಾದಗಳಿಂದ ಆಕ್ರಾಂತವಾಗಿರುತ್ತದೆ. ಇದು ಬ್ರಹ್ಮದ ಒಂದು ಕಲೆಯಾಗಿದೆ. ಕಡೆಯದಾಗಿ ಸಮುದ್ರವು ಸಹ ಬ್ರಹ್ಮದ ಒಂದು ಕಲೆಯಾಗಿರುತ್ತದೆ. ಸಮುದ್ರದ ಅಂಚನ್ನು ನಾವು ನೋಡಿರುವದು ನಿಜ. ಆದರೆ ಸಮುದ್ರದ ವೈಶಾಲ್ಯ, ಆಳ–ಮುಂತಾದದ್ದು ನಮಗೆ ಹೆಚ್ಚು ಪರಿಚಿತವಾಗಿಲ್ಲ. ಇದರ ಹೆಚ್ಚಿನ ವಿಜ್ಞಾನಕ್ಕಾಗಿಯೂ ಪ್ರಯೋಜನಾಪೇಕ್ಷೆ ಯಿಂದಲೂ ಕೆಲವು ಸಾಹಸಿಗಳೂ ಜಾಣರೂ ಪ್ರಯತ್ನಿಸುತ್ತಿದ್ದಾರೆ. ಆದರೆ ಸಮುದ್ರರಾಜನು ಕೂಡ ಒಬ್ಬ ದೇವತೆಯೇ ಆಗಿದ್ದಾನೆ. ತ್ರೇತಾಯುಗದಲ್ಲಿ ಈ ಸಮುದ್ರರಾಜನು ಶ್ರೀರಾಮನಿಗೆ ಕಾಣಿಸಿಕೊಂಡ ಕಥೆಯು ರಾಮಾಯಣದಲ್ಲಿದೆ. ಹೀಗೆ ಸಮುದ್ರವು ಕೂಡ ಬ್ರಹ್ಮದ ಒಂದು ಕಲೆಯಾಗಿದೆ. ಈ ಚತುಷ್ಕಲಬ್ರಹ್ಮವನ್ನು ಅನಂತಗುಣವುಳ್ಳದ್ದೆಂದು ಉಪಾಸನೆಮಾಡುವವನು ಅನಂತವಾದ ಲೋಕಗಳನ್ನು ಗೆದ್ದುಕೊಳ್ಳುವನು–ಎಂಬಿದು ಫಲವು. ಈ ರೀತಿಯಾಗಿ ಚತುಷ್ಕಲವಾದ ಬ್ರಹ್ಮವನ್ನು ಚಿಂತನ ಮಾಡುವಂತೆ ಸತ್ಯಕಾಮನಿಗೆ ಅಗ್ನಿಯು ಉಪದೇಶಮಾಡಿದನು–ಎಂದು ತಿಳಿಯಬೇಕು.

ಈಗ ಮುಂದಿನ ಕಥೆಯನ್ನು ನೋಡೋಣ. ಅಗ್ನಿದೇವನು ಕಡೆಯಲ್ಲಿ ಸತ್ಯಕಾಮನಿಗೆ ''ಅಯ್ಯ, ಮುಂದಿನ ಬ್ರಹ್ಮದ ಪಾದವನ್ನು ನಿನಗೆ ಹಂಸವು ಹೇಳಿಕೊಡಲಿದೆ'' ಎಂದು ತಿಳಿಸಿ ಅಂತರ್ಧಾನನಾದನು. ಅನಂತರ ಬೆಳಗಾದಕೂಡಲೆ ಅವನು ಗೋವುಗಳನ್ನು ಅಟ್ಟಿಕೊಂಡು ಗುರುಗಳ ಮನೆಗೆ ಹೊರಟನು. ಆ ದಿನವೂ ಕಳೆದು ಸಂಜೆಯಾಗಲು ಒಂದು ಸ್ಥಳದಲ್ಲಿ ಗೋವುಗಳನ್ನು ಕೂಡಿಸಿ ತಾನೂ ನಿಂತನು. ಆಗ ಒಂದು ಹಂಸವು ಅವನ ಬಳಿಗೆ ಹಾರಿಬಂದು 'ಸೋಮ್ಯ, ನಿನಗೆ ಬ್ರಹ್ಮದ ಒಂದು ಪಾದವನ್ನು ಹೇಳಿಕೊಡುವೆನು' ಎಂದಿತು. ''ಪೂಜ್ಯರೆ, ಹೇಳಿಕೊಡೋಣವಾಗಲಿ'– ಎಂದು ಸತ್ಯಕಾಮನು ನುಡಿಯಲು ಅದು ಈ ರೀತಿಯಾಗಿ ಉಪದೇಶಮಾಡಿತು. ಅಗ್ನಿಯು ಒಂದು ಕಲೆ; ಸೂರ್ಯನು ಒಂದು ಕಲೆ; ಚಂದ್ರನು ಒಂದು ಕಲೆ, ಮಿಂಚು ಒಂದು ಕಲೆ; ಇದೇ ಬ್ರಹ್ಮದ ಜ್ಯೋತಿಷ್ಮಾನ್–ಎಂಬ ಪಾದವು. ಹೀಗೆಂದು ಉಪಾಸನೆಮಾಡು'' ಎಂದು ಹೇಳಿತು. ಇಲ್ಲಿ ಜ್ಯೋತಿಷ್ಮಂತವಾದ ಬ್ರಹ್ಮದ ಪಾದದ ಉಪದೇಶವಿರುವದರಿಂದ ಹಂಸರೂಪದಿಂದ ಆದಿತ್ಯದೇವತೆಯೇ ಬಂದು ಉಪದೇಶಮಾಡಿರುತ್ತಾನೆಂದು ತಿಳಿಯಬೇಕು. ಇಲ್ಲಿರುವ ದೇವತೆಗಳೆಲ್ಲರೂ ಪ್ರತ್ಯಕ್ಷದೇವತೆಗಳೇ ಆಗಿದ್ದಾರೆ. ಆದ್ದರಿಂದ ಸಂಶಯಕ್ಕೆ ಅವಕಾಶವಿರುವದಿಲ್ಲ. ಅಗ್ನಿಯನ್ನು ದೇವಪುರೋಹಿತನೆಂದೇ ವೇದದಲ್ಲಿ

ಹೊಗಳಿದೆ. ಆದಿತ್ಯಚಂದ್ರರುಗಳ ಸ್ತುತಿಯೂ ವೈದಿಕಸಾಹಿತ್ಯದಲ್ಲಿ ಬೇಕಾದಷ್ಟಿದೆ. ಮಾನವನ ಆಯುಷ್ಯವನ್ನೆಲ್ಲ ಅಳೆಯುವವರೇ ಈ ಕಾಲಾಭಿಮಾನಿಗಳಾದ ಸೂರ್ಯಚಂದ್ರರು. ಇವರುಗಳು ಬ್ರಹ್ಮದ ಅಂಶರು ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ. ಇನ್ನು ಮಿಂಚು ಸಹ ಬ್ರಹ್ಮದ ಒಂದು ಕಲೆಯೆಂದು ಇಲ್ಲಿ ತಿಳಿಸಿದೆ. ಸೂರ್ಯ ಚಂದ್ರರಂತೆ ಇದು ಯಾವಾಗಲೂ ಕಾಣಿಸಿಕೊಳ್ಳುವದಿಲ್ಲ. ಮಳೆಯು ಬರುವ ಮುಂಚೆ ತೋರಿಕೊಳ್ಳುತ್ತದೆ. ಇದು ಒಂದು ಶಕ್ತಿವಿಶೇಷವೆಂದು ಕರೆಯಲ್ಪಟ್ಟಿದೆ. ವಿದ್ಯುಚ್ಛಕ್ತಿಯು ಇದರ ಮಹಿಮೆಯೇ ಆಗಿದೆ. ದೈವಸೃಷ್ಟಿಯಾದ ಇದನ್ನು ದೇವತೆಯಾಗಿಯೂ, ಬ್ರಹ್ಮದ ಕಲೆಯಾಗಿಯೂ ತಿಳಿಯುವದೇ ಉಪಾಸನೆಯೆನಿಸುವದು. ಹೀಗೆ ನಾಲ್ಕು ದಿವ್ಯಕಲೆಗಳಾದ ಅಗ್ನಿ, ಸೂರ್ಯ, ಚಂದ್ರ, ಮಿಂಚು–ಗಳನ್ನು ಕೂಡಿಸಿ ಬ್ರಹ್ಮದ ಒಂದು ಪಾದವೆಂದೂ ಇದನ್ನು ಜ್ಯೋತಿಷ್ಮಾನ್–ಎಂಬ ಗುಣವುಳ್ಳದ್ದಾಗಿ ಉಪಾಸನೆಮಾಡಬೇಕೆಂದೂ ಹಂಸವು ಉಪದೇಶಿಸಿ ಅಂತರ್ಧಾನವಾಯಿತು. ಈ ಜ್ಯೋತಿಷ್ಮಂತ ಬ್ರಹ್ಮೋಪಾಸಕನಿಗೆ ಈ ಲೋಕದಲ್ಲಿ ಒಳ್ಳೆಯ ತೇಜಸ್ಸು ಲಭಿಸುವದು. ಶರೀರವನ್ನು ಬಿಟ್ಟಮೇಲೆ ಸೂರ್ಯಾದಿಗಳ ಲೋಕವೇ ದೊರಕುವದು–ಎಂದು ಫಲವನ್ನೂ ಉಪನಿಷತ್ತಿನಲ್ಲಿ ತಿಳಿಸಿದೆ.

ಈಗ ಕಡೆಯದಾಗಿ 'ಮದ್ಗು' ಎಂಬ ಒಂದು ಪಕ್ಷಿಯು ಸತ್ಯಕಾಮನಿಗೆ ಮಾಡಿದ ಉಪದೇಶವನ್ನು ಕೇಳೋಣ. ಹಂಸವು ತನ್ನ ಉಪದೇಶದ ಕಡೆಯಲ್ಲಿ 'ನಿನಗೆ ಮದ್ಗುವು ಬ್ರಹ್ಮದ ಇನ್ನೊಂದು ಪಾದವನ್ನು ತಿಳಿಸಲಿದೆ'–ಎಂದು ಹೇಳಿ ಹೊರಟುಹೋಯಿತು. ಆಗ ಸತ್ಯಕಾಮನು ಆಗಲಿ! ಎಂದು ರಾತ್ರೆಯನ್ನು ಕಳೆದು ಬೆಳಗಾಗುತ್ತಲೆ ಎಂದಿನಂತೆ ಗೋವುಗಳನ್ನು ಹೊಡೆದುಕೊಂಡು ಗುರುಗಳ ಮನೆಯ ಕಡೆಗೆ ಹೊರಟನು. ಆ ದಿನವೂ ಸಂಜೆಯಾಗಲು ಗೋವುಗಳನ್ನು ಒಂದು ಕಡೆ ಒಟ್ಟುಗೂಡಿಸಿ ಅಗ್ನಿಯನ್ನು ಪ್ರಜ್ವಲಿಸಿ ಸಮಿದಾಧಾನಮಾಡಿದನು. ಅಗ್ನಿಯ ಬಳಿಯಲ್ಲೇ ಕುಳಿತುಕೊಂಡನು. ಅವನ ಬಳಿಗೆ ಮದ್ಗುವು ಹಾರಿಬಂದಿತು. ನೀರಿನಲ್ಲಿ ಸಂಚರಿಸುವ ಒಂದು ಜಾತಿಯ ಹಕ್ಕಿಯನ್ನು ಮದ್ಗುವೆನ್ನುವರು. ಆ ರೂಪದಲ್ಲಿ ಪ್ರಾಣದೇವತೆಯೇ ಬಂದು ಸತ್ಯಕಾಮನಿಗೆ 'ಅಯ್ಯ, ನಿನಗೆ ಬ್ರಹ್ಮದ ಪಾದವನ್ನು ಹೇಳಿಕೊಡುವೆನು' ಎಂದನು. 'ಪೂಜ್ಯರೆ, ಹೇಳಿಕೊಡಬೇಕು' ಎಂದು ಸತ್ಯಕಾಮನು ನುಡಿಯಲು ''ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು–ಇವೇ ಬ್ರಹ್ಮದ ನಾಲ್ಕು ಕಲೆಗಳು. ಇವಿಷ್ಟೂ ಸೇರಿ ಒಂದು ಪಾದವು. ಈ ಚತುಷ್ಕಲಬ್ರಹ್ಮವನ್ನು 'ಆಯತನವಾನ್' ಎಂದು ಉಪಾಸನೆಮಾಡು''–ಎಂದು ಹೇಳಿಕೊಟ್ಟಿತು.

ವೈದಿಕರು ಮಂತ್ರಪುಷ್ಪವನ್ನು ಹೇಳುವಾಗ ''ಆಯತನವಾನ್ ಭವತಿ'' ಎಂದು ಹೇಳುವ ಪ್ರಸಿದ್ಧವಾದ ವೇದಭಾಗವನ್ನು ಅನೇಕರು ಕೇಳಿರಬಹುದು. 'ಆಯತನ' ವೆಂದರೆ ಆಶ್ರಯವು. ವ್ಯವಹಾರದಲ್ಲಿ ನಾವೆಲ್ಲರೂ ಒಂದೊಂದು ಮನೆಯನ್ನು ಆಶ್ರಯಿಸಿ

ಕೊಂಡಿರುವೆವು. ಸ್ವಂತಮನೆಯುಳ್ಳವರಾಗಿದ್ದರಂತೂ ಈಗಿನ ಕಾಲಕ್ಕೆ ಆಯತನವಂತರೇ ಸರಿ. ಆಯತನವನ್ನು ಬಯಸುವವರು ಕೂಡ ಭಗವಂತನ ಸನ್ನಿಧಿಯಲ್ಲಿ ಮೇಲ್ಕಂಡ ಮಂತ್ರಗಳಿಂದ ಪ್ರಾರ್ಥಿಸಿಕೊಳ್ಳುವದು ಸೂಕ್ತವಾಗಿದೆ. ಇರಲಿ. ಇಲ್ಲಿ ಆಯತನ ಫಲವನ್ನುಂಟುಮಾಡುವ ಬ್ರಹ್ಮದ ಉಪಾಸನೆಯನ್ನು ಹೇಳಲಾಗಿದೆ. ಪ್ರಾಣದೇವತೆಯೇ ಮದ್ಗುಪಕ್ಷಿಯ ರೂಪವನ್ನು ಧರಿಸಿ ಬ್ರಹ್ಮದ ಕಡೆಯ ಪಾದವನ್ನು ಉಪದೇಶಿಸಿ ಈ ಫಲವನ್ನೂ ಹೇಳಿತು. ಇಲ್ಲಿರುವ ದೇವತೆಗಳೆಲ್ಲ ಅಧ್ಯಾತ್ಮವಾಗಿ ನಮ್ಮೊಳಗೇ ಇರುವರು. ನಾವು ಉಸಿರಾಡುತ್ತಿರುವದು, ನೋಡುವದು, ಕೇಳುವದು, ಆಲೋಚಿಸುವದು– ಇವೆಲ್ಲವೂ ಪ್ರಾಣಾದಿದೇವತೆಗಳ ಅನುಗ್ರಹದಿಂದಲೇ ಆಗಿದೆ. ಅವರುಗಳನ್ನೇ ಬ್ರಹ್ಮದ ಕಲೆಗಳೆಂದು ಕರೆಯಲಾಗಿದೆ. ಹೀಗೆ ಹದಿನಾರು ಕಲೆಗಳಿಂದಲೂ ನಾಲ್ಕು ಪಾದಗಳಿಂದಲೂ ಕೂಡಿದ ಬ್ರಹ್ಮವನ್ನು ವಾಯು, ಅಗ್ನಿ, ಆದಿತ್ಯ, ಪ್ರಾಣ–ಎಂಬ ದೇವತೆಗಳು ಸತ್ಯಕಾಮನಿಗೆ ಉಪದೇಶಿಸಿದರು. ಬ್ರಹ್ಮವಿದ್ಯೆಯು ಪೂರ್ಣವಾಯಿತು.

ಅನಂತರ ಸತ್ಯಕಾಮನು ಗುರುಗಳ ಮನೆಗೆ ಸಹಸ್ರಗೋವುಗಳೊಡನೆ ಬಂದು ತಲುಪಿದನು. ದೂರದಿಂದಲೇ ಅವನನ್ನು ಕಂಡ ಗುರುಗಳು 'ಸತ್ಯಕಾಮನೆ, ನೀನು ಬ್ರಹ್ಮವಿದನಂತೆಯೇ ಕಾಣುತ್ತಿರುವೆಯಲ್ಲ, ಬ್ರಹ್ಮವಿದ್ಯೆಯನ್ನು ನಿನಗೆ ಯಾರು ಹೇಳಿಕೊಟ್ಟರು? ಎಂದರು. ಆಗ ಅವನು "ಪೂಜ್ಯರೆ, ತಮ್ಮ ಶಿಷ್ಯನಾಗಿರುವ ನನಗೆ ಬೇರೆ ಯಾವ ಮನುಷ್ಯಮಾತ್ರರಾದ ಗುರುಗಳು ಉಪದೇಶಮಾಡಲು ಧೈರ್ಯ ಮಾಡಿಯಾರು? ಆದ್ದರಿಂದ ಮನುಷ್ಯರಲ್ಲದವರಿಂದ ಈಗ ಬ್ರಹ್ಮೋಪದೇಶವನ್ನೇನೋ ಪಡೆದಿರುತ್ತೇನೆ. ಆದರೆ ತಮ್ಮಂಥವರಿಂದ ನಾನು ಕೇಳಿರುವಂತೆ–ಆಚಾರ್ಯನಿಂದ ಅನುಗೃಹೀತವಾಗಿ ಬಂದ ವಿದ್ಯೆಯೇ ಸಾಧುತಮವಾದದ್ದು; ಅದೇ ಪರಾಕಾಷ್ಠೆಯು– ಎಂದು ನೆರೆನಂಬಿರುವೆನು. ದೇವತೆಗಳೇ ನನಗೆ ಉಪದೇಶಮಾಡಿದ್ದರೂ ಇರಬಹುದು. ಆದರೂ ತಾವು ಹೇಳಿಕೊಟ್ಟಲ್ಲದೆ ನನ್ನ ಇಚ್ಛೆಯು ಪರಿಪೂರ್ಣವಾಗಲಾರದು. ಈಗ ತಾವೇ ನನಗೆ ಬ್ರಹ್ಮೋಪದೇಶವನ್ನು ಮಾಡಿ ಉದ್ಧಾರಮಾಡಬೇಕು" ಎಂದು ಬೇಡಿಕೊಂಡನು. ಹಾರಿದ್ರುಮತರು ಆತನ ಗುರುಭಕ್ತಿಗೂ ವಿದ್ಯಾನಿಷ್ಠೆಗೂ ಮೆಚ್ಚಿ ತಲೆದೂಗಿದರು. ತಮ್ಮ ಪ್ರಿಯಶಿಷ್ಯನನ್ನಾಗಿ ಸ್ವೀಕರಿಸಿ ಈವರೆಗೆ ದೇವತೆಗಳು ಸತ್ಯಕಾಮನಿಗೆ ಹೇಳಿಕೊಟ್ಟಿದ್ದ ಷೋಡಶಕಲಪುರುಷವಿದ್ಯೆಯನ್ನೇ ಸ್ವಲ್ಪವೂ ಮುಕ್ಕಾಗದಂತೆ ಮತ್ತೆ ಹೇಳಿಕೊಟ್ಟರು. ಇದರಿಂದ ಸತ್ಯಕಾಮನು ಕೃತಾರ್ಥನಾದನು. ಹೀಗೆ ಬ್ರಹ್ಮವಿದ್ಯೆಯನ್ನು ಗುರುಮುಖದಿಂದಲೇ ಸ್ವೀಕರಿಸಬೇಕೆಂಬುದೂ ಗುರುಸೇವೆಯನ್ನು ನಿಷ್ಠೆಯಿಂದ ಮಾಡುವವನಿಗೆ ವಿದ್ಯಾಗ್ರಹಣದ ವಿಷಯದಲ್ಲಿ ದೇವತೆಗಳು ಕೂಡ ನೆರವಾಗುತ್ತಾರೆಂಬುದೂ ಈ ಕಥೆಯಿಂದ ತಿಳಿದುಬರುತ್ತದೆ. ಷೋಡಶಕಲಬ್ರಹ್ಮವಿದ್ಯೆಗೂ ಹಾರಿದ್ರುಮತ ಸತ್ಯಕಾಮರುಗಳಿಗೂ ನಾವು ಪ್ರಣಾಮಗಳನ್ನು ಅರ್ಪಿಸೋಣ.

## ಉಪಕೋಸಲನಿಗೆ ಅಗ್ನಿಗಳ ಉಪದೇಶ

**ಓಮ್ ॥ಅಥ ಹಾಗ್ನಯಃ ಸಮೂದಿರೇ ತಪ್ತೋ ಬ್ರಹ್ಮಚಾರೀ ಕುಶಲಂ ನಃ ಪರ್ಯಚಾರೀದ್ಧನ್ತಾಸ್ಮೈ ಪ್ರಬ್ರವಾಮೇತಿ ತಸ್ಮೈ ಹೋಚುಃ ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ॥ 4–10–4.**

**ಭಾವಾರ್ಥಃ–** ಆಗ ಅಗ್ನಿಗಳು 'ಬ್ರಹ್ಮಚಾರಿಯು ತಪ್ತನಾಗಿರುತ್ತಾನೆ. ನಮ್ಮನ್ನು ಚೆನ್ನಾಗಿ ಪರಿಚರ್ಯೆ ಮಾಡಿದ್ದಾನೆ. ಒಳ್ಳೆಯದು, ಇವನಿಗೆ ಹೇಳಿಕೊಡೋಣ' ಎಂದು ಸಂವಾದಮಾಡಿಕೊಂಡವು. ಅವನಿಗೆ 'ಪ್ರಾಣವು ಬ್ರಹ್ಮವು; ಕಂ ಬ್ರಹ್ಮವು, ಖಂ ಬ್ರಹ್ಮವು' ಎಂದು ಹೇಳಿದವು.

(ಉಪಕೋಸಲನೆಂಬ ಶಿಷ್ಯನು ಗುರುಗಳಾದ ಸತ್ಯಕಾಮಜಾಬಾಲರಲ್ಲಿ ಬ್ರಹ್ಮವಿದ್ಯೆಗಾಗಿ ಬಳಿಸಾರಿದನು. ಹನ್ನೆರಡುವರ್ಷಗಳು ಕಳೆದರೂ ಗುರುವು ವಿದ್ಯೋಪದೇಶವನ್ನು ಮಾಡದಿರಲು ಆಗ ಅವನು ಪೂಜಿಸುತ್ತಿದ್ದ ಅಗ್ನಿದೇವತೆಗಳೇ ಒಟ್ಟಾಗಿ ಅವನಿಗೆ ಪ್ರಾಣವೇ ಬ್ರಹ್ಮವು; ಕಂ ಬ್ರಹ್ಮವು; ಖಂ ಬ್ರಹ್ಮವು– ಎಂದು ಹೇಳಿಕೊಟ್ಟವು.)

## 29. ಉಪಕೋಸಲವಿದ್ಯೆ–1

ಈವರೆಗೆ ವಾಚಕರು ಸತ್ಯಕಾಮನು ಗೋಸೇವೆಯ ಪ್ರಭಾವದಿಂದ ಬ್ರಹ್ಮವಿದ್ಯೆಯನ್ನು ಪಡೆದುಕೊಂಡ ವಿಚಾರವನ್ನು ಕೇಳಿರುವದನ್ನು ನೆನಪಿಗೆ ತಂದುಕೊಳ್ಳಬೇಕು. ಈಗ ಅದೇ ಉಪನಿಷದ್ವಿದ್ಯೆಯು ಮುಂದುವರೆದು ಸತ್ಯಕಾಮರಲ್ಲಿ ಸೇವೆಮಾಡಿ ಅಗ್ನಿದೇವತೆಗಳ ದ್ವಾರದಿಂದಲೇ ಬ್ರಹ್ಮೋಪದೇಶವನ್ನು ಪಡೆದುಕೊಂಡ **ಉಪಕೋಸಲ** ಎಂಬ ವಿದ್ಯಾರ್ಥಿಯ ಉಪಾಖ್ಯಾನವನ್ನು ವಿಸ್ತರಿಸುತ್ತಿದೆ. ಅದನ್ನು ಕೇಳೋಣ.

ಕಮಲ– ಎಂಬವನ ಮಗನಾದ ಕಾಮಲಾಯನನೆಂಬುವನು ಉಪಕೋಸಲನೆಂಬ ಮತ್ತೊಂದು ಹೆಸರುಳ್ಳ ಬ್ರಹ್ಮಚಾರಿಯು. ಈತನು ಒಮ್ಮೆ ಬ್ರಹ್ಮವಿದ್ಯೆಗಾಗಿ ಸತ್ಯಕಾಮ ಜಾಬಾಲರಲ್ಲಿ ಸೇರಿದನು. ಅವರು ಅನೇಕ ಬ್ರಹ್ಮಚಾರಿಗಳಿಗೆ ವಿದ್ಯೋಪದೇಶವನ್ನು ಮಾಡುತ್ತಿದ್ದರು. ಉಪಕೋಸಲನು ಸಹ ಅವರಲ್ಲಿ ಒಬ್ಬ ಶಿಷ್ಯನಾದನು. ಬ್ರಹ್ಮಚಾರಿ ಧರ್ಮಕ್ಕೆ ಅನುಗುಣವಾಗಿ ಅಗ್ನಿಕಾರ್ಯ, ಗುರುಸೇವೆಗಳನ್ನು ಮಾಡುತ್ತಿದ್ದನು. ಜೊತೆಗೆ ಗುರುಗಳು ಅಗ್ನಿಹೋತ್ರಿಗಳಾದ್ದರಿಂದ ಅವರು ಪೂಜಿಸುತ್ತಿದ್ದ ಗಾರ್ಹಪತ್ಯ, ಆಹವನೀಯ, ಅನ್ವಾಹಾರ್ಯಪಚನವೆಂಬ ಹೆಸರಿನ ತ್ರೇತಾಗ್ನಿಗಳನ್ನೂ ಪರಿಚರ್ಯೆ ಮಾಡುತ್ತಿದ್ದನು. ಹೀಗೆಯೇ ಹನ್ನೆರಡು ವರ್ಷಗಳು ದಾಟಿದವು. ಸತ್ಯಕಾಮರ ಬಳಿಯಿದ್ದ

ಉಳಿದ ಶಿಷ್ಯರುಗಳೆಲ್ಲರೂ ತಮ್ಮ ಪಾಠಗಳನ್ನು ಪೂರೈಸಿಕೊಂಡು ಗುರುವಿನ ಅಪ್ಪಣೆಯನ್ನು ಪಡೆದು ಹೊರಟುಹೋದರು. ಆದರೆ ಗುರುಗಳು ಅದೇಕೊ, ಉಪಕೋಸಲನನ್ನು ಹಿಂದಿರುಗಿ ಕಳುಹಿಸಲಿಲ್ಲ. ಅವನಿಗೆ ಬೇಕಾಗಿದ್ದ ವಿದ್ಯೆಯನ್ನೂ ಹೇಳಿಕೊಡಲಿಲ್ಲ. ಇದರಿಂದಾಗಿ ಚಿಂತಾಕ್ರಾಂತನಾದ ಉಪಕೋಸಲನಿಗೆ ಮಾನಸಿಕದುಃಖವು ಹೆಚ್ಚಾಗಿಬಿಟ್ಟಿತು. ಆಹಾರಾದಿಗಳು ಕೂಡ ಸೇರದೆ ಹೋಗಿಬಿಟ್ಟಿತು. ಒಂದು ದಿನ ಗುರುಪತ್ನಿಯು ಅವನನ್ನು ಕುರಿತು 'ಬ್ರಹ್ಮಚಾರಿಯೆ, ಏಕೆ ಊಟಮಾಡದಿರುವೆ?' ಎಂದಳು. ಆತನು 'ತಾಯೆ, ಮನುಷ್ಯನಿಗೆ ಅನೇಕ ಆಸೆಗಳಿರುತ್ತವೆ, ಹಾಗೆಯೇ ಕರ್ತವ್ಯಗಳೂ ಇರುತ್ತವೆ, ಅವು ನೆರವೇರದೆ ಇದ್ದಾಗ ಊಟವು ಬೇಕಾಗುವದಿಲ್ಲ' ಎಂದನು. ಆಗ ಗುರುಪತ್ನಿಯು ಶಿಷ್ಯನ ಮನೋವ್ಯಥೆಯನ್ನು ಅರ್ಥಮಾಡಿಕೊಂಡು ತನ್ನ ಗಂಡನಿಗೆ ಒಮ್ಮೆ ಆತನ ಸಮಯವನ್ನು ಕಾದು 'ಪೂಜ್ಯರೆ, ನೀವು ಉಪಕೋಸಲನನ್ನು ಏಕೆ ಸಮಾವರ್ತನೆ (ಹಿಂದಿರುಗುವಿಕೆ) ಮಾಡಿಸಲಿಲ್ಲ? ಆತನಾದರೊ, ಅಗ್ನಿದೇವತೆಗಳಲ್ಲಿ ಅತ್ಯಂತ ಭಕ್ತಿಯುಳ್ಳವನು; ಇನ್ನು ಮುಂದೆಯೂ ಇಂಥ ಶಿಷ್ಯನ ಸದಾಶಯವನ್ನು ನೀವು ಪೂರ್ಣಗೊಳಿಸದೆ ಹೋದರೆ ಅಗ್ನಿದೇವತೆಗಳು ಏನಂದುಕೊಂಡಾರು? ಆದ್ದರಿಂದ ಈತನಿಗೆ ಬೇಕಾದ ವಿದ್ಯೆಯನ್ನು ಹೇಳಿಕೊಡಿರಿ' ಎಂದು ನೆನಪುಕೊಟ್ಟಳು. ಆದರೂ ಅದೇಕೊ, ಸತ್ಯಕಾಮರು ಏನನ್ನೂ ಹೇಳಿಕೊಡದೆ ಪರಸ್ಥಲಕ್ಕೆ ಹೊರಟುಹೋಗಿಬಿಟ್ಟರು.

ಆಗ ಉಪಕೋಸಲನು ಪರಿಚರ್ಯೆಮಾಡುತ್ತಿದ್ದ ಅಗ್ನಿದೇವತೆಗಳೆಲ್ಲರೂ ಒಟ್ಟಾಗಿ ಸೇರಿ ತಮ್ಮೊಳಗೇ ಹೀಗೆ ಮಾತನಾಡಿಕೊಂಡರು. ''ಈ ಬ್ರಹ್ಮಚಾರಿಯು ನಮ್ಮನ್ನು ಈವರೆಗೂ ಚೆನ್ನಾಗಿ ಸೇವೆಮಾಡಿರುತ್ತಾನೆ. ಈಗ ಈತನು ಬಹಳ ಬೇಸರಗೊಂಡಿರುತ್ತಾನೆ. ಗುರುಗಳು ಈತನಿಗೆ ಬೇಕಾದ ವಿದ್ಯೆಯನ್ನು ಉಪದೇಶಿಸಲಿಲ್ಲವೆಂಬುದೇ ಇದಕ್ಕೆ ಕಾರಣವು. ಒಳ್ಳೆಯದು, ಇವನಿಗೆ ಇಷ್ಟವಾದ ವಿದ್ಯೆಯನ್ನು ನಾವೇ ಹೇಳಿಕೊಡೋಣ'' ಹೀಗೆಂದು ಪರ್ಯಾಲೋಚಿಸಿಕೊಂಡು 'ಎಲೈ ಉಪಕೋಸಲನೆ, ಕೇಳು: ನಿನಗೆ ಬ್ರಹ್ಮೋಪದೇಶವನ್ನು ಮಾಡುವೆವು. 'ಪ್ರಾಣವು ಬ್ರಹ್ಮವು; ಕಂ ಬ್ರಹ್ಮವು; ಖಂ ಬ್ರಹ್ಮವು' ಎಂಬ ಮಹಾವಾಕ್ಯವನ್ನು ಉಪದೇಶಿಸಿಬಿಟ್ಟರು. ಗುರುಶುಶ್ರೂಷಾದಿಗಳು ಹೇಗೆ ದೇವತೆಗಳನ್ನೂ ಸಂತೋಷಗೊಳಿಸಿ ವಿದ್ಯಾಪ್ರಾಪ್ತಿಗಾಗಿ ಸಾಧನವಾಗುತ್ತವೆ–ಎಂಬುದು ಇದರಿಂದ ತಿಳಿದುಬರುತ್ತದೆ. ಮತ್ತು ಶಿಷ್ಯನು ಗುರುವಿನ ವಿಷಯಕ್ಕೆ ಏನೊಂದೂ ದ್ವೇಷಭಾವನೆಯನ್ನು ತಾಳದೆ–ಅವರು ವಿದ್ಯೆಯನ್ನು ಹೇಳಿಕೊಡುವ ವಿಷಯದಲ್ಲಿ ವಿಳಂಬವನ್ನು ಮಾಡಿದರೂ ಸಹ ಭಕ್ತಿಶ್ರದ್ಧಾವಂತನಾಗಿಯೇ ಇದ್ದಲ್ಲಿ ದೇವತೆಗಳೇ ಗುರುಗಳಾಗಿ ಶಿಷ್ಯನನ್ನು ಉದ್ಧರಿಸುತ್ತಾರೆಂದೂ ತಿಳಿದುಬರುತ್ತದೆ. ಹೀಗೆ ಗುರುಭಕ್ತಿಯಲ್ಲಿ ದೇವತಾಭಕ್ತಿಯು ಅಡಕವಾಗಿಯೇ ಬಿಟ್ಟಿದೆ–ಎಂದು ಗೊತ್ತಾಗುವದು. ಈಗಿನ ಕಾಲದ ವಿದ್ಯಾರ್ಥಿಗಳು ಈ ತತ್ತ್ವವನ್ನು ಗಮನಿಸಬೇಕು.

ಅನಂತರ ಉಪಕೋಸಲನು ಅಗ್ನಿದೇವತೆಗಳ ಉಪದೇಶವನ್ನು ಮನಸ್ಸಿಗೆ ತಂದುಕೊಂಡು ಚಿಂತಿಸಿ ತನಗೆ ಬಂದ ಸಂಶಯವನ್ನು ಮುಂದಿಡಲಾರಂಭಿಸಿದನು. 'ಪೂಜ್ಯರೆ, ಪ್ರಾಣವು ಬ್ರಹ್ಮವು ಎಂಬಿದು ತಿಳಿದಿದೆ. ಏಕೆಂದರೆ ಅದು ಪ್ರಸಿದ್ಧವಾಗಿದೆ. ನಾವೆಲ್ಲರೂ ಉಸಿರಾಡುತ್ತಿರುವದರಿಂದಲೇ ಜೀವಿಸಿರುತ್ತೇವೆ. ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದೇವೆ. ಜೀವರುಗಳ ಉತ್ಪತ್ತಿ ಸ್ಥಿತಿಲಯಗಳಿಗೆಲ್ಲ ಪ್ರಾಣವೇ ಮೂಲವು. ಅದು ಬ್ರಹ್ಮವೆಂಬುದು ಸರಿಯಾಗಿದೆ. ಆದರೆ ಕಂ ಬ್ರಹ್ಮ ಖಂ ಬ್ರಹ್ಮ–ಎಂಬಲ್ಲಿ ಕಂ, ಖಂ– ಎಂದರೇನೆಂಬುದು ತಿಳಿಯಲಿಲ್ಲ. ಮತ್ತು ಪ್ರಾಣವು ಕಂ, ಖಂ–ಆಗಿದೆ ಎಂಬ ವಾಕ್ಯವೂ ನನಗೆ ಅರ್ಥವಾಗಲಿಲ್ಲ' ಎಂದನು. ಇದು ನ್ಯಾಯವಾಗಿದೆ. ಏಕೆಂದರೆ ಕಂ–ಖಂ–ಎಂಬ ಅಕ್ಷರಗಳಿಗೆ ವ್ಯವಹಾರಪ್ರಪಂಚದಲ್ಲಿ ಏನೂ ಹೆಚ್ಚಿನ ಅರ್ಥವು ಕಂಡುಬರುವದಿಲ್ಲ. ಅವುಗಳ ಬಳಕೆಯೂ ಅಷ್ಟಾಗಿಲ್ಲ. ಮತ್ತು ಕಂ ಬ್ರಹ್ಮ ಎಂದು ಹೇಳಿದರಂತೂ ಇನ್ನೂ ಅಪ್ರಸಿದ್ಧವಾದ ವಾಕ್ಯವೇ ಆಗುವದು. ಏಕೆಂದರೆ ಬ್ರಹ್ಮವೆಂದರೇನು? ಯಾವದು? ಎಂಬಿದೂ ಜನರಿಗೆ ಗೊತ್ತಿರುವದಿಲ್ಲ. ಆದ್ದರಿಂದಲೇ ಉಪಕೋಸಲನು ಇವುಗಳ ನಿಜವಾದ ಅರ್ಥವನ್ನು ತಿಳಿಸಿಕೊಡಬೇಕೆಂದು ಕೇಳಿದ್ದಾನೆ. ಹೇಗೆಂದರೆ ಯಾರಾದರೊಬ್ಬರು "ಅಯ್ಯ, ನೀನು ನಿರುದ್ಯೋಗಿ ಎಂದು ತಿಳಿಯಿತು, ಕ.ರಾ.ರ.ಸಾ.ಸಂ.[1] ಗೆ ಅರ್ಜಿಹಾಕಿಕೊ" ಎಂದು ಹೇಳಿದರೆಂದು ಭಾವಿಸೋಣ. ಆಗ ಅರ್ಜಿದಾರನಿಗೆ ಹಾಗೆಂದರೇನು? ಎಂಬ ಸಂಶಯವು ಬರುವದಿಲ್ಲವೆ? ಹಾಗೆಯೇ ಉಪಕೋಸಲನಿಗೂ ಸಂಶಯವುಂಟಾಯಿತು. ಇಲ್ಲಿ ಕೆಲವರು ಹೀಗೆ ಆಕ್ಷೇಪಿಸಬಹುದು. ಕಂ ಎಂದರೆ ಸುಖವೆಂದೂ ಖಂ ಎಂದರೆ ಆಕಾಶವೆಂದೂ ಪ್ರಸಿದ್ಧಾರ್ಥವಿದೆಯಲ್ಲ, ಈ ಬ್ರಹ್ಮಚಾರಿಗೇಕೆ ಸಂಶಯವು ಬಂದಿತು? ಎಂದು ಕೇಳಬಹುದು. ನಿಜ, ಕಂ ಎಂದರೆ ಸುಖ ಎಂಬ ಅರ್ಥವೇನೋ ಬ್ರಹ್ಮಚಾರಿಗೆ ತಿಳಿದಿರಬಹುದು. ಆದರೆ ಯಾವ ಸುಖವೂ ಶಾಶ್ವತವಲ್ಲ, ತೋರಿಹಾರಿಬಿಡುವದು. ಇಂಥ ಕ್ಷಣಿಕಸುಖವು ಬ್ರಹ್ಮವು ಹೇಗಾದೀತು? ಹಾಗೆಯೇ ಖಂ ಎಂದರೆ ಆಕಾಶವೆಂದು ಗೊತ್ತಾದರೂ ಅದು ಅಚೇತನವಾದ್ದರಿಂದ ಬ್ರಹ್ಮವು ಹೇಗಾದೀತು? ಆದ್ದರಿಂದ ಕಂ ಬ್ರಹ್ಮ ಖಂ ಬ್ರಹ್ಮ ಎಂಬಿದು ಗೊತ್ತಾಗಲಿಲ್ಲ–ಎಂಬುದೇ ಉಪಕೋಸಲನ ಸಂಶಯವಾಗಿದೆ. ಲೋಕದಲ್ಲಿರುವ ಯಾವ ಸುಖಗಳೂ 'ಕಂ' ಆಗಿರಲಾರವು. ಏಕೆಂದರೆ ಅವೆಲ್ಲವೂ ಆದ್ಯಂತವುಳ್ಳವುಗಳು, ಆದ್ಯಂತಗಳಿಲ್ಲದ ಕಂ ಎಂಬುದಿದ್ದೀತೆ? ಅದು ಯಾವದು? ಅದನ್ನೇ ಬ್ರಹ್ಮವೆಂದು ಅಗ್ನಿದೇವತೆಗಳು ಹೇಳಿರುವರಲ್ಲ? ಹಾಗೆಯೇ ಅಚೇತನವಾದ 'ಖಂ' ಗಿಂತಲೂ ವಿಲಕ್ಷಣವಾದ ಚೇತನವಾದ 'ಖಂ' ಎಂಬುದಿದೆಯೆ? ಅದೇನು? ಹೀಗೆಲ್ಲ ಸಂಶಯಗಳು ಉಪಕೋಸಲನಿಗೆ ಉಂಟಾದವು. ಇದು ಅವನ ತತ್ತ್ವಜಿಜ್ಞಾಸಾರ್ಹತೆಯನ್ನು ಪ್ರಕಟಗೊಳಿಸುತ್ತದೆ. ಇಂಥ ಪ್ರಶ್ನೆಗಳನ್ನೇ ಜಿಜ್ಞಾಸುಗಳು ಕೇಳಬೇಕು.

1. ಕರ್ನಾಟಕ –ರಾಜ್ಯ–ರಸ್ತೆ–ಸಾರಿಗೆ ಸಂಸ್ಥೆ ಎಂದರ್ಥ.

ಅನಂತರ ಅಗ್ನಿದೇವತೆಗಳು ಈತನ ವಿಚಾರಕ್ರಮದಿಂದ ಸಂತುಷ್ಟರಾಗಿ ಹೀಗೆಂದರುಃ 'ಎಲೈ ಬ್ರಹ್ಮಚಾರಿಯೆ, ಯಾವದನ್ನು ಕಂ ಎಂದು ಹೇಳಿದೆವೋ ಅದೇ ಖಂ ಎಂಬುದೂ ಆಗಿದೆ; ಎಂದರೆ ಸುಖರೂಪವಾಗಿಯೂ ಆಕಾಶವಾಗಿಯೂ ಇರುವದೇ ಬ್ರಹ್ಮವು. ನೀನು ಸುಖದ ವಿನಶ್ವರತ್ವವನ್ನೂ ಆಕಾಶದ ಅಚೇತನತ್ವ ಭೌತಿಕತ್ವಗಳನ್ನೂ ತೆಗೆದುಹಾಕಿ ಬ್ರಹ್ಮವಾಗಿರುವ ಕಂಖಂಗಳನ್ನು ಅರಿತುಕೊ–ಎಂದು ತಿಳಿಸಿದರು. ಇದರ ಅಭಿಪ್ರಾಯವೇನೆಂದರೆಃ ಸುಖದ ಅನುಭವವು ನಮಗೆಲ್ಲ ತಿಳಿದಿದೆ. ಅದರಲ್ಲಿ ಸುಖವು ನಮಗೆ ಆಗುತ್ತಿದೆ–ಎಂದು ಭಾವಿಸಿಕೊಂಡಾಗ ಭೋಕ್ತೃಗಳಾಗಿ ನಾವು ಯಾವದನ್ನು ಉಣ್ಣುವೆವೋ ಅದು ಬ್ರಹ್ಮವಲ್ಲ. ಉಣ್ಣುತ್ತಿರುವ, ಹಾಗೂ ಉಣ್ಣಲ್ಪಡುತ್ತಿರುವ ಎರಡನ್ನೂ ಬೆಳಗುವ ನಮ್ಮ ಮೂಲಸ್ವರೂಪವು ಯಾವದೋ ಅದು ಬ್ರಹ್ಮವು ಎಂದರ್ಥ. ಉದಾಹರಣೆಗೆ ಒಬ್ಬನಿಗೆ ಅಪರೂಪವಾಗಿ ಒಂದು ಗಂಡುಮಗುವಾಯಿತೆಂದಿಟ್ಟು ಕೊಳ್ಳೋಣ. ಆಗ ಆತನಿಗೆ ಏನು ಸುಖವಾಯಿತು? ಎಂಬಿದನ್ನು ವಿಶ್ಲೇಷಣೆಮಾಡಿದರೆ ಅದು ಆಹಾರಪಾನೀಯಗಳಂತೆ ಶರೀರೇಂದ್ರಿಯಗಳ ತೃಪ್ತಿಯಲ್ಲ, ಮಾನಸಿಕವಾದ ತೃಪ್ತಿಯದು. ಅಲ್ಲಿಯೂ ಮನಸ್ಸನ್ನೂ ಅದರ ಸುಖವೃತ್ತಿಯನ್ನೂ ಬೆಳಗಿದ ಆನಂದವು ಅವರೆಡಕ್ಕಿಂತ ಬೇರೆಯೇ ಆಗಿದೆ. ಮೂಲಭೂತವಾದ ಸುಖವೇ ಬ್ರಹ್ಮವು. ಅದು ಆತ್ಮನೇ ಆಗಿದೆ. ಹೀಗೆ ಆತ್ಮಸುಖವೇ ವಿಷಯಸುಖವಾಗಿಯೂ ತೋರಿಕೊಳ್ಳುತ್ತದೆ. ಅಜ್ಞರು ವಿಷಯಗಳಿಂದ ಸುಖವಾಯಿತು–ಎಂದುಕೊಳ್ಳುವರು. ಇದು ನಿಜವಲ್ಲ, ಯಾವ ವಿಷಯವಸ್ತುವೂ ಸುಖವೂ ಅಲ್ಲ; ದುಃಖವೂ ಅಲ್ಲ, ನಮ್ಮ ಪ್ರತ್ಯಗಾತ್ಮನೇ ನಿಜವಾದ ಸುಖವು. ಅದರಲ್ಲಿ ಭೇದವಿಲ್ಲ, ದ್ವೈತವಿಲ್ಲ. ಆದ್ದರಿಂದಲೇ ಅದರಲ್ಲಿ ದುಃಖವಿಲ್ಲ ಅದು ಅವಿನಾಶಿಯು. ಪ್ರತಿಯೊಂದು ಸುಖಾನುಭವದಲ್ಲಿಯೂ ನಾವು ಈ ಕಂ–ಎಂಬ ಸುಖವನ್ನು ಅನುಭವಿಸುತ್ತಿದ್ದರೂ ಗುರುತಿಸಲಾರದೆ ಇದ್ದೇವೆ. ಇರಲಿ. ಹೀಗೆಯೇ ಸುಖವು ಅನಂತವಾಗಿದೆ–ಎಂಬುದನ್ನು ಖಂ ಬ್ರಹ್ಮ ಎಂಬ ವಾಕ್ಯದಿಂದ ತಿಳಿಸಿದೆ. ಅಲ್ಲಿಯೂ ಖಂ ಎಂಬ ಶಬ್ದಾರ್ಥವಾದ ಆಕಾಶದ ಅಚೇತನತ್ವವನ್ನು ಕೈಬಿಟ್ಟು ಅನಂತವಾದ ಸುಖವು ಎಂದೇ ವಿಶೇಷಣವಿಶೇಷ್ಯಭಾವದಿಂಧ ಅರ್ಥಮಾಡಿಕೊಳ್ಳಬೇಕು. ಇಂಥ ಪರಮಾನಂದವೇ ಬ್ರಹ್ಮವು–ಎಂದು ಕಂ ಬ್ರಹ್ಮ ಖಂ ಬ್ರಹ್ಮ–ಎಂಬ ಮಹಾವಾಕ್ಯದಿಂದ ವಿವರಿಸಲಾಗಿದೆ.

ಈಗ ಇನ್ನೊಂದು ಪ್ರಶ್ನೆಯನ್ನು ಎತ್ತಬಹುದಾಗಿದೆ. ಅಗ್ನಿದೇವತೆಗಳಿಗೆ ಬ್ರಹ್ಮವನ್ನೇ ಪ್ರಧಾನವಾಗಿ ತಿಳಿಸುವ ಉದ್ದೇಶವಿತ್ತಾದ್ದರಿಂದ ಕಂ ಖಂ ಬ್ರಹ್ಮ ಎಂದು ಹೇಳಿದ್ದರೆ ಸಾಕಾಗಿತ್ತಲ್ಲವೆ? ಕಂ ಬ್ರಹ್ಮ–ಖಂ ಬ್ರಹ್ಮ–ಎಂದು ಎರಡುಬಾರಿ ಬ್ರಹ್ಮಶಬ್ದವನ್ನೇಕೆ ಹೇಳಿದರು? ಖಂ ಎಂಬುದಕ್ಕೆ ಕಂ ಎಂಬುದನ್ನು ವಿಶೇಷಣವನ್ನಾಗಿ ಮಾಡಿಬಿಟ್ಟರೆ ಸಾಕಾಗಿತ್ತಲ್ಲವೆ? ಇದು ನಿಜ. ಆದರೆ ಸುಖವೆಂಬ ವಿಶೇಷಣವುಳ್ಳ ಆಕಾಶವನ್ನು ಧ್ಯಾನ

ಮಾಡಬೇಕೆಂದು ಆಗ್ಗೆ ಅರ್ಥವಾಗುತ್ತಿತ್ತು, ಅಷ್ಟೇ ಹೊರತು ಆಕಾಶವೆಂಬ ಗುಣವುಳ್ಳ ಸುಖವನ್ನು ಧ್ಯಾನಮಾಡಬೇಕೆಂಬ ಅರ್ಥವೂ ಬರುತ್ತಿರಲಿಲ್ಲ. ಇಲ್ಲಿಯಾದರೊ, ಕಂ– ಖಂ–ಎಂಬ ಎರಡನ್ನೂ ಪರಸ್ಪರ ವಿಶೇಷಣವಿಶೇಷ್ಯಭಾವದಿಂದ ಅನ್ವಯಿಸಿಕೊಂಡು ಬ್ರಹ್ಮಚಿಂತನೆಯನ್ನು ಮಾಡಬೇಕೆಂಬುದೇ ವಿವಿಕ್ಷಿತವಾಗಿದೆ. ಆದ್ದರಿಂದ ಅಗ್ನಿದೇವತೆಗಳು ಹೇಳಿರುವ ವಾಕ್ಯವೇ ಸರ್ವಥಾ ಸಮಂಜಸವಾಗಿದೆ. ಇಂಥ ಅನಂತವೂ ಸುಖರೂಪವೂ ಆದ ಬ್ರಹ್ಮವೇ ಅಧ್ಯಾತ್ಮವಾಗಿ ಪ್ರಾಣವಾಗಿದೆ. ಒಟ್ಟಿನಲ್ಲಿ ಪ್ರಾಣನೆಂದರೂ ಸುಖವೆಂದರೂ ಆಕಾಶವೆಂದರೂ ಎಲ್ಲವೂ ಬ್ರಹ್ಮವೇ, ಹಾಗೆಂದು ತಿಳಿಯುವವನಾಗು–ಎಂದು ಅಗ್ನಿಗಳು ಹೇಳಿದ್ದಾರೆ. ಹೃದಯಾಕಾಶವು ಯಾವಾಗಲೂ ಬ್ರಹ್ಮೋಪಾಸನೆಗೆ ಮುಖ್ಯಸ್ಥಾನವು. ಪ್ರಾಣವೂ ಅದನ್ನೇ ಆಶ್ರಯಿಸಿಕೊಂಡಿರುವದು. ಈ ಹಾರ್ದಾಕಾಶಕ್ಕೆ ಸುಖವೆಂಬ ಗುಣವಿದೆ–ಎಂಬುದನ್ನೂ ತಿಳಿಯಬೇಕು. ಹೀಗೆ ಸುಖಗುಣವಿಶಿಷ್ಟವಾಗಿ ಹೃದಯಾಕಾಶ ದಲ್ಲಿ ಪ್ರಾಣರೂಪದಿಂದ ವಿರಾಜಮಾನವಾಗಿರುವ ಸಾಕ್ಷಾದಪರೋಕ್ಷವಾದ ಬ್ರಹ್ಮವನ್ನು ಚಿಂತಿಸುವವನು ಉತ್ತಮಬ್ರಹ್ಮೋಪಾಸಕನೆನಿಸುವನು.

---

## ಅಕ್ಷಿಪುರುಷನ ವಿದ್ಯೆ

ಓಮ್ ॥ ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತದ್ಯದ್ಯಪ್ಯಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ॥ 4–15–1.

ಭಾವಾರ್ಥಃ– ಕಣ್ಣಿನಲ್ಲಿ ಕಾಣಿಸುವ ಈ ಪುರುಷನಿದಾನಲ್ಲ; ಇವನೇ ಆತ್ಮನು; ಇದೇ ಅಮೃತವು; ಇದೇ ಅಭಯವು, ಇದೇ ಬ್ರಹ್ಮವು–ಎಂದನು. ಅಲ್ಲಿ ಇದರಲ್ಲಿ ಬೆಣ್ಣೆಯನ್ನಾಗಲಿ, ನೀರನ್ನಾಗಲಿ ಚಿಮುಕಿಸಿದರೂ ಕಡೆ(ಗಣ್ಣು)ಗಳಿಗೇ ಬಂದು ಸೇರುತ್ತದೆ.

(ಉಪಕೋಸಲನಿಗೆ ಗುರುಗಳು ಉಪದೇಶಿಸಿದ ಬ್ರಹ್ಮವಿದ್ಯೆಯನ್ನು ಇಲ್ಲಿ ತಿಳಿಸಿದೆ. ಮೊದಲು ದೇವತೆಗಳಿಂದ ಆತನು ಪಡೆದ ವಿದ್ಯೆಗೆ ಕಿರೀಟಪ್ರಾಯವಾಗಿ ಅಕ್ಷಿಪುರುಷನ ವಿದ್ಯೆಯನ್ನು ಅವರು ತಿಳಿಸಿದರು. ಪರಿಶುದ್ಧವಾದ ಉಪಾಧಿಯಾದ ಕಣ್ಣಿನಲ್ಲಿ ಕಂಡುಬರುವ ಇಂದ್ರಿಯಾನುಗ್ರಾಹಕನಾದ ಪುರುಷನೇ ಅಮೃತಾಭಯಬ್ರಹ್ಮವು–ಎಂದರ್ಥ)

## 30. ಉಪಕೋಸಲವಿದ್ಯೆ–2

ಅಗ್ನಿದೇವತೆಗಳು ಒಟ್ಟಾಗಿ ಉಪಕೋಸಲನಿಗೆ ಉಪದೇಶಮಾಡಿರುವ ಬ್ರಹ್ಮವಿದ್ಯೆಯನ್ನು ತಿಳಿಸಿದೆಯಷ್ಟೆ! ಇಲ್ಲಿ ವಿದ್ಯೆ–ಎಂದರೆ ಪ್ರಕರಣಕ್ಕೆ ಹೊಂದುವದಕ್ಕಾಗಿ ಉಪಾಸನೆಯೆಂದರ್ಥಮಾಡಬೇಕು. ಬ್ರಹ್ಮವನ್ನು ಇದ್ದದ್ದು ಇದ್ದಂತೆ ತಿಳಿಯಲಾರದವರಿ

ಗಾಗಿ ಅದೇ ಬ್ರಹ್ಮವನ್ನು ಉಪಾಧಿಸಹಿತವಾಗಿ ವಿವರಿಸಿ ಚಿಂತನೆಮಾಡುವಂತೆ ಶಾಸ್ತ್ರವು ವಿಧಿಸುವದನ್ನು ಉಪಾಸನೆ-ಎಂದು ಕರೆಯುವರು. ಪ್ರಕೃತ-ಉಪಕೋಸಲನಿಗೆ ಅಗ್ನಿದೇವತೆಗಳು ಈಗ ಒಬ್ಬೊಬ್ಬರಾಗಿ ತಮ್ಮ ತಮ್ಮ ವಿದ್ಯೆಯನ್ನು ಉಪದೇಶಿಸಲಾರಂಭಿಸಿದ್ದಾರೆ. ಅದರ ವಿವರವನ್ನು ತಿಳಿಯೋಣಃ

ಮೊದಲನೆಯದಾಗಿ ಗಾರ್ಹಪತ್ಯನೆಂಬ ಅಗ್ನಿದೇವತೆಯು ಉಪದೇಶ ಮಾಡಿದನು. ಗೃಹಪತಿಯ ಉಪಾಸ್ಯದೇವತೆಯು ಗಾರ್ಹಪತ್ಯನು. ಅಧಿಕಾರಿಯಾದ ಪ್ರತಿಯೊಬ್ಬ ಗೃಹಸ್ಥನೂ ವಿವಾಹಾನಂತರದಲ್ಲಿ ಗಾರ್ಹಪತ್ಯನೆಂಬ ಅಗ್ನಿಯನ್ನು ಇಟ್ಟುಕೊಂಡು ಪ್ರತಿದಿನವೂ ಅಗ್ನಿಹೋತ್ರವೆಂಬ ವೈದಿಕಕರ್ಮವನ್ನು ಮಾಡಬೇಕೆಂದು ಶಾಸ್ತ್ರವಿಧಿಯಿದೆ. ಆಚಾರ್ಯಗೃಹದಲ್ಲಿದ್ದ ಈ ಗಾರ್ಹಪತ್ಯನು ಪ್ರತ್ಯಕ್ಷನಾಗಿ ಉಪಕೋಸಲನನ್ನು ಕುರಿತು "ಅಯ್ಯ ಕೇಳು, ನನಗೆ ಭೂಮಿ, ಅಗ್ನಿ, ಆದಿತ್ಯ, ಅನ್ನ-ಎಂಬೀ ನಾಲ್ಕು ಶರೀರಗಳಿವೆ. ಹಾಗೂ ಆದಿತ್ಯನಲ್ಲಿರುವ ಪುರುಷನೇ ನಾನು; ಹೀಗೆಂದು ಉಪಾಸನೆಮಾಡುವವನಿಗೆ ಪೂರ್ಣಾಯುಷ್ಯವೂ ಹೆಸರುವಾಸಿಯಾದ ಜೀವನವೂ ಸಂತತಿಯ ಅಭಿವೃದ್ಧಿಯೂ ಉಂಟಾಗುವದು ಎಂದು ತಿಳಿಸಿಕೊಟ್ಟನು. ಅನಂತರ ಅನ್ವಾಹಾರ್ಯಪಚನನೆಂಬ ಹೆಸರಿನ ಅಗ್ನಿಯು ಉಪದೇಶ ಮಾಡಲಾರಂಭಿಸಿದನು. ಈತನನ್ನು ದಕ್ಷಿಣಾಗ್ನಿಯೆಂದೂ ಕರೆಯುವರು. "ಉಪಕೋಸಲನೆ, ಕೇಳು, ನೀರು, ದಿಕ್ಕುಗಳು, ನಕ್ಷತ್ರಗಳು, ಚಂದ್ರ-ಎಂಬಿವೇ ನನ್ನ ನಾಲ್ಕು ಶರೀರಗಳು. ನಾನು ಹೀಗೆ ನಾಲ್ಕು ರೀತಿಯಿಂದ ವಿಭಾಗಿಸಿಕೊಂಡಿರುವೆನು. ಚಂದ್ರನಲ್ಲಿ ಕಂಡುಬರುವ ಪುರುಷನೇ ನಾನು. ಹೀಗೆಂದು ಉಪಾಸನೆಮಾಡುವವನು ಹಿಂದಿನ ಫಲಗಳ ಜೊತೆಗೆ ಚಂದ್ರಲೋಕವನ್ನೂ ಪಡೆದುಕೊಳ್ಳುವನು" ಎಂದು ತಿಳಿಸಿದನು. ಅನಂತರ ಆಹವನೀಯಾಗ್ನಿಯು ಇವನನ್ನು ಕುರಿತು ಹೀಗೆಂದು ಉಪದೇಶಮಾಡಿದನುಃ "ಅಯ್ಯ, ಬ್ರಹ್ಮಚಾರಿಯೆ, ಕೇಳು; ಪ್ರಾಣ, ಆಕಾಶ, ದ್ಯುಲೋಕ, ವಿದ್ಯುತ್-ಎಂಬಿವು ನನ್ನ ನಾಲ್ಕು ಶರೀರಗಳು. ವಿದ್ಯುತ್ತಿನಲ್ಲಿ ಕಂಡು ಬರುವ ಪುರುಷನೇ ನಾನು. ಹೀಗೆಂದು ಉಪಾಸನೆಮಾಡುವವನು ಹಿಂದಿನಂತೆಯೇ ಫಲಗಳನ್ನು ಪಡೆದುಕೊಳ್ಳುವನಲ್ಲದೆ ವಿದ್ಯುಲ್ಲೋಕವನ್ನೂ ಹೊಂದುವನು"- ಎಂದು ವಿವರಿಸಿದನು. ಈ ರೀತಿಯಾಗಿ ತ್ರೇತಾಗ್ನಿಗಳಿಂದ ಉಪದೇಶವನ್ನು ಹೊಂದಿದ ಉಪಕೋಸಲನಿಗೆ ಕಡೆಯಲ್ಲಿ ಅಗ್ನಿಗಳು ಒಟ್ಟಾಗಿ ಹೇಳಿದ್ದೇನೆಂದರೆಃ "ಸೋಮ್ಯ, ಇದೇ ನಮ್ಮಗಳ ವಿದ್ಯೆ; ಹಾಗೂ ಆತ್ಮವಿದ್ಯೆಯೆಂದರೂ ಇದೇ. ಇನ್ನು ನಿನಗೆ ಮುಂದಿನ ವಿಚಾರವನ್ನು ಗುರುವೇ ಉಪದೇಶಿಸಲಿರುವನು" ಎಂದು ಹೇಳಿ ಸುಮ್ಮನಾದವು. ಹಿಂದೆ ಹೇಳಿದ ಪ್ರಾಣವೇ ಬ್ರಹ್ಮವು, ಕಂ ಬ್ರಹ್ಮವು, ಖಂ ಬ್ರಹ್ಮವು-ಎಂಬುದೇ ಆತ್ಮ ವಿದ್ಯೆಯು. ಆದರೆ ಈ ಎಲ್ಲಾ ವಿದ್ಯೆಗಳಿಗೂ ಗತಿಯನ್ನು ಉಪದೇಶ

ಮಾಡಬೇಕಾಗಿದೆ. ಅದನ್ನು ಆಚಾರ್ಯನೇ ನಿನಗೆ ಹೇಳಿಕೊಡಲಿರುವನು–ಎಂದೂ ಅಗ್ನಿದೇವತೆಗಳು ತಿಳಿಸಿದರು. ಉಪಾಸನೆಯಲ್ಲಿ ಗತಿಯನ್ನೂ ಧ್ಯಾನಮಾಡಬೇಕು. ಹಾಗಾದರೆ ಫಲವು ನಿಶ್ಚಯವಾಗಿ ಆಗುವದು. ಅದಕ್ಕಾಗಿ ಉಪಕೋಸಲನು ಆಚಾರ್ಯರ ಮನೆಯಲ್ಲಿಯೇ–ಅವರು ಪ್ರವಾಸದಿಂದ ಹಿಂದಿರುಗಿ ಬರುವವರೆಗೂ–ಕಾದುಕೊಂಡಿದ್ದನು. ಮುಂದೇನಾಯಿತೆಂಬುದನ್ನು ತಿಳಿಯೋಣ.

ಆಚಾರ್ಯನು ಮನೆಗೆ ಹಿಂದಿರುಗಿದ ಕೂಡಲೆ 'ಉಪಕೋಸಲನೆ' ಎಂದು ಕರೆದನು. 'ಪೂಜ್ಯರೆ, ಇಲ್ಲಿರುವೆನು' ಎಂದು ಶಿಷ್ಯನು ಉತ್ತರಿಸಿದನು. ಗುರುವು 'ನೀನು ಬ್ರಹ್ಮವಿದನಂತೆ ಕಂಡುಬರುತ್ತಿರುವೆ; ಏಕೆಂದರೆ ನಿನ್ನ ಮುಖವು ತೇಜಸ್ವಿಯಾಗಿದೆ, ನಿನಗೆ ಯಾರು ಬ್ರಹ್ಮೋಪದೇಶವನ್ನು ಮಾಡಿದರು?' ಎಂದು ಕೇಳಿದನು. ಆಗ ಅವನು 'ಸ್ವಾಮಿ, ನನಗೆ ಬೇರೆಯಾರು ತಾನೆ ಉಪದೇಶಮಾಡಿಯಾರು? ಇವೇ (ಅಗ್ನಿಗಳೇ)ನಿಜವಾಗಿ ಉಪದೇಶಮಾಡಿವೆ' ಎಂದನು. ಆಗ ಆಚಾರ್ಯನು 'ಏನನ್ನು ಉಪದೇಶಮಾಡಿವೆ, ಹೇಳು' ಎಂದನು. ಆಗ ಉಪಕೋಸಲನು ಅಗ್ನಿ ದೇವತೆಗಳು ಹೇಳಿಕೊಟ್ಟದ್ದನ್ನೆಲ್ಲ ಗುರುಗಳ ಬಳಿಯಲ್ಲಿ ಒಪ್ಪಿಸಿದನು. ಅನಂತರ ಗುರುಗಳು 'ಅಪ್ಪ, ನಿನಗೆ ಇವು ಲೋಕಗಳನ್ನು ಹೇಳಿರುತ್ತವೆ. ಆದರೆ ಪೂರ್ಣವಾಗಿ ಬ್ರಹ್ಮವನ್ನು ತಿಳಿಸಿರುವದಿಲ್ಲ. ಹೇಗೆಂದರೆ: ಬ್ರಹ್ಮಜ್ಞಾನದ ಮಹಿಮೆಯನ್ನು ಕೇಳು. ತಾವರೆಯ ಎಲೆಯು ನೀರಿನಲ್ಲಿದ್ದರೂ ಹೇಗೆ ಅದಕ್ಕೆ ನೀರು ಅಂಟಿಕೊಳ್ಳುವದಿಲ್ಲವೋ ಮತ್ತು ಅದು ಒದ್ದೆಯಾಗುವದಿಲ್ಲವೋ ಹಾಗೆ ಬ್ರಹ್ಮವನ್ನು ಅರಿತುಕೊಂಡವನಲ್ಲಿ ಪಾಪಗಳು ಅಂಟಿಕೊಳ್ಳುವದಿಲ್ಲ' ಎಂದನು. ಆಗ ಶಿಷ್ಯನು 'ಪೂಜ್ಯರೆ, ಆ ಬ್ರಹ್ಮತತ್ತ್ವವನ್ನು ಪೂರ್ಣವಾಗಿ ನನಗೆ ಉಪದೇಶಿಸಬೇಕು' ಎಂದು ಬೇಡಿಕೊಳ್ಳಲು ಆಚಾರ್ಯನು ಹೀಗೆ ಹೇಳಲಾರಂಭಿಸಿದನು.

'ಬ್ರಹ್ಮಚರ್ಯಾದಿಸಾಧನಸಂಪನ್ನರೂ ಇಂದ್ರಿಯಗಳನ್ನು ಪ್ರತ್ಯಾಹಾರಮಾಡಿಕೊಂಡು ಒಳಗೇ ನೋಡುವವರೂ ಶಾಂತರೂ ವಿವೇಕಿಗಳೂ ಆದ ಸಾಧಕರಿಗೆ ಕಣ್ಣಿನಲ್ಲಿ ಕಾಣುವ ದೃಷ್ಟಿಯ ದ್ರಷ್ಟೃವೂ, ಕಣ್ಣಿಗೇ ಕಣ್ಣೂ ಆಗಿರುವ ಈ ಪುರುಷನಿರುವನಲ್ಲ, ಅವನೇ ಅಮೃತವೂ ಅಭಯವೂ ಆದ ಬ್ರಹ್ಮವು–ಎಂದು ಆಚಾರ್ಯನು ನುಡಿಯಲಾಗಿ ಶಿಷ್ಯನು ಕೃತಕೃತ್ಯನಾದನು. ಇದೇ ಬ್ರಹ್ಮವಿದ್ಯೆಯ ಸಾರವು. ಈ ಅಕ್ಷಿಪುರುಷನನ್ನು ಕುರಿತು ಶ್ರುತಿಯು ಈಗ ತನ್ನ ವಿವರಣೆಯನ್ನು ತಿಳಿಸಲಿದೆ. ಹೇಗೆಂದರೆ ಕಣ್ಣು ಎಂಬುದು ಮನುಷ್ಯನ ಇಂದ್ರಿಯಗಳಲ್ಲಿ ಪ್ರಧಾನವಾದುದು. ಹಾಗೂ ಯಾವಾಗಲೂ ಸ್ವಚ್ಛವಾದುದು. ಅದರಲ್ಲಿ ಕಸವೇನಾದರೂ ಸೇರಿದ್ದೇ ಆದರೆ ಅದನ್ನು ಹೋಗಲಾಡಿಸುವ ವರೆಗೂ ಕಣ್ಣು ತನ್ನ ಕೆಲಸವನ್ನು ಮಾಡುವದಿಲ್ಲ. ಹೀಗೆ ಉಳಿದ ಇಂದ್ರಿಯಗಳಿಗಿಂತ ಇದು ಸ್ವಚ್ಛವೂ ಪರಿಶುದ್ಧವೂ ಆಗಿದೆ. ಇದಕ್ಕೆ ಯಾವ ಕೊಳೆ (Foreign Matter) ಯ ಸಂಪರ್ಕವೂ

ಇರುವಂತಿಲ್ಲ. ಏಕೆಂದರೆ ಇದು ಭಗವಂತನ ವಾಸಸ್ಥಾನವು. ಸ್ಥಾನಕ್ಕೇ ಇಷ್ಟು ಮಹಿಮೆಯಿರುವಲ್ಲಿ ಇನ್ನು ಈ ಸ್ಥಾನದಲ್ಲಿರುವ ಪುರುಷನ ಮಹಿಮೆಯನ್ನು ಹೇಳತಕ್ಕದ್ದೇನಿದೆ? ಆದ್ದರಿಂದಲೇ ಈ ಪುರುಷನನ್ನು ಅರಿತುಕೊಂಡವರಿಗೆ ಪಾಪಗಳ ಅಂಟಿಲ್ಲವೆಂದೂ ತಿಳಿಸಲಾಗಿದೆ. ಹೇಗೆ ಕಣ್ಣಿಗೆ ಸ್ವಲ್ಪ ನೀರನ್ನಾಗಲಿ, ಬೆಣ್ಣೆಯನ್ನಾಲಿ ಚಿಮುಕಿಸಿದರೆ ಅದು ಕಡೆಗಣ್ಣುಗಳಿಗೇ (ತುದಿಗೇ) ಬಂದುಬಿಡುವದು. ಕಣ್ಣಿನಲ್ಲಿ ನಿಲ್ಲುವದಿಲ್ಲ. ಇದೇ ಕಣ್ಣಿನ ಮಾಹಾತ್ಮ್ಯವು. ಇಂಥ ಸ್ಥಾನದಲ್ಲಿರುವ ಪರಿಶುದ್ಧನೂ ಇಂದ್ರಿಯಾನುಗ್ರಾಹಕನೂ ನಿತ್ಯನೂ ನಿರಂಜನನೂ ಸತ್ಯನೂ ಆದ ಪರಮಪುರುಷನೇ ಎಲ್ಲರ ಆತ್ಮನೆನಿಸಿರುವನು. ಇವನೇ ಅಮೃತಾಭಯನಾದ ಬ್ರಹ್ಮವು. ಇವನೇ ಎಲ್ಲಾ ದೇವತೆಗಳೊಡೆಯನು; ಹಾಗೂ ಲೋಕಗಳ, ಕಾಮಗಳ ಒಡೆಯನೂ ಆಗಿರುವನು–ಎಂದು ಶ್ರುತಿಯಲ್ಲಿ ವರ್ಣಿಸಿದೆ.

ಈಗ ಇದೇ ಅಕ್ಷಿಪುರುಷನ ಹೆಚ್ಚಿನ ಮಹಿಮೆಗಳನ್ನು ತಿಳಿಯೋಣ. ಇವನಿಗೆ ಸಂಯದ್ವಾಮನೆಂಬ ಹೆಸರಿದೆ. ವಾಮಾನಿ–ಎಂದರೆ ಕಾಮಗಳು ಎಂದರ್ಥ. ಎಲ್ಲಾ ಕಾಮಗಳೂ ಈತನನ್ನೇ ಬಂದು ಸೇರುತ್ತವೆಯಾದದ್ದಿಂದ ಈ ಹೆಸರು ಬಂದಿದೆ. ವಿಷ್ಣುಸಹಸ್ರನಾಮಸ್ತೋತ್ರದಲ್ಲಿ ಭಗವಂತನನ್ನು ಕಾಮಕೃತ್, ಕಾಮಪ್ರದ–ಎಂದೇ ಹೊಗಳಲಾಗಿದೆ. ಯಾರು ಈ ಕಾಮಗಳ ಪ್ರಭುವನ್ನು ಚಿಂತಿಸುವರೋ ಅಂಥವರ ಸಕಲ ಇಷ್ಟಾರ್ಥಗಳೂ ಕೈಗೂಡುವವು. ಹಾಗೆಯೇ ಈ ಪುರುಷನಿಗೆ 'ವಾಮನೀ' ಎಂಬ ಹೆಸರೂ ಇದೆ–ಎಂದು ಶ್ರುತಿಯು ತಿಳಿಸುತ್ತಿದೆ. ವಾಮಗಳೆಂದರೆ ಕಾಮಗಳೆಂದು ಪ್ರಸಿದ್ಧವಷ್ಟೆ. ಆಯಾ ಕರ್ತೃಗಳ ಕರ್ಮಗಳಿಗೆ ತಕ್ಕ ಫಲಗಳನ್ನು ಈತನೇ ಉಂಟುಮಾಡಿ ಪ್ರಾಣಿಗಳನ್ನು ತಮ್ಮ ತಮ್ಮ ಸುಖಾದಿಗಳಲ್ಲಿ ನೆಲೆಗೊಳ್ಳುವಂತೆಯೂ ಪಡೆದುಕೊಳ್ಳುವಂತೆಯೂ ಈತನೇ ಮಾಡುತ್ತಾನಾದ್ದರಿಂದ ವಾಮನಿಯೆನಿಸಿರುವನು. ಇದರಿಂದ ಕರ್ಮಗಳು ತಾವೇ ಸ್ವತಂತ್ರವಾಗಿ ಫಲವನ್ನು ಕೊಡಲಾರವೆಂದೂ ಫಲಪ್ರದನಾದ ಈಶ್ವರನು ಬೇರೆಯಾಗಿರಬೇಕೆಂದೂ ಸಿದ್ಧವಾಗುತ್ತದೆ. ಹೇಗೆ ಒಂದು ಅಂಗಡಿಗೆ ಹೋದರೆ ನಮ್ಮ ಹಣವನ್ನು ತೆಗೆದುಕೊಂಡು ನಮಗೆ ಬೇಕಾದ ಪದಾರ್ಥವನ್ನು ಕೊಡಲು ಒಬ್ಬನಿರುವನೋ, ಅವನು ಪದಾರ್ಥಗಳಿಗಿಂತ ಬೇರೆಯಾಗಿದ್ದು ಅವುಗಳ ಬೆಲೆಯನ್ನೂ ಇರುವಿಕೆಯನ್ನೂ ತಿಳಿದವನಾಗಿದ್ದು ಅವುಗಳ ಒಡೆಯನಾಗಿರುವನೋ, ಆದರೆ ಅಂಥವನಿಲ್ಲವಾದರೆ ವ್ಯಾಪಾರವೇ ನಡೆಯಲಾರದೋ ಹಾಗೆಯೇ ಪ್ರಾಣಿಗಳ ಜಗದ್ವ್ಯಾಪಾರವು ನಡೆಯಲು ಈಶ್ವರನೊಬ್ಬನು ಬೇಕೇ ಬೇಕು. ಆತನೇ ವಾಮನಿಯೆಂದು ಸ್ತುತಿಸಲ್ಪಟ್ಟಿರುವನು. ಇಂಥ ಸ್ವತಂತ್ರನೂ ಕರ್ಮಫಲದಾತನೂ ಆಗಿರುವ ಮಹಾಪುರುಷನೇ ಅಕ್ಷಿಯಲ್ಲಿಯೂ ಇದ್ದಾನೆ ಎಂದು ಚಿಂತಿಸಬೇಕು.

ಈಗ ಶ್ರುತಿಯು ಮುಂದುವರೆದು ಆ ಪುರುಷನ ಮಹಿಮೆಯನ್ನು ಮತ್ತಷ್ಟು ವಿವರಿಸುತ್ತಿದೆ. ಹೇಗೆಂದರೆ: ಈತನೇ ಭಾಮನಿಯೂ ಆಗಿದ್ದಾನೆ. ಭಾ ಎಂದರೆ ಪ್ರಕಾಶವು. ಎಲ್ಲಾ ಲೋಕಗಳಲ್ಲಿಯೂ ಸೂರ್ಯ, ಚಂದ್ರ, ಅಗ್ನಿ, ವಿದ್ಯುತ್, ನಕ್ಷತ್ರಾದಿಗಳ ರೂಪದಿಂದ ಬೆಳಗುತ್ತಿರುವವನು ಈತನೇ. ಇವನ ಬೆಳಕಿನಿಂದಲೇ ಎಲ್ಲವೂ ತೇಜೋಮಯವಾಗಿರುವವು. ಹೀಗೆ ಸೂರ್ಯಾದಿಗಳಿಗೆ ಬೆಳಕನ್ನು ನೀಡುವವನೂ ಒಳಗೆ ಅಂತರ್ಜ್ಯೋತಿಯಾಗಿ ಬೆಳಗುತ್ತಿರುವವನೂ ಈತನೇ. ಆದ್ದರಿಂದ ಭಾಮನಿಯೆನಿಸಿರುವನು. ಇವನನ್ನು ಈವರೆಗೆ ತಿಳಿಸಿದಂತೆ ಎಲ್ಲಾ ಗುಣವಿಶೇಷಗಳಿಂದಲೂ ಕೂಡ ಅಕ್ಷಿಸ್ಥಾನದಲ್ಲಿ ಯಾರು ಉಪಾಸನೆಮಾಡುವರೋ ಅಂಥ ಬ್ರಹ್ಮೋಪಾಸಕರು ಕ್ರಮಮುಕ್ತಿಯನ್ನೇ ಹೊಂದುವರು. ಉಳಿದ ಕರ್ಮಿಗಳಂತೆ ಫಲಭೋಗವು ಪೂರೈಸಿದ ಮೇಲೆ ಮತ್ತೆ ಸಂಸಾರಮಂಡಲಕ್ಕೆ ಹಿಂದಿರುಗುವದಿಲ್ಲ– ಎಂದು ಶ್ರುತಿಯಲ್ಲಿ ತಿಳಿಸಿರುತ್ತದೆ.

ಇಂಥ ಬ್ರಹ್ಮೋಪಾಸಕರ ಹೆಚ್ಚುಗಾರಿಕೆಯನ್ನು ಈಗ ತಿಳಿಸಲಾಗುವದು. ಸಾಮಾನ್ಯವಾಗಿ ಕರ್ಮಕಾಂಡದ ನಿಯಮದಂತೆ ಮೃತರಾದವರಿಗೆ ಶವಸಂಸ್ಕಾರವನ್ನು ಅಧಿಕಾರಿಗಳಾದ ಪುತ್ರಾದಿಗಳು ಮಾಡಬೇಕಾಗುವದು. ಇಲ್ಲವಾದರೆ ಅಂಥವರಿಗೆ ಸದ್ಗತಿಯು ದೊರೆಯುವದಿಲ್ಲ–ಎಂದು ಶಾಸ್ತ್ರಪ್ರಮಾಣದಿಂದ ತಿಳಿದುಬರುತ್ತದೆ. ಈ ಸಂಯದ್ವಾಮತ್ವಾದಿಗುಣವಿಶಿಷ್ಟವಾದ ಬ್ರಹ್ಮವನ್ನು ಉಪಾಸನೆಮಾಡಿದವರಿಗೆ– ಅವರ ಮರಣಾನಂತರ ಪುತ್ರಾದಿಗಳು ಅಂತ್ಯೇಷ್ಟಿಯನ್ನು ಮಾಡಲಿ, ಮಾಡದೆ ಇರಲಿ–ಅವರು ಸದ್ಗತಿಯನ್ನೇ ಪಡೆಯುತ್ತಾರೆ–ಎಂದು ವಿಶೇಷವಾಗಿ ತಿಳಿಸಿದೆ. ಏಕೆಂದರೆ ಉಪಾಸನೆಯ ಪ್ರಭಾವದಿಂದ ಅವರ ಪ್ರಯಾಣಮಾರ್ಗವು ಸಿದ್ಧವಾಗಿಬಿಟ್ಟಿರುವದು. ಇಂಥವರು ಶರೀರತ್ಯಾಗಮಾಡಿದ ಕೂಡಲೆ ಅಗ್ನಿಯ ಜ್ವಾಲೆಗಳ ಅಭಿಮಾನಿದೇವತೆಯನ್ನು ಸೇರುತ್ತಾರೆ. ಅನಂತರ ಅಹರ್ದೇವತೆ, ಶುಕ್ಲಪಕ್ಷದೇವತೆ, ಮಾಸಸಂವತ್ಸರದೇವತೆಗಳು, ಆದಿತ್ಯ, ಚಂದ್ರ, ವಿದ್ಯುತ್ ದೇವತೆಗಳನ್ನು ಕ್ರಮವಾಗಿ ಸೇರಿಬಿಡುವರು. ಅಲ್ಲಿರುವಾಗ ಒಬ್ಬ ದಿವ್ಯಪುರುಷನು ಬ್ರಹ್ಮಲೋಕದಿಂದ ಬಂದು ಇಂಥವರನ್ನೆಲ್ಲ ಒಯ್ದು ಹಿರಣ್ಯಗರ್ಭನ ಬಳಿಗೆ ಬಿಡುವನು. ಆ ಸತ್ಯಲೋಕದಲ್ಲಿ ಭೋಗವು ಪೂರೈಸುವವರೆಗೂ ಇದ್ದುಕೊಂಡವರಾಗಿ ಅನಂತರ ಅಲ್ಲಿಯ ಸನ್ನಿವೇಶ ವಿಶೇಷಗಳಿಂದ ಬ್ರಹ್ಮಜ್ಞಾನವನ್ನೇ ಪಡೆದುಕೊಂಡು ಬ್ರಹ್ಮನೊಡಗೂಡಿ ಕಲ್ಪಾಂತದಲ್ಲಿ ಮುಕ್ತರಾಗಿಬಿಡುವರು. ಇಂಥವರು ಸಂಸಾರಗತಿಗಳಿಗೆ ಮರಳಿ ಬರುವದಿಲ್ಲ. ಇದಕ್ಕೆ ಕ್ರಮಮುಕ್ತಿ ಎಂದು ಹೆಸರು. ಸತ್ಯಕಾಮರೆಂಬ ಆಚಾರ್ಯರು ಹೀಗೆ ಉಪದೇಶಿಸಿ ಉಪಕೋಸಲನನ್ನು ಕೃತಾರ್ಥನನ್ನಾಗಿ ಮಾಡಿರುತ್ತಾರೆ.

---

## ವ್ಯಾಹೃತಿಗಳ ಉತ್ಪತ್ತಿ

ಓಮ್ ॥ ಸ ಏತಾಂ ತ್ರಯೀವಿದ್ಯಾಮಭ್ಯತಪತ್ ತಸ್ಯಾಸ್ತಪ್ಯಮಾನಾಯಾ ರಸಾನ್ ಪ್ರಾವೃಹದ್ ಭೂರಿತಿ ಋಗ್ಭ್ಯೋ ಭುವರಿತಿ ಯಜುರ್ಭ್ಯಃ ಸ್ವರಿತಿ ಸಾಮಭ್ಯಃ॥ 4–17–3.

ಭಾವಾರ್ಥ:– ಅವನು ಈ ತ್ರಯೀವಿದ್ಯೆಯನ್ನು ಕುರಿತು ತಪಸ್ಸು ಮಾಡಿದನು. ತಪ್ಯಮಾನವಾದ ಅದರಿಂದ ಋಕ್ಕುಗಳಿಂದ ಭೂಃ ಎಂಬುದು, ಯಜುಸ್ಸುಗಳಿಂದ ಭುವಃ ಎಂಬುದು, ಸಾಮಗಳಿಂದ ಸ್ವಃ ಎಂಬುದು–(ಹೀಗೆ ಈ) ರಸಗಳನ್ನು ಈಚೆಗೆ ತೆಗೆದನು.

(ಭೂಃ, ಭುವಃ, ಸುವಃ–ಎಂಬಿವುಗಳನ್ನು ವ್ಯಾಹೃತಿಗಳೆನ್ನುವರು. ಇವು ಮೂರು ವೇದಗಳ ಸಾರವಾಗಿವೆ. ಪ್ರಜಾಪತಿಬ್ರಹ್ಮನು ಮೂರು ಲೋಕಗಳ ಸಾರವಾಗಿ ಮೂರು ವೇದಗಳನ್ನೂ ಅವುಗಳ ಸಾರವಾಗಿ ಮೂರು ವ್ಯಾಹೃತಿಗಳನ್ನೂ ಕಡೆದು ತೆಗೆದನು. ಇವು ಕರ್ಮಗಳಲ್ಲಿ ಸಂಭವಿಸುವ ಲೋಪಗಳನ್ನು ತುಂಬಿ ಪೂರ್ಣಮಾಡುವವು– ಎಂದಭಿಪ್ರಾಯ.)

## 31. ವ್ಯಾಹೃತಿಗಳ ಸಾರತಮತ್ವ

ಉಪಕೋಸಲವಿದ್ಯೆಯು ಪೂರೈಸಿದ ಅನಂತರ ಛಾಂದೋಗ್ಯೋಪನಿಷತ್ತಿನಲ್ಲಿ ಪ್ರಾಣವಿದ್ಯೆಯನ್ನು ತಿಳಿಸಲಾಗಿದೆ. ಇದಕ್ಕೆ ಮುಂಚೆ ಕರ್ಮಾಂಗಪ್ರಾಯಶ್ಚಿತ್ತವಾಗಿ ಮಾಡಬೇಕಾದ ವ್ಯಾಹೃತಿಹೋಮಗಳ ಪ್ರಸ್ತಾಪವಿದೆ. ವ್ಯಾಹೃತಿಗಳೆಂದರೇನು? ಅವು ಹೇಗೆ ಉತ್ಪತ್ತಿಯಾದವು? ಅವುಗಳ ಮಹಿಮೆಯೇನು? ಎಂಬುದನ್ನೂ ವಿವರಿಸಲಾಗಿದೆ. ಇವು ವೈದಿಕಕರ್ಮನಿಷ್ಠರಿಗೆ ಉಪಯುಕ್ತವಾದವುಗಳಾದರೂ ಉಳಿದವರೂ ಈ ವ್ಯಾಹೃತಿಗಳ ರಹಸ್ಯವನ್ನು ತಿಳಿದುಕೊಂಡು ಬ್ರಹ್ಮವಿದ್ಯೆಗೆ ಸಹಾಯವಾಗಿ ಉಪಯೋಗಿಸಿಕೊಳ್ಳಬಹುದಾಗಿದೆ. ಎಷ್ಟೋ ಜನರಿಗೆ ವ್ಯಾಹೃತಿಗಳೆಂದರೇನು? ಎಂಬುದೇ ತಿಳಿದಿರುವದಿಲ್ಲ. ಈಗಿನ ವಿದ್ಯಾಭ್ಯಾಸಕ್ರಮದಲ್ಲಿ ಪೌರಾಣಿಕವಿಷಯಗಳ ಅಧ್ಯಯನಕ್ಕೆ ಅವಕಾಶವಿಲ್ಲವಾಗಿದ್ದು ತಿಂಗಳು, ತಿಥಿ, (ದಿನ)ವಾರ, ನಕ್ಷತ್ರ, ಸಂವತ್ಸರಗಳು, ಲೋಕಗಳು, ದ್ವೀಪಗಳು, ಋಷಿಗಳು, ಗ್ರಹಗಳು–ಮುಂತಾದವುಗಳ ಹೆಸರುಕೂಡ ಮಕ್ಕಳಿಗೆ ತಿಳಿದಿಲ್ಲವಾಗಿದೆ. 'ಮಗ್ಗಿಪುಸ್ತಕ'ದಲ್ಲಿ ಕೆಲವು ವಿವರಗಳೇನೂ ಉಳಿದಿವೆ. ಆದರೆ ಬಾಲಕರ ಬಾಯಲ್ಲಿ ಅವು ಉಳಿದಿಲ್ಲ. ಇರಲಿ; ಇನ್ನು ವ್ಯಾಹೃತಿಗಳ ವಿಷಯವಂತೂ ಸಾಮಾನ್ಯವಾಗಿ ಎಲ್ಲರಿಗೂ ಅಪರಿಚಿತವೇ ಆಗಿದೆ. ಆದ್ದರಿಂದ ಪ್ರಾಸಂಗಿಕವಾಗಿ ಒದಗಿರುವ ಈ ವ್ಯಾಹೃತಿಗಳ ವಿಷಯಕ್ಕೆ ಸ್ವಲ್ಪ ಪರಿಚಯವನ್ನು ಮಾಡಿಕೊಳ್ಳೋಣ.

ವ್ಯಾಹೃತಿಗಳ ಉತ್ಪತ್ತಿಯ ವಿಷಯಕ್ಕೆ ಒಂದು ಉಪಾಖ್ಯಾನವನ್ನು ಉಪನಿಷತ್ತಿನಲ್ಲಿ ತಿಳಿಸಿದೆ. ಒಮ್ಮೆ ಪ್ರಜಾಪತಿಬ್ರಹ್ಮನು ಪೃಥಿವೀ, ಅಂತರಿಕ್ಷ, ದ್ಯುಲೋಕಗಳೆಂಬ ಮೂರು ಲೋಕಗಳನ್ನು ಕುರಿತು ತಪಸ್ಸುಮಾಡಿದನು–ಎಂದರೆ ಈ ಲೋಕಗಳ ಸಾರವೇನೆಂಬುದನ್ನು ಕಂಡುಹಿಡಿಯಬೇಕೆಂಬ ಇಚ್ಛೆಯಿಂದ ಧ್ಯಾನಮಾಡಲಾರಂಭಿಸಿದನು. ಹಾಗೆ ಧ್ಯಾನಮಾಡುವಾಗ ಅವನಿಗೆ ಪೃಥಿವಿಯ ಸಾರವೇ ಅಗ್ನಿಯೆಂದು ಅಂತರಿಕ್ಷದ ಸಾರವೇ ವಾಯುವೆಂದು ದ್ಯುಲೋಕದ ಸಾರವೇ ಆದಿತ್ಯನೆಂದೂ ತಿಳಿದುಬಂದಿತು. ಆಗ ಅವನು ಮತ್ತೆ ಈ ಮೂರು ದೇವತೆಗಳನ್ನೂ ಕುರಿತು ತಪಸ್ಸುಮಾಡಿದನು. ಆಗ ಅಗ್ನಿಯ ಸಾರವಾಗಿ ಋಕ್ಕು, ವಾಯುವಿನ ಸಾರವಾಗಿ ಯಜುಸ್ಸು, ಆದಿತ್ಯನ ಸಾರವಾಗಿ ಸಾಮ, ಹೀಗೆ ರಸಗಳನ್ನು ಈಚೆಗೆ ತೆಗೆದನು. ಅನಂತರ ಮುಂದುವರೆದು ಈ ವೇದತ್ರಯಗಳನ್ನೂ ಸಾರಗ್ರಹಣದೃಷ್ಟಿಯಿಂದ ಚಿಂತಿಸಲಾಗಿ ಋಕ್ಕಿನ ಸಾರವಾಗಿ ಭೂಃ ಎಂಬುದೂ ಯಜುಸ್ಸಿನ ಸಾರವಾಗಿ ಭುವಃ ಎಂಬುದೂ ಸಾಮದ ಸಾರವಾಗಿ ಸುವಃ ಎಂಬುದೂ ಹೊರಬಂದವು. ಹೀಗೆ ಲೋಕಗಳು, ದೇವತೆಗಳು, ವೇದಗಳ ಸಾರವಾಗಿ ಹೊರಬಂದ 'ಭೂರ್ಭುವಸ್ಸುವಃ' ಎಂಬಿವು ಮಹಾವ್ಯಾಹೃತಿಗಳೆಂದು ಪ್ರಸಿದ್ಧವಾದವು.

ಹೀಗೆ ಉಪನಿಷತ್ತಿನಲ್ಲಿ ವ್ಯಾಹೃತಿಗಳ ಉತ್ಪತ್ತಿಯನ್ನು ಕುರಿತು ತಿಳಿಸಿ ಅನಂತರ ಇವುಗಳಿಗೆ ಕರ್ಮಕಾಂಡದ ದೃಷ್ಟಿಯಿಂದ ವಿನಿಯೋಗವನ್ನೂ ಹೇಳಲಾಗಿದೆ. ಹೇಗೆಂದರೆ ಯಜ್ಞದಲ್ಲಿ ಹೋತೃ, ಅಧ್ವರ್ಯು, ಉದ್ಗಾತೃ–ಎಂಬ ಋತ್ವಿಜರುಗಳಿರುತ್ತಾರೆ. ಇವರ ಕರ್ಮಗಳನ್ನು ನೋಡುವದಕ್ಕೆ–ಎಂದರೆ ಲೋಪದೋಷಗಳಾಗದಂತೆ ನಡುನಡುವೆ ತಿದ್ದಿ ಸರಿಪಡಿಸಿ ಹೇಳುವದಕ್ಕೆ ಹಾಗೂ ಇವರುಗಳು ಮಾಡಬೇಕಾದ ಕರ್ತವ್ಯಗಳಿಗೆ ಅನುಮತಿಯನ್ನು ನೀಡುವದಕ್ಕೆ ಬ್ರಹ್ಮನೆಂಬ ಋತ್ವಿಜನೂ ಇರುತ್ತಾನೆ. ಈತನನ್ನು ಆಟದ ತೀರ್ಮಾನವನ್ನು ನೀಡುವ 'ಅಂಪೈರ್' ಎಂಬವನಿಗೆ ಹೋಲಿಸಬಹುದು. ಹೇಗೆ ಅಂಪೈರನು ತಾನು ಆಟದಲ್ಲಿ ಸೇರದೆ, ಆದರೆ ಆಟವನ್ನೆಲ್ಲ ನೋಡುತ್ತಾ ಆಗಾಗ್ಗೆ ತೀರ್ಮಾನಗಳನ್ನು ನೀಡುವನೋ ಮತ್ತು ತಾನು ಯಾರೊಡನೆಯೂ ಮಾತನಾಡದೆ ಏಕಾಗ್ರತೆಯಿಂದ ಆಟವನ್ನು ವೀಕ್ಷಿಸುವನೋ ಹಾಗೆಯೇ ಬ್ರಹ್ಮನೂ ಋತ್ವಿಗ್ಯಜಮಾನರುಗಳ ವ್ಯಾಪಾರಗಳನ್ನೆಲ್ಲ ನೋಡುತ್ತಾ ಉಪದ್ರಷ್ಟನೆನಿಸಿ ಮೌನದಿಂದ ಕುಳಿತಿರಬೇಕು. ಇವನಿಗೆ ಎಲ್ಲಾ ಋತ್ವಿಜರ ಕರ್ಮಗಳ ರಹಸ್ಯವೂ ತಿಳಿದಿರಬೇಕು. ಬ್ರಹ್ಮನ್ನು ಹೀಗಿಲ್ಲವಾದರೆ ಯಜ್ಞವು ರೇಷ(ಹಾಳು) ಆಗುವದು. ಯಜ್ಞವು ಹಾಳಾದರೆ ಯಜಮಾನನೂ ಹಾಳಾಗುವನು. ಆದ್ದರಿಂದ ಯಜ್ಞದಲ್ಲಿ ಕೆಲವು ಕಾಲ ಬ್ರಹ್ಮನು ಮೌನವಾಗಿರಬೇಕು. ಆದರೂ ಮನುಷ್ಯಸ್ವಭಾವದಿಂದ ಆ ಬ್ರಹ್ಮನೇನಾದರೂ ಮೌನವನ್ನು ಕಳೆದುಕೊಂಡರೆ, ಹಾಗೆಯೇ ಋತ್ವಿಜರುಗಳು ಪ್ರಮಾದದಿಂದ ಏನಾದರೂ ಕರ್ಮಲೋಪ, ಮಂತ್ರಲೋಪಾದಿಗಳನ್ನು ಮಾಡಿಬಿಟ್ಟರೆ ಆಗ ಪ್ರಾಯಶ್ಚಿತ್ತವಾಗ

ಬೇಕಾಗುವದು. ಅಂಥ ಸಂದರ್ಭಗಳಲ್ಲಿ ಈ ಮಹಾವ್ಯಾಹೃತಿಗಳಿಂದ ಪ್ರಾಯಶ್ಚಿತ್ತ ಹೋಮಗಳನ್ನು ಬಲ್ಲವರು ನಡೆಯಿಸುತ್ತಾರೆ. ಇದೇ ಕರ್ಮಾಂಗವಾಗಿ ವ್ಯಾಹೃತಿಗಳಿಗೆ ವಿನಿಯೋಗವು. ಈಗಲೂ ಯಾವದೇ ವೈದಿಕಕರ್ಮಗಳನ್ನು ಮಾಡಿದಾಗಲೂ ಕಡೆಯಲ್ಲಿ ಕೆಲವು ಪ್ರಾಯಶ್ಚಿತ್ತಾಹುತಿಗಳನ್ನು ಅರ್ಪಿಸುತ್ತಾರೆ. ಅದು ಸಾಲದು–ಎಂಬಂತೆ ಕಟ್ಟಕಡೆಯಲ್ಲಿ ಈ ವ್ಯಾಹೃತಿಗಳಿಂದಲೂ ಹೋಮಮಾಡುತ್ತಾರೆ. ಉದಾಹರಣೆಗೆ ಪ್ರಾಯಶ್ಚಿತ್ತಹೋಮದ ಒಂದು ಮಂತ್ರವನ್ನು ಕೇಳಿರಿ:–

**ಯದ್ವಿದ್ವಾಗ್ಂಸೋ ಯದವಿದ್ವಾಗ್ಂಸೋ ಮುಗ್ಧಾಃ ಕುರ್ವಂತ್ಯೃತ್ವಿಜಃ।**
**ಅಗ್ನಿರ್ಮಾ ತಸ್ಮಾದೇನಸಃ ಶ್ರದ್ಧಾದೇವೀ ಚ ಮುಂಚತಾಮ್ ॥**

'ಋತ್ವಿಜರು ತಿಳಿದೂ, ತಿಳಿಯದೆಯೊ, ಮೈಮರೆತು ಏನಾದರೂ ತಪ್ಪುಗಳನ್ನು ಮಾಡಿರುತ್ತಾರಷ್ಟೆ! ಈ ಪಾಪದಿಂದ ಅಗ್ನಿದೇವನೂ, ಶ್ರದ್ಧಾದೇವಿಯೂ ನನ್ನನ್ನು ಬಿಡುಗಡೆಮಾಡಲಿ' ಎಂದು ಈ ಮಂತ್ರದ ಅರ್ಥವು. ಆದ್ದರಿಂದ ಪ್ರಾಯಶ್ಚಿತ್ತಕ್ಕಾಗಿಯೇ ವಿಧಿಸಲ್ಪಟ್ಟಿರುವ ಇಂಥ ಮಂತ್ರಗಳಿಂದ ಹೋಮಮಾಡಿದ ಮೇಲೂ ಕಡ್ಡಾಯವಾಗಿ ವ್ಯಾಹೃತಿಹೋಮಗಳನ್ನು ಮಾಡಬೇಕೆಂದು ಹೇಳಿರುವದರಿಂದ ವ್ಯಾಹೃತಿಗಳ ಮಹತ್ತ್ವವು ಎಷ್ಟು–ಎಂಬಿದು ವ್ಯಕ್ತವಾಗುತ್ತದೆ.

ಈಗ ತೈತ್ತಿರೀಯೋಪನಿಷತ್ತಿನಲ್ಲಿಯೂ ಈ ವ್ಯಾಹೃತಿಗಳ ವಿಷಯಕ್ಕೆ ಕೊಟ್ಟಿರುವ ವಿಚಾರಗಳನ್ನು ಮನನಮಾಡೋಣ. ಅಲ್ಲಿ 'ಮಹಃ' ಎಂಬ ಮತ್ತೊಂದು ವ್ಯಾಹೃತಿಯ ವಿಚಾರವನ್ನು ಪ್ರಸ್ತಾಪಿಸಿ ಅದು ಬ್ರಹ್ಮವೇ–ಎಂದು ಉಪಾಸನೆಮಾಡಬೇಕೆಂದು ಹೇಳುವ ಸಂದರ್ಭದಲ್ಲಿ ಈ ಮೂರು ವ್ಯಾಹೃತಿಗಳನ್ನೂ ಪರಾಮರ್ಶಿಸಿರುತ್ತದೆ. ಭಾಷ್ಯಕಾರರು ಅಲ್ಲಿಯೂ ಈ ಛಾಂದೋಗ್ಯೋಪನಿಷತ್ತಿನ ವ್ಯಾಹೃತಿಗಳ ವಿಷಯವನ್ನು ಸೂಚಿಸಿರುತ್ತಾರೆ. ಅದು ಉಪಾಸನಾಪ್ರಕರಣವಾಗಿದ್ದು ಒಂದೊಂದೇ ವ್ಯಾಹೃತಿಗಳನ್ನು ಉಪಾಸನೆ ಮಾಡಬಹುದೆಂದೂ ಭೂಃ ಎಂಬುದನ್ನು ಉಪಾಸನೆಮಾಡಿದರೆ ಅಗ್ನಿದೇವತಾ ಸಾಯುಜ್ಯವೂ ಭುವಃ ಎಂಬಿದನ್ನು ಉಪಾಸನೆಮಾಡಿದರೆ ವಾಯುದೇವತಾ ಸಾಯುಜ್ಯವೂ ಸುವಃ ಎಂಬಿದನ್ನು ಉಪಾಸನೆಮಾಡಿದರೆ ಆದಿತ್ಯದೇವತಾಸಾಯುಜ್ಯವೂ ದೊರಕುವ ದೆಂದೂ ತಿಳಿಸಿರುತ್ತದೆ. ಮುಂದುವರೆದು ಮಹಃ ಎಂಬುದರ ಉಪಾಸನೆಯಿಂದ ಅಪರಬ್ರಹ್ಮ(ಹಿರಣ್ಯಗರ್ಭ) ದೇವತೆಯ ಸಾಯುಜ್ಯಪ್ರಾಪ್ತಿಯಾಗುವದೆಂದು ತಿಳಿಸಿದೆ. ಹೀಗೆ ಕರ್ಮೋಪಾಸನೆಗಳೆರಡರಲ್ಲಿಯೂ ವಿನಿಯುಕ್ತವಾಗಿರುವ ಈ ಮಹಾವ್ಯಾಹೃತಿಗಳ ವಿಜ್ಞಾನವೂ ವಿಚಾರವೂ ಮುಮುಕ್ಷುಗಳಿಗೆ ಲಾಭಕರವಾಗಿರುತ್ತದೆ.

ಈಗ ಈ ವ್ಯಾಹೃತಿಹೋಮಗಳ ವಿನಿಯೋಗ ಹಾಗೂ ಫಲಗಳನ್ನು ವಿಚಾರ ಮಾಡೋಣ. ಯಜ್ಞದಲ್ಲಿ ಹೋತೃ–ಎಂಬ ಋತ್ವಿಜನು ಋಗ್ವೇದಮಂತ್ರಗಳಿಂದ

ದೇವತೆಯನ್ನು ಸ್ತೋತ್ರಮಾಡುತ್ತಿರುತ್ತಾನೆ. ಅವನೇನಾದರೂ ಸ್ವರ–ವರ್ಣ–ಉಚ್ಚಾರಣಾದಿಗಳಲ್ಲಿ ತಪ್ಪಿದರೆ, ಅಥವಾ ಮಂತ್ರೋಚ್ಚಾರಣೆಯ ಕಾಲದಲ್ಲಿ ಆಕಳಿಕೆ, ತೂಕಡಿಕೆ–ಇತ್ಯಾದಿಗಳಿಂದ ಭಂಗವುಂಟಾದರೆ, ಅಥವಾ ಯಾವದಾದರೂ ಪ್ರಾಣಿಗಳ ಕಿರುಚಾಟ, ಗುಡುಗುಸಿಡಿಲುಗಳ ಆರ್ಭಟ–ಇತ್ಯಾದಿ ಯಾವದೇ ರೀತಿಯ ಅಡ್ಡಿಗಳು ಸಂಭವಿಸಿದರೂ ಅಂಥ ಸಂದರ್ಭದಲ್ಲಿ ಕರ್ಮಲೋಪಪ್ರಾಯಶ್ಚಿತ್ತವಾಗಿ 'ಭೂಃ' ಎಂಬ ವ್ಯಾಹೃತಿಯಿಂದ ಸ್ವಾಹಾಕಾರವನ್ನು ಸೇರಿಸಿಕೊಂಡು ಹೋಮಮಾಡಬೇಕು. ಇದರಿಂದ ಕರ್ಮಚ್ಛಿದ್ರವನ್ನು ಬೆಸುಗೆಮಾಡಿದಂತಾಗುವದು. ಇದೇ ರೀತಿಯಾಗಿ ಅಧ್ವರ್ಯುವು ದೇವತೆಗಳಿಗೆ ಆಹುತಿಗಳನ್ನು ನೀಡುವಾಗ ಸಂಭವಿಸುವ ಲೋಪಗಳು, ಹಾಗೆಯೇ ಉದ್ಗಾತೃವು ಸಾಮಗಾನ ಮಾಡುವಾಗ ಉಂಟಾಗಬಹುದಾದ ಪ್ರಮಾದಗಳು–ಇವುಗಳಿಂದ ಬಿಡುಗಡೆಯನ್ನು ಹೊಂದುವದಕ್ಕಾಗಿ ಭುವಃ, ಸುವಃ–ಎಂಬ ವ್ಯಾಹೃತಿಹೋಮಗಳನ್ನು ಆಚರಿಸಬೇಕು. ಕಡೆಗೆ ಸರ್ವಪ್ರಾಯಶ್ಚಿತ್ತರೂಪವಾಗಿ 'ಭೂರ್ಭುವಸ್ಸುವಃ ಸ್ವಾಹಾ' ಎಂದು ಒಟ್ಟಿಗೆ ಹೋಮಮಾಡಬೇಕು.

ಹೀಗೆ ಕರ್ಮಾಂಗವಾಗಿ ವ್ಯಾಹೃತಿಹೋಮಗಳ ವಿಚಾರವನ್ನು ತಿಳಿಸುವ ಮೂಲಕ ವ್ಯಾಹೃತಿಗಳ ಮಹತ್ತ್ವವನ್ನು ಉಪನಿಷತ್ತಿನಲ್ಲಿ ತಿಳಿಸಿರುವದೇನೋ ಸರಿ. ಆದರೆ ಈಗಿನ ಕಾಲಕ್ಕೆ ಯಜ್ಞಯಾಗಾದಿಗಳೂ ಸಂಸ್ಕಾರರೂಪವಾದ ಸ್ಮಾರ್ತಕರ್ಮಗಳೂ ಅಪರೂಪವಾಗಿಬಿಟ್ಟಿವೆ. ಅಲ್ಲದೆ ಎಲ್ಲರೂ ಯಜ್ಞಕರ್ಮಗಳನ್ನೇನೂ ಮಾಡುವದಿಲ್ಲ. ಆದ್ದರಿಂದ ವ್ಯಾಪಕವಾಗಿ ಸರ್ವರಿಗೂ ಅನ್ವಯಿಸುವಂತೆ ವ್ಯಾಹೃತಿಗಳ ರೂಪಾಂತರವಾದ ಭಗವನ್ನಾಮಗಳನ್ನೇ ಕಲಿಯುಗದಲ್ಲಿ ಕರ್ಮಗಳ ಸಾದ್ಗುಣ್ಯತೆಗೂ ಲೋಪದೋಷ ಪ್ರಾಯಶ್ಚಿತ್ತಗಳಿಗೂ ಬಳಸುವ ಕ್ರಮವನ್ನು ಋಷಿಗಳು ಜಾರಿಗೆ ತಂದಿರುತ್ತಾರೆ. ಮೂರು ವ್ಯಾಹೃತಿಗಳ ಸ್ಥಾನದಲ್ಲಿ ಭಗವಂತನ ಮೂರು ದಿವ್ಯನಾಮಗಳನ್ನು ಈಗಲೂ ವೈದಿಕರೂ ಇತರರೂ ಬಳಸುತ್ತಿದ್ದಾರೆ. **ಅಚ್ಯುತ–ಅನಂತ–ಗೋವಿಂದ**–ಎಂಬಿವೇ ಈ ನಾಮಗಳು. ಇವುಗಳು ವ್ಯಾಹೃತಿಗಳಿಗೆ ಸರಿಸಮಾನವಾದ ಶಕ್ತಿಯುಳ್ಳವುಗಳಾಗಿವೆ. ಸ್ತ್ರೀಯರು, ವರ್ಣಾಶ್ರಮಧರ್ಮಬಾಹಿರರು, ವಿದೇಶೀಯರು, ಪತಿತರು, ದುರಾಚಾರಿಗಳು–ಯಾರೇ ಆಗಿದ್ದರೂ ಈ ನಾಮಗಳ ಜಪದಿಂದ ಕರ್ಮಬಂಧಗಳನ್ನೂ ನ್ಯೂನಾತಿರೇಕಗಳನ್ನೂ ದಾಟಬಹುದಾಗಿದೆ. ಪ್ರಯೋಜನವು ಮುಖ್ಯವೇ ಹೊರತು ಇಂಥದ್ದೇ ಮಂತ್ರ ಅಥವಾ ನಾಮಗಳು ಬೇಕೆಂದು ನಾವು ಹಟಮಾಡಬಾರದು. ಅಥವಾ ವ್ಯಾಹೃತಿಗಳು ಹೆಚ್ಚು, ಪೌರಾಣಿಕನಾಮಗಳು ಕೀಳು–ಎಂದೂ ಎಣಿಸಬಾರದು. ನಾವು ಹೇಗೆಯೇ ಉಚ್ಚರಿಸಲಿ, ಏನನ್ನೇ ಹೇಳಲಿ, ಅದು ಭಗವಂತನಿಗೆ ತಲುಪುವಂತಿದ್ದರೆ ಸಾಕು. ಈ ಅಭಿಪ್ರಾಯದಂತೆ

ವ್ಯಾಹೃತಿಗಳಿಗಿಂತಲೂ ನಾಮಗಳು ಜನರಿಗೆ ಹೆಚ್ಚು ಉಪಯುಕ್ತವಾಗಿವೆ–ಎಂದು ಧಾರಾಳವಾಗಿ ಹೇಳಬಹುದು.

ಈಗ ನಾಮತ್ರಯಗಳ ಅರ್ಥವನ್ನು ಅನುಸಂಧಾನಮಾಡೋಣ. ಅಚ್ಯುತ–ಎಂದರೆ ಎಂದೆಂದಿಗೂ ತನ್ನ ಸ್ಥಾನ, ಮಹಿಮೆ, ಯೋಗ್ಯತೆ, ಗುಣಸಮೂಹಗಳಿಂದ ಜಾರದೆ ಇದ್ದಂತೆಯೇ ಇರುವವನು–ಎಂದರ್ಥ. ಅನಂತ ಎಂದರೆ ಮುಗಿಯಲಾರದ ಗುಣವಿಶೇಷಗಳೂ ಸಿದ್ಧಿಗಳೂ ಐಶ್ವರ್ಯಾದಿಗಳೂ ಉಳ್ಳವನು ಎಂದರ್ಥ. ಗೋವಿಂದನೆಂದರೆ ಭೂಮಿಯನ್ನು ಉದ್ಧಾರಮಾಡಿದವನು, ಅಥವಾ ವೇದಗಳು, ಗೋವುಗಳು, ಬ್ರಾಹ್ಮಣರೇ ಮುಂತಾದ ಸಾತ್ತ್ವಿಕಜೀವರುಗಳನ್ನು ಕಾಪಾಡುವ ಮೂಲಕ ಜಗತ್ತನ್ನೆಲ್ಲ ರಕ್ಷಿಸುತ್ತಿರುವ ಭಗವಂತನು–ಎಂದರ್ಥ. ಇಂಥ ನಾಮಗಳು ಕುಪ್ಪಿಗೆಯ ಮಾತ್ರೆಗಳಂತೆ ಎಲ್ಲಾ ಸಂಸಾರಿಕಸಮಸ್ಯೆಗಳ ಪರಿಹಾರಕ್ಕೂ ಪರಮಪುರುಷಾರ್ಥ ಪ್ರಾಪ್ತಿಗೂ ಶಕ್ತವಾಗಿರುವವು. ಆದ್ದರಿಂದ ಪ್ರತಿಯೊಬ್ಬ ಸಾಧಕನೂ ತನ್ನ ಯೋಗ್ಯತಾನುಸಾರವಾಗಿ ವ್ಯಾಹೃತಿಗಳನ್ನಾಗಲಿ, ಭಗವನ್ನಾಮಗಳನ್ನಾಗಲಿ ಬಳಸಿಕೊಂಡು ತನ್ನ ಕರ್ಮಲೋಪಗಳನ್ನು ಸರಿಪಡಿಸಿಕೊಂಡು ಭಗವದನುಗ್ರಹಕ್ಕೆ ಪಾತ್ರನಾಗಲು ಪ್ರಯತ್ನಿಸಬೇಕು.



# ಐದನೆಯ ಅಧ್ಯಾಯ

## (ಪ್ರಾಣವಿದ್ಯೆ–ಪಂಚಾಗ್ನಿವಿದ್ಯೆ–ವೈಶ್ವಾನರ ವಿದ್ಯೆ)

**ಓಮ್ ॥ ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ಜ್ಯೇಷ್ಠಶ್ಚ ಹ ವೈ ಶ್ರೇಷ್ಠಶ್ಚ ಭವತಿ ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ ॥ 5–1–1.**

**ಭಾವಾರ್ಥ:–** ಯಾವನು ಜ್ಯೇಷ್ಠನೂ ಶ್ರೇಷ್ಠನೂ (ಆಗಿರುವದನ್ನು) ಅರಿತಿರುವನೋ ಅವನು ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ. ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ ಆಗಿರುತ್ತದೆ.

(ಜೀವ, ಪ್ರಾಣ– ಎಂಬ ಶಬ್ದಗಳಿಂದ ನಾವು ಕರೆಯುವ ಉಪಾಧಿವಿಶಿಷ್ಟಚೈತನ್ಯವನ್ನು ಸಗುಣೋಪಾಸನೆಯ ಪ್ರಕರಣದಲ್ಲಿ 'ಮುಖ್ಯಪ್ರಾಣ' ನೆಂದು ಹೊಗಳಿ ಅವನಿಗೆ ಜ್ಯೇಷ್ಠತ್ವ ಶ್ರೇಷ್ಠತ್ವಾದಿಗುಣಗಳನ್ನು ವಿಧಿಸಿರುತ್ತದೆ. ಈ ಉಪಾಸನೆಯು ಸಾಧಕನಿಗೂ ಜ್ಯೇಷ್ಠತ್ವಾದಿಗುಣಗಳನ್ನು ತಂದುಕೊಡುವದೆಂದು ಅಭಿಪ್ರಾಯ.)

## 32. ಪ್ರಾಣನಲ್ಲಿರುವ ಜ್ಯೇಷ್ಠತ್ವಾದಿಗುಣಗಳು

ಛಾಂದೋಗ್ಯೋಪನಿಷತ್ತು ಈಗ ಪ್ರಾಣವಿದ್ಯೆಯನ್ನು ತಿಳಿಸಲು ಆರಂಭಿಸಿದೆ. ಪ್ರಾಣವಿಜ್ಞಾನವು ಬ್ರಹ್ಮವಿಜ್ಞಾನಕ್ಕೆ ಏರುವ ಕೊನೆಯ ಮೆಟ್ಟಿಲಾಗಿರುತ್ತದೆ. ಆದ್ದರಿಂದ ಈ ಪ್ರಾಣೋಪಾಸನೆಯನ್ನು ಅರಿತುಕೊಂಡು ಅನುಷ್ಠಾನಮಾಡುವವನು ಕೂಡ ಉತ್ತರಾಯಣಗತಿಯಿಂದ ಬ್ರಹ್ಮಲೋಕ (ವಾಯುಲೋಕ)ವನ್ನೇ ಸೇರುತ್ತಾನೆ. ಹಿರಣ್ಯ ಗರ್ಭನೆಂದರೂ ಪ್ರಾಣನೆಂದರೂ ಒಂದೇ ತತ್ತ್ವವು. ಕ್ರಿಯಾಶಕ್ತಿಪ್ರಧಾನವಾಗಿ ವ್ಯವಹರಿಸುವಾಗ ಪ್ರಾಣ, ವಾಯು, ಜೀವೋತ್ತಮ–ಮುಂತಾದ ಹೆಸರುಗಳು ಬಳಸಲ್ಪಡುತ್ತವೆ. ಮಾಧ್ವಮತಾನುಯಾಯಿಗಳ ಪ್ರಕಾರವೂ ವಾಯುವು ಜೀವೋತ್ತಮನೇ ಹೊರತು ಸರ್ವೋತ್ತಮನಲ್ಲ, ಶ್ರೀಹರಿಯು ಒಬ್ಬನೇ ಸರ್ವೋತ್ತಮನು. ಅವನನ್ನೇ ಉಪನಿಷತ್ತುಗಳಲ್ಲಿ ಏಕಮೇವಾದ್ವಿತೀಯಪರಬ್ರಹ್ಮವೆಂದು ಕರೆದಿರುತ್ತಾರೆ. ಆತನನ್ನು ಪಡೆಯುವದು ಜ್ಞಾನದಿಂದ ಮಾತ್ರ ಸಾಧ್ಯ. ಆ ವಿಚಾರವಾದ ವಿದ್ಯೆಯನ್ನು ಮುಂದೆ ತಿಳಿಸಲಾಗುವದು. ಪ್ರಕೃತ ಜೀವರಾಗಿರುವ ನಾವು ಜೀವೋತ್ತಮರಾಗಿ ಸರ್ವಜ್ಯೇಷ್ಠರೂ ಸರ್ವಶ್ರೇಷ್ಠರೂ ಆಗುವ ಬಗೆ ಹೇಗೆ?–ಎಂಬುದನ್ನೀಗ ತಿಳಿಸಲಾಗುವದು.

ಪ್ರತಿಯೊಬ್ಬನಿಗೂ ತಾನು ಜ್ಯೇಷ್ಠನೂ ಶ್ರೇಷ್ಠನೂ ಆಗಬೇಕೆಂದು ಆಸೆಯು ಇರುತ್ತದೆ. ವ್ಯವಹಾರದೃಷ್ಟಿಯಿಂದ ಇದು ಅಸಾಧ್ಯ. ಹೇಗೆ ಭಾರತದೇಶಕ್ಕೆ

ಪ್ರಧಾನಮಂತ್ರಿಯಾಗಲು ಎಲ್ಲಾ ರಾಜಕೀಯಪಕ್ಷಗಳ ನಾಯಕರೂ ಬಯಸುತ್ತಾರಾದರೂ ಅದು ಅಸಾಧ್ಯವೋ, ಯಾರಾದರೊಬ್ಬರು ಮಾತ್ರವೇ ಪ್ರಧಾನಮಂತ್ರಿಯಾಗಲು ಬರುವದೋ ಹಾಗೆಯೇ ಪ್ರಪಂಚದಲ್ಲಿ ಪ್ರತಿಯೊಂದು ಕ್ಷೇತ್ರದಲ್ಲಿಯೂ ಪ್ರಪ್ರಥಮನಾಗುವದು ಒಬ್ಬನಿಗೆ ಮಾತ್ರವೇ ಸಾಧ್ಯವಾಗುತ್ತದೆ. ಆದರೆ ಅಧ್ಯಾತ್ಮಪ್ರಪಂಚದಲ್ಲಿ ಹೀಗಿಲ್ಲ. ಪ್ರತಿಯೊಬ್ಬ ಜೀವನೂ ಪ್ರಪ್ರಥಮನಾಗಬಹುದು. ಈ ಆಗುವಿಕೆಯು ಹೊಸದಾಗಿ ದೊರಕತಕ್ಕದ್ದಲ್ಲ. ಆಗಿರುವದನ್ನೇ ಅರಿತುಕೊಳ್ಳುವದು. ಹೀಗೆ ಅರಿತು ಜ್ಯೇಷ್ಠನೂ ಶ್ರೇಷ್ಠನೂ ಆದ ಯಾವನೊಬ್ಬನೂ ಮತ್ತೊಬ್ಬನಿಗೆ ಪ್ರತಿಸ್ಪರ್ಧಿಯೂ ಅಲ್ಲ. ಇದು ಹೇಗೆಂದು ಕೆಲವರಿಗೆ ಸಂಶಯವು ಉಂಟಾಗಬಹುದು. ಅದನ್ನು ಪ್ರಾಣವಿಜ್ಞಾನದಿಂದ ಉಪನಿಷತ್ತು ಬಿಡಿಸಿ ತಿಳಿಸುತ್ತಿದೆ. ಇಂಥ ಪ್ರಾಣವಿದ್ಯೆಯನ್ನು ಈಗ ವಿಚಾರಮಾಡೋಣ.

ಪ್ರಾಣ–ಎಂಬ ಶಬ್ದದ ಅರ್ಥವನ್ನು ಈಗ ಬಿಡಿಸೋಣ. ಪ್ರ+ಅನ–ಎಂಬಿವು ಸೇರಿ 'ಪ್ರಾಣ' ಎಂದಾಗಿದೆ. ಅನ–ಎಂದರೆ ಚೇಷ್ಟೆ, ವ್ಯಾಪಾರವೆಂದರ್ಥ. ಉಸಿರಾಡುತ್ತಿರುವವರೆಗೂ ಮನುಷ್ಯನು ಏನಾದರೊಂದು ಚೇಷ್ಟೆ (ಕರ್ಮ)ಯನ್ನು ಮಾಡುತ್ತಲೇ ಇರುವನು. ಇದು ಎಲ್ಲರಿಗೂ ಸಮಾನವು. ಈ ಚೇಷ್ಟೆಯು ಯಾವಾಗ ಪ್ರಾರಂಭವಾಯಿತು? ಎಂಬುದನ್ನು ವಿಚಾರಿಸಹೊರಟರೆ ವ್ಯವಹಾರದೃಷ್ಟಿಯಿಂದ ಸಿಗುವ ಉತ್ತರವೇನೆಂದರೆ: ಜೀವನು ತಾಯಿಯ ಹೊಟ್ಟೆಯಿಂದ ಹೊರಬಿದ್ದೊಡನೆಯೇ–ಎಂದು ತಿಳಿದುಬರುತ್ತದೆ. ಲೋಕದೃಷ್ಟಿಯಲ್ಲಿ ಇದು ಸರಿ. ಆದರೆ ಅಧ್ಯಾತ್ಮದೃಷ್ಟಿಯಿಂದ ಇನ್ನೂ ವಿಚಾರಮಾಡಿ ನೋಡಿದರೆ ಮಾತೃಗರ್ಭದಲ್ಲಿ ಈ ಜೀವನು ಪ್ರವೇಶಿಸಿ ಒಂಭತ್ತು ತಿಂಗಳುಗಳು ಕಳೆದ ಅನಂತರವೇ ಶರೀರವನ್ನು ರೂಪಸಿಕೊಂಡು ಜನ್ಮವನ್ನು ತಾಳುತ್ತಾನೆ. ಅನಂತರವೇ ಮೂಗಿನಿಂದ ಉಸಿರಾಡುತ್ತಾನೆ. ಹೀಗಿರವಲ್ಲಿ ಕೇವಲ ಉಸಿರಾಡುವ ಕ್ರಿಯೆಯನ್ನೇ ಮುಂದಿಟ್ಟುಕೊಂಡು ಮಾತೃಗರ್ಭದಿಂದ ಹೊರಬಂದದ್ದೇ ಮೊದಲು, ಅದೇ ಜ್ಯೇಷ್ಠತ್ವ ಎಂದು ಹೇಗೆ ಹೇಳಲಾದೀತು? ಮತ್ತು ಬ್ರಹ್ಮವು ಜೀವಾತ್ಮರೂಪದಿಂದ ಗರ್ಭಪ್ರವೇಶಮಾಡದೆ ಹೋಗಿದ್ದರೆ ಗರ್ಭವಾದರೂ ಹೇಗೆ ಬೆಳೆಯಲು ಸಾಧ್ಯವಾಗುತ್ತಿತ್ತು? ಆದ್ದರಿಂದ ಪ್ರಾಣಕ್ರಿಯೆಗೂ ಮೊದಲು ಜೀವನು ಇದ್ದುಕೊಂಡಿರುವನೆಂಬ ತತ್ತ್ವವೇ ಮುಖ್ಯಪ್ರಾಣನೆನಿಸಿರುವದು. ಈತನ ಅನುಗ್ರಹವಿಲ್ಲದೆ ಯಾವ ಪ್ರಾಣಿಗೂ ಜನ್ಮವೇ ಇಲ್ಲ. ಈತನನ್ನು ಯಾರೇ ಆಗಲಿ, ಹಿಂದಕ್ಕೆ ಹಾಕಿ ಜ್ಯೇಷ್ಠರಾಗುವದೂ ಸಾಧ್ಯವಿಲ್ಲ. ಈ ಅಭಿಪ್ರಾಯದಂತೆ ಒಬ್ಬನೇ ಮುಖ್ಯಪ್ರಾಣನೆನಿಸಿರುವ ವಾಯುದೇವನು ಉಳಿದ ಎಲ್ಲಾ ಜೀವಜಂತುಗಳ ತಿರುಳಾಗಿದ್ದುಕೊಂಡು ಆಯಾ ಶರೀರದಲ್ಲಿ ದೇವ, ಮನುಷ್ಯ, ಪಶು, ಪಕ್ಷ್ಯಾದಿಗಳ ರೂಪದಿಂದ ವ್ಯವಹರಿಸಲ್ಪಡುವನು. ಉಪಾಧಿಗಳಿಂದ ಜೀವರುಗಳು

ಅನೇಕರೂ ಭಿನ್ನರೂ ವಿಲಕ್ಷಣರೂ ಆದರೂ ಮೂಲಪ್ರಾಣನ ತತ್ತ್ವರೂಪದಿಂದ ಎಲ್ಲರೂ ಒಂದೇ ಆಗಿರುವರು. ಈ ಸ್ವರೂಪವನ್ನು ಅರಿತು ಚಿಂತಿಸುವದೇ ಪ್ರಾಣೋಪಾಸನೆಯೆನಿಸುವದು. ಸೃಷ್ಟಿಯ ಆದಿಯಲ್ಲೇ ಪರಬ್ರಹ್ಮದಿಂದ ಹೊರತೋರಿಕೊಂಡು· ಈ ಕ್ರಿಯಾಶಕ್ತಿಯು ವಾಯುವೆನಿಸಿ ಸರ್ವಜ್ಯೇಷ್ಠವಾಗಿ ವಿರಾಜಮಾನವಾಗಿದೆ. ಈ ವಾಯುತತ್ತ್ವವನ್ನು ಅಧಿದೈವವಾಗಿ ವಾಯುದೇವತೆಯೆಂದೂ ಅಧ್ಯಾತ್ಮವಾಗಿ ಪ್ರಾಣನೆಂದೂ ಕರೆಯಲಾಗಿದೆ. ಇಲ್ಲಿ ವಿಶೇಷವಾಗಿ ಅಧ್ಯಾತ್ಮಪ್ರಾಣನನ್ನೇ ಹೆಸರಿಸಿ ಗುಣಗಳನ್ನು ವಿಧಿಸಿರುವದರಿಂದ ಈ ಮುಖ್ಯಪ್ರಾಣನ ಮುಖ್ಯತ್ವ ಹಾಗೂ ಮಹಿಮೆಗಳನ್ನು ಈಗ ತಿಳಿಯೋಣ.

ಮುಖ್ಯಪ್ರಾಣನೆಂಬ ಹೆಸರು ಏಕೆ ಬಂದಿದೆ? ಎಂಬುದಕ್ಕೆ ಉಪನಿಷತ್ತಿನಲ್ಲಿ ಒಂದು ವಿವರಣೆಯನ್ನು ಕೊಡಲಾಗಿದೆ. ಒಮ್ಮೆ ಕಣ್ಣು ಕಿವಿ, ಮೂಗು, ಚರ್ಮ, ನಾಲಗೆ, ಮನಸ್ಸು–ಈ ಆರು ಇಂದ್ರಿಯದೇವತೆಗಳೂ ತಾವು ತಾವೇ ಶ್ರೇಷ್ಠರೆಂದುಕೊಂಡಿದ್ದವು. ತಮ್ಮೊಳಗಿನ ವಿವಾದವನ್ನು ಪರಿಹರಿಸಿ ಶ್ರೇಷ್ಠರಾರು? ಎಂಬ ತೀರ್ಮಾನವನ್ನು ಕೊಡುವಂತೆ ಈ ಕರಣದೇವತೆಗಳು ತಂದೆಯಾದ ಪ್ರಜಾಪತಿಯನ್ನು ಕೇಳಿಕೊಂಡರಂತೆ. ಆಗ ಪ್ರಜಾಪತಿಯು 'ನಿಮ್ಮಲ್ಲಿ ಯಾರು ಶರೀರವನ್ನು ಬಿಟ್ಟುಹೋದರೆ ಅದು ಶವವೆನಿಸಿ ಪಾಪಿಷ್ಠವಾಗುವದೋ ಅವನೇ ಶ್ರೇಷ್ಠನು' ಎಂದುಬಿಟ್ಟನು. ಆಗ ಕ್ರಮವಾಗಿ ವಾಗಾದಿಗಳು ಒಂದೊಂದು ವರ್ಷಕಾಲ ಶರೀರವನ್ನು ಬಿಟ್ಟುಹೋದವು. ಆದರೇನೂ ಶರೀರವು ಶವವಾಗಲಿಲ್ಲ. ಮಾತಿಲ್ಲದಿದ್ದಾಗ ಮೂಕನಾಗಿಯೂ ಕಣ್ಣಿಲ್ಲದಾಗ ಕುರುಡನೂ ಕಿವಿಯಿಲ್ಲದಾಗ ಕಿವುಡನೂ ಆದ ಮನುಷ್ಯನು ಬದುಕಿಯೇ ಇದ್ದನು. ಎಲ್ಲರ ಸರದಿಯೂ ಪೂರೈಸಿದ ಅನಂತರ ಮುಖ್ಯಪ್ರಾಣನು 'ನಾನು ಹೊರಡುವೆನು'–ಎಂದಾಗ ಕುದುರೆಯು ಓಡುವಾಗ ಗೂಟವನ್ನು ಕಿತ್ತುಕೊಂಡು ಓಡುವಂತೆ–ಇಂದ್ರಿಯದೇವತೆಗಳೆಲ್ಲರೂ ಅಳ್ಳಾಡಿಹೋದರು. ಆಗ ದೇವತೆಗಳು ಪ್ರಾಣನನ್ನೇ ಶ್ರೇಷ್ಠನೆಂದು ಒಪ್ಪಿ ಅವನನ್ನು ಹೊರಹೋಗಬಾರದೆಂದೂ ತಮ್ಮ ತಮ್ಮ ಗುಣವಿಶೇಷಗಳನ್ನೂ ಮಹಿಮೆಯನ್ನೂ ಪ್ರಾಣನಿಗೇ ಒಪ್ಪಿಸಿಬಿಡುವದಾಗಿಯೂ ಬೇಡಿಕೊಂಡರು. ಇದರಿಂದ ವಾಯುವು ಮುಖ್ಯಪ್ರಾಣನೆನಿಸಿದನು. ಆದ್ದರಿಂದಲೇ ಈಗಲೂ ಕಣ್ಣು, ಕಿವಿ, ಮೂಗು–ಮುಂತಾದವುಗಳನ್ನು ಪ್ರಾಣವೆನ್ನುವದಿಲ್ಲ. ಇವೆಲ್ಲ ಕರಣಗಳು ಮಾತ್ರವೇ. ಈ ಕರಣಗಳಲ್ಲಿ ಪ್ರಾಣನು ವ್ಯಾಪಿಸಿಕೊಂಡಿದ್ದರೇ ಇವು ಚೇತನವಾಗಿದ್ದುಕೊಂಡು ನೋಡುವದು, ಕೇಳುವದು, ಮೂಸುವದು–ಮುಂತಾದ ವ್ಯವಹಾರಮಾಡುವವು. ಇಲ್ಲವಾದರೆ ಇವುಗಳಿಗೆ ಬೆಲೆಯೇ ಇಲ್ಲ. ಈ ಅಭಿಪ್ರಾಯದಂತೆ ಮಾತನಾಡುವವನೂ, ಮುಟ್ಟುವವನೂ ಮೂಸುವವನೂ, ಆಲೋಚಿಸುವವನೂ ಎಲ್ಲವೂ ಪ್ರಾಣನೇ ಆಗಿರುತ್ತಾನೆ. ಇದೇ ಪ್ರಾಣನ ಜ್ಯೇಷ್ಠತ್ವವೂ ಶ್ರೇಷ್ಠತ್ವವೂ ಆಗಿರುತ್ತದೆ. ಈಗಿನ

ಯಂತ್ರಯುಗದಲ್ಲಿಯಂತೂ ಈ ತತ್ತ್ವವನ್ನು ಚೆನ್ನಾಗಿ ಮನಗಾಣಬಹುದು. ಹೇಗೆಂದರೆ ಮನೆಯಲ್ಲಿ ದೀಪ, ಒಲೆ, ಇಸ್ತ್ರಿಪೆಟ್ಟಿಗೆ, ರೇಡಿಯೊ, ಟಿ.ವಿ–ಏನೇ ಯಂತ್ರಗಳಿದ್ದರೂ ಅವು ಬೇರೆಬೇರೆಯ ಉಪಯೋಗಕ್ಕೆ ಬರುವಂತಿದ್ದರೂ ವಿದ್ಯುಚ್ಛಕ್ತಿಯು ಇದ್ದರೆ ಮಾತ್ರ ಅವು ಕೆಲಸಮಾಡಬಲ್ಲವೋ ಹಾಗೆಯೇ ಮುಖ್ಯಪ್ರಾಣನಿದ್ದರೆ ಮಾತ್ರವೇ ಜೀವನವು ಸಾಗೀತು. ಇಲ್ಲವಾದರೆ ಯಾವ ಶರೀರ ಕರಣಾದಿಗಳ ಗುಂಪೂ ಉಪಯೋಗ ವಾಗಲಾರವು.

ಈಗ ಚಕ್ಷುರಾದೀಂದ್ರಿಯಗಳು ಮುಖ್ಯಪ್ರಾಣನಿಗೆ ಒಪ್ಪಿಸಿದ ಆಯಾ ಗುಣಗಳು ಯಾವವು? ಎಂಬಿದನ್ನು ತಿಳಿಯೋಣ. ವಾಕ್ಕೂ ವಸಿಷ್ಠತ್ವವೆಂಬ ತನ್ನ ಗುಣವನ್ನು ಮುಖ್ಯಪ್ರಾಣನಿಗೆ ಒಪ್ಪಿಸಿತು. ವಸಿಷ್ಠತ್ವ–ಎಂದರೆ ವಸು–ಮುಚ್ಚುವದು, ಹಾಗೂ ಐಶ್ವರ್ಯ ಎಂಬರ್ಥವಾಗುತ್ತದೆ. ಮಾತಿನಿಂದಲೇ ಮನುಷ್ಯನು ಧನವಂತನಾಗುತ್ತಾನೆ. ಏಕೆಂದರೆ ವಾಗ್ಮಿಯಾದವನನ್ನು ಎಲ್ಲರೂ ಮೆಚ್ಚುತ್ತಾರೆ. ಅವನ ಮಾತಿಗೆ ಬೆರಗಾಗಿ ಧನವನ್ನೂ ಕೊಡುತ್ತಾರೆ. ವ್ಯವಹಾರದಲ್ಲಿ ಕೂಡ ಜೀವವಿಮೆ ಏಜಂಟರಿಗೆ ಅರ್ಹತೆ–ಎಂದರೆ ವಿದ್ಯೆಯಲ್ಲ, ಸರ್ಟಿಫಿಕೇಟ್ ಸಹ ಅಲ್ಲ, ಮಾತುಗಾರಿಕೆಗೇ 'ಅರ್ಹತೆ' ಎನ್ನುತ್ತಾರೆ. ಇಂಥವರು ನಾಲ್ಕಾರು ಭಾಷೆಗಳನ್ನು ಬಲ್ಲವರಾಗಿದ್ದರಂತೂ ವಿಮೆಕಂಪನಿಯವರಿಗೆ ಆಸ್ತಿಯಿದ್ದಂತೆಯೇ ಸರಿ. ಹೀಗೆಯೇ ವಾಚಾಳಿಗಳಾದ ಪಂಡಿತರೂ ರಾಜಕಾರಣಿಗಳೂ ಯಾರ ಬಾಯನ್ನಾದರೂ ಮುಚ್ಚಿಸಿಬಿಡುತ್ತಾರೆ. ಪತ್ರಕರ್ತರಂತೂ ಎಂಥವರ ಬಾಯನ್ನೂ ಜಾಣ್ಮೆಯಿಂದ ಬಿಚ್ಚಿಸಿಬಿಡುತ್ತಾರೆ. ಇಂಥ ಸಂದರ್ಭಗಳಲ್ಲೆಲ್ಲ ವಾಕ್ಕಿನ ವಸಿಷ್ಠತ್ವವು ಎದ್ದುಕಾಣುತ್ತದೆ. ಇದನ್ನೇ ಶ್ರುತಿಯಲ್ಲಿಯೂ ತಿಳಿಸಿದೆ. ಹೀಗೆ ವಾಕ್ಕು ಇಂಥ ಮಹಿಮೆಯುಳ್ಳದ್ದಾದರೂ ಪ್ರಾಣನ ಆಲಂಬನವಿಲ್ಲವಾದರೆ ಏನೂ ಮಾಡಲಾರದು. ಆದ್ದರಿಂದ ತನ್ನ ಗುಣವಿಶೇಷವನ್ನು ಪ್ರಾಣನಿಗೇ ಅರ್ಪಿಸಿ ಅದು ಕೃತಾರ್ಥವಾಯಿತು. ಇದರಿಂದ ಪ್ರಾಣನು ವಸಿಷ್ಠನೆನಿಸಿದನು. ಪ್ರಾಣೋಪಾಸಕನು ಇದೇ ಕಾರಣದಿಂದ ವಾಗ್ಮಿಯೂ ಧನವಂತನೂ ಆಗುವನು–ಎಂದಭಿಪ್ರಾಯ.

ಅನಂತರ ಚಕ್ಷುಸ್ಸು ಪ್ರತಿಷ್ಠೆ–ಎಂಬ ತನ್ನ ಗುಣವನ್ನು ಮುಖ್ಯಪ್ರಾಣನಿಗೆ ಒಪ್ಪಿಸಿತು. ಪ್ರತಿಷ್ಠೆ ಎಂದರೆ ಸರಿಯಾಗಿ ನಿಲ್ಲುವದು–ಎಂದರ್ಥ. ನಾವು ನಡೆಯುವಾಗ, ನಿಲ್ಲುವಾಗ, ಭೂಮಿಯ ಉಬ್ಬುತಗ್ಗುಗಳಲ್ಲಿ ಕಣ್ಣು ಕಾಣದೆ ಹೋದರೆ ಅಪಾಯವಾಗುತ್ತದೆ. ಆದರೆ ಕಣ್ಣಿನಿಂದ ಸರಿಯಾಗಿ ನೋಡಿ ಹೆಜ್ಜೆಯಿಟ್ಟರೆ ತೊಂದರೆಯಾಗುವದಿಲ್ಲ, ಹಾಗೆಯೇ ಓದುವದು, ಬರೆಯುವದು–ಮುಂತಾದ ಎಲ್ಲದರಲ್ಲಿಯೂ ಪ್ರತಿಷ್ಠೆ(Dignity) ಯನ್ನು ಗಳಿಸುವಾಗ ಕಣ್ಣಿನ ಮೂಲಕವೇ ಆಗಿರುತ್ತದೆ. ಕಣ್ಣಿಲ್ಲವಾದರೆ ವಿದ್ಯಾಪ್ರಪಂಚವೇ ಇಲ್ಲವಾಗುವದು. ಇಂಥ ಪ್ರತಿಷ್ಠಾಗುಣವನ್ನು ಕಣ್ಣು ಮುಖ್ಯಪ್ರಾಣನಿಂದಲೇ ಅದು ತನಗೆ

ದೊರಕಿದೆಯೆಂದು ತಿಳಿದು ಆತನಿಗೆ ಅದನ್ನು ಅರ್ಪಿಸಿಬಿಟ್ಟಿತು. ಅನಂತರ ಕಿವಿಯು ಸಂಪತ್ತೆಂಬ ತನ್ನ ಗುಣವನ್ನು ಅರ್ಪಿಸಿತು. ಸಂಪತ್ತು ಎಂದರೆ ಕೇಳುವಿಕೆ. ಕಿವಿ ಕೇಳಿಸುವದೊಂದು ದೊಡ್ಡ ಐಶ್ವರ್ಯವೇ ಸರಿ. ಹೇಗೆಂದರೆ ಗುರುವು ಹೇಳಿಕೊಡುವ ವೇದ, ಸಂಗೀತ–ಇತ್ಯಾದಿ ವಿದ್ಯೆಗಳನ್ನು ಶಿಷ್ಯನು ಕಿವಿಯ ಮೂಲಕವೇ ಗ್ರಹಣಮಾಡುತ್ತಾನೆ. ಆದರೆ ಕೇವಲ ಪುಸ್ತಕಗಳನ್ನೋದಿ ಇಂಥ ವಿದ್ಯೆಗಳನ್ನು ಕಲಿಯಲಾಗುವದಿಲ್ಲ. ಕಿವಿಯಿಂದ ಕೇಳಿ ಕಲಿತವನಿಗೆ ಆ ಮೂಲಕ ಸಂಪತ್ತುಗಳು ಲಭಿಸುತ್ತವೆ. ಆದ್ದರಿಂದ ಶ್ರೋತ್ರವೇ ಸಂಪತ್ತಾಯಿತು. ಇಂಥ ಸಂಪದ್ಗುಣವನ್ನು ಕಿವಿಯು ಪ್ರಾಣನಿಗೇ ಒಪ್ಪಿಸಿ ಕೃತಾರ್ಥವಾಯಿತು. ಅನಂತರ ಮನಸ್ಸು ಆಯತನವೆಂಬ ತನ್ನ ಗುಣವನ್ನು ಒಪ್ಪಿಸಿತು. ಆಯತನವೆಂದರೆ ಆಶ್ರಯವು. ನಮಗೆ ಏನಾದರೊಂದು ಶಬ್ದ ಸ್ಪರ್ಶಾದಿಗಳ ಸುಖವು ದೊರಕಬೇಕಾದರೆ ಆಯಾ ಇಂದ್ರಿಯಗಳು ತಂದುಕೊಟ್ಟ ವಿಷಯವನ್ನು ಭೋಕ್ತೃವಾದ ಆತ್ಮನಿಗಾಗಿ ಸ್ವೀಕರಿಸಿ ಇಟ್ಟುಕೊಳ್ಳಬೇಕಲ್ಲವೆ? ಈ ಕೆಲಸವನ್ನು ಮನಸ್ಸು ಮಾಡುತ್ತದೆ. ಅದು ತನ್ನಲ್ಲಿ ಎಲ್ಲಾ ಭೋಗಗಳಿಗೂ ಆಶ್ರಯವನ್ನು ಕೊಟ್ಟಿರುತ್ತದೆ. ಇದೇ ಮನಸ್ಸಿನ ಆಯತನತ್ವವು. ಈ ಮನಸ್ಸು ತನ್ನ ಆಯತನತ್ವ ಗುಣವನ್ನೂ ಪ್ರಾಣನಿಗೇ ಒಪ್ಪಿಸಿಬಿಟ್ಟಿತು. ಇದರಿಂದ ಪ್ರಾಣನು ಜ್ಯೇಷ್ಠನೂ, ಶ್ರೇಷ್ಠನೂ, ವಸಿಷ್ಠನೂ ಪ್ರತಿಷ್ಠಾವಂತನೂ ಸಂಪದ್ಯುಕ್ತನೂ ಆಯತನವಂತನೂ ಆಗಿ ವಿರಾಜಮಾನನಾದನು.

ಇಂಥ ಗುಣವಿಶೇಷಗಳಿಂದ ಯಾವನು ಮುಖ್ಯಪ್ರಾಣನನ್ನು ಚಿಂತಿಸುವನೋ ಅವನಿಗೆ ಈ ಎಲ್ಲಾ ಗುಣಗಳೂ ಮಹಿಮೆಯೂ ಲಭಿಸುವವು. ಕೇವಲ ಲೌಕಿಕಪ್ರಯತ್ನಗಳಿಂದಲೇ ಯಾವನೊಬ್ಬನೂ ಜ್ಯೇಷ್ಠಶ್ರೇಷ್ಠನಾಗಲಾರನು. ನಾವೆಲ್ಲರೂ ಸರ್ವಶ್ರೇಷ್ಠನಾದ ಪ್ರಾಣನನ್ನೇ ಆಶ್ರಯಿಸೋಣ.

---

## ಪಂಚಾಗ್ನಿ ವಿದ್ಯೆ

**ಓಮ್॥ ಅಸೌ ವಾವ ಲೋಕೋ ಗೌತಮಾಗ್ನಿಸ್ತಸ್ಯಾದಿತ್ಯ ಏವ ಸಮಿದ್‌ರಶ್ಮಯೋ ಧೂಮೋ (ಅ) ಹರರ್ಚಿಶ್ಚನ್ದ್ರಮಾ ಅಂಗಾರಾ ನಕ್ಷತ್ರಾಣಿ ವಿಸ್ಫುಲಿಂಗಾಃ॥ 5–4–1**

ಭಾವಾರ್ಥಃ– 'ಗೌತಮನೆ, ಆ ಲೋಕವೇ ಅಗ್ನಿಯು; ಅದಕ್ಕೆ ಆದಿತ್ಯನೇ ಸಮಿತ್ತು; ರಶ್ಮಿಗಳೇ ಹೊಗೆ; ಹಗಲು ಉರಿ; ಚಂದ್ರನೇ ಕೆಂಡ; ನಕ್ಷತ್ರಗಳು ಕಿಡಿಗಳು'.

(ಪಂಚಾಗ್ನಿವಿದ್ಯೆಯ ಪ್ರಕರಣದಲ್ಲಿ ಮೊದಲನೆಯ ಅಗ್ನಿಯೆನಿಸಿರುವ ದ್ಯುಲೋಕವು ಮೇಲಿನ ವಿವರಣೆಯಂತೆ ಅಗ್ನಿಯ ಸಂಬಂಧವಾದ ಅವಯವಗಳ ಹೋಲಿಕೆಯನ್ನು ಹೊಂದಿರುತ್ತದೆ. ಇದೇ ರೀತಿಯಾಗಿ ಉಳಿದ ನಾಲ್ಕು ಅಗ್ನಿಗಳಿಗೂ, ಭಾವನೆಯಿಂದ ಅವಯವಗಳನ್ನು ತಿಳಿದು ಚಿಂತಿಸುವದೇ ಪಂಚಾಗ್ನಿ ವಿದ್ಯೆಯು–ಎಂದಭಿಪ್ರಾಯ.)

## 33. ಪಂಚಾಗ್ನಿವಿದ್ಯಾವಿವರಣೆ

ಛಾಂದೋಗ್ಯೋಪನಿಷತ್ತಿನಲ್ಲಿ ಈವರೆಗೆ ತಿಳಿಸಿದ ಪ್ರಾಣೋಪಾಸನೆಯ ಅನಂತರ ಈಗ ಪಂಚಾಗ್ನ್ಯುಪಾಸನೆಯನ್ನು ತಿಳಿಸಲಾಗುವದು. ಈ ಪ್ರಕರಣವು ಬ್ರಹ್ಮನಿಂದ ಹಿಡಿದು ಒಂದು ಹುಳುವಿನವರೆಗಿನ ಜನ್ಮಗಳೆಲ್ಲವೂ ಸಂಸಾರಗತಿಗೇ ಸೇರಿದವುಗಳಾಗಿವೆ; ಆದ್ದರಿಂದ ಈ ಹುಟ್ಟುಸಾವುಗಳ ರೂಪವಾದ ಸಂಸಾರದಲ್ಲಿ ಮುಮುಕ್ಷುವಾದವನು ವೈರಾಗ್ಯವನ್ನು ಹೊಂದಬೇಕೆಂಬುದನ್ನು ಉಪದೇಶಿಸುವದಕ್ಕಾಗಿಯೇ ಬಂದಿರುತ್ತದೆ. ಪಂಚಾಗ್ನಿವಿದ್ಯೆಯೆಂದರೇನು? ಪಂಚಾಗ್ನಿಗಳು ಯಾವವು? ಮುಂತಾದ ವಿವರಗಳನ್ನು ಒಂದು ಕಥೆಯ ಮೂಲಕ ಈಗ ಪ್ರಸ್ತಾಪಿಸಲಾಗುವದು.

ಹಿಂದಿನ ಕಾಲಕ್ಕೆ ಅರುಣನೆಂಬವನ ಮಗನಾದ ಆರುಣೇಯಶ್ವೇತ ಕೇತುವೆಂಬವನು ಪಂಚಾಲರಾಜನಾದ ಪ್ರವಾಹಣಜೈವಲಿ–ಎಂಬವನ ಬಳಿಗೆ ಬಂದನು. ಆಗ ರಾಜನು "ನಿನಗೆ ನಿಮ್ಮ ತಂದೆಯು ಅನುಶಾಸನಮಾಡಿದ್ದಾನೆಯೊ?" ಎಂದು ಕೇಳಿದನು. 'ಹೌದು'–ಎಂದು ಶ್ವೇತಕೇತುವು ಉತ್ತರವನ್ನು ಕೊಟ್ಟನು. ಆಗ ಪ್ರವಾಹಣಜೈವಲಿಯು ಶ್ವೇತಕೇತುವನ್ನು ಕುರಿತು ಐದು ಪ್ರಶ್ನೆಗಳನ್ನು ಕೇಳಿದನು. ಅವು ಹೀಗಿದ್ದವು. (1)ಈ ಮನುಷ್ಯಲೋಕವನ್ನು ಬಿಟ್ಟವರು ಎಲ್ಲಿಗೆ ಹೋಗುತ್ತಾರೆ? (2)ಅವರು ಹಿಂದಿರುಗಿಬರುವದು ಹೇಗೆ? (3)ದೇವಯಾಣ, ಪಿತೃಯಾಣಗಳು ಅಗಲುವದೆಲ್ಲಿ? (4)ದ್ಯುಲೋಕವು ಪೂರ್ಣವಾಗುವದಿಲ್ಲವೇಕೆ? (5)ಐದನೆಯ ಆಹುತಿಯಲ್ಲಿ ನೀರು ಪುರುಷನೆನಿಸಿಕೊಳ್ಳುವದು ಹೇಗೆ? ಇಂಥ ಪ್ರಶ್ನೆಗಳನ್ನು ಶ್ವೇತಕೇತುವು ನಿರೀಕ್ಷಿಸಿಯೂ ಇರಲಿಲ್ಲ. ಅವನ ತಂದೆಯು ಇವುಗಳಿಗೆ ಉತ್ತರವನ್ನು ಹೇಳಿಯೂ ಕೊಟ್ಟಿರಲಿಲ್ಲ. ಆದ್ದರಿಂದ ಶ್ವೇತಕೇತುವು ರಾಜನ ಎದುರಿಗೆ 'ಇವುಗಳಿಗೆ ಉತ್ತರವು ನನಗೆ ಏನೂ ತಿಳಿಯದು' ಎಂದುಬಿಟ್ಟನು.

ಆಗ ರಾಜನು "ಹಾಗಾದರೆ ನೀನು ತಂದೆಯಿಂದ ಅನುಶಾಸನವನ್ನು ಹೊಂದಿದ್ದೇನೆ–ಎಂದು ಏಕೆ ನನ್ನೊಡನೆ ಹೇಳಿದೆ?" ಎಂದು ಹಂಗಿಸಿ ಕೇಳಿಬಿಟ್ಟನು. ಶ್ವೇತಕೇತುವು ಪೆಚ್ಚಾಗಿಬಿಟ್ಟನು. ಕೂಡಲೇ ಹಿಂದಿರುಗಿ ತಂದೆಯ ಬಳಿಗೆ ಬಂದು "ನೀನು ನನಗೆ ಅನುಶಾಸನಮಾಡಿದ್ದೇನೆಂದು ಹೇಳಿಬಿಟ್ಟೆಯಲ್ಲ, ಆ ರಾಜನು ಕೇಳಿದ ಐದು ಪ್ರಶ್ನಗಳಿಗೂ ನನಗೆ ಉತ್ತರವು ತಿಳಿಯಲೇ ಇಲ್ಲ" ಎಂದು ದೂರಿಕೊಂಡನು. ಆಗ

ತಂದೆಯು 'ಮಗು, ಈ ಪ್ರಶ್ನೆಗಳಿಗೆ ನನಗೂ ಉತ್ತರವು ತಿಳಿಯದು. ತಿಳಿದಿದ್ದರೆ ನಿನಗೆ ಹೇಗೆ ತಾನೆ ಹೇಳದೆ ಇರುತ್ತಿದ್ದೆನು?' ಇರಲಿ; ಈಗ ನಾನೇ ನೇರಾಗಿ ರಾಜನ ಬಳಿಗೆ ಹೋಗಿ ಉತ್ತರವನ್ನು ತಿಳಿದುಕೊಂಡುಬರುವೆನು, ಎಂದು ಮಗನನ್ನು ಸಮಾಧಾನಗೊಳಿಸಿ ತಾನೇ ಪ್ರವಾಹಣಜೈವಲಿಯ ಬಳಿಗೆ ಬಂದನು. ಆಗ ರಾಜನು ಅರುಣನನ್ನು ಸತ್ಕರಿಸಿದನು. ಅರುಣನಿಗೆ ಗೌತಮನೆಂಬ ಹೆಸರೂ ಪ್ರಸಿದ್ಧವಾಗಿತ್ತು. ಸತ್ಕಾರವು ಪೂರೈಸಿದ ಬಳಿಕ ರಾಜನೇ ಮುಂದಾಗಿ "ಪೂಜ್ಯನೆ, ನಿನಗೇನಾದರೂ ಧನಕನಕ ವಸ್ತ್ರಾದಿಗಳ ಅಪೇಕ್ಷೆಯಿದ್ದಲ್ಲಿ ತಿಳಿಸು" ಎಂದನು. ಆಗ ಗೌತಮನು ಐಹಿಕವಾದ ಭೋಗಸಾಮಗ್ರಿಗಳು ತನಗೇನೂ ಬೇಡವೆಂದೂ ತನ್ನ ಮಗನನ್ನು ಕುರಿತು ಕೇಳಿದ ಪ್ರಶ್ನೆಗಳ ಉತ್ತರಗಳನ್ನೇ ವರವಾಗಿ ಕೊಡಬೇಕೆಂದೂ ಅದನ್ನು ಬಯಸಿಯೇ ಬಂದಿರುವದಾಗಿಯೂ ರಾಜನಿಗೆ ತಿಳಿಸಿದನು. ಆಗ ರಾಜನು ಚಿಂತಾಕ್ರಾಂತನಾದನು. ಏಕೆಂದರೆ ಆ ಐದು ಪ್ರಶ್ನೆಗಳ ಉತ್ತರರೂಪವಾದ ಪಂಚಾಗ್ನಿವಿದ್ಯೆಯೆಂಬ ರಹಸ್ಯತತ್ತ್ವವು ಈವರೆಗೂ ಕ್ಷತ್ರಿಯ ಪರಂಪರೆಯಲ್ಲಿ ಮಾತ್ರವೇ ಇತ್ತು. ಈಗ ಇದನ್ನು ಬ್ರಾಹ್ಮಣನಿಗೆ ಕೊಡುವದು ಹೇಗೆ? ಇದು ಹಿಂದಿನ ಸಂಪ್ರದಾಯಕ್ಕೆ ವಿರುದ್ಧವಾದೀತಲ್ಲವೆ? ಆದರೆ ವಿದ್ಯೆಯನ್ನು ಬಯಸಿಬಂದವನಿಗೆ ಇಲ್ಲವೆನ್ನುವದು ಹೇಗೆ? ಹೀಗೆ ರಾಜನ ಮನಸ್ಸು ಚಿಂತೆಗೀಡಾಯಿತು. ಅನಂತರ ರಾಜನು ಗೌತಮನಿಗೆ ಸಾಕಷ್ಟು ಕಾಲ ಇಲ್ಲಿಯೇ ವಾಸಮಾಡಿಕೊಂಡಿರಬೇಕೆಂದು ಆಜ್ಞಾಪಿಸಿದನು. ಗೌತಮನಾದರೊ, ವಿದ್ಯೆಯನ್ನು ಪಡೆದುಕೊಳ್ಳಲೇಬೇಕೆಂಬ ಇಚ್ಛೆಯಿಂದ ರಾಜನೇ ಮತ್ತೆ ಮಾತನಾಡಿಸುವವರೆಗೂ ಬ್ರಹ್ಮಚರ್ಯದಿಂದ ಅವನ ಸಮೀಪದಲ್ಲೇ ಇದ್ದುಕೊಂಡುಬಿಟ್ಟನು. ಗೌತಮನ ವಿನಯ, ಶ್ರದ್ಧೆ, ತತ್ವಪರತೆಗಳು ರಾಜನನ್ನು ಸಂತೋಷಗೊಳಿಸಿದವು. ಆಗ ರಾಜನು ಸಂತುಷ್ಟನಾಗಿ "ಎಲೈ ಗೌತಮನೆ, ನನ್ನನ್ನು ಕ್ಷಮಿಸು; ದೀರ್ಘಕಾಲದವರೆಗೂ ನಿನ್ನನ್ನು ಕಾಯಿಸಿಬಿಟ್ಟೆನು. ಏಕೆಂದರೆ ಈವರೆಗೂ ಕ್ಷತ್ರಿಯಪರಂಪರೆಯಲ್ಲಿ ಮಾತ್ರವೇ ಇದ್ದ ವಿದ್ಯೆಯನ್ನು ಬ್ರಾಹಣನಾದ ನಿನಗೆ ಕೊಡುವದು ಹೇಗೆ? ಎಂದು ಮನಸ್ಸು ತೂಗಾಡುತ್ತಿತ್ತು. ಈಗ ನಾನು ನಿರ್ಣಯಕ್ಕೆ ಬಂದಿದ್ದೇನೆ. ಏಕೆಂದರೆ ಇನ್ನು ಮುಂದೆ ಈ ವಿದ್ಯೆಯು ನಿನ್ನ ಮೂಲಕ ಬ್ರಾಹ್ಮಣರನ್ನೂ ಸೇರಲಿ; ಇನ್ನು ನಿನಗೆ ಪಂಚಾಗ್ನಿವಿದ್ಯೆಯನ್ನು ಹೇಳಿಕೊಡಲಿರುವೆನು"–ಎಂದನು. ಗೌತಮನಿಗೆ ಬಹಳ ಸಂತೋಷವಾಯಿತು. ವಿದ್ಯೆಯನ್ನು ಹೇಗೆ ಗುರುವಿನಿಂದ ಪಡೆದುಕೊಳ್ಳಬೇಕು? ಎಂಬುದಕ್ಕೆ ಈ ಕಥೆಯೂ ಆದರ್ಶವಾಗಿರುತ್ತದೆ.

ಅನಂತರ ರಾಜನು ಐದನೆಯ ಪ್ರಶ್ನೆಯ ಉತ್ತರವನ್ನೇ ಮೊದಲನೆಯದಾಗಿ ಹೇಳಲಾರಂಭಿಸಿದನು. ಏಕೆಂದರೆ ಈ ಉತ್ತರವು ಮುಂದಿನ ನಾಲ್ಕು ಪ್ರಶ್ನೆಗಳಿಗೆ ಹೇಳಬೇಕಾದ ಉತ್ತರಗಳಿಗೆ ಅನುಕೂಲವನ್ನು ಕಲ್ಪಿಸಿಕೊಡುತ್ತದೆ. ಇಲ್ಲಿ ಒಬ್ಬ ಶ್ರೌತಕರ್ಮಿಯಾದ ಪುರುಷನ ಹುಟ್ಟನ್ನು ಮೇಲುಪಂಕ್ತಿಯಾಗಿಟ್ಟುಕೊಂಡಿರುತ್ತದೆ. ಹುಟ್ಟು

ಸಾವುಗಳ ಸಂತೆಯಾದ ಈ ಪ್ರಪಂಚದಲ್ಲಿ ಪ್ರಾಣಿಗಳು, ಮನುಷ್ಯರು, ವಿದ್ಯಾವಂತರು, ಅನುಷ್ಠಾತೃಗಳು—ಹೀಗೆ ನೀಚ—ಉಚ್ಚ ತರಗತಿಗಳು ಇದ್ದುಕೊಂಡಿರುವದು ಸರಿಯಷ್ಟೆ. ಎಲ್ಲಾ ಮನುಷ್ಯರೂ ಸ್ತ್ರೀಪುರುಷಸಂಬಂಧದಿಂದಲೇ ಹುಟ್ಟುತ್ತಾರಾದರೂ ಜ್ಞಾನಕರ್ಮಗತಿಗಳನ್ನು ಪಡೆಯುವವರನ್ನು ಮಾತ್ರವೇ ಇಲ್ಲಿ ಆದರ್ಶವಾಗಿ ಸ್ವೀಕರಿಸಿದೆ. ಉಳಿದವರೆಲ್ಲ ಹುಟ್ಟುಸಾವುಗಳ ನಡುವೆಯೇ ಬದುಕಿದ್ದು ಏನೊಂದೂ ಗತಿಯನ್ನು ಹೊಂದುವ ಅವಕಾಶವುಳ್ಳವರಾಗಿರುವದಿಲ್ಲ, ಆದ್ದರಿಂದ ಅಂಥವರನ್ನೆಲ್ಲ ಪಶ್ವಾದಿಗಳ ಜೊತೆಗೇ ಶ್ರುತಿಯು ಸೇರಿಸಿಬಿಟ್ಟಿದೆ. ಅಂಥವರೇ ಅಧಿಕರಾಗಿರುತ್ತಾರೆಂಬುದೂ ನಿಜವೇ. ಆದರೇನು? ಅಂಥವರನ್ನು ನೋಡಿ ನಾವು ಕಲಿಯಬೇಕಾದದ್ದೇನೂ ಇರುವದಿಲ್ಲ, ಆದ್ದರಿಂದ ಶ್ರೌತಕರ್ಮಿಗಳನ್ನು ಇಲ್ಲಿ ಸ್ವೀಕರಿಸಿ ಆ ಮೂಲಕ ಪಂಚಾಗ್ನಿವಿದ್ಯೆಯನ್ನು ವಿವರಿಸಲಾಗುತ್ತದೆ. ಇಂಥ ಕರ್ಮಗತಿಯನ್ನು ಹೊಂದುವದು ಉಳಿದವರ ದೃಷ್ಟಿಯಿಂದ ಹೆಚ್ಚಿನದೆನ್ನಿಸಿದರೂ ಜ್ಞಾನದೃಷ್ಟಿಯಿಂದ ಕೀಳಾಗಿಯೇ ಇರುತ್ತದೆ. ಇದರಲ್ಲಿಯೂ ವೈರಾಗ್ಯವುಂಟಾಗುವದಕ್ಕಾಗಿಯೇ ಈ ಉಪನಿಷತ್ತಿನಲ್ಲಿ ಇದನ್ನು ಪ್ರಸ್ತಾಪಿಸಿದೆ. ವೈರಾಗ್ಯವು ಜ್ಞಾನಸಾಧನವೆಂದು ಬೇರೆಯಾಗಿ ಹೇಳಬೇಕಾಗಿಲ್ಲ.

ವೈದಿಕಕರ್ಮಕಾಂಡದ ಅಪ್ಪಣೆಯಂತೆ ಗೃಹಸ್ಥನಾದವನಿಗೆ ಅಗ್ನಿಹೋತ್ರವೆಂಬ ನಿತ್ಯಕರ್ಮವು ವಿಧಿಸಲ್ಪಟ್ಟಿದೆ. ಅಗ್ನಿಯನ್ನು ಕುರಿತು ಮಾಡುವ ಪೂಜೆಯೇ ಅಗ್ನಿಹೋತ್ರವು. ಪ್ರತಿದಿನವೂ ಸೂರ್ಯೋದಯಾಸ್ತಕಾಲಗಳ ಅನಂತರ ಈ ಅಗ್ನಿಹೋತ್ರವನ್ನು ಕೈಗೊಳ್ಳಬೇಕು. ಅಗ್ನಿಯನ್ನು—ಗೃಹಸ್ಥನು ಸದಾಕಾಲವೂ ಕಾಪಾಡಿಟ್ಟುಕೊಳ್ಳಬೇಕು. (ಅದು ಆರಿಹೋದರೆ ಪ್ರಾಯಶ್ಚಿತ್ತವುಂಟು.) ಇಂಥ ಅಗ್ನಿಹೋತ್ರಿಗಳನ್ನು ಆಹಿತಾಗ್ನಿಗಳೆಂದೂ ಕರೆಯುತ್ತಾರೆ. ಇಂಥವರಿಗಾಗಿಯೇ ಪಂಚಾಗ್ನಿವಿದ್ಯೆಯನ್ನು ವಿಧಿಸಿದೆ. ಅಗ್ನಿಹೋತ್ರಕರ್ಮಕ್ಕೆ ಮುಖ್ಯವಾಗಿ ಅಗ್ನಿಯು ಬೇಕು. ಅನಂತರ ಸಮಿತ್ತು (ಕಟ್ಟಿಗೆ) ಬೇಕಾಗುವದು. ಇಂಧನವಿಲ್ಲದೆ ಅಗ್ನಿಯು ಪ್ರತ್ಯಕ್ಷನಾಗುವದಿಲ್ಲ. ಅಗ್ನಿಯ ಕರ್ಮ—ಎಂದಕೂಡಲೆ ಹೊಗೆಯಾಗುವದು ಅನಿವಾರ್ಯವು. ಅನಂತರ ಚೆನ್ನಾಗಿ ಹೊತ್ತಿಸಿದರೆ ಬೆಂಕಿಯು ಉರಿಯುತ್ತದೆ. ಇದನ್ನು ಜ್ವಾಲೆ ಎನ್ನುವರು. ಹೀಗೆಯೇ ಬೆಂಕಿಗೆ ಸಂಬಂಧಪಟ್ಟಂತೆ ಕೆಂಡಗಳೂ ಕಿಡಿಗಳೂ ಇದ್ದೇ ಇರುವವು. ಇವುಗಳೆಲ್ಲವನ್ನೂ ಪ್ರಸಿದ್ಧವಾದ ಅಗ್ನಿಯಲ್ಲಿ ನಾವು ಕಂಡೇ ಇರುವದರಿಂದ ಕಲ್ಪನೆಯನ್ನೇನೂ ಮಾಡಬೇಕಾಗಿಲ್ಲ, ಆದರೆ ಪಂಚಾಗ್ನಿವಿದ್ಯೆಯಲ್ಲಿ ಹೇಳಿರುವ ವಸ್ತುಗಳೂ ಯಾವವೂ ಅಗ್ನಿಯಲ್ಲ. ಅವು ಯಾವವೆಂದರೆ: ದ್ಯುಲೋಕ, ಪರ್ಜನ್ಯ (ಮಳೆ), ಪೃಥಿವೀ, ಪುರುಷ ಮತ್ತು ಸ್ತ್ರೀ—ಈ ಐದನ್ನೂ ಅಗ್ನಿಯೆಂದು ಚಿಂತಿಸಬೇಕು—ಧ್ಯಾನಮಾಡಬೇಕು—ಎಂದು ತಿಳಿಸಲಾಗಿದೆ. ಅಗ್ನಿಯಲ್ಲದ್ದನ್ನು ಅಗ್ನಿಯೆಂತ ಏಕೆ ಚಿಂತಿಸಬೇಕು? ಎಂದು ಕೇಳಿದರೆ ಹಾಗೆಂತ ಶಾಸ್ತ್ರದಲ್ಲಿ ಹೇಳಿದೆ—ಎಂಬಿದೇ ಉತ್ತರ.

ಉಪಾಸನೆ, ಕರ್ಮಗಳಿಗೆಲ್ಲ ಹೀಗೆಯೇ ಪ್ರಾಮಾಣ್ಯವನ್ನು ಕಲ್ಪಿಸಬೇಕು. ಧರ್ಮ ಜಿಜ್ಞಾಸೆಯಲ್ಲಿ ಶ್ರುತಿಗಳು ಮಾತ್ರವೇ ಪ್ರಮಾಣವು–ಎಂದು ಶ್ರೀಶಂಕರಾಚಾರ್ಯರೇ ತಿಳಿಸಿದ್ದಾರೆ. ಆದ್ದರಿಂದ ಪಂಚಾಗ್ನ್ಯುಪಾಸಕನು ಶಾಸ್ತ್ರದೃಷ್ಟಿಯಿಂದ ವಿಚಲಿತನಾಗ ಬಾರದು.

ಈಗ ಪಂಚಾಗ್ನ್ಯುಪಾಸನೆಗೂ ಮಾನವನ ಹುಟ್ಟಿಗೂ ಸಂಬಂಧವೇನೆಂದು ತಿಳಿಯೋಣ. ನಮ್ಮೆಲ್ಲರ ಹುಟ್ಟು ಉಷ್ಣಾಂಶದಿಂದ ಸಂಭವಿಸಿದೆ–ಎಂಬುದು ಎಲ್ಲರಿಗೂ ಗೊತ್ತು. ಬದುಕು ಸಹ ಉಷ್ಣವಿದ್ದರೆ ಮಾತ್ರವೇ. ಶೀತವಾದರೆ ಸಾವೇ ಗತಿ–ಎಂದು ಶ್ರುತಿಯಲ್ಲಿಯೂ ತಿಳಿಸಿದೆ. ಆದ್ದರಿಂದ ಬೆಂಕಿಯ ಸ್ವಭಾವವಾದ ಉಷ್ಣವು ಮಾನವನ ಜೀವನದ ತಿರುಳಾದ್ದರಿಂದ ಅಗ್ನಿದೇವನನ್ನು ಮನುಷ್ಯನು ಆರಾಧಿಸಬೇಕೆಂದು ಆರ್ಯರು ಗೊತ್ತುಪಡಿಸಿದ್ದಾರೆ. ಇದೇ ಅಗ್ನಿಹೋತ್ರವು. ಅಗ್ನಿಯಿಂದಲೇ ಹೊರಬಂದ ಮಾನವನು ಅಗ್ನಿ (ಶಾಖ)ಮಯನಾಗಿಯೇ ಬದುಕಿ ಸತ್ತಾಗಲೂ ಅಗ್ನಿಯನ್ನೇ ಸೇರಿಬಿಡುವನು. ಆದ್ದರಿಂದಲೇ ಶವವನ್ನು ದಹನಮಾಡಿಬಿಡುತ್ತಾರೆ. ಇಂಥ ಪ್ರತ್ಯಕ್ಷದೇವತೆಯಾದ ಅಗ್ನಿಯೇ ಎಲ್ಲೆಲ್ಲಿಯೂ ಇರುವನು. ಇವನೇ ಮಾನವನನ್ನು ಬೇರೆಬೇರೆಯ ರೂಪಗಳಿಂದ ಸಾವಿನಿಂದ ಹುಟ್ಟಿಗೂ ಹುಟ್ಟಿನಿಂದ ಸಾವಿಗೂ ಒಯ್ಯುತ್ತಿರುವನು. ಈ ತತ್ತ್ವವನ್ನರಿತು ದ್ಯುಲೋಕಾದ್ಯುಪಾಧಿಗಳಲ್ಲಿಯೂ ಅಗ್ನಿದೃಷ್ಟಿಯನ್ನು ಮಾಡಬೇಕೆಂದು ಇಲ್ಲಿ ತಿಳಿಸಿದೆ. ಹುಟ್ಟಿದ ಮನುಷ್ಯನು ಸಾಯಲೇಬೇಕಷ್ಟೆ! ಹಾಗೆ ಸತ್ತಾಗ ಏನಾಗುವನು? ಮರಳಿ ದೇಹಕ್ಕೆ ಹೇಗೆ ಬರುವನು? ಈ ಜೀವನ ಹುಟ್ಟುವಿಕೆಯ ಗುಟ್ಟೇನು? ಎಂಬಿದೇ ಈ ಪಂಚಾಗ್ನಿವಿದ್ಯೆಯ ಪರಮರಹಸ್ಯವಾಗಿದೆ.

ಈಗ ದ್ಯುಲೋಕಾಗ್ನಿಯನ್ನು ವಿಚಾರಮಾಡೋಣ. ಸ್ವರ್ಗಲೋಕವನ್ನೇ ದ್ಯುಲೋಕವೆನ್ನುವರು. ಪುಣ್ಯಕರ್ಮಿಯು ಸತ್ತರೆ ಸ್ವರ್ಗಕ್ಕೆ ಹೋಗುತ್ತಾನೆಂದೂ ಈಗಲೂ ಜನರು ನಂಬಿದ್ದಾರೆ. ಸತ್ತವರಿಗೆಲ್ಲ 'ತಿಥಿ' ಮಾಡುವದು, ವೈಕುಂಠಸಮಾರಾಧನೆ ಅಥವಾ ಶಿವಗಣಾರಾಧನೆ ಮಾಡುವದು ಜಾರಿಯಲ್ಲಿದೆ. ಆದ್ದರಿಂದ ಸ್ವರ್ಗದಿಂದಲೇ ಆರಂಭಿಸಿ ಪಂಚಾಗ್ನಿವಿದ್ಯೆಯನ್ನು ತಿಳಿಸಿದ್ದಾರೆ. ಒಬ್ಬ ಜೀವನು ಸ್ವರ್ಗದಿಂದ ಮತ್ತೆ ಭೂಮಿಗೆ ಬರುತ್ತಾನೆಯೆ? ಎಂಬ ಪ್ರಶ್ನೆಗೆ ಶ್ರುತಿಯು ಹೌದು–ಎಂದು ನಿಸ್ಸಂಶಯವಾಗಿ ಉತ್ತರವನ್ನು ಕೊಡುತ್ತದೆ. ಅಷ್ಟೇ ಅಲ್ಲ; ಅವನು ಹಾಗೆ ಬರುವಾಗ ಕ್ರಮವಾಗಿ ಐದು ಜಾಗಗಳನ್ನು ಮುಟ್ಟಿ ಬರುತ್ತಾನೆ–ಎಂದೂ ತಿಳಿಸುತ್ತದೆ. ನಮಗೆಲ್ಲ ಗೊತ್ತಿರುವಂತೆ ಜೀವನು ಎರಡು ಸ್ಥಳಗಳನ್ನು ಹೊಕ್ಕು ಭೂಮಿಗೆ ಬರುವದು ನಿಜ. ಇವರೇ ತಂದೆ–ತಾಯಿಗಳು. ತಂದೆ ತಾಯಿಗಳ ಅವಲಂಬನೆಯಿಲ್ಲದೆ ಯಾವ ಮನುಷ್ಯನಿಗೂ ಜನ್ಮವಿಲ್ಲ. ಆದ್ದರಿಂದಲೇ ಮಾತಾಪಿತೃಗಳನ್ನು ದೇವಸಮಾನರೆಂದು ಬೇರೊಂದು ಶ್ರುತಿಯಲ್ಲಿ ಹೇಳಿದೆ. ಈ ಶ್ರುತಿಯಲ್ಲಿ ಅವರನ್ನು ಅಗ್ನಿಗಳೆಂದು ಹೊಗಳಿದೆ. ಆದರೆ ಈ ಯೋಷಾಗ್ನಿ (ತಾಯಿ)

ಪುರುಷಾಗ್ನಿ (ತಂದೆ)ಗಳಿಗಿಂತ ಮುಂಚೆ ಪೃಥಿವೀ, ಪರ್ಜನ್ಯ, ದ್ಯುಲೋಕಗಳೆಂಬ ಅಗ್ನಿಗಳನ್ನೂ ದಾಟಿಕೊಂಡೇ ಜೀವನು ಪುರುಷನನ್ನು ಪ್ರವೇಶಿಸುತ್ತಾನೆ. ಆದ್ದರಿಂದ ಈ ಐದನ್ನೂ ಅಗ್ನಿಗಳೆಂದು ಚಿಂತಿಸಬೇಕು–ಎಂದು ಶ್ರುತಿಯಲ್ಲಿ ತಿಳಿಸಿದೆ.

ಈಗ ದ್ಯುಲೋಕಾದ್ಯಗ್ನಿಗಳ ವಿವರವನ್ನು ತಿಳಿಯೋಣ. ಹಿಂದಿನ ಜನ್ಮದಲ್ಲಿ ಯಜಮಾನನಾಗಿ ಮಾಡಿದ್ದ ಅಗ್ನಿಹೋತ್ರದ ಫಲವಾಗಿ ದ್ಯುಲೋಕವನ್ನು ಪಡೆದಿದ್ದ ಸಾಧಕನು ಅಲ್ಲಿ ಪುಣ್ಯಫಲವನ್ನು ಅನುಭವಿಸಿದ ಅನಂತರ ಐದನೆಯ ಆಹುತಿಯಲ್ಲಿ ಪುರುಷನೆನಿಸುತ್ತಾನೆ. ಹೇಗೆಂದರೆ ಸ್ವರ್ಗಲೋಕವೆಂಬ ಅಗ್ನಿಯಲ್ಲಿ ಮೊದಲು ಹೋಮವಾಗಿ ಈ ಸಾಧಕನು ಅರ್ಪಿಸಲ್ಪಡುವನು. ಭಾವನೆಯಿಂದ ಸ್ವರ್ಗಲೋಕವನ್ನು ಅಗ್ನಿಯೆಂದು ಚಿಂತಿಸಬೇಕು. ದ್ಯುಲೋಕಾಗ್ನಿಯ ಭಾವನೆಯ ಸಮಯಕ್ಕೆ ಸೂರ್ಯನಲ್ಲಿ ಸಮಿತ್ ದೃಷ್ಟಿಯನ್ನೂ ಕಿರಣಗಳಲ್ಲಿ ಧೂಮದೃಷ್ಟಿಯನ್ನೂ ಹಗಲಿನಲ್ಲಿ ಜ್ವಾಲೆಯ ದೃಷ್ಟಿಯನ್ನೂ ಚಂದ್ರನಲ್ಲಿ ಕೆಂಡದ ದೃಷ್ಟಿಯನ್ನೂ ನಕ್ಷತ್ರಗಳಲ್ಲಿ ಕಿಡಿಯ ದೃಷ್ಟಿಯನ್ನೂ ಮಾಡಬೇಕು. ಇದೇ ರೀತಿಯಾಗಿ ಎರಡನೆಯದಾದ ಪರ್ಜನ್ಯ (ಮಳೆ), ಅಗ್ನಿ, ವಾಯು, ಮಿಂಚು, ಸಿಡಿಲು, ಗುಡುಗುಗಳಲ್ಲಿ ಸಮಿದಾದಿಭಾವನೆಮಾಡಬೇಕು. ಮುಂದುವರೆದು ಮೂರನೆಯದಾದ ಪೃಥಿವ್ಯಗ್ನಿಯ ಸಂವತ್ಸರ, ಆಕಾಶ, ರಾತ್ರಿ, ದಿಕ್ಕುಗಳು, ಅವಾಂತರ ದಿಕ್ಕುಗಳಲ್ಲಿ ಹಿಂದಿನಂತೆ ಸಮಿದಾದಿದೃಷ್ಟಿಯನ್ನು ಮಾಡಬೇಕು. ನಾಲ್ಕನೆಯದಾದ ಪುರುಷಾಗ್ನಿಯ ವಾಕ್ಕು, ಪ್ರಾಣ, ಜಿಹ್ವೆ, ಚಕ್ಷುಸ್ಸು, ಶ್ರೋತ್ರಗಳಲ್ಲಿಸಮಿದಾದಿದೃಷ್ಟಿಯನ್ನು ಮಾಡಬೇಕು. ಐದನೆಯದಾದ ಯೋಷಾಗ್ನಿಯ ಉಪಸ್ಥ, ಉಪಮಂತ್ರಣ, ಯೋನಿ, ಅಂತರಕ್ರಿಯೆ, ಅಭಿನಂದನಗಳಲ್ಲಿ ಸಮಿದಾದಿದೃಷ್ಟಿಯನ್ನು ಮಾಡಬೇಕು. ಹೀಗೆ ಭಾವನೆಯಿಂದ ಕಲ್ಪಿಸಿದ ಐದು ಅಗ್ನಿಗಳಲ್ಲಿ ಆಯಾ ದೃಷ್ಟಿಯಿಂದ ಚಿಂತಿಸಬೇಕು.

ಹೀಗೆ ಚಿಂತಿಸುವವನ ದೃಷ್ಟಿಯಿಂದ ವಿಚಾರಮಾಡಿದಾಗ ಮೊದಲನೆಯ ದ್ಯುಲೋಕಾಗ್ನಿಯಲ್ಲಿ ದೇವತೆಗಳು ಶ್ರದ್ಧೆಯನ್ನು–ಎಂದರೆ ಯಜಮಾನನು ಮಾಡಿದ ಕರ್ಮಫಲಗಳ ಅಪೂರ್ವವೆಂಬ ಸೂಕ್ಷ್ಮವಾದ ವಸ್ತುವನ್ನು–ಹೋಮಮಾಡುತ್ತಾರೆ. ಅದು ಪರ್ಜನ್ಯವನ್ನು ಸೇರಿದಾಗ ಸೋಮಾಹುತಿಯಾಗಿ ಮಾರ್ಪಡುವದು. ಅದೇ ಮಳೆಯು. ಅದು ಭೂಮಿಯಲ್ಲಿ ಬಿದ್ದಾಗ ವರ್ಷವೆಂಬ ಆಹುತಿಯೆನಿಸುವದು. ಅದರಿಂದ ಅನ್ನವುಂಟಾಗಿ ಪುರುಷಾಗ್ನಿಯಲ್ಲಿ ಹೋಮಮಾಡಲ್ಪಡುವದು. ಅಲ್ಲಿ ರೇತಸ್ಸಾಗಿ ಪರಿಣಮಿಸುವದು. ಅನಂತರ ಅದು ಸ್ತ್ರೀಯೋನಿಯಲ್ಲಿ ಗರ್ಭಾಧಾನಕಾಲಕ್ಕೆ ಚಿಮುಕಿಸಲ್ಪಟ್ಟು ಹೋಮವೆನಿಸಿ ಗರ್ಭವಾಗುವದು. ಹೀಗೆ ಐದನೆಯ ಆಹುತಿಯಲ್ಲಿ ಸಾಧಕನ ಅಗ್ನಿಹೋತ್ರಕರ್ಮಫಲವಾದ ಅಪೂರ್ವವೆಂಬ ಆಹುತಿಯು ಪುರುಷನೆನಿಸಿ ಹೊರಬರುವದು. ಅಗ್ನಿಹೋತ್ರಿಯು ಹೀಗೆ ಪುನರ್ಜನ್ಮವನ್ನು ಪಂಚಾಗ್ನಿಗಳಲ್ಲಿ ಆಹುತಿಯಾಗುವ ಮೂಲಕ ಪಡೆಯುವನು–ಎಂಬಿದೇ ಐದನೆಯ ಪ್ರಶ್ನೆಯ ಉತ್ತರವು.

## ಪಂಚಾಗ್ನಿವಿದ್ಯೆಯ ಫಲ

**ಓಮ್ ॥ ತತ್ಪುರುಷೋऽಮಾನವಃ ಸ ಏನಾನ್ ಬ್ರಹ್ಮ ಗಮಯತಿ ಏಷ ದೇವಯಾನಃ ಪಂಥಾ ಇತಿ ॥ 5–10–2**

ಭಾವಾರ್ಥ:– ಅಲ್ಲಿ ಅಮಾನವನಾದ ಪುರುಷನು (ಇರುವನಲ್ಲ), ಅವನು ಇವರನ್ನು ಬ್ರಹ್ಮಲೋಕವನ್ನು ಸೇರಿಸುತ್ತಾನೆ. ಇದು ದೇವಯಾನಮಾರ್ಗವು.

(ಪಂಚಾಗ್ನಿವಿದ್ಯಾವಿಶಿಷ್ಟನಾದವನು ಗೃಹಸ್ಥನಾಗಿದ್ದರೂ ಸಾಮಾನ್ಯಗೃಹಸ್ಥನಂತೆ ದಕ್ಷಿಣ ಮಾರ್ಗದಿಂದ ಚಂದ್ರಲೋಕಕ್ಕೆ ಹೋಗುವದಿಲ್ಲ. ಮತ್ತೇನೆಂದರೆ ವಿದ್ಯಾಬಲದಿಂದ ಅರ್ಚಿರಾದಿ ಮಾರ್ಗದ ಮೂಲಕ ವಿದ್ಯುಲ್ಲೋಕವನ್ನು ಹೊಂದುವನು. ಅಲ್ಲಿ ಅಮಾನವಪುರುಷನು ಈತನನ್ನು ಒಯ್ದು ಬ್ರಹ್ಮಲೋಕವನ್ನು ಸೇರಿಸಿಬಿಡುವನು. ಬ್ರಹ್ಮಲೋಕದಲ್ಲಿ ಕಲ್ಪಾಂತದವರೆಗೂ ಇದ್ದುಕೊಂಡಿರುವನು–ಎಂದಭಿಪ್ರಾಯ.)

## 34. ಪ್ರವಾಹಣಜೈವಲಿಯ ಉತ್ತರಗಳು

ಈವರೆಗೆ ವಿವರಿಸಿರುವಂತೆ ಕೇಳಲ್ಪಟ್ಟಿರುವ ಐದು ಪ್ರಶ್ನೆಗಳಲ್ಲಿ ಈಗ ಉಳಿದವುಗಳಿಗೆ ಉತ್ತರವನ್ನು ತಿಳಿಸಲಾಗುವದು. ಅವುಗಳಲ್ಲಿ ಮೂರನೆಯ ಪ್ರಶ್ನೆಯನ್ನು ಈಗ ಬಿಡಿಸಲಾಗುವದು. ಅದು ಯಾವದೆಂದರೆ: ದೇವಯಾಣ ಪಿತೃಯಾಣಗಳು ಅಗಲುವದೆಲ್ಲಿ? ಎಂಬ ಪ್ರಶ್ನೆಯಾಗಿದೆ. ಯಾನ ಎಂದರೆ ಗತಿ ಎಂದರ್ಥ. ಪಿತೃಗಳೆಂಬವರೂ ದೇವತೆಗಳೇ ಸರಿ. ಆದರೆ ಇಲ್ಲಿ ದೇವಯಾನಶಬ್ದಕ್ಕೆ ಬ್ರಹ್ಮಲೋಕವನ್ನು ಪಡೆಯುವ ಮಾರ್ಗವೆಂದರ್ಥ. ಬ್ರಹ್ಮನನ್ನು ಹಿರಣ್ಯಗರ್ಭನೆಂದೂ ಕರೆಯುವರು. ಹಿರಣ್ಯಗರ್ಭನ ಲೋಕಪ್ರಾಪ್ತಿಯು ಉಳಿದ ಸ್ವರ್ಗಾದಿಫಲಗಳಿಗಿಂತ ವಿಶಿಷ್ಟವಾಗಿರುವದು. ಏಕೆಂದರೆ ಒಂದು ಕಲ್ಪಕಾಲದವರೆಗೂ ಆ ಲೋಕವು ಶಾಶ್ವತವಾಗಿರುತ್ತದೆ. ಉಳಿದ ಸ್ವರ್ಗಾದಿಗಳು ಹಿರಣ್ಯಗರ್ಭನ ಪ್ರತಿ ಹಗಲು ರಾತ್ರಿಗಳಿಗೂ ಸೃಷ್ಟಿಪ್ರಲಯಗಳನ್ನು ಹೊಂದುವವು. ಆದ್ದರಿಂದ ಇವು ಹಿರಣ್ಯಗರ್ಭಲೋಕಕ್ಕೆ ಹೋಲಿಸಿದರೆ ಅನಿತ್ಯವಾಗಿರುವವು. ಸ್ವರ್ಗಾದಿಲೋಕಗಳನ್ನು ಪಡೆಯಲು ಕೇವಲ ಶ್ರೌತಕರ್ಮಗಳೇ ಸಾಕು. ಆದರೆ ಹಿರಣ್ಯಗರ್ಭಲೋಕವನ್ನು ಪಡೆಯಲು ಕರ್ಮಗಳ ಜೊತೆಗೆ ಉಪಾಸನೆಯೂ ಬೇಕಾಗುವದು. ಅಂಥ ಉಪಾಸನೆಗಳಲ್ಲಿ ಒಂದಾದ ಪಂಚಾಗ್ನಿವಿದ್ಯೆಯು ಈಗ ನಮಗೆ ಜಿಜ್ಞಾಸ್ಯವಾಗಿರುತ್ತದೆ. ಹಿಂದೆ ತಿಳಿಸಿದಂತೆ ದ್ಯುಲೋಕಾದಿಗಳಲ್ಲಿ ಅಗ್ನಿದೃಷ್ಟಿಯನ್ನು ಮಾಡಿ ಉಪಾಸನೆ ಮಾಡುವ ಸಾಧಕರಿಗೆ ಆ ಧ್ಯಾನದ ಬಲದಿಂದ ಬ್ರಹ್ಮಲೋಕಪ್ರಾಪ್ತಿಯಾಗುವದು. ಇಂಥವರು ಗೃಹಸ್ಥರಾಗಿದ್ದರೂ ಅರಣ್ಯವಾಸಿಗಳಾಗಿರುವರು. ತಪೋಜೀವನವನ್ನು ನಡೆಸುತ್ತಿರುವರು. ಶ್ರದ್ಧಾಸತ್ಯ

ಧರ್ಮಪರರಾಗಿರುವರು. ಆದಷ್ಟೂ ಕಾಮರಹಿತರಾಗಿರುವರು. ಆದ್ದರಿಂದ ಇಂಥ ವಿದ್ಯಾಕರ್ಮಗಳ ಸಮುಚ್ಚಯಾನುಷ್ಠಾತೃಗಳಿಗೆ ಸ್ವರ್ಗಲೋಕಕ್ಕಿಂತ ಮಿಗಿಲಾದ ಬ್ರಹ್ಮಲೋಕವು ದೊರಕುವದು. ಇವರು ಶರೀರವನ್ನು ಬಿಟ್ಟುಹೊರಡುವಾಗಲೇ ಬೆಳಕಿನ ಮಾರ್ಗದಿಂದ ಸಾಗುವರು. ಅಹರ್ದೇವತೆಯು ಇವರನ್ನು ಕರೆದೊಯ್ದು ಶುಕ್ಲಪಕ್ಷ ದೇವತೆಗೆ ಒಪ್ಪಿಸುವನು. ಅಲ್ಲಿಂದ ಉತ್ತರಾಯಣದೇವತೆಯನ್ನು ಸೇರಿ ಸಂವತ್ಸರ ದೇವತೆಯ ಮೂಲಕ ಸೂರ್ಯನನ್ನು ಸೇರಿ ಅನಂತರ ಚಂದ್ರನನ್ನು ದಾಟಿ ವಿದ್ಯುಲ್ಲೋಕವನ್ನು ಹೊಂದಿ ಅಲ್ಲಿ ಒಬ್ಬ ಅಮಾನವಪುರುಷನು ಬರಲಾಗಿ ಆತನೊಡಗೂಡಿ ಬ್ರಹ್ಮಲೋಕವನ್ನು ಹೊಂದುವರು. ನಂತರ ಇವರು ಮರಳಿ ಸಂಸಾರಕ್ಕೆ ಬರುವದಿಲ್ಲ–ಇದೇ ದೇವಯಾನಗತಿಯು. ಆದರೆ ಇನ್ನು ಯಾವ ಗೃಹಸ್ಥರು ಕಾಡಿಗೆ ಹೋಗದೆ ಊರಿನಲ್ಲೇ ಇದ್ದುಕೊಂಡು ಯಜ್ಞ, ಅತಿಥಿಸತ್ಕಾರ, ಕೆರೆಬಾವಿಗಳ ಹಾಗೂ ಅನ್ನಸತ್ರಗಳ ನಿರ್ಮಾಣ–ಮುಂತಾದ ಪುಣ್ಯಕಾರ್ಯಗಳನ್ನು ಅನುಷ್ಠಾನಮಾಡಿ ಕೊಂಡಿರುವರೋ ಅವರುಗಳು ಸ್ವರ್ಗವನ್ನೋ, ಪಿತೃಲೋಕವನ್ನೊ– ಪಡೆಯುವರು. ಪಿತೃಲೋಕವೆಂಬುದೂ ಸ್ವರ್ಗದ ಒಂದು ಭಾಗವೇ. ಅಲ್ಲಿಯೂ ಅಮಾನುಷವಾದ ಭೋಗಗಳಿರುವವು. ಅಂಥ ಲೋಕಕ್ಕೆ ಕರ್ಮಿಗಳು ಕ್ರಮವಾಗಿ ರಾತ್ರಿ, ಕೃಷ್ಣಪಕ್ಷದೇವತೆ, ಹಾಗೂ ದಕ್ಷಿಣಾಯನ ದೇವತೆಗಳ ಮೂಲಕ ಸೇರುವರು. ಅಲ್ಲಿ ಚಂದ್ರನಿಗೆ ಭೋಗ್ಯ ರಾಗಿರುವರು. ಅಲ್ಲಿಯ ಭೋಗಗಳೆಲ್ಲವೂ ಪುಣ್ಯವಿರುವವರೆಗೆ ಮಾತ್ರ ಲಭ್ಯವಾಗಿರು ವವು. ಅದು ಪೂರೈಸಿದ ಅನಂತರ ಹಿಂದಿರುಗಿ ಪಂಚಾಗ್ನಿಗಳಲ್ಲಿ ಆಹುತಿಯಾಗಿ ಸೇರಿ ಕಡೆಗೆ ಮತ್ತೆ ನರಜನ್ಮವನ್ನು ತಾಳುವರು. ಹೀಗೆ ಕೇವಲ ಕರ್ಮಿಗಳಿಗೆ ಪುನರಾವೃತ್ತಿಯುಂಟು. ಈ ರೀತಿಯಾಗಿ ಮರಳಿ ಬರುವವರು ಪಿತೃಯಾಣಮಾರ್ಗವೆಂಬ ಹಾದಿಯಿಂದ ಸಂಚರಿಸುತ್ತಾರೆ. ಆದ್ದರಿಂದ ಈ ಲೋಕದಿಂದ ಕರ್ಮಿಗಳು ಮತ್ತು ಉಪಾಸಕರು ಸಹ ತಮ್ಮ ತಮ್ಮ ಕರ್ಮಫಲಪ್ರಾಪ್ತಿಗಾಗಿ ಹೊರಡುವಾಗಲೇ ಅಗಲಿ ಬಿಡುವರು. ಇವರುಗಳಲ್ಲಿ ಪಿತೃಯಾಣದಿಂದ ಹೋದವರು ಹಿಂದಿರುಗುವವರಾಗಿದ್ದು ದೇವಯಾಣದಿಂದ ಹೋದವರು ಹಿಂದಿರುಗದೆ ಬ್ರಹ್ಮಲೋಕದಲ್ಲಿಯೇ ಜ್ಞಾನವನ್ನು ಸಂಪಾದಿಸಿಕೊಂಡು ಮುಕ್ತರಾಗಿಬಿಡುವರು– ಎಂಬಿದು ಮೂರನೆಯ ಪ್ರಶ್ನೆಗೆ ಉತ್ತರವು.

ಈಗ ದ್ಯುಲೋಕವು ಪೂರ್ಣವಾಗುವದಿಲ್ಲವೇಕೆ? ಎಂಬ ಪ್ರಶ್ನೆಗೆ ಉತ್ತರವನ್ನು ತಿಳಿಯೋಣ. ದ್ಯು ಎಂದರೆ ಸ್ವರ್ಗಲೋಕವು. ಇದು ಯಾವಾಗಲೂ ಕಿಕ್ಕಿರಿಯುವ ಸಂಭವವಿಲ್ಲ. ಹೇಗೆಂದರೆ ಪುಣ್ಯಕರ್ಮಿಗಳಿಗೆ ಮಾತ್ರ ಇಲ್ಲಿ ಪ್ರವೇಶವಿರುತ್ತದೆ. ಲೋಕದಲ್ಲಿ ಯಜ್ಞಯಾಗಾದಿಪುಣ್ಯಕರ್ಮಗಳನ್ನು ಅನುಷ್ಠಾನಮಾಡುವವರೇ ಕಡಿಮೆ. ಹಾಗೆ ಮಾಡುವಾಗಲೂ ಕರ್ಮಗಳ ಅನುಷ್ಠಾನಕಾಲಕ್ಕೆ ಏನಾದರೂ ನ್ಯೂನತೆಗಳಿದ್ದರೆ ಸ್ವರ್ಗವು ದಕ್ಕುವದಿಲ್ಲ. ಹೀಗಿರುವದರಿಂದ ದ್ಯುಲೋಕವು ಪೂರ್ಣವಾಗುವದಿಲ್ಲ.

ಜೊತೆಗೆ ಅಲ್ಲಿರುವ ಪುಣ್ಯವಂತರನ್ನು ಕೂಡ ಅವರ ಪುಣ್ಯಫಲವು ಪೂರೈಸಿದ ಕೂಡಲೆ ಕೆಳಗಿನ ಲೋಕಗಳಿಗೆ ಕಳುಹಿಸಿಬಿಡುತ್ತಾರೆ. ಹೇಗೆ ಟಿಕೇಟುಹಣವು ಪೂರೈಸಿದಕೂಡಲೆ ರೈಲುಬಸ್ಸುಗಳಿಂದ ಕೆಳಗಿಳಿದುಬಿಡಬೇಕೋ ಹಾಗೆಯೇ ಪುಣ್ಯವು ಕ್ಷೀಣವಾಗಲಾಗಿ ಮರ್ತ್ಯಲೋಕಕ್ಕೆ ಹಿಂದಿರುಗಬೇಕಾಗಿರುತ್ತದೆ. ಹೀಗೆ ಹಿಂದಿರುಗುವಾಗ ದಕ್ಷಿಣಮಾರ್ಗದಲ್ಲಿ ಹಾದು ಬರುವ ಜೀವರುಗಳು ಕರ್ಮಶೇಷಕ್ಕೆ ಅನುಗುಣವಾದ ಜನ್ಮಗಳನ್ನು ಪಡೆಯುತ್ತಾರೆ. ಆಗಾಗ್ಗೆ ಪುಣ್ಯಕರ್ಮಗಳು ಕ್ಷೀಣವಾದವರು ಹಿಂದಿರುಗುವದರಿಂದ ದ್ಯುಲೋಕವು ತುಂಬುವದಿಲ್ಲ. ಹಿಂದಿರುಗಿ ಬಂದವರೆಲ್ಲರೂ ಮತ್ತೆಪುಣ್ಯಕರ್ಮಗಳನ್ನೇ ಅನುಷ್ಠಾನ ಮಾಡುವರೆಂಬ ನಂಬಿಕೆಯೂ ಇಲ್ಲ. ಹೇಗೆಂದರೆ ಅವರುಗಳ ಜನ್ಮಾಂತರಸಂಚಿತಕರ್ಮಗಳು ಏನೇನಿರುವವೋ ತಿಳಿಯದು. ಯಾವದಾದರೂ ಪಾಪವಾಸನೆಯು ಎದ್ದುಕೊಂಡುಬಿಟ್ಟರೆ ಅಂಥವರು ಉತ್ತಮಯೋನಿಯಲ್ಲಿಹುಟ್ಟಿದರೂ ಪಾಪಕರ್ಮಗಳನ್ನೇ ಮಾಡುವರು. ಇದು ಲೋಕಪ್ರಸಿದ್ಧವಾಗಿದೆ. ಹೇಗೆಂದರೆ ಹಣವು ಇರುವವರೆಲ್ಲ ದಾನಧರ್ಮಗಳನ್ನು ಮಾಡುವದಿಲ್ಲ. ಈ ಜನ್ಮದಲ್ಲಿ ಅವರಿಗೆ ದಕ್ಕಿರುವ ಹಣವು ಹಿಂದಿನ ಪುಣ್ಯಕರ್ಮಗಳ ಫಲವಾಗಿರುತ್ತದೆ. ಅದನ್ನು ಅವರು ಅರಿತುಕೊಳ್ಳುವದಿಲ್ಲ ಆದ್ದರಿಂದ ಹಣವನ್ನು ಅಪವ್ಯಯಮಾಡಿ ಪಾಪಗಳನ್ನು ಗಂಟುಹಾಕಿಕೊಂಡು ದ್ಯುಲೋಕದಿಂದ ವಂಚಿತರಾಗಿಬಿಡುವರು. ಹೀಗೂ ಜೀವರುಗಳು ನಷ್ಟರಾಗುವರು. ಇನ್ನು ದ್ಯುಲೋಕವು ಹೇಗೆ ತುಂಬೀತು? ಕೆಲವು ಸನ್ನಿವೇಶಗಳಲ್ಲಿ ಜನರ ಒತ್ತಡ ಹೆಚ್ಚಾಗಿರುವದು. ರೈಲು, ಬಸ್ಸು, ಸಿನೆಮಾ, ಕ್ಲಬ್ಬು, ಕೋರ್ಟುಕಛೇರಿಗಳೂ–ಮುಂತಾದವು ಇದಕ್ಕೆ ಉದಾಹರಣೆಗಳು. ಮತ್ತೆ ಕೆಲವು ಸನ್ನಿವೇಶಗಳಲ್ಲಿ ಜನರೇ ಸೇರುವದಿಲ್ಲ; ಪುರಾಣ, ಉಪನ್ಯಾಸಗಳು–ನಡೆಯುವ ಸ್ಥಲ, ಕೆಲವು ದೇವಾಲಯಗಳು, ಮಠಗಳು–ಇವಕ್ಕೆ ಉದಾಹರಣೆಯಾಗಿವೆ. ಹಾಗೆಯೇ ಸಂತರ್ಪಣೆಗೆ ಜನರು ಸೇರುವಂತೆ ದೇವರ ಉತ್ಸವ, ಪೂಜಾದಿಗಳ ಕಾಲಕ್ಕೆ ಜನರು ಸೇರುವದಿಲ್ಲ. ಹೀಗೆ ಸತ್ಕಾರ್ಯಗಳಿಗೇ ಜನರು ವಿರಳವಾಗಿರುವಲ್ಲಿ ಶಾಸ್ತ್ರೋಕ್ತ ಕರ್ಮಾನುಷ್ಠಾನವನ್ನು ನಿಷ್ಠೆಯಿಂದ ಮಾಡಿ ಸ್ವರ್ಗಕ್ಕೆ ಹೋಗಲೆಳಸುವವರು ಎಲ್ಲಿ ಸಿಕ್ಕುತ್ತಾರೆ? ಅಪರೂಪವಾಗಿ ಸಾವಿರಕ್ಕೆ ಒಬ್ಬಿಬ್ಬರು ದೊರಕಬಹುದು. ಹೀಗಿರುವಲ್ಲಿ ಸ್ವರ್ಗವಾದರೂ ಭರ್ತಿಯಾಗುವದು ಹೇಗೆ?–ಎಂಬಿದೇ ನಾಲ್ಕನೆಯ ಪ್ರಶ್ನೆಗೆ ಉತ್ತರವಾಗಿದೆ.

ಇನ್ನುಳಿದಿರುವ ಎರಡು ಪ್ರಶ್ನೆಗಳಿಗೆ ಈಗ ಉತ್ತರವನ್ನು ಕಂಡುಕೊಳ್ಳೋಣ. (1)ಈ ಮನುಷ್ಯಲೋಕವನ್ನು ಬಿಟ್ಟವರು ಎಲ್ಲಿಗೆ ಹೋಗುತ್ತಾರೆ? ಎಂಬುದು ಇವುಗಳಲ್ಲೊಂದಾಗಿದೆ. ಇದಕ್ಕೆ ತಕ್ಕಮಟ್ಟಿಗೆ ಉತ್ತರವನ್ನು ಹೇಳಲಾಗಿದೆ. ಇಲ್ಲಿ ಮನುಷ್ಯಲೋಕದಿಂದ ಹೊರಡುವವರು ಯಾರು? ಎಂಬುದನ್ನವಲಂಬಿಸಿ

ಉತ್ತರಿಸಬೇಕಾಗಿದೆ. ಪಾಪಕರ್ಮಿಗಳಾಗಿದ್ದರೆ ನರಕಾದಿಗಳಿಗೂ ಪುಣ್ಯಕರ್ಮಿಗಳಾಗಿದ್ದರೆ ದ್ಯುಲೋಕಕ್ಕೂ ಹೋಗುವದು ಖಂಡಿತ. ಇದನ್ನು ನಾವು ಪ್ರತ್ಯಕ್ಷವಾಗಿ ತೋರಿಸಲಾಗುವದಿಲ್ಲ. ಆದರೆ ನಿಜ. ಹೇಗೆ ನಾವು ಬೇವಿನ ಬೀಜವನ್ನು ನೆಟ್ಟರೆ ಕಹಿಯಾದ ಹೂವುಪತ್ರೆಗಳೂ ಫಲವೂ ದೊರಕುವವೋ, ಮಾವಿನ ಬೀಜವನ್ನು ಬಿತ್ತಿದರೆ ಸಿಹಿಯಾದ ಹಣ್ಣು ದೊರೆಯುವದೋ ಹಾಗೆಯೇ ಕರ್ಮಬೀಜವು ಅಶುಭವಾಗಿದ್ದರೆ ನರಕಾದಿಗಳೂ, ಶುಭವಾಗಿದ್ದರೆ ಸ್ವರ್ಗಾದಿಗಳೂ ಸಿಗುವವು. ಇದಕ್ಕೆ ಶ್ರುತಿಯೇ ಪ್ರಮಾಣವು. ಇನ್ನು ಕರ್ಮೋಪಾಸನೆಗಳೆರಡನ್ನೂ ಮಾಡಿದ್ದರೆ ಬ್ರಹ್ಮಲೋಕವೇ ಸಿಗಲಿದೆ. ಅದನ್ನು ಈಗಾಗಲೇ ತಿಳಿಸಲಾಗಿದೆ. ಆದರೆ ಯಾವದೇ ವೈದಿಕಕರ್ಮಗಳನ್ನಾಗಲಿ ಉಪಾಸನೆಗಳನ್ನಾಗಲಿ ಮಾಡದೆ, ವ್ಯರ್ಥಜೀವನವನ್ನು ಪಾಪಕರ್ಮಗಳ ಮೂಲಕ ಸಾಗಿಸಿದ ಜೀವರುಗಳಾಗಿದ್ದರೆ ಅಂಥವರು ಕುರಿ, ಆಡು, ಕೋಳಿಗಳಂತೆ ಮತ್ತೆಮತ್ತೆ ಹುಟ್ಟುವದೂ ಸಾಯುವದೇ ಗತಿಯು. ಇವು ಯಾವ ಲೋಕಗಳೂ ಅಲ್ಲ. ಆದ್ದರಿಂದ ಮನುಷ್ಯ ಲೋಕವನ್ನು ಬಿಟ್ಟವರು ಎಲ್ಲಿಗೆ ಹೋಗುತ್ತಾರೆಂಬ ಪ್ರಶ್ನೆಯು ಕರ್ಮಕಾಂಡ ಪ್ರಾಮಾಣ್ಯವನ್ನು ಒಪ್ಪಿರುವ ಆಸ್ತಿಕರು ಮಾತ್ರವೇ ಕೇಳುವಂಥ ಪ್ರಶ್ನೆಯಾಗಿದೆ. ಇದಕ್ಕೆ ಉತ್ತರವನ್ನು ಹೇಳಿಯೂ ಆಗಿದೆ.

ಕೊನೆಯ ಪ್ರಶ್ನೆಯಾದ (2) ಪರಲೋಕದಿಂದ ಹಿಂದಿರುಗಿಬರುವದು ಹೇಗೆ? ಎಂಬುದನ್ನು ಉಪನಿಷತ್ತಿನಲ್ಲಿ ಕರ್ಮಕಾಂಡದ ದೃಷ್ಟಿಯಿಂದಲೇ ಬಿಡಿಸಲಾಗಿದೆ. ಹೇಗೆಂದರೆ ಇಷ್ಟಾದಿಕಾರಿಗಳು ಕರ್ಮಶೇಷದಿಂದ ಈ ಲೋಕಕ್ಕೆ ಬರುವಾಗ ಆಕಾಶ, ವಾಯು, ಧೂಮ, ಮೋಡ, ಮಳೆ, ಪೈರುಗಳ ಮೂಲಕ ಮತ್ತೆ ಪುರುಷನನ್ನು ಸೇರಿ ರೇತೋರೂಪದಿಂದ ಸ್ತ್ರೀಯರಲ್ಲಿ ಹೊಕ್ಕು ಜನ್ಮವನ್ನು ಪಡೆಯುತ್ತಾರೆ. ಹೀಗೆ ಹೊರಬರುವದು ತೀರ ಕಷ್ಟವೇ. ಹೇಗೆಂದರೆ ಧೂಮಮಂಡಲದಿಂದ ಮಳೆಯಾಗಿ ಪರಿವರ್ತಿಸಲ್ಪಟ್ಟು ಭೂಮಿಗೆ ಬೀಳುವಾಗ ಆ ಮಳೆಯು ಸಮುದ್ರದಲ್ಲಿಯೊ, ಕಾಡುಗಳಲ್ಲಿಯೊ– ಬಿದ್ದುಬಿಟ್ಟರೆ ವ್ಯರ್ಥವಾಗುವದು. ಅಂಥವರು ಪುನಃ ಮಳೆಯರೂಪವನ್ನು ಪಡೆಯಬೇಕು. ಏಕೆಂದರೆ ಮಳೆಯು ಕೃಷಿಯೋಗ್ಯವಾದ ಭೂಮಿಗೆ ಬಿದ್ದಾಗ ಮಾತ್ರವೇ ಪೈರಿಗೆ ಸಹಾಯಕವಾಗುವದರಿಂದ ಆ ಜೀವರುಗಳಿಗೆ ಪೈರನ್ನು ಆಶ್ರಯಿಸಲು ಅವಕಾಶವಿರುತ್ತದೆ. ಆಗಲೂ ಪೈರಿನ ಕಾಳುಗಳನ್ನು ಹಕ್ಕಿಗಳು ತಿನ್ನದೆ, ಚೆಲ್ಲಿಹೋಗದೆ ಮನುಷ್ಯನೇ ತಿಂದಾಗ ರೇತಸ್ಸಾಗುವದು. ಅಲ್ಲಿಯೂ ರೋಗಿಗಳೊ, ಮುದುಕರೊ– ತಿಂದುಬಿಟ್ಟರೆ ರೇತಸ್ಸಾಗುವ ಸಂಭವವಿಲ್ಲ. ಆದ್ದರಿಂದ ರೇತಸ್ಸೇಚನ ಯೋಗ್ಯನಾದ, ಅದರಲ್ಲಿಯೂ ಸಾತ್ತ್ವಿಕನಾದ, ಪತ್ನಿಯು ಗರ್ಭಧಾರಣೆಮಾಡುವಂಥ ಸಾಮರ್ಥ್ಯವುಳ್ಳವನೇ ಭಕ್ಷಿಸಬೇಕು. ಅನಂತರವೂ ಪತ್ನಿಯು ಋತುಮತಿಯಾದಾಗ ಯಜಮಾನನು ಆಕೆಯಲ್ಲಿ ರೇತಸ್ಸನ್ನು ನಿಷೇಕಮಾಡಿ ಅದು ದೈವಯೋಗದಿಂದ

ಗರ್ಭವಾದರೆ ಮುಂದೆ ದೇಹವನ್ನು ಪಡೆಯಬಹುದು. ಇಷ್ಟೆಲ್ಲ ಅಡ್ಡಿಆತಂಕಗಳನ್ನು ದಾಟಿಕೊಂಡು ಒಬ್ಬ ಜೀವನು ದೇಹವನ್ನು ಈ ಲೋಕದಲ್ಲಿ ಪಡೆಯಬೇಕಾದರೆ ಎಷ್ಟು ಕಷ್ಟವೆಂಬುದನ್ನು ಹೇಳಬೇಕಾದದ್ದಿಲ್ಲ. ಆದ್ದರಿಂದಲೇ ಮಾನವಜನ್ಮವು ದುರ್ಲಭವೆಂದು ಶಾಸ್ತ್ರಗಳು ಸಾರುತ್ತಿವೆ. ಈಗ ಬಂದಿರುವ ಜನ್ಮವು ಯಾವ ಪುಣ್ಯವಿಶೇಷದಿಂದ ದೊರೆತಿದೆಯೋ ನಾವರಿಯೆವು. ಇದನ್ನು ಸಾರ್ಥಕಮಾಡಿಕೊಳ್ಳುವದು ನಮ್ಮ ಜವಾಬ್ದಾರಿಯಾಗಿದೆ. ಇರಲಿ.

ಈಗ ಇಷ್ಟೆಲ್ಲ ವಿವರಗಳನ್ನು ಬ್ರಹ್ಮವಿದ್ಯಾಪ್ರಧಾನವಾದ ಉಪನಿಷತ್ತಿನಲ್ಲಿ ಹೇಳಿರುವದೇಕೆ? ಎಂದು ಕೇಳಬಹುದಾಗಿದೆ. ಅದಕ್ಕೆ ಉತ್ತರವೇನೆಂದರೆ: 'ತಸ್ಮಾತ್ ಜುಗುಪ್ಸೇತ'– ಎಂದು ಉಪನಿಷತ್ತಿನಲ್ಲಿ ಉಪಸಂಹಾರದಲ್ಲಿ ತಿಳಿಸಿದೆ. ಮನುಷ್ಯನಿಗೆ ತನ್ನ ಹುಟ್ಟು ಎಷ್ಟು ದುರ್ಗಮವಾದದ್ದು? ಎಷ್ಟು ಅಸಹ್ಯವಾದದ್ದು? ಎಷ್ಟೊಂದು ಪರಾಧೀನ ವಾದದ್ದು? ಇತ್ಯಾದಿ ಚಿಂತನೆಗಳು ಈ ವಿಚಾರಸರಣಿಯಿಂದ ಉಂಟಾದದ್ದೇ ಆದರೆ ಹೇಗಾದರೂ ಮಾಡಿ ಈ ಹುಟ್ಟುಸಾವುಗಳ ಬಲೆಯಿಂದ ಪಾರಾಗಬೇಕೆಂಬ ಬುದ್ಧಿಯು ಬರುತ್ತದೆ. ಅದೇ ವೈರಾಗ್ಯವು. ವೈರಾಗ್ಯವೇ ಮುಂದಿನ ಆತ್ಮವಿಚಾರಕ್ಕೆ ತಳಹದಿಯಾಗಿರುವದು. ಇಲ್ಲವಾದರೆ ಅವನು ಬ್ರಹ್ಮವಿದ್ಯೆಯ ಕಡೆಗೆ ಮನಸ್ಸನ್ನು ಹೇಗೆ ತಿರುಗಿಸಿಯಾನು? ನಿಜವಾಗಿಯೂ ವಿವೇಕಿಯಾಗಿದ್ದರೆ ಈ ಸಂಸಾರವು ಅಂಥವನಿಗೆ ಬೇಸರವುಂಟು ಮಾಡುವದು. ಈಗಲೂ ಲೋಕದಲ್ಲಿ ಇಷ್ಟೆಲ್ಲ ಮನರಂಜನೆಯ ಸಾಧನಗಳಿದ್ದರೂ ಜನರ ಬೇಸರವನ್ನು ಪೂರ್ತಿಯಾಗಿ ಕಳೆಯುವದು ಸಾಧ್ಯವಾಗಿಲ್ಲ. ಎಂಥವನಿಗೂ ಅಪಘಾತಗಳು, ರೋಗಗಳು, ಶಕ್ತಿ–ಬಲಹೀನತೆಗಳು, ಹುಚ್ಚು, ಮಂಕು– ಮುಂತಾದದ್ದು– ಹೀಗೆ ವಿಪರ್ಯಯಗಳನ್ನು ಪ್ರಪಂಚದಲ್ಲಿ ಕಂಡಾಗ ಬೇಸರವಾಗಿಯೇ ತೀರುತ್ತದೆ. ಆದರೆ ದೇಹವಿರುವವರೆಗೂ ಇಂಥವುಗಳ ಕಾಟವು ತಪ್ಪಿದ್ದಲ್ಲ. ದೇಹಾದಿಗಳೇ ನಮಗೆ ಸಂಭವಿಸದಂತೆ ಮಾಡಿಕೊಳ್ಳುವ ಉಪಾಯವೇನಾದರೂ ಇದೆಯೆ? ಎಂಬ ಪ್ರಶ್ನೆಯು ಹುಟ್ಟಿದಾಗ ಮಾನವನು ಬ್ರಹ್ಮಜಿಜ್ಞಾಸೆಗೆ ಅರ್ಹನಾಗುವನು. ಅದಕ್ಕಾಗಿಯೇ ಪಂಚಾಗ್ನಿವಿದ್ಯೆಯ ಮೂಲಕ ಇಲ್ಲಿ ವೈರಾಗ್ಯೋಪದೇಶವನ್ನು ಮಾಡಲಾಗಿದೆ.

ಆದರೆ ಪಂಚಾಗ್ನಿವಿದ್ಯೋಪಾಸನೆಗೆ ಸ್ವತಂತ್ರಫಲವೇ ಇಲ್ಲವೆಂತ ತಿಳಿಯ ಬಾರದು. ಅದಕ್ಕೂ ಪ್ರತ್ಯೇಕಫಲವನ್ನು ಹೇಳಿದೆ. ಏನೆಂದರೆ: ಎಂಥ ಮಹಾಪಾಪ ಗಳಿದ್ದರೂ ಈ ಪಂಚಾಗ್ನಿಗಳ ಉಪಾಸನೆಯಿಂದ ಪರಿಹಾರವಾಗುವವು. ಶಾಸ್ತ್ರಗಳಲ್ಲಿ ಐದು ಪಾಪಗಳನ್ನು ಮಹಾಪಾಪಗಳೆಂದು ಕರೆದಿದೆ. ಅವು ಯಾವವೆಂದರೆ: (1) ಬ್ರಹ್ಮ ಹತ್ಯೆ (2) ಮದ್ಯಪಾನ (3) ಚಿನ್ನವನ್ನು ಕದಿಯುವದು (4) ಗುರುಪತ್ನಿಯೊಡನೆ ಕೂಡುವದು (5) ಈ ನಾಲ್ಕು ಪಾಪಗಳನ್ನು ಮಾಡಿದವರ ಸ್ನೇಹವನ್ನು ಮಾಡುವದು– ಇವುಗಳೇ ಆಗಿವೆ.

ಇಂಥ ಮಹಾಪಾಪಗಳೆಲ್ಲವೂ ಪಂಚಾಗ್ನಿಯ ಉಪಾಸನೆಯಿಂದ ತೊಳೆದುಹೋಗುವವು. ಮತ್ತು ಈ ಪಂಚಾಗ್ನಿಗಳನ್ನು ಬಲ್ಲವನಿಗೆ ಒಂದು ವೇಳೆ ಅಂಥ ದುಷ್ಟರ ಸಂಗವು ಸಂಭವಿಸಿದರೂ ಅವರುಗಳೇ ಪರಿಶುದ್ಧರಾಗಬಹುದೇ ಹೊರತು ಇವನಿಗೆ ಪಾಪಗಳು ಅಂಟುವದಿಲ್ಲ. ಇಂಥ ಮಹನೀಯನು ಪುಣ್ಯಲೋಕಗಳಲ್ಲಿ ಅತ್ಯಂತ ಹೆಚ್ಚಿನದಾದ ಬ್ರಹ್ಮಲೋಕವನ್ನು ಪಡೆಯುವನು—ಎಂದು ಉಪನಿಷತ್ತಿನಲ್ಲಿ ತಿಳಿಸಿದೆ. ನಾವುಗಳು ಸಹ ಈ ಪಂಚಾಗ್ನಿಗಳ ಮಹಿಮೆಯನ್ನಾದರೂ ತಿಳಿದು ಪಾಪಗಳಿಂದ ಮುಕ್ತರಾಗಲು ಪ್ರಯತ್ನಿಸಿ ವೈರಾಗ್ಯದ ಮೆಟ್ಟಿಲನ್ನೇರಬೇಕು. ವೈರಾಗ್ಯಪ್ರಾಪ್ತಿಗಾಗಿ ವಿಚಾರಮಾಡಬೇಕಾದದ್ದು ಅಗತ್ಯ. ವಿಚಾರವೆಂದರೆ ಯಾವದು ನಿತ್ಯ? ಯಾವದು ಅನಿತ್ಯ?—ಎಂಬ ವಿವೇಕಪೂರ್ವಕ ವಾದ ಬುದ್ಧಿಯ ಚಿಂತನೆಯ ಫಲವು. ಹೀಗೆ ವೈರಾಗ್ಯವು ಕೂಡ ನಮ್ಮ ಪ್ರಯತ್ನ ವನ್ನವಲಂಬಿಸಿರುವದರಿಂದ ಆ ಕಡೆಗೆ ಮನಸ್ಸನ್ನು ಹಾಕೋಣ.

---

## ವೈಶ್ವಾನರ ವಿದ್ಯೆ

**ಓಮ್ ॥ ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಅನ್ನಮತ್ತಿ॥ 5–18–1**

ಭಾವಾರ್ಥ:— ಆದರೆ ಯಾವನು ಈ ಪ್ರಾದೇಶಮಾತ್ರನಾದ, ಅಭಿವಿಮಾನನಾದ, ವೈಶ್ವಾನರಾತ್ಮನನ್ನು ಹೀಗೆಂದು ಉಪಾಸನೆಮಾಡುತ್ತಿರುವನೋ ಅವನು ಸರ್ವಲೋಕ ಗಳಲ್ಲಿಯೂ ಸರ್ವಆತ್ಮರುಗಳಲ್ಲಿಯೂ ಅನ್ನವನ್ನು ಉಣ್ಣುತ್ತಿರುವನು.

(ವೈಶ್ವಾನರನೆಂದರೆ ಎಲ್ಲಾ ಪ್ರಾಣಿಗಳಿಗೂ ಆತ್ಮನಾದ ಪರಬ್ರಹ್ಮವು. ಯಾವನು ಆ ಪರಬ್ರಹ್ಮವನ್ನು ದ್ಯುಲೋಕದಿಂದ ಪೃಥಿವೀಪರ್ಯಂತವಾದ ವ್ಯಾಪಕಶರೀರವನ್ನು ಉಪಾಧಿ ಯಾಗಿ ಮಾಡಿಕೊಂಡು ಚಿಂತಿಸುವನೋ ಅವನು ಆತ್ಮರೂಪದಿಂದ ಸಮಸ್ತಪ್ರಾಣಿಗಳಲ್ಲಿಯೂ ಅನ್ನಾದವಾಗಿದ್ದುಕೊಂಡು ಮಹಿಮೆಯನ್ನು ಅನುಭವಿಸುವನು—ಎಂದಭಿಪ್ರಾಯ.)

## 35. ಅಶ್ವಪತಿಯ ಉಪದೇಶ

ಛಾಂದೋಗ್ಯೋಪನಿಷತ್ತಿನ ಐದನೆಯ ಅಧ್ಯಾಯದ ಕಡೆಯ ಭಾಗದಲ್ಲಿ ವೈಶ್ವಾನರವಿದ್ಯೆಯೆಂಬ ಅಮೋಘವಾದ ಉಪಾಸನೆಯೊಂದಿದೆ. ಇದರೊಡನೆ ಉಪಾಸನಾಕಾಂಡವು ಪೂರೈಸಿ ಮುಂದೆ ಆರನೆಯ ಅಧ್ಯಾಯದಿಂದ ಜ್ಞಾನಕಾಂಡವು ಪ್ರಾರಂಭವಾಗುತ್ತದೆ. ಈಗ ಈ ವೈಶ್ವಾನರವಿದ್ಯೆಯನ್ನು ವಿಚಾರಮಾಡಬೇಕಾಗಿದೆ.

ಇದಕ್ಕೂ ಒಂದು ಕಥೆಯನ್ನು ಜೋಡಿಸಲಾಗಿದೆ. ವಿಷಯವು ಸುಖವಾಗಿ ತಿಳಿಯಲಿ– ಎಂಬುದೂ ಮತ್ತುಬ್ರಹ್ಮವಿದ್ಯೆಯನ್ನು ಬಲ್ಲವರಿಂದಲೇ ಪರಂಪರೆಯಿಂದ ಪಡೆದುಕೊಳ್ಳ ಬೇಕೆಂಬುದನ್ನು ತಿಳಿಸುವದೂ ಕಥೆಯ ಉದ್ದೇಶವಾಗಿರುತ್ತದೆ.

ಹಿಂದಿನ ಪಂಚಾಗ್ನಿವಿದ್ಯೆಯ ವಿವರಣಸಂದರ್ಭದಲ್ಲಿ ದಕ್ಷಿಣೋತ್ತರಮಾರ್ಗಗಳ ಪ್ರಸ್ತಾಪವನ್ನು ಮಾಡಿ ಈ ಎರಡಕ್ಕೂ ಅನರ್ಹರಾದವರು ಪಡೆಯುವ ಕ್ಷುದ್ರಜಂತುಗಳ ಜನ್ಮ ಹಾಗೂ ಸಂಸಾರದುಃಖವಿಚಾರವನ್ನೂ ತಿಳಿಸಲಾಗಿತ್ತಷ್ಟೆ! ಇಂಥ ಕ್ಷುದ್ರಗತಿಯಾಗಲಿ, ಪಿತೃಯಾನದಂಥ ಉತ್ತಮಗತಿಯಾಗಲಿ–ಯಾವದೂ ಸಂಭವಿಸಿದಂತೆ ಜೀವನು ಉದ್ಧಾರವಾಗುವದಕ್ಕೆ ಈ ವೈಶ್ವಾನರವಿದ್ಯೆಯನ್ನು ಹೇಳಲಾಗಿದೆ. ಕಥೆಯು ಹೀಗಿದೆ: ಹಿಂದಿನ ಕಾಲಕ್ಕೆ ಪ್ರಾಚೀನಶಾಲ, ಸತ್ಯಯಜ್ಞ, ಇಂದ್ರದ್ಯುಮ್ನ, ಜನ, ಬುಡಿಲ–ಎಂಬ ಐವರು ಮಹಾಗೃಹಸ್ಥರಿದ್ದರು. ಇವರುಗಳೆಲ್ಲರೂ ಯಜ್ಞಯಾಗಾದಿಗಳನ್ನು ಅನುಷ್ಠಾನಮಾಡಿ ಶ್ರೋತ್ರಿಯರೆನಿಸಿದ್ದರು. ವೇದಾಧ್ಯಯನ, ಶಾಸ್ತ್ರಪಾಂಡಿತ್ಯಗಳೆಲ್ಲ ಇವರುಗಳಿಗೆ ಚೆನ್ನಾಗಿ ತಿಳಿದಿತ್ತು. ಒಮ್ಮೆ ಈ ಐದು ಜನರೂ ಒಟ್ಟಗೂಡಿ 'ನಮ್ಮ ಆತ್ಮನು ಯಾರು? 'ಬ್ರಹ್ಮವು ಯಾವದು?' ಎಂದು ವಿಚಾರಮಾಡಲಾರಂಭಿಸಿದರು. ಆದರೆ ನಿಶ್ಚಯವೇನೂ ಆಗಲಿಲ್ಲ. ಆಗ ಅವರುಗಳು 'ಓಹೋ, ನಾವುನಾವೇ ವಿಚಾರಮಾಡಿ ಕೊಂಡರೆ ನಮ್ಮೆಲ್ಲರ ಆತ್ಮನು ಯಾರೆಂಬುದು ತಿಳಿಯಲಾರದು. ಆದ್ದರಿಂದ ಎಲ್ಲಾನರರ ಆತ್ಮನೆನಿಸಿದ ವೈಶ್ವಾನರನನ್ನು ಬಲ್ಲ ಗುರುವಿನ ಬಳಿಗೇ ಹೋಗೋಣ; ಈ ಉದ್ದಾಲಕನೆಂಬುವನು ಅಂಥವನಾಗಿರಬಹುದು'–ಎಂದುಕೊಂಡು ಉದ್ದಾಲಕನ ಬಳಿಗೆ ಬಂದರು. ಆದರೆ ಉದ್ದಾಲಕನಿಗೂ ವೈಶ್ವಾನರವಿದ್ಯೆಯು ತಿಳಿದಿರಲಿಲ್ಲ. ಹಿಂದಿನ ಕಾಲದಲ್ಲಿ ತಿಳಿಯದವರು ಯಾರೂ ಗುರುವಾಗಲು ಒಪ್ಪುತ್ತಿರಲಿಲ್ಲ. ಆದ್ದರಿಂದ ಉದ್ದಾಲಕನು 'ಅಹೋ, ಈ ಮಹಾಶ್ರೋತ್ರಿಯರು ವೈಶ್ವಾನರವಿದ್ಯೆಗಾಗಿ ನನ್ನ ಬಳಿಗೆ ಬರುತ್ತಿದ್ದಾರೆ; ನಾನು ತಿಳಿಸಲಾರೆನು; ಆದರೆ ಬೇರೊಬ್ಬ ವಿದ್ಯಾಸಂಪನ್ನನನ್ನು ತೋರಿಸೋಣ' ಎಂದುಕೊಂಡು ಪ್ರಾಚೀನಶಾಲಾದಿಗಳು ಬಂದಕೂಡಲೆ ತನ್ನ ಅಸಹಾಯಕತೆಯನ್ನು ತಿಳಿಸಿ ಎಲ್ಲರನ್ನೂ ಕರೆದುಕೊಂಡು ಅಶ್ವಪತಿ–ಎಂಬ ರಾಜನ ಬಳಿಗೆ ಹೋದನು. ಆತನಿಗಾದರೊ, ಇಂಥ ಮಹಾಶ್ರೋತ್ರಿಯರನ್ನು ಕಂಡು ಬಹಳ ಆನಂದವಾಯಿತು.

ಅಶ್ವಪತಿರಾಜನು ಇವರುಗಳಿಗೆಲ್ಲ ಪ್ರತ್ಯೇಕವಾಗಿ ಪೂಜೋಪಚಾರಗಳನ್ನು ನೆರವೇರಿಸಿ ''ಪೂಜ್ಯರುಗಳಿರಾ, ನನ್ನ ರಾಜ್ಯದಲ್ಲಿ ಕಳ್ಳನಾಗಲಿ, ಜಿಪುಣನಾಗಲಿ, ವಿದ್ಯಾವಂತನಲ್ಲದವನಾಗಲಿ, ಸ್ವೇಚ್ಛಾಚಾರಿಯಾಗಲಿ ಇಲ್ಲ; ಇನ್ನು ಹಾದಿ ತಪ್ಪಿದವರೆಲ್ಲಿ ಬರಬೇಕು? ಇಷ್ಟುಮಟ್ಟಿಗೆ ಧರ್ಮಭೂಯಿಷ್ಠವಾಗಿ ನನ್ನ ರಾಜ್ಯವೂ ಪ್ರಜೆಗಳೂ ಇದ್ದಾರೆ. ಈಗ ನಾನು ಯಾಗವೊಂದನ್ನು ಮಾಡಲಿರುವೆನು; ಒಬ್ಬೊಬ್ಬ ಋತ್ವಿಜನಿಗೆ ಕೊಡುವಷ್ಟು

ಧನವನ್ನು ನಿಮ್ಮಗಳಿಗೂ (ಆರ್ತ್ವಿಜ್ಯಮಾಡದಿದ್ದರೂ) ಕೊಡುವೆನು; ನೀವುಗಳು ಈ ಯಜ್ಞದಲ್ಲಿ ಹಾಜರಿರಬೇಕು''–ಎಂದು ಕೇಳಿಕೊಂಡನು. ಸತ್ಕರ್ಮಗಳನ್ನು ಅನುಷ್ಠಾನ ಮಾಡುತ್ತಿರುವಾಗ ವಿದ್ಯಾವಂತರು ಬಂದರೆ ಅವರಿಗೂ ಋತ್ವಿಜರ ಮಟ್ಟದ ಸಂಭಾವನೆಯನ್ನು ಕೊಟ್ಟು ಗೌರವಿಸಬೇಕೆಂದು ಇದರಿಂದ ತಿಳಿದುಬರುತ್ತದೆ.

ಆಗ ಪ್ರಾಚೀನಶಾಲಾದಿಗಳು ''ರಾಜನೆ, ನಾವುಗಳು ನಿನ್ನಲ್ಲಿಗೆ ಯಾವ ಪ್ರಯೋಜನವನ್ನು ಬಯಸಿ ಬಂದಿರುವೆವೋ ಅದನ್ನು ಹೇಳುವೆವು. ನೀನು ಅದನ್ನೇ ಕೊಡಬೇಕು. ಸಜ್ಜನರ ವ್ಯವಹಾರವೇ ಹೀಗಿರುತ್ತದೆ. ನಾವು ಧನವನ್ನು ಬಯಸಿ ನಿನ್ನ ಬಳಿಗೆ ಬಂದವರಲ್ಲ; ಮತ್ತೇನೆಂದರೆ: ವೈಶ್ವಾನರವಿದ್ಯೆಯನ್ನು ನಿನ್ನಿಂದ ತಿಳಿಯಲು ಬಂದಿದ್ದೇವೆ; ಅದನ್ನೇ ಹೇಳಿಕೊಡು'' ಎಂದರು. ಆಗ ರಾಜನು ''ನಾಳೆಯ ಬೆಳಗ್ಗೆ ನಿಮಗೆ ಉತ್ತರವನ್ನು ಹೇಳುತ್ತೇನೆ'' ಎಂದುಬಿಟ್ಟನು. ಅಷ್ಟರಿಂದಲೇ ಪ್ರಾಚೀನ ಶಾಲಾದಿಗಳು ರಾಜನ ಅಂತರಂಗವನ್ನು ಅರ್ಥಮಾಡಿಕೊಂಡು ಮಾರನೆಯ ಬೆಳಗ್ಗೆ ತಾವು ಮಹಾಗೃಹಸ್ಥರೂ ಮಹಾಶ್ರೋತ್ರಿಯರೂ ಆಗಿದೇವೆಂಬ ಅಹಂಕಾರವನ್ನೂ ಹಾಗೂ ಜಾತಿಯಲ್ಲಿ ತಮಗಿಂತ ಕಡಿಮೆಯಾಗಿರುವ ಕ್ಷತ್ರಿಯನಿಗೆ ತಗ್ಗಿ ನಡೆಯುವದು ಹೇಗೆ? ಎಂಬ ಜಂಭವನ್ನೂ ಕೈಬಿಟ್ಟು ವಿದ್ಯೆಯ ಸಂಪಾದನೆಯೇ ಮುಖ್ಯವೆಂದು ಶ್ರದ್ಧಾತಾತ್ಪರ್ಯನಿಷ್ಠರಾಗಿ ವಿಧಿಪ್ರಕಾರವಾಗಿ ಸಮಿತ್ತುಗಳನ್ನು ಕೈಯಲ್ಲಿ ಹಿಡಿದು ವಿನಯದಿಂದ ಶಿಷ್ಯರಾಗಿ ಬಳಿಸಾರಿದರು. ಅದನ್ನು ಕಂಡು ರಾಜನು ಅವರುಗಳಿಗೆ ವೈಶ್ವಾನರವಿದ್ಯೆಯನ್ನು ಹೇಳಿಕೊಟ್ಟನು. ವಿದ್ಯೆಗಾಗಿ ಗುರುವಿನ ಬಳಿಗೆ ಬಂದ ಶಿಷ್ಯನಿಗೆ ಉಪನಯನವನ್ನು ಮಾಡಿಸಿ ವಿದ್ಯೆಯನ್ನು ಹೇಳಿಕೊಡುವದು ಸಾಮಾನ್ಯನಿಯಮ. ಆದರೆ ಇಲ್ಲಿ ರಾಜನು ತನ್ನನ್ನು ಬಳಿಸಾರಿರುವ ಶಿಷ್ಯರು ಬ್ರಾಹ್ಮಣರೆಂಬ ಗೌರವದಿಂದ ಮತ್ತೆ ಉಪನಯನಮಾಡಿಸಲಿಲ್ಲ. ಉಪ–ಎಂದರೆ ತನ್ನ ಸಮೀಪಕ್ಕೆ ನಯನ–ಶಿಷ್ಯನನ್ನು ಕರೆದೊಯ್ಯುವದು, ಎಂಬರ್ಥದಲ್ಲಿ ಪ್ರತಿಯೊಂದು ವಿದ್ಯೆಯನ್ನು ಕಲಿಯಿಸುವಾಗಲೂ ಈ ಉಪನಯನವು ಬೇಕಾಗುವದು. ಅನಂತರ ಕೆಲವು ಕಾಲ ಶಿಷ್ಯನು ಬ್ರಹ್ಮಚಾರಿಯಾಗಿದ್ದು ಗುರು ಸೇವೆಯನ್ನು ಮಾಡಬೇಕಾಗುವದು. ಇದರಿಂದ ಶಿಷ್ಯನ ಯೋಗ್ಯತೆಯನ್ನೂ ಪರಿಕ್ಷಿಸಿದಂತಾಗುವದು. ಇಲ್ಲಿ ಅಶ್ವಪತಿಯು ಇಂಥ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ– ಎಂದಭಿಪ್ರಾಯ.

ಈಗ ವೈಶ್ವಾನರವಿದ್ಯೆಯೆಂದರೇನು? ಎಂಬಿದನ್ನು ಪರಿಚಯಮಾಡಿಕೊಳ್ಳೋಣ. ಈ ಹೆಸರು ನೇರಾಗಿ ಪರಬ್ರಹ್ಮಕ್ಕೇ ಸಲ್ಲುತ್ತದೆ. ಆದರೆ ದ್ಯುಲೋಕವೇ ಮುಂತಾದವುಗಳನ್ನು ಈ ವೈಶ್ವಾನರನಿಗೆ ಅವಯವಗಳಾಗಿ ನಿರ್ದೇಶಿಸಿರುವದರಿಂದ ಉಪಾಸನೆಗೆಂದೇ ಹಾಗೆ ಹೇಳಲಾಗಿದೆ–ಎಂಬುದು ಸ್ಪಷ್ಟ. ಜ್ಞೇಯವಾಗಿದ್ದರೆ ಉಪಾಧಿಗಳನ್ನು ಅಲ್ಲಗಳೆದೇ

ನಿರ್ದೇಶಿಸಬೇಕಾಗಿತ್ತು, ಇರಲಿ. ಬ್ರಹ್ಮವು ವೈಶ್ವಾನರನೆನಿಸಿ ಎಲ್ಲಾ ಪ್ರಾಣಿಗಳಲ್ಲಿಯೂ ಒಳಹೊಕ್ಕು–ಅಧ್ಯಾತ್ಮವಾಗಿ ಜಠರಾಗ್ನಿಯ ರೂಪದಿಂದಲೂ ಅಧಿದೈವವಾಗಿ ದ್ಯುಲೋಕಾದಿಗಳನ್ನೇ ಅವಯವಗಳಾಗಿ ಹೊಂದಿ ವಿಶ್ವ ಪ್ರಪಂಚರೂಪದಿಂದಲೂ ಇದ್ದುಕೊಂಡಿದೆ–ಎಂದು ಅರಿತು ಸೋಪಾಧಿಕವಾಗಿ ಚಿಂತಿಸುವದೇ ವೈಶ್ವಾನರೋಪಾಸನೆಯು. ನಮ್ಮೆಲ್ಲರಿಗೂ ಹೊಟ್ಟೆ ಹಸಿಯುವದು ಗೊತ್ತಿದೆ. ತಿಂದ ಆಹಾರವು ಜೀರ್ಣವಾಗಬೇಕಾದರೆ ಹೊಟ್ಟೆಯಲ್ಲಡಗಿರುವ ಈ ಅಗ್ನಿಯು ಕೆಲಸಮಾಡಲೇಬೇಕು. ಇಲ್ಲದಿದ್ದರೆ ಅಜೀರ್ಣವಾದೀತು. ವೈದ್ಯರು ಇದನ್ನು ಅಗ್ನಿಮಾಂದ್ಯವೆನ್ನುವರು. ಆದರೆ ಈ ಅಗ್ನಿಯು ಕಣ್ಣುಗಳಿಗೆ ಗೋಚರವಾಗುವದಿಲ್ಲ, ಕಿವಿಗಳಿಂದ ಇದರ ಇರುವಿಕೆಯನ್ನು ತಿಳಿಯಬಹುದು. ಹೇಗೆಂದರೆ: ಎರಡೂ ಕಿವಿಗಳನ್ನು ನಾವು ಭದ್ರವಾಗಿ ಎರಡು ಕೈಗಳಿಂದ ಮುಚ್ಚಿಹಿಡಿದುಕೊಂಡಾಗ ಒಳಗೇ 'ಗೋಯ್' ಎಂಬ ಶಬ್ದವು ಕೇಳಬರುತ್ತದೆಯಷ್ಟೆ! ಇದೇ ವೈಶ್ವಾನರಾಗ್ನಿಯ ಘೋಷವು. ಇದರಿಂದ ನಾವು ಅಗ್ನಿಯ ಇರುವಿಕೆಯನ್ನು ನಿಶ್ಚಯಿಸಬಹುದು. ಈ ಅಗ್ನಿಯು ನಮ್ಮಲ್ಲಿರುವಂತೆಯೇ ಎಲ್ಲಾ ಮನುಷ್ಯರಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿಯೂ ಇರುತ್ತದೆ. ಇದು ಇಲ್ಲವಾದರೆ ಪ್ರಾಣಿಗಳು ಬದುಕಿರಲಾರವು. ಹೀಗೆ ನಮ್ಮ ಜೀವನಾಧಾರವಾಗಿರುವ ಈ ಅಗ್ನಿಯು ವಿಶ್ವವನ್ನೆಲ್ಲ ವ್ಯಾಪಿಸಿದೆ–ಎಂಬುದು ಶಾಸ್ತ್ರದೃಷ್ಟಿಯು. ಆ ದೃಷ್ಟಿಯಿಂದ ನೋಡಿದಾಗ ಈ ವೈಶ್ವಾನರನು ದ್ಯುಲೋಕದಿಂದ ಪೃಥಿವಿಯವರೆಗಿನ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿ ಕೊಂಡಿದ್ದಾನೆಂದು ತಿಳಿಯುವದು. ಹಾಗೆಯೇ ಈ ವೈಶ್ವಾನರಾತ್ಮನು ದ್ಯುಲೋಕವನ್ನೇ ತಲೆಯಾಗಿಯೂ ಆದಿತ್ಯನನ್ನೇ ಕಣ್ಣಾಗಿಯೂ ವಾಯುವನ್ನೇ ಪ್ರಾಣವಾಗಿಯೂ ಆಕಾಶವನ್ನೇ ನಡುಮೈಯಾಗಿಯೂ ನೀರನ್ನೆಲ್ಲ ಬಸ್ತಿ(ಮೂತ್ರದ ಚೀಲ)ವನ್ನಾಗಿಯೂ ಭೂಮಿಯನ್ನೇ ಕಾಲುಗಳಾಗಿಯೂ ಹೊಂದಿರುವನು–ಎಂಬಿದೂ ಶ್ರುತಿಪ್ರಮಾಣದಿಂದ ತಿಳಿಯುವದು. ಈ ವಿವರಗಳನ್ನೂ ಉಪಾಸನಾಕ್ರಮವನ್ನೂ ಸಮಷ್ಟಿಶರೀರಿಯಾದ ವೈಶ್ವಾನರನ ಮಹಿಮೆಯನ್ನೂ ಉಪಾಸನಾ ಫಲವನ್ನೂ ಅಶ್ವಪತಿಯು ಚೆನ್ನಾಗಿ ತಿಳಿದಿದ್ದನು. ಆದ್ದರಿಂದಲೇ ಪ್ರಾಚೀನಶಾಲಾದಿಗಳಿಗೆ ಅವನು ಉಪದೇಶಮಾಡುವದು ಸಾಧ್ಯವಾಯಿತು. ಹೀಗೆ ವೈಶ್ವಾನರವಿದ್ಯೆಯು ಬ್ರಹ್ಮವಿದ್ಯೆಗೆ ಮುಖ್ಯವಾದ ಸೋಪಾನವಾಗಿರುತ್ತದೆ–ಎಂದು ತಿಳಿಯಬೇಕು.

ಈಗ ಅಶ್ವಪತಿಯು ಉಪದೇಶಿಸಿದ ಪ್ರಕಾರದಿಂದ ಈ ವಿದ್ಯೆಯ ಹೆಚ್ಚಿನ ವಿವರಗಳನ್ನು ತಿಳಿಯೋಣ. ಮೊದಲನೆಯಬಾರಿಗೆ ಅಶ್ವಪತಿಯು (1) ಪ್ರಾಚೀನಶಾಲನನ್ನು ಕುರಿತು 'ನೀನು ಯಾರನ್ನು ಆತ್ಮನೆಂದು ಚಿಂತಿಸುತ್ತಿರುವೆ?' ಎಂದನು. ಆಗ ಅವನು 'ದ್ಯುಲೋಕವನ್ನು'–ಎಂದನು. ಆಗ ರಾಜನು 'ಇದು ಸರಿ; ಆದ್ದರಿಂದಲೇ ನೀನು ಅನ್ನವನ್ನುಣ್ಣುತ್ತಿರುವೆ; ನಿನ್ನ ಕುಲದಲ್ಲಿ ಪ್ರಿಯವನ್ನು ಕಾಣುತ್ತಿರುವೆ. ಆದರೆ ಇದು

ಪೂರ್ಣವೈಶ್ವಾನರನಲ್ಲ. ಅವನ ತಲೆ ಮಾತ್ರವೇ ಆಗಿದೆ. ಉಳಿದ ಅವಯವಗಳನ್ನೂ ನೀನು ತಿಳಿದು ಪೂರ್ಣವೈಶ್ವಾನರನನ್ನು ಚಿಂತಿಸಬೇಕು. ನೀನು ನನ್ನಲ್ಲಿಗೆ ಬಂದದ್ದು ಒಳ್ಳೆಯದಾಯಿತು. ಇಲ್ಲವಾದರೆ ಏಕದೇಶವನ್ನೇ ಪೂರ್ಣವೆಂದು ತಪ್ಪಾಗಿ ತಿಳಿದು ಚಿಂತಿಸುತ್ತಿದ್ದ ನಿನ್ನ ತಲೆಯು ಬಿದ್ದುಹೋಗುತ್ತಿತ್ತು'' ಎಂದನು. ಅನಂತರ (2)ಸತ್ಯಯಜ್ಞನೆಂಬವನನ್ನು ಕುರಿತು ಮೇಲಿನಂತೆಯೇ ಕೇಳಲು ಆತನು ''ಆದಿತ್ಯನನ್ನೇ ವೈಶ್ವಾನರನೆಂದು ಚಿಂತಿಸುತ್ತಿರುವೆನು'' ಎಂದನು. ರಾಜನು ಅವನನ್ನೂ ಎಚ್ಚರಿಸಿ ''ನೀನು ಉಪಾಸಿಸುತ್ತಿರುವದು ವೈಶ್ವಾನರನ ಕಣ್ಣು ಮಾತ್ರವೇ''–ಎಂದುಬಿಟ್ಟನು. ಮುಂದುವರೆದು (3)ಇಂದ್ರದ್ಯುಮ್ನನೆಂಬವನನ್ನು ಕುರಿತು ಮತ್ತೆ ಕೇಳಲು ಅವನು 'ವಾಯುವೇ ವೈಶ್ವಾನರನು' ಎಂದನು. ಅವನನ್ನೂ ಎಚ್ಚರಿಸಿ 'ನೀನು ಉಪಾಸಿಸುತ್ತಿರುವದು ವೈಶ್ವಾನರನ ಪ್ರಾಣಮಾತ್ರವೇ'–ಎಂದನು. ಮತ್ತೆಮುಂದುವರೆದು (4)ಜನನೆಂಬವನನ್ನು ಕುರಿತು ಹಿಂದಿನಂತೆಯೇ ಕೇಳಲು ಆತನು 'ಆಕಾಶವನ್ನೇ ವೈಶ್ವಾನರನೆಂದು ಉಪಾಸನೆ ಮಾಡುತ್ತಿರುವೆನು' ಎಂದನು. ಆತನನ್ನೂ ಎಚ್ಚರಿಸಿ 'ನೀನು ಉಪಾಸಿಸುತ್ತಿರುವದು ವೈಶ್ವಾನರನ ನಡುಮೈ ಮಾತ್ರವೇ–ಎಂದುಬಿಟ್ಟನು. ಮುಂದುವರೆದು (5) ಬುಡಿಲನೆಂಬವನನ್ನು ಕುರಿತು ಹಿಂದಿನಂತೆಯೇ ಕೇಳಿದಾಗ ಆತನು 'ಜಲವೇ ವೈಶ್ವಾನರನೆಂದು ಚಿಂತಿಸುತ್ತಿರುವೆನು' ಎಂದನು ಆತನನ್ನೂ ಎಚ್ಚರಿಸಿ 'ನೀನು ಚಿಂತಿಸುತ್ತಿರುವದು ವೈಶ್ವಾನರ ಮೂತ್ರಕೋಶಮಾತ್ರವೇ' ಎಂದುಬಿಟ್ಟನು. ಕಡೆಯದಾಗಿ ಮೇಲ್ಕಂಡ ಐದು ಜನರೊಡನೆ ಬಂದಿದ್ದ (6)ಉದ್ದಾಲಕನನ್ನು ಕುರಿತು ರಾಜನು ಹಿಂದಿನಂತೆಯೇ ಕೇಳಲು ಆತನು 'ಭೂಮಿಯನ್ನೇ ವೈಶ್ವಾನರನೆಂದು ಉಪಾಸಿಸುತ್ತಿರುವೆನು' ಎಂದನು. ಆತನನ್ನೂ ಎಚ್ಚರಿಸಿ 'ನೀನು ಚಿಂತಿಸುತ್ತಿರುವದು ವೈಶ್ವಾನರನ ಪಾದಗಳು ಮಾತ್ರವೇ'–ಎಂದನು. ಈ ಪರಿಯಲ್ಲಿ ಎಲ್ಲರ ತಿಳಿವಳಿಕೆಯನ್ನೂ ಪರೀಕ್ಷಿಸಿದವನಾಗಿ ಸಮಷ್ಟಿವೈಶ್ವಾನರಾತ್ಮನನ್ನು ಕುರಿತು ಹೀಗೆ ಉಪದೇಶಿಸಿದನು:

''ನೀವುಗಳು ವೈಶ್ವಾನರನನ್ನು ಭಾಗಭಾಗವಾಗಿ ಅರಿತುಕೊಂಡಿರುವಿರಿ. ಇಡಿಯ ವೈಶ್ವಾನರತತ್ತ್ವವು ನಿಮ್ಮಲ್ಲಿ ಯಾರಿಗೂ ತಿಳಿಯದು. ಹುಟ್ಟುಕುರುಡರಾದ ನಾಲ್ವರು ಒಬ್ಬೊಬ್ಬರೂ ಆನೆಯನ್ನು ಕಂಬವೆಂದೋ, ಗೋಡೆಯೆಂದೋ, ಮೊರವೆಂದೋ, ಹಗ್ಗವೆಂದೋ ತಿಳಿದಂತೆ ನಿಮ್ಮ ತಿಳಿವಳಿಕೆಯೂ ತಪ್ಪಾಗಿದೆ. ಇದೊ, ನಾನು ಸಮಸ್ತಪ್ರಾಣಿಗಳ ಆತ್ಮನಾದ ವೈಶ್ವಾನರನನ್ನು ಇಡಿಯಾಗಿ ನಿಮಗೆ ತಿಳಿಸಿಕೊಡುವೆನು. ಈ ವೈಶ್ವಾನರಾತ್ಮನಿಗೆ ದ್ಯು (ಸ್ವರ್ಗ) ಲೋಕವೇ ತಲೆಯು, ಸುತೇಜಸನೆಂದು ಇದನ್ನು ಚಿಂತಿಸಬೇಕು; ಸೂರ್ಯನೇ ಕಣ್ಣು; ವಾಯುವೇ ಪ್ರಾಣನು; ಇವರಿಬ್ಬರನ್ನೂ ವಿಶ್ವರೂಪ ಹಾಗೂ ಪೃಥಕ್‌ವರ್ತ್ಮರೆಂಬ ವೈಶ್ವಾನರರೆಂದು ಚಿಂತಿಸಬೇಕು. ಆಕಾಶವು ನಡುಮೈ, ಬಹುಲಾತ್ಮನಾದ ವೈಶ್ವಾನರನೆಂದು ಇದನ್ನು ಚಿಂತಿಸಬೇಕು. ಜಲವೇ ಮೂತ್ರಸ್ಥಾನವು.

ರಯಿಯೆಂಬ ವೈಶ್ವಾನರನೆಂದು ಇದನ್ನು ಚಿಂತಿಸಬೇಕು. ಹಾಗೆಯೇ ಪೃಥಿವ್ಯಾತ್ಮನಾದ ವೈಶ್ವಾನರನನ್ನು ಪ್ರತಿಷ್ಠಾ ಎಂದು ಚಿಂತಿಸಬೇಕು. ಇದಿಷ್ಟೂ ನೀವು ತಿಳಿದುಕೊಂಡದ್ದರ ಒಟ್ಟಾಯಿತು. ಇಂಥ ವೈಶ್ವಾನರೋಪಾಸಕನ ಭೋಜನವೇ ಅಗ್ನಿಹೋತ್ರವೆಂದೂ ತಿಳಿಯಿರಿ. ಹೇಗೆಂದರೆ ಈ ಉಪಾಸಕನ ಎದೆಯೇ ವೇದಿಕೆಯು. ಕೂದಲುಗಳೇ ದರ್ಭೆಗಳು; ಹೃದಯವೇ ಗಾರ್ಹಪತ್ಯಾಗ್ನಿಯು. ಮನಸ್ಸು ಅನ್ವಾಹಾರ್ಯಪಚನವೆಂಬ ಅಗ್ನಿಯು. ಮುಖವು ಆಹವನೀಯವು'' ಎಂದು ತಿಳಿಸಿದನು. ದ್ಯುಲೋಕದಿಂದ ಪೃಥಿವಿಯವರೆಗಿನ ಪೂರ ಜಗತ್ತೆಲ್ಲವೂ ವೈಶ್ವಾನರಾತ್ಮನ ಶರೀರವೆಂದೂ ಅದರಲ್ಲಿ ವ್ಯಾಪಿಸಿರುವ ತ್ರೈಲೋಕ್ಯಶರೀರಿಯಾದ ಆತ್ಮನೇ ವೈಶ್ವಾನರಾತ್ಮನೆಂದೂ ಹೀಗೆಂದು ಚಿಂತಿಸುವವನ ಭೋಜನವೇ ಅಗ್ನಿಹೋತ್ರವೆಂಬ ವೈದಿಕಕರ್ಮವೆಂದೂ ಯಾವನು ಹೀಗೆ ಉಪಾಸನಾಸಹಿತವಾದ ಕರ್ಮವನ್ನು ಮಾಡುವನೋ ಅವನು ತಾನೇ ವೈಶ್ವಾನರಾತ್ಮನಾಗಿ ಬೆಳಗುವನೆಂದೂ ಇದು ಸಂಸಾರಮಂಡಲದಲ್ಲಿ ಅತ್ಯುತ್ತಮಗತಿಯೆಂಬುದೂ ಅಶ್ವಪತಿಯ ಉಪದೇಶದ ಸಾರವು. ಈ ವೈಶ್ವಾನರೋಪಾಸಕನು ಉಪಾಸ್ಯವಾದ ವೈಶ್ವಾನರನನ್ನು ಪ್ರಾದೇಶಮಾತ್ರ, ಅಭಿವಿಮಾನ ಎಂಬೀ ವಿಶೇಷಣಗಳಿಂದಲೂ ಕೂಡಿಕೊಂಡು ಉಪಾಸಿಸಬೇಕೆಂಬುದೂ ಇಲ್ಲಿ ವಿವಕ್ಷಿತವಾಗಿದೆ. ಪ್ರದೇಶಗಳಲ್ಲೆಲ್ಲ ಇರುವವನು ಪ್ರಾದೇಶನು; ಇವನೇ ಪ್ರತ್ಯಗಾತ್ಮನು ಎಂದರೆ ತಾನೆಂದು ಅರಿಯಲ್ಪಡುವದರಿಂದ ಅಭಿವಿಮಾನನು– ಎಂದಭಿಪ್ರಾಯ.

ಈ ಉಪಾಸನೆಯು ವೈದಿಕವಾಙ್ಮಯದ ಪರಿಚಯವೂ ಕರ್ಮಕಾಂಡದ ಅಧ್ಯಯನಾನುಷ್ಠಾನಗಳೂ ಇಲ್ಲದವರಿಗೆ ತಿಳಿಯುವದು ಕಷ್ಟವೇ ಸರಿ. ಆದರೆ ಎಲ್ಲರಿಗೂ ಅನ್ವಯಿಸುವಂತೆ ಹೇಳಬೇಕೆಂದರೆ: ಪ್ರತಿಯೊಬ್ಬನೂ ತನ್ನ ಹೊಟ್ಟೆಯಲ್ಲಿ ಕಂಡುಬರುವ ಜಠರಾಗ್ನಿಯೇ ವೈಶ್ವಾನರನೆಂಬ ಪರಮಾತ್ಮನೆಂದೂ ತಾನು ತಿನ್ನುವದೆಲ್ಲ ಆತನಿಗೆ ಆಹುತಿಯೆಂದೂ ಭಾವಿಸಬಹುದು. ಮುಂದುವರೆದು ನನ್ನಂತೆಯೇ ಎಲ್ಲರಿಗೂ ಜಠರಾಗ್ನಿಯು ಒಂದೇ ಆಗಿರುವದರಿಂದ ಎಲ್ಲರಿಗೂ ಅನ್ನದ ಅವಶ್ಯಕತೆಯಿದೆಯೆಂದೂ ಅದು ಎಲ್ಲರ ಸ್ವತ್ತೆಂದೂ ಅದನ್ನು ಎಲ್ಲರ ಜಠರದಲ್ಲಿಯೂ ಹೋಮಮಾಡುವದೇ ವೈಶ್ವಾನರನ ಆರಾಧನೆಯೆಂದೂ ತಿಳಿಯಬೇಕು. ಈ ಬುದ್ಧಿಯುಂಟಾದವನಿಗೆ ಅನ್ನವನ್ನು ಬಚ್ಚಿಡುವದಾಗಲೀ ಬೇರೊಬ್ಬರಿಗೆ ದೊರಕದಂತೆ ಮಾಡುವದಾಗಲೀ ಸಾಧ್ಯವಾಗಲಾರದು.

-----

# 36. ವೈಶ್ವಾನರಾಗ್ನಿಹೋತ್ರದ ಮಹಿಮೆ

**ಓಮ್ ॥ ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಗ್ಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ॥ 5–24–3**

ಭಾವಾರ್ಥ:– ಅಲ್ಲಿ ಯಾವನು ಇದನ್ನು ಹೀಗೆಂದರಿತುಕೊಂಡು ಅಗ್ನಿಹೋತ್ರ ವನ್ನು ಹೋಮಮಾಡುವನೋ (ಅವನಿಗೆ) ಹೇಗೆ ನೊದೆಯ ಹುಲ್ಲಿನ ಹತ್ತಿಯನ್ನು ಬೆಂಕಿಯಲ್ಲಿ ಹಾಕಿದರೆ ಸುಡುವದೋ ಹಾಗೆಯೇ ಇವನ ಎಲ್ಲಾ ಪಾಪಗಳೂ ಸುಡುತ್ತವೆ.

(ವೈಶ್ವಾನರೋಪಾಸಕನು ಮಾಡುವ ಊಟವೇ ಅಗ್ನಿಹೋತ್ರವು. ಏಕೆಂದರೆ ಅವನು ವೈಶ್ವಾನರಭಾವದಿಂದ ಸರ್ವಾತ್ಮನಾಗಿರುವನು. ಶ್ರೀಕೃಷ್ಣನು ಒಂದು ಅಗುಳನ್ನು ಸೇವಿಸಿದಾಗ ದೂರ್ವಾಸರ ಶಿಷ್ಯವೃಂದವೆಲ್ಲ ತೃಪ್ತಿಪಟ್ಟಂತೆ–ಈ ಉಪಾಸಕನ ಭೋಜನವೂ ಸರ್ವಪ್ರಾಣಿಗಳಿಗೂ ತೃಪ್ತಿಯನ್ನು ನೀಡುವದು. ಮತ್ತು ಉಪಾಸನಾಬಲದಿಂದ ಸಮಸ್ತ ಪಾಪಗಳೂ ಬೆಂಕಿಯಲ್ಲಿ ಬಿದ್ದ ಅರಳೆಯಂತೆ ಸುಟ್ಟು ಬೂದಿಯಾಗುವವು– ಎಂದಭಿಪ್ರಾಯ.)

ವೈಶ್ವಾನರವಿದ್ಯೆಯನ್ನು ಕುರಿತು ತಿಳಿಸಿರುವ ವಿಷಯಗಳನ್ನು ವಾಚಕರು ಮತ್ತೆ ಮನನಮಾಡಬೇಕು. ಅನಂತರ ಈಗ ಹೇಳಲಿರುವ ಆ ವಿದ್ಯೆಯ ಫಲಶ್ರುತಿಯು ಅರ್ಥವಾಗಲಿದೆ. ವೈಶ್ವಾನರಾತ್ಮನ ವ್ಯಾಪ್ತಿಯನ್ನೂ ಸ್ವರೂಪವನ್ನೂ ಮನಗಂಡಾಗ ಆ ಆತ್ಮನ ಉಪಾಸಕನು ಅದರಲ್ಲಿ ತಾದಾತ್ಮ್ಯವನ್ನು ಪಡೆಯದೆ ಇರಲು ಸಾಧ್ಯವಿಲ್ಲ. ಹೀಗೆ ವೈಶ್ವಾನರಾತ್ಮನೇ ತಾನೆಂಬ ಅಭಿಮಾನವು ಉಂಟಾದಾಗ ಅಂಥ ಉಪಾಸಕನ ಭೋಜನವು ಅಗ್ನಿಹೋತ್ರವೇ ಆಗಿರುತ್ತದೆ–ಎಂದು ಈಗ ತಿಳಿಸುತ್ತಾರೆ. ಅಷ್ಟೇ ಅಲ್ಲ, ಉಪಾಸನೆಯನ್ನು ಚೆನ್ನಾಗಿ ಅಳವಡಿಸಿಕೊಂಡವನು ಹಿಂದಿನಂತೆಯೇ ತನ್ನ ನಿತ್ಯಕರ್ಮವಾದ ಅಗ್ನಿಹೋತ್ರವನ್ನು ಮಾಡಿದರೆ ಅದು ಎಲ್ಲಾ ಲೋಕಗಳಲ್ಲಿಯೂ ಎಲ್ಲಾ ಆತ್ಮರುಗಳಲ್ಲಿಯೂ ಹೋಮಮಾಡಿದಂತಾಗುವದು. ಈ ಉಪಾಸಕನ ಅಗ್ನಿಹೋತ್ರಕ್ಕೆ ಹೋಲಿಸಿದರೆ ಕೇವಲ ಅಗ್ನಿಹೋತ್ರವನ್ನು ಮಾಡುವವನು ಬೂದಿಯಲ್ಲಿ ಹೋಮಮಾಡಿದಂತೆಯೇ ಸರಿ–ಎಂದೂ ನಿಂದಿಸಿದೆ. ಆದರೆ ಈ ನಿಂದೆಯನ್ನು 'ನ ಹಿ ನಿಂದಾ' ನ್ಯಾಯದಂತೆ ಉಪಾಸನಾ ವಿಶಿಷ್ಟವಾದ ಅಗ್ನಿಹೋತ್ರವನ್ನು ಹೊಗಳುವದಕ್ಕಾಗಿಯೇ ಬಂದಿದೆ–ಎಂದು ಕಲ್ಪಿಸಬೇಕು. ಇದು ಹಾಗಿರಲಿ. ಈಗ ಅಗ್ನಿಹೋತ್ರಕ್ಕೂ ಉಪಾಸಕನ ಭೋಜನಕ್ಕೂ ಸಂಬಂಧವೇನೆಂಬುದನ್ನು ತಿಳಿಯೋಣ.

ವೈದಿಕಸಂಸ್ಕೃತಿಯ ಉಪದೇಶದಂತೆ ಯಾವದೇ ಜೀವರಿಗೆ ತೃಪ್ತಿಯನ್ನುಂಟು ಮಾಡಬೇಕಾದರೆ ಅನ್ನದಿಂದ ಮಾತ್ರ ಸಾಧ್ಯ–ಎಂದು ಗೊತ್ತಾಗುತ್ತದೆ. ಏಕೆಂದರೆ ಏನನ್ನೇ

ಎಷ್ಟೇ ಕೊಟ್ಟರೂ 'ಇನ್ನೂ ಬೇಕು' ಎಂದು ಮನುಷ್ಯನು ಹೇಳುತ್ತಲೇ ಇರುವನು. ಆದರೆ ಊಟವನ್ನು ಬಡಿಸಿದಾಗ ಮಾತ್ರ ಹೊಟ್ಟೆ ತುಂಬಿದ ಕೂಡಲೆ ಸಾಕು–ಎನ್ನುವನು. ಇದೊಂದೇ ತೃಪ್ತಿಸಾಧನವು. ಆದ್ದರಿಂದಲೇ ಅನ್ನದಾನವು ಉಳಿದ ಎಲ್ಲಾ ದಾನಗಳನ್ನೂ ಮೀರಿನಿಂತಿರುವದು. ಮನುಷ್ಯನು ಶರೀರವನ್ನು ಬಿಟ್ಟಮೇಲೂ ಆಸೆಗಳು ಅವನನ್ನು ಬಿಟ್ಟಿರುವದಿಲ್ಲವಾಗಿ ಅವನು ಬೇರೊಂದು ದೇಹವನ್ನಾದರೂ ಆಶ್ರಯಿಸಿ ಆಶೆಗಳನ್ನು ಪೂರಣಮಾಡಿಕೊಳ್ಳುವದು ಅನಿವಾರ್ಯವಾಗಿರುತ್ತದೆ. ಆದ್ದರಿಂದಲೇ ಸತ್ತವರಿಗೆಲ್ಲ ಅಗ್ನಿಯ ಮೂಲಕವೋ ಬ್ರಾಹ್ಮಣರಮೂಲಕವೋ ತೃಪ್ತಿಯನ್ನುಂಟುಮಾಡಲು ಶ್ರಾದ್ಧಾದಿಗಳನ್ನು ಮಾಡುವರು. ಈ ಶ್ರಾದ್ಧಾದಿಗಳ ಅನುಷ್ಠಾನಕ್ರಮವೇನೇ ಇರಲಿ, ಈಗಿನ ಜನರು ಅದನ್ನು ರೂಪಾಂತರಗೊಳಿಸಿಯಾದರೂ ಮಾಡುವ ವಿಚಾರವೇನೇ ಇರಲಿ–ಜೀವನಿಗೆ ಶರೀರತ್ಯಾಗಾನಂತರವೂ ಹಸಿವುಬಾಯಾರಿಕೆಗಳ ಹಾಗೂ ಕಾಮಗಳ ಬಾಧೆಯು ತಪ್ಪಿರುವದಿಲ್ಲವಾದ್ದರಿಂದ ಸಂಸಾರಿಗಳೆಲ್ಲರ ದೃಷ್ಟಿಯಿಂದ ತೃಪ್ತಿಗೊಳಿಸುವ ಒಬ್ಬ ಕರ್ತನು ಬೇಕಾಗುವದು. ಕರ್ತನಿಲ್ಲದೆ ಕರ್ಮವಿಲ್ಲ, ಕರ್ಮವಿಲ್ಲದೆ ತೃಪ್ತಿಯೆಂಬ ಫಲವಿಲ್ಲ. ಆಯಾ ಜೀವರಾಶಿಗಳು ತಮ್ಮ ತಮ್ಮ ಕರ್ಮಾನುಗುಣವಾಗಿ ಬೇರೆಬೇರೆಯ ದೇಹಗಳನ್ನು ಧರಿಸಿ ಸಂಸಾರಮಾಡುತ್ತಿರುವದರಿಂದ ಇಂಥ ಸಂಸಾರಿಜೀವರೆಲ್ಲರನ್ನೂ ತೃಪ್ತಿಗೊಳಿಸಬೇಕಾಗದರೆ ಜೀವರುಗಳ ಸಮಷ್ಟಿಯಾದ ವೈಶ್ವನರಾತ್ಮನನ್ನು ತೃಪ್ತಿಗೊಳಿಸಲೇಬೇಕು. ಆ ವೈಶ್ವಾನರಾತ್ಮನ ರಹಸ್ಯವನ್ನು ಬಲ್ಲವನು ಅಗ್ನಿಯಲ್ಲಿಯೂ ತನ್ನ ಜಠರದಲ್ಲಿಯೂ ಹೋಮ ಮಾಡಿದಾಗ ತಾನೇ ತಾನಾಗಿ ಸಮಸ್ತಜೀವರುಗಳಿಗೂ ತೃಪ್ತಿಯು ಲಭಿಸುವದು. ಇದು ವೈದಿಕರ ವಿಚಾರಸರಣಿಯಾಗಿವೆ. ಸದ್ಯಕ್ಕೆ ಇದಕ್ಕಿಂತ ಉತ್ತಮವಾದ ವಿಚಾರಸರಣಿಯು ಕಂಡುಬಂದಿಲ್ಲ. ಒಬ್ಬನು ಊಟಮಾಡಿಬಿಟ್ಟರೆ ಎಲ್ಲರಿಗೂ ತೃಪ್ತಿಯಾಗಿ ತೇಗುಬರುವಂಥ ಸ್ಥಿತಿಯನ್ನು ವಿಜ್ಞಾನಶಾಸ್ತ್ರವು ಇನ್ನೂ ಕಂಡುಹಿಡಿದಿಲ್ಲ. ಆದ್ದರಿಂದ ವೈದಿಕಸನಾತನ ವಿಚಾರಸರಣಿಯಂತೆ ವೈಶ್ವಾನರೋಪಾಸಕನ ಅಗ್ನಿಹೋತ್ರವೂ ಭೋಜನವೂ ಸಮಸ್ತ ಜೀವರ ತೃಪ್ತಿಯೆಂಬ ಫಲವುಳ್ಳದ್ದಾಗಿದೆ–ಎಂದು ಇಲ್ಲಿ ತಿಳಿಸಿದ್ದಾರೆ. ಇದು ಶ್ರದ್ಧಾಗಮ್ಯವಾಗಿರುವದರಿಂದ ವಿಚಾರಕರು ಶ್ರದ್ಧೆಯಿಂದಲೇ ಹೆಜ್ಜೆಯಿಡಬೇಕು. ಇದರ ವಿವರಗಳನ್ನು ಈಗ ನೋಡೋಣ.

ವೈಶ್ವಾನರೋಪಾಸನೆಯೇನೂ ಸುಲಭವಲ್ಲ. ಆದರೆ ಶ್ರದ್ಧೆಯಿಟ್ಟು ಆ ತತ್ತ್ವವನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಚಿಂತಿಸಿದರೆ ನಮ್ಮ ನಮ್ಮ ಉಪಾಸನೆಗೆ ತಕ್ಕಂತೆ ಫಲವಾಗಿಯೇ ತೀರುತ್ತದೆ. ಹಿಂದಿನಕಾಲಕ್ಕೆ ಧರ್ಮರಾಜನು ಕಾಡಿಗೆ ಹೋಗುವಂಥ ಸಮಯ ಬಂದಾಗ–ಬ್ರಾಹ್ಮಣರಿಗೆ ಅನ್ನದಾನಮಾಡುವ ಯೋಗ್ಯತೆಯೂ ಇಲ್ಲವಾದಾಗ–ಧೌಮ್ಯರ ಆದೇಶದಂತೆ ಸೂರ್ಯನನ್ನು ಪ್ರಾರ್ಥಿಸಿ ಅಕ್ಷಯಪಾತ್ರೆಯನ್ನು ಪಡೆದುಕೊಂಡ ಕಥೆಯನ್ನು ವಾಚಕರು ಬಲ್ಲವರಾಗಿದ್ದೀರಿ. ಇಲ್ಲಿಯೂ ಅನ್ನದಾನದ್ದೇ ಸಮಸ್ಯೆಯಾಗಿದ್ದಾಗ

ವಿಶ್ವನರರಿಗೂ ಒಬ್ಬನೇ ಬೆಳಕಾದ ಸೂರ್ಯನು ಅದನ್ನು ಪರಿಹರಿಸಿದನು. ಅದೇ ಸೂರ್ಯನೇ ಅಗ್ನಿರೂಪದಿಂದ ಹಾಗೂ ಜಠರಾಗ್ನಿರೂಪದಿಂದಲೂ ಇದ್ದುಕೊಂಡಿರುವನು. ಸರ್ವಪ್ರಾಣಿಗಳ ಆತ್ಮನೂ ಆಗಿರುವನು. ಹೀಗೆ ಸೂರ್ಯಾದಿದೇವತೆಗಳ ಮೂಲಕವಾದರೂ ವೈಶ್ವಾನರಚಿಂತನೆಯು ನಮಗೆ ದಕ್ಕುವದಕ್ಕೆ ಅವಕಾಶವಿದೆ. ಅನಂತರ ಕ್ರಮಕ್ರಮವಾಗಿ ದೇವತಾದ್ವಾರದಿಂದ ಪೂರ್ಣವೈಶ್ವಾನರನನ್ನು ಮುಟ್ಟಲು ಸಾಧ್ಯವಿದೆ. ಯಾವನಾದರೊಬ್ಬ ಉಪಾಸಕನು ಈ ಸ್ಥಿತಿಯನ್ನು ಜೀವಂತನಾಗಿರುವಾಗಲೇ ಪಡೆದುಕೊಂಡಲ್ಲಿ ಅಂಥವನ ಅಗ್ನಿಹೋತ್ರವು ಅಸಾಧಾರಣವಾದದ್ದಾಗುವದು. ಅವನು ತನ್ನ ಉಪಾಸನಾ ಬಲದಿಂದ ಈ ಬಹಿರಂಗವಾದ ಕರ್ಮರೂಪವಾದ ಅಗ್ನಿಹೋತ್ರವನ್ನು ಅಧ್ಯಾತ್ಮವಾಗಿ ಉಪಸಂಹಾರಮಾಡಿಕೊಂಡುಬಿಡಬಹುದು. ಆಗ್ಗೆ ಅವನ ಭೋಜನವೇ ಅಗ್ನಿಹೋತ್ರವಾಗಿಬಿಡುವದು. ಅವನು ಸ್ವೀಕರಿಸುವ ಆಹಾರದ ತುತ್ತುಗಳೇ ಹವಿಸ್ಸಾಗಿ ಪ್ರಾಣಾದಿದೇವತೆಗಳನ್ನು ಸಂತೋಷಗೊಳಿಸಿಬಿಡುವವು. ಪ್ರಾಣವು ತೃಪ್ತವಾದರೆ ಉಳಿದ ಇಂದ್ರಿಯಗಳೂ ತೃಪ್ತವಾಗುವವು. ಹೀಗೆ ಉಪಾಸಕನ ಪ್ರಾಣಾಗ್ನಿಹೋತ್ರವು ವೈಶ್ವಾನರರೂಪಿಯಾದ ಪರಮಾತ್ಮನ ಆರಾಧನೆಯಾಗಿ ಬಿಡುವದು.

ಇಂಥ ಉಪಾಸಕನೊಬ್ಬನು ಜಗತ್ತಿನಲ್ಲಿದ್ದಾನೆ–ಎಂದು ಭಾವಿಸುವದಾದರೆ ಶ್ರುತಿಯು ತಿಳಿಸುವಂತೆ ಆತನು ಊಟಮಾಡುವದನ್ನೇ ಎಲ್ಲಾ ಪ್ರಾಣಿಗಳು ಕಾದಿರುವವು. ಇದನ್ನು ಒಂದು ಉದಾಹರಣೆಯಿಂದ ಶ್ರುತಿಯು ಹೀಗೆ ವಿವರಿಸುತ್ತಿದೆ: 'ಹೇಗೆ ಹಸಿದ ಬಾಲಕರು ಕೈತುತ್ತಿನ ಊಟಕ್ಕಾಗಿ ತಾಯಿಯನ್ನು ಬಳಿಸಾರಿ ಸುತ್ತಲೂ ಕುಳಿತು ತುತ್ತನ್ನು ತಾಯಿಯ ಕೈಯಿಂದ ನಿರೀಕ್ಷಿಸುವರೋ ಹಾಗೆ ಎಲ್ಲಾ ಭೂತಗಳೂ ಈ ಪ್ರಾಣಾಗ್ನಿಹೋತ್ರಿಯನ್ನು ಬಳಿಸಾರಿ ಅವನ ಊಟಕ್ಕಾಗಿ ಕಾಯುತ್ತಿರುವರು' ಎಂದು ತಿಳಿಸುತ್ತದೆ. ಆದ್ದರಿಂದ ವೈಶ್ವಾನರೋಪಾಸಕನು ಮಾಡುವ ಭೋಜನವನ್ನು ಕುರಿತು ಈಗ ನಾವು ವಿಚಾರಮಾಡಿದಲ್ಲಿ ಹೆಚ್ಚಿನ ಪ್ರಯೋಜನವಾಗಲಿದೆ.

ಭೋಜನವೆಂಬುದು ಲೌಕಿಕಕರ್ಮವು. ಹಸಿದವರೆಲ್ಲ ತಿಂದೇ ತೃಪ್ತಿಯನ್ನು ಹೊಂದಬೇಕಾಗಿದೆ. ಹೀಗಿರುವಲ್ಲಿ ವೈಶ್ವಾನರೋಪಾಸಕನ ಭೋಜನದಲ್ಲೇನು ವಿಶೇಷ? ಎಂದು ಕೇಳಬಹುದು. ಅದಕ್ಕೆ ಉತ್ತರವು ಹೀಗಿದೆ. ಭೋಜನವು ಲೌಕಿಕಕರ್ಮವೇ ಆದರೂ ಒಂದು ಕ್ರಮದಿಂದ ಶಾಸ್ತ್ರೀಯವಾಗಿ ಮಾಡಿದರೆ ಹೊಟ್ಟೆಯು ತುಂಬುವ ಪ್ರತ್ಯಕ್ಷಫಲದ ಜೊತೆಗೆ ಅದೃಷ್ಟಫಲವೂ ಆಗುತ್ತದೆ. ವೈದಿಕಶಿಷ್ಟಾಚಾರದಂತೆ ಭೋಜನ ಕ್ರಮವು ಹೀಗಿದೆ: ಒಬ್ಬ ಆಚಾರನಿಷ್ಠನಾದ ವ್ಯಕ್ತಿಯು–ಅವನು ಗೃಹಸ್ಥನಾಗಿದ್ದರೆ–ದಿನಕ್ಕೆ ಎರಡುಬಾರಿ ಮಾತ್ರವೇ ಭೋಜನಮಾಡಬೇಕು. ಎಂದರೆ ಬಾಯನ್ನು ಎರಡು ಬಾರಿ ಮಾತ್ರ ಉಪಯೋಗಿಸಬೇಕು. ನಡುವೆ ಏನನ್ನೂ ತಿನ್ನಬಾರದು. ವಿಶೇಷನಿಯಮಗಳಿದ್ದಾಗ

ಒಂದುಬಾರಿ ಭೋಜನ–ಅಥವಾ ಪೂರ್ತಿ ಉಪವಾಸವೂ ಸಂಭವಿಸಬಹುದು. ಅನಂತರ ಭೋಜನ ನಿಯಮವು ಹೀಗಿದೆ. ಬೆಳಗ್ಗೆ ಸೂರ್ಯೋದಯಕಾಲದಿಂದ ಏನನ್ನೂ ತಿನ್ನದೆ ಇದ್ದು ನಿತ್ಯಕರ್ಮಗಳೆಲ್ಲವೂ ಪೂರೈಸಿದ ಮೇಲೆ ಭೋಜನಸಮಯಕ್ಕೆ ಪರಿಷೇಚನಮಾಡಿ ಕ್ರಮವಾಗಿ (1)ಪ್ರಾಣಾಯಸ್ವಾಹಾ (2)ವ್ಯಾನಾಯಸ್ವಾಹಾ (3) ಅಪಾನಾಯಸ್ವಾಹಾ (4) ಸಮಾನಾಯಸ್ವಾಹಾ (5) ಉದಾನಾಯಸ್ವಾಹಾ–ಎಂದು ಐದು ಬಾರಿ ಅನ್ನವನ್ನು ಜಠರಾಗ್ನಿಯಲ್ಲಿ ಹೋಮಮಾಡಬೇಕು. ಈ ಅಹುತಿಗಳು ನೇರಾಗಿ ಹೊಟ್ಟೆಯೊಳಗಿನ ಅಗ್ನಿದೇವನಿಗೆ ಮುಟ್ಟಬೇಕು. ಅಗಿಯಬಾರದು. ಇದೇ ಪ್ರಾಣಾಗ್ನಿಹೋತ್ರವು. ಅನಂತರ ಮೌನವಾಗಿ ಭೋಜನಮಾಡಬೇಕು–ಇತ್ಯಾದಿ. ಭೋಜನಾನಂತರ ನೀರನ್ನು ಕುಡಿಯುವದು ಬಿಟ್ಟರೆ ಮತ್ತೇನನ್ನೂ ತಿನ್ನಬಾರದು. ಹೀಗೆ ಪ್ರಾಣಾಹುತಿಗಳನ್ನು ಅರ್ಪಿಸುವಾಗ ಇಂಥ ಮಹನೀಯನು ವೈಶ್ವಾನರೋಪಾಸಕ ನಾಗಿದ್ದಲ್ಲಿ ಹಿಂದೆ ಹೇಳಿದಂತೆ ಎಲ್ಲಾ ಪ್ರಾಣಿಗಳೂ ತೃಪ್ತವಾಗುವವು–ಎಂದು ಉಪನಿಷತ್ತಿನಲ್ಲಿ ತಿಳಿಸಿದೆ. ಒಟ್ಟಿನಲ್ಲಿ ಈ ಉಪಾಸಕನ ಭೋಜನವು ಅಗ್ನಿಹೋತ್ರವೆಂಬ ವೈದಿಕಕರ್ಮವೇ ಆಗಿಬಿಟ್ಟು ಅಪೂರ್ವವಾದ ಫಲವನ್ನು ಕೊಡುವದೇ ಹೊರತು ಜನಸಾಮಾನ್ಯರ ಭೋಜನದಂತೆ ಅಲ್ಲ–ಎಂದಭಿಪ್ರಾಯ.

ಈಗ ನಾವು ವೈಶ್ವಾನರೋಪಾಸಕನ ಭೋಜನವನ್ನೂ ಅದರ ಫಲವನ್ನೂ ಆದರ್ಶವಾಗಿಟ್ಟುಕೊಳ್ಳುವ ಮೂಲಕ ನಮ್ಮ ನಡೆವಳಿಕೆಗಳನ್ನು ತಿದ್ದಿಕೊಳ್ಳಬಹುದಾಗಿದೆ. ಈಗಿನ ಕಾಲಕ್ಕೆ ಟೇಬಲ್ ಊಟ; ತಟ್ಟೆಯಲ್ಲಿ ಭೋಜನಾದಿಗಳು ಸಹ ನಾಗರೀಕತೆಯ ಕುರುಹೆಂದು ಭಾವಿಸಲ್ಪಟ್ಟಿರುವದರಿಂದ ಎಂಜಲು, ಮುಸುರೆ, ಉಚ್ಛಿಷ್ಟ–ಮುಂತಾದ ಕಲ್ಪನೆಗಳೆಲ್ಲ ಅಳಿಸಿ ಹೋಗಿ ಪ್ರಾಣಾಗ್ನಿಹೋತ್ರವಾಗಲಿ, ವೈಶ್ವಾನರನ ಆರಾಧನೆಯಾಗಲಿ ಸಾಧ್ಯವಾಗದಂತಾಗಿದೆ. ವಿದೇಶೀಯರಿಗೆ ತಕ್ಕ ಭೋಜನಕ್ರಮಗಳನ್ನು ಅನವಶ್ಯವಾಗಿ ಭಾರತೀಯರು ಅಳವಡಿಸಿಕೊಂಡು ಆಚಾರವಿಚಾರಗಳಿಂದ ಹೀನರಾಗಿ ''ನ ಶೌಚಂ ನಾಪಿ ಚಾಚಾರಃ'' ಎಂಬ ಭಗವದ್ವಚನದಂತೆ ಆಸುರೀಸಂಪತ್ತಿಗೆ ಉದಾಹರಣೆಯಾಗಿ ಬಾಳುವ ದುಃಸ್ಥಿತಿಯನ್ನು ಹೊಂದಿರುವದು ತೀರ ಶೋಚನೀಯವಾಗಿದೆ. ಇನ್ನು ಮುಂದಿನ ಪೀಳಿಗೆಯವರಿಗೆ ಪರಿಷೇಚನ, ಪ್ರಾಣಾಹುತಿ ಸ್ವೀಕಾರಗಳೆಂದರೇನು? ಎಂಬುದೂ ತಿಳಿಯದೆ ಹೋಗಬಹುದು. ಹೀಗಿದೆ; ಕಲಿಮಹಿಮೆ. ಆದರೇನು? ನಿಜವಾಗಿಯೂ ನಮಗೆ ಶಿಷ್ಟಾಚಾರಗಳನ್ನು ಕಾಪಾಡಿಕೊಂಡು ಆ ಮೂಲಕ ಅಮೂಲ್ಯವಾದ ಉಪಾಸನಾ ಕ್ರಮಗಳನ್ನೂ ಬ್ರಹ್ಮವಿದ್ಯೆಯನ್ನೂ ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದು ಇಷ್ಟವಿದ್ದರೆ ಪ್ರಾಮಾಣಿಕವಾಗಿ ಪ್ರಯತ್ನಮಾಡಬೇಕು. ಈಗಿನ ಭೋಜನಕೂಟಗಳ ವಿಚಾರದಲ್ಲಂತೂ ಹೇಳುವದೇ ಬೇಡ–ಅಷ್ಟು ಅನಾಚಾರಗಳು ಮನೆಮಾಡಿಕೊಂಡಿವೆ. ಅವು ಸಾರ್ವಜನಿಕ

ಕೂಟಗಳಾಗಿ ಪರಿವರ್ತನೆಹೊಂದಿದ್ದು ಸನಾತನಾರ್ಯರ ಆದರ್ಶವನ್ನು ನೆನೆಯಿಸಿಕೊಳ್ಳಲೂ ಸಹ ಅವಕಾಶವಿಲ್ಲದಂತಾಗಿದೆ. ಹೇಗೆ ಇರಲಿ–''ಧರ್ಮಸ್ಯ ಪ್ರಭುರಚ್ಯುತಃ''–ಎಂದಂತೆ ಆ ಭಗವಂತನನ್ನು ಸ್ಮರಿಸಿಕೊಳ್ಳುತ್ತಾ ನಡೆಯಬಹುದಾದಷ್ಟು ಧರ್ಮವನ್ನಾದರೂ ನಾವು ಉಳಿಸಿಕೊಳ್ಳಲು ಪ್ರಯತ್ನಿಸಬೇಕಾಗಿದೆ.

ಈಗ ಉಪಾಸನಾಕಾಂಡದ ಉಪಸಂಹಾರದ ಕಡೆಗೆ ನೋಡೋಣ. ಛಾಂದೋಗ್ಯೋಪನಿಷತ್ತಿನ ಐದನೆಯ ಅಧ್ಯಾಯವು ವೈಶ್ವಾನರವಿದ್ಯೆಯೊಡನೆ ಪೂರೈಸಿರುತ್ತದೆ. ಈವರೆಗಿನ ಐದು ಅಧ್ಯಾಯಗಳಲ್ಲಿ ಸಾಮೋಪಾಸನೆಗಳಿಂದಾರಂಭಿಸಿ ಅನೇಕ ವಿಧವಾದ ಬ್ರಹ್ಮೋಪಾಸನೆಗಳು ಪ್ರಸ್ತಾಪಿಸಲ್ಪಟ್ಟವು. ಅವುಗಳನ್ನೆಲ್ಲ ಯಥಾಮತಿಯಾಗಿ ಇಲ್ಲಿ ವಿವರಿಸಿರುತ್ತೇನೆ. ಉಪಾಸನೆಯೂ ಮಾನಸಿಕಕರ್ಮವೇ ಆಗಿರುತ್ತದೆ. ಇನ್ನು ಮುಂದೆ ಈ ಕರ್ಮಕಾಂಡವನ್ನು ಮೀರಿದ ಜ್ಞಾನಕಾಂಡವು ಸ್ವತಂತ್ರವಾಗಿ ಆರಂಭವಾಗಲಿದೆ. ಅದರಲ್ಲಿ ವಸ್ತುತಂತ್ರವಾದ ಬ್ರಹ್ಮವಿದ್ಯೆಯೇ ವಿವರಿಸಲ್ಪಡುವದು. ಬ್ರಹ್ಮವಿದ್ಯೆಯೇ ಅಮೃತತ್ವಕ್ಕೆ ಏಕೈಕಸಾಧನವಾಗಿರುತ್ತದೆ. ಇಂಥ ಬ್ರಹ್ಮವಿದ್ಯೆಯ ವಿಚಾರವಾಗಿ ಮುಂದೆ ಆರನೆಯ ಅಧ್ಯಾಯದ ಮಂತ್ರಗಳ ವಿವರಣೆಯೊಂದಿಗೆ ಪ್ರಸ್ತಾಪಿಸಲಾಗುವದು.

---

# ಆರನೆಯ ಅಧ್ಯಾಯ

## (ಆತ್ಮೈಕತ್ವಜ್ಞಾನ–ತ್ರಿವೃತ್ಕರಣ–ಸತ್ಸಂಪತ್ತಿ)

## ಆತ್ಮೈಕತ್ವಜ್ಞಾನ

**ಓಮ್ ॥ ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ॥ 6–1–4**

**ಭಾವಾರ್ಥಃ–** 'ಸೋಮ್ಯನೆ, ಹೇಗೆ ಒಂದು ಮಣ್ಣುಮುದ್ದೆಯನ್ನು ಅರಿತು ಕೊಂಡದ್ದರಿಂದ ಮಣ್ಣಿನಿಂದಾದದ್ದೆಲ್ಲವೂ ಅರಿಯಲ್ಪಟ್ಟದ್ದಾಗುವದೋ ಕಾರ್ಯವೆಂಬುದು ಬರಿಯ ಹೆಸರುಮಾತ್ರವೋ ಮಣ್ಣೆಂಬುದೇ ಸತ್ಯವೋ' (ಹಾಗೆ ಸದ್ಬ್ರಹ್ಮವೇ ಎಲ್ಲವೂ ಆಗಿರುವದು, ಅದೇ ಸತ್ಯವು).

(ಮಣ್ಣಿನ ಮುದ್ದೆಯಿಂದ ಮಾಡಿದ ಮಡಕೆ, ಕುಡಿಕೆ, ಶ್ರಾವೆ, ಹೆಂಚು–ಮುಂತಾದದ್ದೆಲ್ಲವೂ ಹೇಗೆ ಮಣ್ಣಿಗಿಂತ ಬೇರೆಯಾಗಿಲ್ಲವೋ ಹಾಗೆಯೇ ಸದ್‌ವಸ್ತುವಿನಿಂದ ಹೊರತೋರಿಕೊಂಡಿರುವ ನಾಮರೂಪಾತ್ಮಕಜಗತ್ತೆಲ್ಲವೂ ಸತ್ತೇ–ಎಂದಭಿಪ್ರಾಯ.)

## 37. ಒಂದರ ಜ್ಞಾನದಿಂದ ಎಲ್ಲದರ ಜ್ಞಾನ

ಈಗ ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದ ಮಂತ್ರಗಳನ್ನು ವಿವರಿಸುವ ಲೇಖನಗಳನ್ನು ಮುಂದುವರಿಸಲಾಗುವದು. ಈವರೆಗೆ ಉಪಾಸನಾಕಾಂಡವು ಪ್ರಸ್ತಾಪಿಸಲ್ಪಟ್ಟು ಇನ್ನು ಮುಂದೆ ಜ್ಞಾನಕಾಂಡವು ಆರಂಭವಾಗುತ್ತಿದೆ. ಆದ್ದರಿಂದ ವಾಚಕರು ತಮ್ಮ ವಿಚಾರದೃಷ್ಟಿಯನ್ನು ಮುಂದುಮಾಡಿಕೊಂಡು ಲೇಖನಗಳನ್ನು ಸಾವಧಾನವಾಗಿ ಅನುಸಂಧಾನಮಾಡುತ್ತಾ ಹೋಗಬೇಕು. ಇಲ್ಲಿಯೂ ಶ್ರುತ್ಯುಪದೇಶಕ್ಕೆ ಅಗ್ರಸ್ಥಾನವಿರುತ್ತದೆ ಯಾದರೂ ಆ ಉಪದೇಶವು ಅನುಭವದಲ್ಲಿಯೇ ಪರ್ಯವಸಾನವಾಗುವದರಿಂದ ವಾಚಕರು ಕೇವಲ ಶಬ್ದಪ್ರತ್ಯಯಗಳಲ್ಲಿ ಮಾತ್ರ ನಿಲ್ಲದೆ ವಿಚಾರಣೆಯಿಂದ ದೊರಕುವ ನಿಶ್ಚಯರೂಪವಾದ ಅರಿವಿನಲ್ಲಿ ನೆಲೆನಿಂತು ಅವಗತಿಪರ್ಯಂತವಾದ ವಿಜ್ಞಾನದಿಂದ ಕೃತಾರ್ಥರಾಗಲು ಪ್ರಯತ್ನಮಾಡಬೇಕಾಗಿ ಪ್ರಾರ್ಥನೆ.

ಶ್ರೀಶಂಕರಭಗವತ್ಪಾದರು ಈ ಅಧ್ಯಾಯಕ್ಕೆ ಸಂಬಂಧವನ್ನು ಬರೆಯುವಾಗ 'ಸರ್ವಂ ಖಲ್ವಿದಂ ಬ್ರಹ್ಮ' (3–14–1) ಎಂಬಲ್ಲಿ ಈ ಜಗತ್ತೆಲ್ಲವೂ ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿಯೇ ಹುಟ್ಟಿ ಬ್ರಹ್ಮದಲ್ಲಿಯೇ ಇದು ಸೂತ್ರಭಾಷ್ಯ ಅನ್ನಿಸುತ್ತೆ ? ಬದುಕಿದ್ದು

ಬ್ರಹ್ಮದಲ್ಲಿಯೇ ಒಂದಾಗಿ ಬಿಡುತ್ತದೆ–ಎಂದು ಹಿಂದೆಯೇ ತಿಳಿಸಿರುವ ವಿಷಯವನ್ನು ದೃಷ್ಟಾಂತಪೂರ್ವಕವಾಗಿ ವಿವರಿಸುವದಕ್ಕಾಗಿಯೂ ಬ್ರಹ್ಮಾತ್ಮೈಕತ್ವವೆಂಬುದು ಹೇಗೆ ಸರಿ? ಎಂಬುದನ್ನು ಪ್ರತಿಪಾದಿಸುವದಕ್ಕಾಗಿಯೂ ಈ ಅಧ್ಯಾಯವು ಹೊರಟಿರುವದಾಗಿ ತಿಳಿಸಿರುತ್ತಾರೆ. ವಾಚಕರು ಇಲ್ಲಿ ಗಮನಿಸಬೇಕಾದ ಮುಖ್ಯವಿಷಯವೇನೆಂದರೆಃ ಒಂದೇ ವಸ್ತುವನ್ನು ಬೇರೆಬೇರೆಯ ಶಬ್ದಗಳಿಂದ ನಿರ್ದೇಶಿಸುತ್ತಾ ಹೋಗಿರುವ ಸರಣಿಯು ಮನನೀಯವಾಗಿರುತ್ತದೆ. ಹೇಗೆಂದರೆ 'ಸತ್' ಎಂಬ ನಪುಂಸಕಲಿಂಗಶಬ್ದದಿಂದ ಉಪದೇಶವನ್ನಾರಂಭಿಸಿ 'ಪರಾ ದೇವತಾ' ಎಂಬ ಸ್ತ್ರೀಲಿಂಗಶಬ್ದದಿಂದ ಮುಂದುವರೆಸಿ 'ಸ ಆತ್ಮಾ' ಎಂಬ ಪುಲ್ಲಿಂಗಶಬ್ದದಿಂದ ಇಲ್ಲಿ ಉಪಸಂಹಾರಮಾಡಿದೆ. ಆದ್ದರಿಂದ ಶಬ್ದಗಳಿಗೆ ಲಿಂಗ ನಿಶ್ಚಯವೇ ಹೊರತು ಬ್ರಹ್ಮವು ಯಾವ ಲಿಂಗಕ್ಕೂ ಸೇರಿರುವದಿಲ್ಲ. ಅದು ನಾಮ–ಜಾತಿ–ಲಿಂಗ–ಅವಸ್ಥಾದಿಧರ್ಮಗಳನ್ನು ಮೀರಿದ್ದಾಗಿರುವದು. ಹೀಗಿದ್ದರೂ ವಿಚಾರಮಾಡುವವರ ಸೌಕರ್ಯಕ್ಕಾಗಿ ಅದನ್ನು 'ಸತ್' ಎಂಬ ನಾಮದಿಂದ ನಿರ್ದೇಶಿಸಿ ಜಗತ್ಕಾರಣತ್ವವನ್ನು ಅದರಲ್ಲಿ ಆರೋಪಿಸಿ ವ್ಯವಹಾರದೃಷ್ಟಿಯಿಂದ ಸರ್ವವಸ್ತುಗಳ ಆತ್ಮನೆಂದೂ ಅದೇ ಮಾನವನ ಪರಮಾರ್ಥ ಸ್ವರೂಪವೆಂದೂ ಉಪದೇಶಿಸಲಾಗಿದೆ. ಈ ಆಗಮಸಂಪ್ರದಾಯ ಬದ್ಧವಾದ ಉಪದೇಶಕ್ಕನುಗುಣವಾಗಿಯೇ ಮುಂದಿನ ಎಲ್ಲಾ ಮಂತ್ರಗಳನ್ನೂ ಸಮನ್ವಯ ಮಾಡಿಕೊಂಡಲ್ಲಿ ನಿರ್ವಿಶೇಷಬ್ರಹ್ಮತತ್ತ್ವದಲ್ಲಿಯೇ ಜಿಜ್ಞಾಸುಗಳು ನೆಲೆಗೊಳ್ಳುವದರಲ್ಲಿ ಸಂಶಯವಿಲ್ಲ.

ಬ್ರಹ್ಮವಿದ್ಯೆಯೇ ಸಕಲವಿದ್ಯೆಗಳಲ್ಲಿಯೂ ಹೆಚ್ಚಿನ ಸಾರಭೂತವಾದದ್ದು–ಎಂಬುದನ್ನು ತಿಳಿಸುವದಕ್ಕಾಗಿ ತಂದೆ–ಮಕ್ಕಳ ಒಂದು ಕಥೆಯಿಂದ ಇಲ್ಲಿ ವಿಷಯವನ್ನು ಪ್ರಸ್ತಾಪಿಸಲಾಗಿರುತ್ತದೆ. ಹಿಂದೆ ಉದ್ದಾಲಕನೆಂಬ ಒಬ್ಬ ಋಷಿಯಿದ್ದನು. ಅವನಿಗೆ ಶ್ವೇತಕೇತು–ಎಂಬ ಹೆಸರಿನ ಮಗನೊಬ್ಬನಿದ್ದನು. ಒಮ್ಮೆ ಉದ್ದಾಲಕನು ದೀರ್ಘ ಕಾಲದವರೆಗೂ ಪರಸ್ಥಳಕ್ಕೆ ಹೋಗಬೇಕಾದಂಥ ಪ್ರಸಂಗವು ಬಂದಿತು. ಆ ವೇಳೆಗೆ ಮಗನಿಗೆ ಇನ್ನೂ ಉಪನಯನವಾಗಿರಲಿಲ್ಲ. ತಾನು ಹಿಂದಿರುಗುವವೇಳೆಗೆ ಹುಡುಗನಿಗೆ ಉಪನಯನ ಕಾಲವು ಮೀರಿಹೋಗಬಹುದೆಂಬ ಶಂಕೆಯಿಂದ ತಂದೆಯು ಮಗನನ್ನು ಬೇರೊಬ್ಬ ಗುರುವಿನ ಸನ್ನಿಧಿಗೆ ಕಳುಹಿಸಿ ಉಪನೀತನಾಗಿ ವಿದ್ಯಾಭ್ಯಾಸವನ್ನು ಮುಂದುವರೆಸುವಂತೆ ತಿಳಿಸಿದನು. ಶ್ವೇತಕೇತುವಾದರೊ, ಬೇರೊಬ್ಬ ಗುರುವನ್ನು ಬಳಿಸಾರಿ ಬ್ರಹ್ಮಚರ್ಯಾಶ್ರಮವನ್ನು ಸ್ವೀಕರಿಸಿ ಹನ್ನೆರಡು ವರ್ಷಗಳ ಕಾಲ ಅವರಲ್ಲಿಯೇ ವಿದ್ಯಾಭ್ಯಾಸಮಾಡಿದನು. ಅದು ಪೂರೈಸಿದ ಅನಂತರ ಗುರುಗಳ ಅನುಮತಿಯನ್ನು ಪಡೆದು ತಂದೆಯ ಮನೆಗೆ ಹಿಂದಿರುಗಿದನು. ನಿಜವಾಗಿಯೂ ಆತನಿಗೆ ವೇದವಿದ್ಯೆಯು ಕರಗತವಾಗಿತ್ತು, ಆದ್ದರಿಂದಲೇ ಸ್ವಲ್ಪ ಜಂಭದಿಂದ ಕೂಡಿದ್ದನು. ವಿದ್ಯೆಯಿಲ್ಲದವರೇ ಜಂಭಮಾಡುವಾಗ ಬಲ್ಲವನು ಅದನ್ನು ಪ್ರದರ್ಶಿಸಿದರೆ ತಪ್ಪೆಂದು ಹೇಳಲಾಗುವದಿಲ್ಲ.

ಹೇಗೇ ಇರಲಿ–ಈತನು ಮನೆಗೆ ಹಿಂದಿರುಗುವ ವೇಳೆಗೆ ತಂದೆಯೂ ಪ್ರವಾಸವನ್ನು ಮುಗಿಸಿಕೊಂಡು ಬಂದಿದ್ದನು. ಶ್ವೇತಕೇತುವನ್ನು ಕಂಡಕೂಡಲೇ ತಂದೆಗೆ ಅವನ ನಡೆವಳಿಕೆಯಲ್ಲಿ ಬದಲಾವಣೆಯಾಗಿರುವದು ಗೊತ್ತಾಯಿತು. ತಂದೆಯ ನಿರೀಕ್ಷೆಯಂತೆ ಮಗನು ವಿನಯವಂತನಾಗಿರಬೇಕಾಗಿತ್ತು. ಏಕೆಂದರೆ: 'ವಿದ್ಯಾ ದದಾತಿ ವಿನಯಮ್'. ಎಂದಂತೆ ವಿದ್ಯಾವಂತನು ವಿನಯವಂತನಾಗಿರಬೇಕಾದದ್ದು ನ್ಯಾಯವಾಗಿದೆ. ಆದರೆ ಶ್ವೇತಕೇತುವು 'ಸ್ತಬ್ಧ'ನಾಗಿದ್ದನು. ಇದು ಬ್ರಹ್ಮನಿಷ್ಠನಾದ ತಂದೆಗೆ ಹಿಡಿಸಲಿಲ್ಲ. ಕೂಡಲೇ ಆತನು 'ಎಲೈ ಶ್ವೇತಕೇತುವೆ, ಏಕೆ ಹೀಗೆ ಅಹಂಕಾರದಿಂದ ಸೆಟೆತುಕೊಂಡಿರುವೆ?, ''ನನಗೆ ಎಲ್ಲವೂ ಗೊತ್ತು–ಎಂಬ ಜಂಭವೇಕೆ? ಹಾಗಾದರೆ ನೀನು ಗುರುಗಳಿಂದ ಈ ಉಪದೇಶವನ್ನು ಪಡೆದುಕೊಂಡಿರುವೆಯೊ? ಯಾವ ಒಂದನ್ನರಿತರೆ ಎಲ್ಲವನ್ನೂ ಅರಿತಂತಾಗುವದೋ ಅದು ಯಾವದು? ಎಂಬುದು ನಿನಗೆ ತಿಳಿದಿದೆಯೆ?'' ಎಂದು ಕೇಳಿಬಿಟ್ಟನು. ಆದರೆ ಶ್ವೇತಕೇತುವಿಗೆ ಈ ತತ್ತ್ವವು ತಿಳಿದಿರಲಿಲ್ಲ. ''ತಾನು ಗುರುಗಳ ಪಟ್ಟಶಿಷ್ಯನಾಗಿದ್ದು ಎಲ್ಲಾ ವಿದ್ಯೆಗಳನ್ನೂ ಕಲಿತಿದ್ದರೂ ಈ ವಿದ್ಯೆಯನ್ನೇಕೆ ಗುರುಗಳು ತನಗೆ ತಿಳಿಸಲಿಲ್ಲ?'' ಪ್ರಾಯಶಃ ಅವರಿಗೇ ಈ ವಿದ್ಯೆಯು ತಿಳಿದಿರಲಾರದು. ಗೊತ್ತಿದ್ದಿದ್ದರೆ ತನ್ನಂಥ ಪ್ರಿಯಶಿಷ್ಯನಿಗೆ ಹೇಳದೆ ಏಕೆ ಇರುತ್ತಿದ್ದರು? ಆದ್ದರಿಂದ ಈ ವಿಷಯವನ್ನು 'ತಂದೆಯಿಂದಲೇ ತಿಳಿದುಕೊಳ್ಳುವೆನು'–ಎಂದು ನಿಶ್ಚಯಿಸಿ ತಂದೆಯನ್ನು ಕುರಿತು ಹೀಗೆಂದನು: 'ಪೂಜ್ಯರೆ, ನನಗಾಗಲಿ ನನ್ನ ಗುರುವಿಗಾಗಲೀ ತಾವು ಕೇಳಿದ ವಿಷಯವು ತಿಳಿಯದು. ಏಕೆಂದರೆ ಅವರು ತಿಳಿದಿದ್ದರೆ ನನಗೆ ಹೇಳಿಕೊಡಬೇಕಾಗಿತ್ತು, ನಾನು ಗುರುಗಳಲ್ಲಿ ಎಂದಿಗೂ ತಪ್ಪಾಗಿ ನಡೆದುಕೊಂಡಿಲ್ಲ, ಇರಲಿ; ತಾವೇ ಈ ವಿದ್ಯೆಯನ್ನು ನನಗೆ ಉಪದೇಶಮಾಡೋಣವಾಗಲಿ'–ಎಂದು ವಿನೀತನಾಗಿ ಬಳಿಸಾರಿದನು. ಅವನಿಗೆ ತನ್ನ ತಂದೆಯು ಪುನಃ ಹಿಂದಿನ ಗುರುಗಳಲ್ಲಿಗೇ ಬ್ರಹ್ಮಚರ್ಯಕ್ಕಾಗಿ ಎಲ್ಲಿ ಕಳುಹಿಸಿ ಬಿಡುವನೊ? ಎಂದು ಹೆದರಿಕೆಯಾಗಿತ್ತು, ಆದ್ದರಿಂದ ನಿಜ ಸಂಗತಿಯನ್ನು ತಿಳಿಸಿ ವಿನೀತನಾಗಿ ಬಳಿಸಾರಿದನು.

ಆಗ ಉದ್ದಾಲಕನು 'ಮಗೂ, ನಿನಗೆ ಒಂದೆರಡು ಉದಾಹರಣೆಗಳಿಂದ ವಿಷಯವನ್ನು ತಿಳಿಸುವೆನು. ಕೇಳು. ಲೋಕದಲ್ಲಿ ಮಡಕೆಕುಡಿಕೆಗಳನ್ನು ಬಳಸದೆ ಇರುವವರು ಅಪರೂಪವೇ ಸರಿ. ಆದ್ದರಿಂದ ಬಡವಬಲ್ಲಿದರಾದಿಯಾಗಿ ಎಲ್ಲರಿಗೂ ಗೊತ್ತಿರುವಂಥ ಮಡಕೆ ಮುಂತಾದ ಮಣ್ಣಿನಿಂದಾದ ಪದಾರ್ಥಗಳನ್ನು ಕಂಡಾಗ ಇವೆಲ್ಲವೂ ಮಣ್ಣಿನ ಕಾರ್ಯಗಳೇ–ಎಂದರೆ ಮಣ್ಣಿನ ವಿಕಾರಗಳೇ–ಎಂದು ತಿಳಿದುಬರುತ್ತದೆ. ಹಾಗೆಯೇ ಚಿನ್ನದ ಒಡವೆಗಳನ್ನು ನೋಡಿದಾಗ ನೆಕ್‌ಲೇಸುಗಳು, ಬಳೆಗಳು, ಓಲೆಗಳು, ಸರಗಳು–ಮುಂತಾಗಿ ಅನೇಕರೀತಿಯ ಒಡವೆಗಳು ಗೋಚರವಾದರೂ ಇವೆಲ್ಲವೂ ಚಿನ್ನದ್ದೇ–ಎಂದೇ ತಿಳಿದುಬರುತ್ತದೆ. ಮತ್ತು ಒಂದು

ಕಬ್ಬಿಣದ ಅಂಗಡಿಗೆ ಹೋಗಿ ನೋಡಿದಾಗ ಗುಳ, ಹಾರೆ, ಪಿಕಾಶಿ, ಗುದ್ದಲಿ, ಮೊಳೆ, ಚಿಲಕಗಳು–ಮುಂತಾಗಿ ನಾನಾ ದ್ರವ್ಯಗಳು ಕಂಡುಬಂದರೂ ಎಲ್ಲವೂ ಕಬ್ಬಿಣದ್ದೇ ಎಂಬುದು ನಿಶ್ಚಯವಾಗಿ ತಿಳಿದುಬಿಡುತ್ತದೆ. ಈ ಉದಾಹರಣೆಗಳನ್ನು ಮನಸ್ಸಿನಲ್ಲಿ ಚೆನ್ನಾಗಿ ಹೊರಳಾಡಿಸುವವನಾಗು. ನಿಜವೇನೆಂದರೆ: ಮಣ್ಣು, ಚಿನ್ನ, ಕಬ್ಬಿಣಗಳು ಕಾರಣವಸ್ತುಗಳು; ಮಡಕೆ, ಒಡವೆ, ಗುಳ–ಮುಂತಾದವುಗಳು ಕಾರ್ಯಗಳು. ಹೀಗೆ ಜಗತ್ತಿನಲ್ಲಿರುವ ಎಲ್ಲಾ ಕಾರ್ಯವಸ್ತುಗಳೂ ಯಾವಾಗಲೂ ತಮ್ಮ ತಮ್ಮ ಕಾರಣಕ್ಕಿಂತ ಬೇರೆಯಾಗಿ ಸ್ವತಂತ್ರವಾಗಿರುವದಿಲ್ಲ. ಒಬ್ಬ ಅಕ್ಕಸಾಲಿಗನಿಗೆ ಒಂದು ತೊಲ ಚಿನ್ನವನ್ನು ಕೊಟ್ಟು ಉಂಗುರವನ್ನು ಮಾಡಿಕೊಡು–ಎಂದು ಹೇಳುವವನಾಗು. ಅವನು ಉಂಗುರವನ್ನು ಸಿದ್ಧಗೊಳಿಸಿ ನಿನಗೆ ಕೊಟ್ಟ ಅನಂತರ ಅಕ್ಕಸಾಲಿಗನನ್ನು 'ಅಯ್ಯಾ, ನೀನು ಉಂಗುರವನ್ನು ಕೊಟ್ಟಿದ್ದು ಸರಿ; ಆದರೆ ನನ್ನ ಚಿನ್ನವನ್ನು ವಾಪಸು ಕೊಡು'–ಎಂದು ಕೇಳುವವನಾಗು. ಅವನು ಉಂಗುರವನ್ನು ಕೊಟ್ಟಮೇಲೂ ಬೇರೆಯಾಗಿ ಚಿನ್ನವನ್ನು ಕೊಡಲು ಸಾಧ್ಯವೆ? ''ಸ್ವಾಮಿ, ನಿಮ್ಮ ಚಿನ್ನವೇ ಉಂಗುರವಾಗಿ ಮಾರ್ಪಟ್ಟಿದೆ. ಚಿನ್ನಕ್ಕೇ ಈಗ ಉಂಗುರವೆಂಬ ವ್ಯವಹಾರವಾಗಿದೆ. ಆದ್ದರಿಂದ ನಿಮ್ಮ ಉಂಗುರವು ಯಾವಾಗಲೂ ಚಿನ್ನವೇ. ಚಿನ್ನವನ್ನು ಬಿಟ್ಟು ಬೇರೆ ಉಂಗುರವೆಂಬುದಿಲ್ಲವೇ ಇಲ್ಲ. ಅದು ಹಿಂದೆಯಾಗಲಿ ಈಗಲಾಗಲೀ ಮುಂದಾಗಲೀ ಚಿನ್ನವನ್ನು ಬಿಟ್ಟಿರಲಾರದು. ಇಷ್ಟೇ ಅಲ್ಲ, ಉಂಗುರವನ್ನು ಕರಗಿಸಿದಾಗ ಅದು ಅಳಿಸಿಹೋಗಿಬಿಡುವದು. ಆಗ ಚಿನ್ನವೇ ಉಳಿಯುವದು. ಅಲ್ಲವೆ? ಆದ್ದರಿಂದ ಚಿನ್ನವೇ ಉಂಗುರವು–ಎಂದು ಹೇಳಿದರೆ ವಸ್ತುಸ್ಥಿತಿಯನ್ನೇ ತಿಳಿಸಿದಂತಾಯಿತಲ್ಲವೆ? ಮಗು, ಹೀಗೆ ವಿಚಾರಮಾಡು''–ಎಂದು ಮೊಟ್ಟ ಮೊದಲಿಗೆ ತಂದೆಯು ತಿಳಿಸಿದನು.

ಈಗ ಈ ಕಾರ್ಯಕಾರಣಪ್ರಕ್ರಿಯೆಯ ವಿವರವನ್ನು ನಾವು ತಿಳಿಯೋಣ. ವ್ಯವಹಾರದಲ್ಲಿ ಕೆಲವು ದೂರದವರೆಗೆ 'ಇದಕ್ಕೇನು ಕಾರಣ? ಇದಕ್ಕೇನು ಕಾರಣ?' ಎಂದು ಕೇಳುತ್ತಾ ಹೋಗಬಹುದಾದರೂ ಎಲ್ಲಿಯೋ ಒಂದು ಕಡೆ ನಮಗೆ ಗೊತ್ತಿಲ್ಲದ ಸ್ಥಳದಲ್ಲಿ ನಿಂತುಬಿಡಬೇಕಾಗುತ್ತದೆ. ಏಕೆಂದರೆ ನಮ್ಮ ಬುದ್ಧಿಗೆ ಅಲ್ಲಿಂದಾಚೆಗೆ ಹಾಯುವ ಸಾಮರ್ಥ್ಯವಿರುವದಿಲ್ಲ. ತಾರ್ಕಿಕರ ವಿಚಾರಸರಣಿಯಲ್ಲ ಇಷ್ಟೇ ಸರಿ. ಅವರುಗಳು ತಮ್ಮ ತಮ್ಮ ಬುದ್ಧಿಯಮಟ್ಟಕ್ಕೆ ನಿಲುಕಿದುದನ್ನು ಅಥವಾ ಬುದ್ಧಿಯಿಂದ ಊಹಿಸಬಹುದಾದ ವಸ್ತುವನ್ನು ತಿಳಿಸಿಕೊಟ್ಟು ಅದೇ ಕಡೆಯದು–ಎಂದು ಕೈಬಿಡುತ್ತಾರೆ. ಆದರೆ ಲೋಕದಲ್ಲಿ ಕಾರ್ಯಕಾರಣತರ್ಕಕ್ಕೆ ಹೊಂದುಗೆಯಾಗದಂಥ ಕೆಲವು ವಿಚಾರಗಳೂ ಇರುತ್ತವೆ. ಹೇಗೆಂದರೆ ತಾರ್ಕಿಕರು ಕಾರಣವಸ್ತುವಿಗೆ ಕೊಡುವ ಲಕ್ಷಣವು ಹೀಗಿದೆ: 'ಕಾರ್ಯನಿಯತಪೂರ್ವವೃತ್ತಿಕಾರಣಮ್' (ಕಾರ್ಯವು ಹುಟ್ಟುವದಕ್ಕೆ ಮುಂಚೆ ಇರಲೇ ಬೇಕಾದದ್ದು ಕಾರಣವು) ಎಂದು ಅವರ ಅಭಿಪ್ರಾಯವಿದೆ. ಇದರಂತೆ ಮಡಕೆ–ಎಂಬ

ಕಾರ್ಯವು ಹುಟ್ಟುವ ಮುಂಚೆ ಮಣ್ಣು-ಎಂಬ ಕಾರಣವು ಇದ್ದುಕೊಂಡೇ ಇರಬೇಕು. ಇದೇನೋ ಸರಿ. ಆದರೆ ಭಾನುವಾರದ ಅನಂತರ ಬರುವ ಸೋಮವಾರಕ್ಕೆ ಭಾನುವಾರವು ಮುಂಚೆ ಕಡ್ಡಾಯವಾಗಿ ಇದ್ದುಕೊಂಡಿರುವದರಿಂದ ಸೋಮವಾರಕ್ಕೆ ಭಾನುವಾರವು ಕಾರಣವು. ಸೋಮವಾರವು ಭಾನುವಾರದ ಕಾರ್ಯ-ಎನ್ನಬಹುದೆ? ಹೀಗೆ ಯಾರಾದರೂ ಕೇಳಿದರೆ ಅದನ್ನು ಕುತರ್ಕವೆಂತ ತಳ್ಳಿಹಾಕಬಹುದಾದರೂ ನಮ್ಮ ಬುದ್ಧಿಗೆ ಸಮಾಧಾನವಾಗುವದಿಲ್ಲ. ಇದರಿಂದ ಸಿದ್ಧವಾಗುವದೇನೆಂದರೆ: ಶ್ರುತಿಯಲ್ಲಿಯೂ ಕಾರ್ಯಕಾರಣತರ್ಕವನ್ನು ಸದ್ವಸ್ತುವನ್ನು ತಿಳಿಸುವದಕ್ಕೆ ಉಪಾಯಮಾತ್ರವಾಗಿ ವ್ಯಾವಹಾರಿಕದೃಷ್ಟಿಯಿಂದ ಬಳಸಿಕೊಂಡಿದೆಯೇ ಹೊರತು ಸದ್ವಸ್ತುವು ನಿಜವಾಗಿಯೂ ಜಗತ್ಕಾರಣವೆಂದು ಪ್ರತಿಪಾದಿಸುವದಕ್ಕಲ್ಲ. ಒಂದು ವೇಳೆ ಕಾರ್ಯಕಾರಣತರ್ಕವು ಸದ್ವಸ್ತುವಿನ ವಿಷಯಕ್ಕೆ ಹೊಂದದೆ ಹೋದರೂ, ಅದು ಬಿದ್ದೇಹೋದರೂ ಸದ್ವಸ್ತುವು ಆಚಾರ್ಯರ ಉಪದೇಶದಿಂದ ಶಿಷ್ಯನಿಗೆ ತಿಳಿದುಬರುತ್ತದೆಯಾದ್ದರಿಂದಲೂ ಉಪದೇಶದ ಅನಂತರ ಶಾಸ್ತ್ರ-ಶಿಷ್ಯ-ಗುರು-ಮುಂತಾದ ಭೇದಗಳೂ ಕಲ್ಪಿತವೆಂದೇ ಅನುಭವವಾಗುವದರಿಂದಲೂ ಏಕಮೇವಾದ್ವಿತೀಯವಾದ ಬ್ರಹ್ಮದ ಉಪದೇಶಕ್ಕಾಗಿ ಕಲ್ಪಿಸಿರುವ ಕಾರ್ಯಕಾರಣಾದಿಪ್ರಕ್ರಿಯೆಗಳಲ್ಲಿ ಉಪನಿಷತ್ತಿಗೆ ತಾತ್ಪರ್ಯವಿಲ್ಲವೆಂದೇ ತಿಳಿಯಬೇಕು. ಹೀಗೆಯೇ ಮುಂದೆ ಪ್ರಸ್ತಾಪಿಸಲಿರುವ ಅವಸ್ಥಾತ್ರಯತರ್ಕಕ್ಕೂ ಉಪಾಯಮಾತ್ರ ಪರ್ಯವಸಾನತ್ವವನ್ನೇ ಸ್ವೀಕರಿಸಬೇಕು. ಇದನ್ನು ಮುಂದೆ ವಿಚಾರಮಾಡೋಣ.

-----

## ಅದ್ವಿತೀಯಸತ್ತಿನಿಂದಲೇ ಎಲ್ಲವೂ ಆಗಿದೆ

**ಓಮ್ ॥ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ ।**
**.....ಸತ್ತ್ವೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ ॥ 6-2-2**

ಭಾವಾರ್ಥ:- 'ಸೋಮ್ಯನೆ, ಇದು ಮೊದಲು ಎರಡನೆಯದಿಲ್ಲದ ಒಂದೇ ಆದ ಸತ್ತೇ ಆಗಿತ್ತು.....ಸೋಮ್ಯನೆ, ಇದು ಮೊದಲು ತನಗೆರಡನೆಯದಿಲ್ಲದ ಒಂದೇ ಆದ ಸತ್ತೇ ಆಗಿತ್ತು' (ಎಂದನು).

(ಉದ್ದಾಲಕನುಶ್ವೇತಕೇತುವಿಗೆ ಸದ್ಬ್ರಹ್ಮವನ್ನು ಉಪದೇಶಿಸುತ್ತಾ "ಮಗು, ಈ ಜಗತ್ತು ಸೃಷ್ಟಿಗೆ ಮುಂಚೆ ಸತ್ತೇ ಆಗಿತ್ತು, ಕೆಲವರು ಇದು ಅಸತ್ತೊಂದೇ ಆಗಿತ್ತು ಎನ್ನುವರು. ಅದು ಹೇಗಾದೀತು? ಅಸತ್ತಿನಿಂದ ಸತ್ತು ಹೇಗೆ ತಾನೆ ಉಂಟಾದೀತು? ಆದ್ದರಿಂದ ಇದೆಲ್ಲವೂ ಸತ್ತೊಂದೇ ಆಗಿತ್ತು-ಎಂದು ತಿಳಿ"-ಎಂದು ಬೋಧಿಸಿದನು.)

# 38. ಅದ್ವಿತೀಯವಾದ ಸನ್ಮಾತ್ರತತ್ತ್ವ

ಛಾಂದೋಗ್ಯೋಪನಿಷತ್ತಿನಲ್ಲಿ ಬಳಸಿರುವ ಕಾರ್ಯಕಾರಣವಾದವು ಬ್ರಹ್ಮ ಪ್ರತಿಪತ್ತಿಗೆ ಉಪಾಯಮಾತ್ರವೆಂದು ಹಿಂದೆ ತಿಳಿಸಿದೆ. ಇದೇ ಉಪಾಯವನ್ನೇ ಮುಂದುಮಾಡಿಕೊಂಡು ಉದ್ದಾಲಕನು ಶ್ವೇತಕೇತುವಿಗೆ ಬ್ರಹ್ಮೋಪದೇಶವನ್ನು ಮಾಡಿದ್ದಾನೆ. ಅದನ್ನು ಈಗ ನಾವೂ ಮನದಂದುಕೊಳ್ಳೋಣ. ಕಾರ್ಯಕರಣವಾದದಲ್ಲಿ ಸತ್ಕಾರ್ಯವಾದವೆಂದೂ ಅಸತ್ಕಾರ್ಯವಾದವೆಂದೂ ಎರಡು ಪಕ್ಷಗಳಿವೆ. ಸತ್ಕಾರ್ಯವಾದವೆಂದರೆ ಇದ್ದದ್ದು ಮಾತ್ರವೇ ಹುಟ್ಟುತ್ತದೆ–ಎಂಬ ವಾದವು. ಎಳ್ಳಿನಲ್ಲಿ ಎಣ್ಣೆಯು ಅಡಗಿರುವದರಿಂದಲೇ ಎಣ್ಣೆಯು ಬೇಕಾದವನು ಎಳ್ಳನ್ನೇ ಹಿಂಡಬೇಕು. ಅದಕ್ಕೆ ಬದಲಾಗಿ ಮರಳನ್ನು ಹಿಂಡಿದರೆ ಎಣ್ಣೆಯು ಬರುವದಿಲ್ಲ. ಏಕೆಂದರೆ ಮರಳಿನಲ್ಲಿ ಎಣ್ಣೆಯು ಇರುವದಿಲ್ಲ. ಆದ್ದರಿಂದ ಸತ್ಕಾರ್ಯವಾದವೇ ಸರಿ–ಎಂದು ಸಾಂಖ್ಯರು ತಿಳಿಸುತ್ತಾರೆ. ಆದರೆ ವೈಶೇಷಿಕರು ಸತ್ಕಾರ್ಯವಾದವನ್ನು ಒಪ್ಪುವದಿಲ್ಲ. ಏಕೆಂದರೆ ಯಾವದೇ ವಸ್ತುವು ಹುಟ್ಟುವ ಮೊದಲೇ ಇದ್ದುಕೊಂಡೇಬಿಟ್ಟಿದ್ದರೆ ಅದು ಹುಟ್ಟುತ್ತದೆ ಎಂದೇಕೆ ಹೇಳಬೇಕು? ಜನ್ಮಶಬ್ದಕ್ಕೆ ಅರ್ಥವೇ ಇಲ್ಲದಂತಾಗುವದಲ್ಲವೆ? ಆದ್ದರಿಂದ ಕಾರಣವೂ ಕಾರ್ಯರೂಪವಾಗಿ ಹೊಸದಾಗಿಯೇ ಹುಟ್ಟಬೇಕು. ಕಾರ್ಯವು ತನ್ನ ಹುಟ್ಟುವಿಕೆಗೆ ಉಪಾದಾನ–ನಿಮಿತ್ತಕಾರಣಗಳೆರಡನ್ನೂ ಬಯಸುತ್ತದೆ. ಮತ್ತು ಕಾರ್ಯದಿಂದ ಆಗುವ ವ್ಯವಹಾರವು ಕಾರಣವಸ್ತುವಿನಿಂದಾಗುವದಿಲ್ಲ. ಹೇಗೆಂದರೆ ಮಡಕೆಯೆಂಬ ಕಾರ್ಯದಿಂದ ಆಗಬಹುದಾದ ನೀರು ತರುವಿಕೆ, ಅನ್ನವನ್ನು ಬೇಯಿಸುವಿಕೆ–ಮುಂತಾದ ಕೆಲಸಗಳು ಬರಿಯ ಮಣ್ಣುಮುದ್ದೆಯಿಂದಾದೀತೆ? ಆದ್ದರಿಂದ ಮಡಕೆ ಎಂಬ ಕಾರ್ಯವು ಬೇರೆಯೇ, ಮಣ್ಣೆಂಬ ಕಾರಣವು ಬೇರೆಯೇ–ಎಂದು ವೈಶೇಷಿಕರ ವಾದ. ಈ ಎರಡು ವಾದಗಳಲ್ಲಿ ವೇದಾಂತಿಗಳು ವ್ಯಾವಹಾರಿಕ ದೃಷ್ಟಿಯಿಂದ ಸತ್ಕಾರ್ಯವಾದವನ್ನು ಅಂಗೀಕರಿಸಿರುತ್ತಾರೆ. ಶ್ರುತಿಯಲ್ಲಿ ಸತ್ಕಾರ್ಯವಾದವನ್ನು ಒಪ್ಪಿರುವದೇ ಇದಕ್ಕೆ ಕಾರಣ. ಈಗ ಸತ್ಕಾರ್ಯವಾದವನ್ನು ವಿಚಾರಮಾಡೋಣ.

ಸತ್ಕಾರ್ಯವಾದ–ಎಂಬ ಶಬ್ದದಲ್ಲಿ ಸತ್ತೇ ಕಾರ್ಯವಾಗಿ ಹೊರತೋರಿ ಕೊಂಡಿರುತ್ತದೆ– ಎಂಬುದು ಶ್ರುತಿಯ ವಿವಕ್ಷಿತಾರ್ಥವಾಗಿರುತ್ತದೆ. ಏಕೆಂದರೆ ಸದ್ಬ್ರಹ್ಮದ ಪ್ರತಿಪಾದನೆಗಾಗಿಯೇ ಶ್ರುತಿಯು ಹೊರಟಿರುತ್ತದೆ. ಹೇಗೆಂದರೆಃ ಉದ್ದಾಲಕನು ತನ್ನ ಮಗನನ್ನು ಕುರಿತು ಹೀಗೆ ಹೇಳುತ್ತಿದ್ದಾನೆ. 'ಮಗು, ಇದೆಲ್ಲವೂ ಮುಂಚೆ ತನಗೆರಡನೆಯದಿಲ್ಲದ ಸತ್ತೊಂದೇ ಆಗಿತ್ತು; ಕೆಲವರು ಹೇಳುತ್ತಾರೇನೆಂದರೆಃ ಮೊದಲು ಇದೆಲ್ಲವೂ ಅಸತ್ತೇ ಆಗಿತ್ತು–(ಎನ್ನುವರು). ಆದರೆ ಅಸತ್ತಿನಿಂದ ಎಂದಾದರೂ

ಯಾವದಾದರೂ ಹುಟ್ಟೀತೇನು? ಮತ್ತು ಇದೆ–ಎಂದೇ ಎಲ್ಲರಿಂದಲೂ ಸರ್ವಸಮ್ಮತವಾಗಿ ವ್ಯವಹರಿಸಲ್ಪಡುವ ಈ ನಾಮರೂಪಾತ್ಮಕವಾದ ಜಗತ್ತು 'ಇದೆ' ಎಂಬ ಬುದ್ಧಿಯನ್ನವಲಂಬಿಸದೆ ಎಂದಾದರೂ ಜನರಿಂದ ಅನುಭವಿಸಲ್ಪಟ್ಟಿದೆಯೆ? ಇಲ್ಲ, ಆದ್ದರಿಂದ ಈ ಸದನ್ವಿತವಾದ ಜಗತ್ತು ಈಗ ಬಿಡಿಬಿಡಿಯಾಗಿ ತೋರಿಕೊಂಡಿದ್ದು– ಹುಟ್ಟುವ ಮುಂಚೆ ಕೇವಲ ಸತ್ತೇ ಆಗಿತ್ತು, ಆ ಸದ್ವಸ್ತುವಾದರೊ, ತಾನೊಂದೇ ಇತ್ತು'' ಎಂದು ತಿಳಿಸಿರುತ್ತಾನೆ. ಇಲ್ಲಿ ಸತ್ಕಾರ್ಯವಾದವೇ ಪ್ರತಿಪಾದಿಸಲ್ಪಟ್ಟಿದೆ–ಎಂಬಿದು ಸ್ಪಷ್ಟ. ಇದನ್ನು ಅರ್ಥಮಾಡಿಕೊಳ್ಳಲಾರದ ವೈಶೇಷಿಕರೂ ಶೂನ್ಯವಾದಿಗಳೂ ನಾನಾಪ್ರಕಾರದ ಆಕ್ಷೇಪಗಳನ್ನೆತ್ತಿರುತ್ತಾರೆ. ಅವುಗಳಿಗೆಲ್ಲಕ್ಕೂ ಶ್ರೀಶಂಕರಭಗವತ್ಪಾದರು ತಮ್ಮ ಭಾಷ್ಯದಲ್ಲಿ ಸಮರ್ಪಕವಾಗಿ ಉತ್ತರವನ್ನು ನೀಡಿರುತ್ತಾರೆ. ಮುಖ್ಯವಾಗಿ ಸಾಂಖ್ಯರೂ–ವೈಶೇಷಿಕರೂ ದ್ವೈತಿಗಳು, ಬೌದ್ಧರು ಶೂನ್ಯವಾದಿಗಳು. ಇವರುಗಳಿಗೆ ಪರಸ್ಪರ–ವಾದವಿವಾದಗಳಿಗೆ ತರ್ಕ, ದೃಷ್ಟಾಂತಗಳ ಬಲವೇ ಮುಖ್ಯವು. ಆದರೆ ಉಪನಿಷತ್ ಪ್ರತಿಪಾದ್ಯವಾದ ಸದ್ವಸ್ತುವು ತರ್ಕಸಿದ್ಧವಲ್ಲ. ಅದು ಆಗಮಮಾತ್ರಗಮ್ಯವಾಗಿರುತ್ತದೆ. ಯಾರೇ ಆಗಲಿ, ಆಗಮಾನುಸಾರವಾಗಿ ವಿಚಾರಮಾಡದೆ ಹೋದಾಗ, ಅವರವರ ಮೂಗಿನ ನೇರಕ್ಕೆ ಮಾಡುವ ತರ್ಕಗಳಿಂದಲೂ ಅವುಗಳ ಸಿದ್ಧಿಗಾಗಿ ಬಳಸುವ ದೃಷ್ಟಾಂತಗಳಿಂದಲೂ ಯಾವ ವಸ್ತುವೂ ಅಂತಿಮವಾಗಿ ಸಿದ್ಧವಾಗುವದಿಲ್ಲ. ತತ್ಕಾಲಕ್ಕೆ ಒಂದು ತರ್ಕವು ಅಥವಾ ವಾದವು ಗೆದ್ದಿರಬಹುದು. ಆದರೆ ಅದನ್ನು ಸೋಲಿಸುವ ಪ್ರತಿತರ್ಕವು ಹುಟ್ಟಿದ ಕೂಡಲೆ ಅದು ಬಿದ್ದುಹೋಗುತ್ತದೆ. ಹಿಂದಿನ, ಮುಂದಿನ–ಎಲ್ಲಾ ತಾರ್ಕಿಕರನ್ನೂ ಒಂದುಗೂಡಿಸಿ ಒಮ್ಮತಕ್ಕೆ ಬರುವದೂ ಸಾಧ್ಯವಿಲ್ಲ. ಏಕೆಂದರೆ ಯಾವ ತಾರ್ಕಿಕನೂ ತನ್ನ ತನ್ನ ಪಟ್ಟನ್ನು ಬಿಟ್ಟುಕೊಡುವದಿಲ್ಲ. ಹೀಗಿರುವದರಿಂದ ತಾರ್ಕಿಕದರ್ಶನಗಳು ದ್ವೈತವಾಗಿರಲಿ, ಶೂನ್ಯವಾದವಾಗಿರಲಿ, ಅವಕ್ಕೆ ನಿಲುಗಡೆಯಿಲ್ಲವೆಂಬುದು ನಿತ್ಯಸತ್ಯವು. ವೇದಾಂತಿಗಳಾದರೊ, ತರ್ಕದ ಭಾಷೆಯಿಂದ ಮಾತನಾಡಿದರೂ ಅನುಭವ ಶರಣರಾಗಿರುತ್ತಾರೆ. ಹೇಗೆಂದರೆ: ಇಲ್ಲಿಯೇ ವಿಚಾರಮಾಡೋಣ. ''ಮಗು, ಅಸತ್ತಿನಿಂದ ಯಾವದಾದರೂ ಸದ್ವಸ್ತುವು ಹುಟ್ಟುವದುಂಟೇನಪ್ಪ?'' ಎಂದು ಕೇಳುವಾಗ ಶ್ರುತಿಯು ಅನುಭವವನ್ನೇ ಮುಂದಿಟ್ಟಿದೆ. ತಂದೆಯಿಲ್ಲದೆ ಮಗನಾಗಲಿ, ಬೀಜವಿಲ್ಲದೆ ಮರವಾಗಲಿ–ಹೇಗೆ ಹುಟ್ಟಲಾರದೋ ಹಾಗೆ ಸತ್ತಿಲ್ಲದೆ ಜಗತ್ತು ಹುಟ್ಟಲಾರದು. ಈ ಅರ್ಥದಲ್ಲಿ ಸತ್ತೇ ಜಗತ್ಕಾರಣವು–ಎಂದಭಿಪ್ರಾಯ.

ಈಗ ಇನ್ನೊಂದು ಆಕ್ಷೇಪವನ್ನು ಹೀಗೆ ಮಾಡಬಹುದು. ಜಗತ್ಕಾರಣವನ್ನು ಸತ್ತೆಂದೇ ಒಪ್ಪೋಣ. ಆ ಸತ್ತಿನಿಂದ ಹೊರಬಂದ ಜಗತ್ತೂ ಸತ್ಯವಾಗಿರಲೇಬೇಕಲ್ಲವೆ? ಈ ವಾದವನ್ನು ಪುಷ್ಟೀಕರಿಸಿ ಶ್ರೀರಾಮಾನುಜಮತಾನುಸಾರಿಗಳಾದ ವೇದಾಂತಿಗಳು

''ಕಥಮಸತಃ ಸಜ್ಜಾಯೇತ'' ಎಂಬ ಶ್ರುತಿವಾಕ್ಯವನ್ನಿಟ್ಟುಕೊಂಡು ''ಅಸತ್ತಿನಿಂದ ಸತ್ತು ಹೇಗೆ ಹುಟ್ಟೀತು?'' ಎಂದು ಶ್ರುತಿಯಲ್ಲಿಯೇ ತಿಳಿಸಿರುವದರಿಂದ ಜಗತ್ತೂ ಸತ್ಯವೇ- ಎಂದು ವಾದಿಸುತ್ತಾರೆ. ಆದರೆ ಶ್ರುತಿಯ ಪೂರ್ವಾಪರಸಂದರ್ಭಪ್ರಕರಣಗಳನ್ನು ವಿಚಾರ ಮಾಡಿದರೆ ಈ ಅರ್ಥವು ಹೊರಡುವದಿಲ್ಲ. ಏಕೆಂದರೆ ಇಲ್ಲಿ ಜಗತ್ತು ಸತ್ಯವು- ಎಂಬಿದು ಪ್ರತಿಪಾದ್ಯವಲ್ಲ. ಅದು ವಾಚಾರಂಭಣಮಾತ್ರವಾಗಿದೆ. ವಿಕಾರವು (ಕಾರ್ಯವು) ಕೇವಲ ನಾಮಮಾತ್ರವೇ-ಎಂದೇ ಶ್ರುತಿಯಲ್ಲಿ ಮತ್ತೆ ಮತ್ತೆ ತಿಳಿಸಿರುತ್ತದೆ. ಆದ್ದರಿಂದ ''ಸಜ್ಜಾಯೇತ'' ಎಂಬಲ್ಲಿ 'ಜಾಯೇತ' ಎಂಬುದರಲ್ಲಿ ಅವಧಾರಣೆಯನ್ನಿಟ್ಟು ''ಅಸತಃ ಸಕಾಶಾತ್ ಕಥಂ ಜಾಯೇತ, ಸದೇವ ಆಸೀತ್'' ಅಸತ್ತಿನ ದೆಸೆಯಿಂದ (ಯಾವದೇ ಅಗಲಿ) ಹೇಗೆ ಹುಟ್ಟೀತು? ಸತ್ತೇ ಇದ್ದುಕೊಂಡಿತ್ತು; ಅದೇ ಜಗತ್ತಾಗಿದೆ-ಎಂದೇ ತಾತ್ಪರ್ಯಗ್ರಹಣಮಾಡಬೇಕಾಗಿದೆ. ಮುಂದಿನ ವಿವರಣೆಗಳಿಗೂ ಇದು ಹೊಂದಿ ಕೊಳ್ಳುತ್ತದೆ. ಆದ್ದರಿಂದ ಸತ್ತಿನಿಂದ ಹುಟ್ಟನ್ನಾಗಲಿ, ಹುಟ್ಟಿದ್ದೆಲ್ಲ ಸತ್ಯವೆಂದಾಗಲಿ-ಇಲ್ಲಿ ಶ್ರುತಿಯು ಹೇಳಹೊರಟಿರುವದಿಲ್ಲ. ಮತ್ತು ಈ ಜಗತ್ತು (ಇದಮ್) ಸತ್ತಿನಿಂದ ಸತ್ಯವಾಗಿಯೇ ಹುಟ್ಟಿತು-ಎಂದೇನೂ ಇಲ್ಲಿ ಹೇಳಿರುವದಿಲ್ಲ. ಮತ್ತೇನೆಂದರೆ ಲೋಕ ಸಿದ್ಧವಾದ ಕಾರ್ಯಕಾರಣನ್ಯಾಯದಂತೆ-ಕಾರಣವಿಲ್ಲದೆ ಕಾರ್ಯವುಂಟಾಗಲಾರದಾದ್ದ ರಿಂದ- ಇದಂಶಬ್ದವಾಚ್ಯವಾದ ಜಗತ್ತು(ಇದು ಹುಟ್ಟಿರಲಿ, ತೋರಿಕೊಂಡಿರಲಿ) ಸದ್ಬ್ರಹ್ಮ ದಿಂದಲೇ ಹೊರಬಂದಿರುತ್ತದೆ. ಬ್ರಹ್ಮವೊಂದೇ ಜಗತ್ಕಾರಣವು. ವ್ಯವಹಾರದೃಷ್ಟಿಯಿಂದ ಅದೇ ಉಪಾದಾನಕಾರಣವೂ ನಿಮಿತ್ತಕಾರಣವೂ ಎಲ್ಲವೂ ಆಗಿದೆ-ಎಂದಭಿಪ್ರಾಯ.

ಹೀಗೆ ಶ್ರುತಿಯಲ್ಲಿ ಬ್ರಹ್ಮದ ಅಸ್ತಿತ್ವವನ್ನು ಅನುಭವಗಮ್ಯವಾಗಿ (ತರ್ಕದಿಂದಲ್ಲ) ಗೊತ್ತುಪಡಿಸಿರುವದನ್ನು ಕಾರ್ಯಕಾರಣತರ್ಕದಿಂದ ವಿವರಿಸಿದ ಅನಂತರ ಅಸದ್ವಾದವನ್ನು ಹೇಗೆ ನಿರಾಕರಿಸಿದೆ? ಎಂಬಿದನ್ನೂ ತಿಳಿಯೋಣ. ಅಸತ್ ಎಂದರೆ ಸತ್ತಲ್ಲದ ಬೇರೊಂದು ವಸ್ತು ಎಂಬರ್ಥವಲ್ಲ. ವೇದಾಂತದ ಪ್ರಕಾರ ಅಸತ್ತೆಂದರೆ ಸ್ವತಂತ್ರವಾದ ಇರುವಿಕೆಯಿಲ್ಲದ್ದಾಗಿ, ಸದ್ವಸ್ತುವಿನ ಆಶ್ರಯದಿಂದಲೇ ತೋರತಕ್ಕದ್ದು- ಎಂದರ್ಥ. ಉದಾಹರಣೆಗೆ: ಮನುಷ್ಯನ ನೆರಳು. ಇದು ನೆರಳು-ಎಂಬ ಶಬ್ದದಿಂದ ವ್ಯವಹರಿಸಲ್ಪಟ್ಟರೂ ಕಪ್ಪಾಗಿಯೂ ಉದ್ದವಾಗಿ ಅಥವಾ ಮೋಟಕಾಗಿಕಂಡುಬಂದರೂ ಇದೇನೂ ನಿಜವಾಗಿ ವಸ್ತುವಲ್ಲ. ಇದು ಮನುಷ್ಯನೇ ಎನ್ನೋಣವೆಂದರೆ- ಅವನಿಗಿಂತ ಬೇರೆಯಾಗಿ ತೋರುತ್ತಿದೆಯಾದ್ದರಿಂದ ಮನುಷ್ಯನಲ್ಲ- ಎನ್ನಬಹುದು. ಮನುಷ್ಯನಿಗಿಂತ ಬೇರೆಯೇ ಎನ್ನೋಣವೆಂದರೆ ಅವನನ್ನು ಬಿಟ್ಟು ಸ್ವತಂತ್ರವಾಗಿ ತೋರುವದಿಲ್ಲ. ಆದ್ದರಿಂದ ಇದನ್ನು ಅಸತ್ ಎನ್ನಬಹುದು. ಇಲ್ಲಿ ''ಮನುಷ್ಯನಿಂದ ನೆರಳು ಹುಟ್ಟಿರುತ್ತದೆ;

ಅದು ಹುಟ್ಟುವ ಮುಂಚೆ ಮನುಷ್ಯನೇ ಆಗಿತ್ತು''–ಎಂದರೆ ಹೇಗೆ ಯಾವ ಪ್ರಮಾಣವಿರೋಧವೂ ಬರುವದಿಲ್ಲವೋ ಹಾಗೆಯೇ ಛಾಯಾ ಮಾತ್ರವಾಗಿರುವ ನಾಮರೂಪಾತ್ಮಕಜಗತ್ತು ಬ್ರಹ್ಮಕ್ಕಿಂತ ಬೇರೆಯಲ್ಲವಾದ್ದರಿಂದ ತೋರುವ ಮುಂಚೆ ಬ್ರಹ್ಮವೇ ಆಗಿತ್ತು–ಎಂದು ಹೇಳಿದಾಗಲೂ ಯಾವ ವಿರೋಧವೂ ಇಲ್ಲ. ಇಂಥ ಅಸದ್ವಸ್ತುವು ಅದ್ವಿತೀಯಸದ್ಬ್ರಹ್ಮಕ್ಕೆ ಸಮಾನವು ಹೇಗಾದೀತು? ಇದರ ವ್ಯವಹಾರದಿಂದ ಬ್ರಹ್ಮವು ಸದ್ವಿತೀಯವೆಂದಾದರೂ ಹೇಗಾದೀತು? ಈ ಅರ್ಥದಲ್ಲಿ ಬ್ರಹ್ಮವು ಸತ್ತೂ ಏಕವೂ ಅದ್ವಿತೀಯವೂ ಆಗಿದೆ. ಅದು 'ಇದಮ್' ಎಂಬ ರೂಪದಿಂದಲೂ ಜಗತ್ತಾಗಿ ಸೃಷ್ಟಿಕಾಲದಲ್ಲಿ ತೋರಿಕೊಂಡಿದೆ. ಈ ಹಿನ್ನೆಲೆಯಲ್ಲಿ ಸತ್ತೇ ಕಾರ್ಯರೂಪದಿಂದ ಕಂಡುಬರುತ್ತಿರುವದರಿಂದ ಸತ್ಕಾರ್ಯವಾದವು ಸ್ಥಾಪಿಸಲ್ಪಟ್ಟಿತು. ಅಸತ್ಕಾರ್ಯವಾದವು ನಿರಾಕರಿಸಲ್ಪಟ್ಟಿತು. ಏಕೆಂದರೆ ಜಗತ್ತು ಅಸದನ್ವಿತವಾಗಿಲ್ಲ. ಆದ್ದರಿಂದ ಅಸತ್ತು ಜಗತ್ಕಾರಣವಲ್ಲ–ಎಂದು ಶ್ರುತಿಯ ಅಭಿಪ್ರಾಯವು.

ಈಗ ಸತ್ತೆಂಬುದು ಯಾವದು? ಎಂಬಿದನ್ನು ವಿಚಾರಮಾಡಬಹುದಾಗಿದೆ. ಅಸತ್ತಿಗೆ ಪ್ರತಿದ್ವಂದ್ವಿಯಾದದ್ದು ಸತ್ತು ಎಂಬರ್ಥವು ಇಲ್ಲಿಲ್ಲ. ಸತ್ತು ಬ್ರಹ್ಮವೆಂದೂ ಬ್ರಹ್ಮವು ಆತ್ಮನೆಂದೂ ಕಡೆಯಲ್ಲಿ ಹೇಳಿರುವದರಿಂದ ಜಗತ್ತಿನ ಆತ್ಮವಾದ ಸತ್ತು–ಎಂಬುದು ನಿಜವಾಗಿ ಜ್ಞೇಯವಾದ ವಿಷಯಭೂತವಾದ ವಸ್ತುವಲ್ಲ, ದೃಷ್ಟಾಂತದ ಮಣ್ಣಿನಂತೆ ಅದು ಜಡವೂ ಅಲ್ಲ, ಅನಾತ್ಮವೂ ಅಲ್ಲ, ಅದನ್ನು ತಿಳಿಯುವ ಕ್ರಮವು ಹೇಗೆಂದರೆ: ಮೊದಲಿಗೆ ಕಾರ್ಯಕಾರಣಬುದ್ಧಿಯನ್ನು ಮುಂದುಮಾಡಿಕೊಂಡು, ಕಾರಣದ ಗುಣಗಳೂ ಕಾರ್ಯದಲ್ಲಿ ಅನುಸರಿಸಿಕೊಂಡು ಬಂದಿರುವದನ್ನು ಗುರುತಿಸುವಂತೆಯೇ ಜಗತ್ತಿನಲ್ಲಿಯೂ ಸದ್ಬುದ್ಧಿಯು ಅನ್ವಿತವಾಗಿರುವದನ್ನು ಗುರುತಿಸುತ್ತಾ ಹೋಗಬೇಕು. ಕಾರ್ಯಕಾರಣ ಗಳೆರಡನ್ನೂ ವ್ಯಾಪಿಸಿರುವ ಈ ಸದ್ಬುದ್ಧಿಯ ಬಲದಿಂದ ಮುಂದೆ ಪರಮಕಾರಣದ ವರೆಗೂ ವಿಚಾರಮಾಡಿದಾಗ ಯಾವದಕ್ಕೆ ಇನ್ನು ಕಾರಣವಿರಲಾರದೆಂದು ನಮಗೆ ತಿಳಿದುಬರುವದೋ ಕಾರ್ಯಕಾರಣಬುದ್ಧಿಯೇ ಎಲ್ಲಿಗೆ ಬಂದಾಗ ನಿಲುಗಡೆಯಾಗಿ ಕಾರಣತ್ವವೇ ಅಳಿಸಿಹೋಗಿ ತಾನೊಂದೇ ಆಗಿ ನೆಲೆನಿಲ್ಲುವದೋ ಆ ಸದ್ಬ್ರಹ್ಮವೇ ಆತ್ಮವು. ಅದೇ ಜಗತ್ಕಾರಣವೆಂದು ಸೃಷ್ಟಿಕಾಲಕ್ಕೆ ವ್ಯವಹರಿಸಲ್ಪಡುತ್ತದೆ–ಎಂದು ತಿಳಿಯಬೇಕು. ಆದ್ದರಿಂದ ವ್ಯವಹಾರದೃಷ್ಟಿಯಲ್ಲಿ ಮಾತ್ರ ವೇದಾಂತಿಗಳು ಸತ್ಕಾರ್ಯವಾದಿಗಳೇ ಹೊರತು ಪರಮಾರ್ಥದೃಷ್ಟಿಯಲ್ಲಿ ಅವರು ಅಜಾತಿವಾದಿಗಳು. ಅಜಾತಿವಾದವೆಂದರೆ ಯಾವದೂ ಪರಮಾರ್ಥವಾಗಿ ಹುಟ್ಟುವದೇ ಇಲ್ಲ, ಎಂಬ ವಾದವು. ಇದ್ದದ್ದು ಹುಟ್ಟಲಾರದು–ಎಂದು ವೈಶೇಷಿಕರೂ ಇಲ್ಲದ್ದು ಹುಟ್ಟಲಾರದು–ಎಂದು ಸಾಂಖ್ಯರೂ ವಿವಾದಮಾಡುತ್ತಾ ಇಬ್ಬರೂ 'ಹುಟ್ಟಲಾರದು' ಎಂಬಿದನ್ನೇ ಗಟ್ಟಿಗೊಳಿಸುತ್ತಿದ್ದಾರೆ–ಎಂದು ಗೌಡಪಾದರು ತಿಳಿಸಿದ್ದಾರೆ. ಹೀಗಿರುವಲ್ಲಿ ಸದ್ಬ್ರಹ್ಮವು ಹುಟ್ಟಿದಂತೆ ಮಾಯೆಯಿಂದ

ತೋರುತ್ತದೆ–ಎಂದು ಕಾರ್ಯಕಾರಣವಾದವನ್ನು ವಿವರಿಸುವ ಉಪನಿಷತ್ತು 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬಿದನ್ನೇ ಗಟ್ಟಿಗೊಳಿಸುತ್ತಿದೆ. ಮತ್ತು ಕಾರ್ಯಕಾರಣವಾದವು ಸದ್ಬ್ರಹ್ಮಪ್ರತಿಪತ್ತಿಗೆ ಉಪಾಯಮಾತ್ರವೇ ಎಂದು ಸಾರುತ್ತಿದೆ. ಹೀಗೆ ಉದ್ದಾಲಕನು ಶ್ವೇತಕೇತುವಿಗೆ ಸದ್ಬ್ರಹ್ಮವನ್ನು ತಿಳಿಸಲು ಉಪಕ್ರಮಮಾಡಿರುತ್ತಾನೆ. ಈ ಬ್ರಹ್ಮದ ಮಹಿಮಾರೂಪವಾದ ಸೃಷ್ಟಿಯನ್ನು ಮುಂದೆ ವಿಚಾರಮಾಡೋಣ.

———————

## ಸದ್ಬ್ರಹ್ಮದ ಸಂಕಲ್ಪ

ಓಮ್॥ ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾಽಽತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ ॥ 6–3–2.

ಭಾವಾರ್ಥ:– ಆ ಈ ದೇವತೆಯು 'ಒಳ್ಳೆಯದು, ನಾನು ಈ ಮೂರು ದೇವತೆಗಳನ್ನು ಈ ಜೀವನೆಂಬ ಆತ್ಮನ (ರೂಪ)ದಿಂದ ಅನುಪ್ರವೇಶಮಾಡಿ ನಾಮರೂಪಗಳನ್ನು ವ್ಯಾಕರಣಮಾಡುವೆನು' ಎಂದು (ಯೋಚಿಸಿ) ನೋಡಿತು.

(ಜಗತ್ಕಾರಣವಾದ ಸದ್ಬ್ರಹ್ಮವು ನಾಮರೂಪಾತ್ಮಕವಾದ ಜಗತ್ತನ್ನುಂಟುಮಾಡಿ ತಾನೇ ಎಲ್ಲಾ ಪ್ರಾಣಿಗಳಲ್ಲಿಯೂ ಜೀವಾತ್ಮನಾಗಿ ಒಳಹೊಕ್ಕಿರುತ್ತದೆ. ಉಪಾಧಿಸಹಿತವಾಗಿ ವ್ಯವಹರಿಸುವಾಗ ಜೀವಶಬ್ದವಾಚ್ಯವಾಗಿರುವ ವಸ್ತುವೇ ಉಪಹಿತವಾದ– ನಿತ್ಯಚೈತನ್ಯಾದ್ವಿತೀಯಬ್ರಹ್ಮವಾಗಿರುವದು. ಆದ್ದರಿಂದ ಜೀವಭಾವವು ಮೃಷಾಭೂತವೆಂದಭಿಪ್ರಾಯ.)

————

## 39. ಜೀವನು ಸ್ವರೂಪದಿಂದ ಪರಮಾತ್ಮನೇ

ಉದ್ದಾಲಕನು ತನ್ನ ಮಗನಾದ ಶ್ವೇತಕೇತುವಿಗೆ ಸದ್ಬ್ರಹ್ಮದ ಉಪದೇಶವನ್ನು ನೀಡಿರುವದರ ವಿವರವನ್ನು ಈ ಹಿಂದೆ ತಿಳಿಸಲಾಗಿದೆ. ಈಗ ಅದನ್ನು ಮತ್ತೆವಿಶೇಷವಾಗಿ ಪರಿಚಯಮಾಡಿಕೊಡಲಾಗುವದು. ಈ ಉಪದೇಶವನ್ನು ಕೇಳುತ್ತಿರುವ ಯಾವ ಶ್ರೋತೃವಿಗೇ ಆಗಲಿ, ಬ್ರಹ್ಮವೆಂದರೆ ಅದು ತನಗಿಂತ ಬೇರೆಯಾಗಿರುವ ಯಾವದೋ ಒಂದು ವಸ್ತುವಾಗಿರಬೇಕೆಂಬ ಭಾವನೆಯಿರುತ್ತದೆ. ಅದು ಯಾವದೆಂಬುದು ತಿಳಿಯದೆ ಇರುವ ಸ್ಥಿತಿಯಲ್ಲಿಯೂ 'ತಾನಂತೂ ಬ್ರಹ್ಮವಲ್ಲ' ಎಂದು ಮಾತ್ರ ಗಟ್ಟಿಯಾದ ಭಾವನೆಯಿರುತ್ತದೆ. ಈ ಭಾವನೆಯು ಅವಿದ್ಯಾರೂಪವಾದ ತಿಳಿವಳಿಕೆ–ಎಂಬುದು ವಿಚಾರದ ಕೊನೆಯಲ್ಲಿ ಗೊತ್ತಾಗುತ್ತದೆ. ಏಕೆಂದರೆ ಬ್ರಹ್ಮವೆಂದರೆ ಜಿಜ್ಞಾಸುವಿನ ಆತ್ಮವೇ

(ಸ್ವರೂಪವೇ) ಆಗಿದೆ–ಎಂಬುದು ವೇದಾಂತಗಳ ಉಪದೇಶವು. ಈ ತತ್ತ್ವವನ್ನು ಗಟ್ಟಿಗೊಳಿಸುವದಕ್ಕಾಗಿ ಮತ್ತೊಮ್ಮೆ ಬ್ರಹ್ಮವನ್ನು ಜಗತ್ತಿನ ಸೃಷ್ಟಿಕರ್ತೃವೆಂದೂ ಅದೇ ಜೀವಾತ್ಮರೂಪದಿಂದ ಪ್ರಪಂಚವನ್ನು ಒಳಹೊಕ್ಕಿದೆಯೆಂದೂ ಈಗ ತಿಳಿಸಲಾಗುವದು.

ಪ್ರಪಂಚವನ್ನು ಕಾಣುತ್ತಿರುವ ಹಾಗೂ ಅನುಭವಿಸುತ್ತಿರುವ ಜಾಣನಾದ ವಿಚಾರಕನಿಗೆ ಇದು ಯಾರ ಕೃತಿಯಾಗಿದ್ದೀತು? ಇಷ್ಟೊಂದು ವ್ಯವಸ್ಥಿತವಾಗಿ ವಿವಿಧವಾಗಿ ಸೃಷ್ಟಿಯನ್ನು ಮಾಡಿರುವವರು ಯಾರು ? ಹಾಗೂ ಈ ಸೃಷ್ಟಿಯೂ ಚೇತನಾನ್ವಿತವಾಗಿದ್ದು ವಿವಿಧವಾದ ರೂಪಗಳಿಂದ ಮಾರ್ಪಡುತ್ತಾ ಜೀವರುಗಳ ರೂಪದಿಂದಲೂ ಹರಡಿಕೊಂಡು ಒಂದಾನೊಂದು ನಿಯಮಕ್ಕೊಳಪಟ್ಟು ತನ್ನ ಕಾರ್ಯವನ್ನು ನಿರ್ವಹಿಸುತ್ತಿರುವದರ ರಹಸ್ಯವೇನು? ಎಂದು ಜಿಜ್ಞಾಸೆಯುಂಟಾಗುವದು ಸಹಜವೇ ಆಗಿದೆ. ಇದಕ್ಕೆ ಉತ್ತರವನ್ನು ಉಪನಿಷತ್ತು ನಮಗೆ ನೀಡುತ್ತಿದೆ. ಹೇಗೆಂದರೆ: ಪಿತಾಪುತ್ರಸಂವಾದರೂಪದಿಂದ ಶ್ರುತಿಯು 'ಈ ಸದ್ಬ್ರಹ್ಮವು ಬಹುವಾಗುವೆನು–ಎಂದು ಆಲೋಚಿಸಿತು. ಅದು ತೇಜಸ್ಸು, ಅಪ್ಪು–ಅನ್ನಗಳನ್ನೂ ಉಂಟುಮಾಡಿತು' ಎಂದು ಹೇಳುತ್ತಿದೆ. ಬ್ರಹ್ಮವೇ ತೇಜೋರೂಪವಾಗಿ ಸೃಷ್ಟಿಕಾಲಕ್ಕೆ ಹೊರತೋರಿಕೊಂಡಿತು. ಅನಂತರ ಆ ತೇಜೋರೂಪವಾದ ಬ್ರಹ್ಮವೇ ಅಪ್ಪು–ಎಂದರೆ ನೀರಿನ ರೂಪದಿಂದ ಹೊರತೋರಿಕೊಂಡಿತು. ನೀರಿನ ರೂಪದಿಂದ ತೋರಿಕೊಂಡಿದ್ದ ಬ್ರಹ್ಮವೇ ಆಲೋಚಿಸಿ ಮತ್ತೆ ಅನ್ನವನ್ನು ಉಂಟುಮಾಡಿತು–ಎಂದು ವಿವರಣೆಯನ್ನೂ ನೀಡಿರುತ್ತದೆ. ಇದರಿಂದ ತಿಳಿದುಬರುವದೇನೆಂದರೆ: ಬ್ರಹ್ಮವೇ ತೇಜೋಬನ್ನಗಳ ರೂಪದಿಂದ ಹೊರತೋರಿಕೊಂಡದ್ದರಿಂದ ತೇಜೋಬನ್ನಗಳೆಂಬ ಮಹಾಭೂತಗಳು ಬ್ರಹ್ಮಕ್ಕಿಂತ ಅನನ್ಯವೆಂದೇ ಸಿದ್ಧವಾಗುತ್ತದೆ. ಹೀಗೆ ತೋರಿಕೊಳ್ಳುವಿಕೆಯೂ ಬ್ರಹ್ಮದ ಮಹಿಮೆಯೇ ಆಗಿರುತ್ತದೆ. ಇದನ್ನೇ 'ಸೃಷ್ಟಿರಹಸ್ಯ'ವೆನ್ನುವರು.

ಈಗ ತ್ರಿವೃತ್ಕರಣವೆಂಬ ಒಂದು ಪ್ರಕ್ರಿಯೆಯಿಂದ ತೇಜಸ್ಸು–ಅಪ್ಪು–ಅನ್ನಗಳು ಬ್ರಹ್ಮಕ್ಕಿಂತ ಅನನ್ಯವೆಂಬುದನ್ನು ತಿಳಿಸುತ್ತಾರೆ. ಉದಾಹರಣೆಗೆ ಬೆಂಕಿಯನ್ನು ತೆಗೆದುಕೊಳ್ಳೋಣ. ಇದು ನಮಗೆ ಗೋಚರವಾಗಿದ್ದುಕೊಂಡು ಉಪಯೋಗಿಸುವ ಸ್ಥಿತಿಯಲ್ಲಿರುವಾಗ ತ್ರಿವೃತ್ಕೃತವಾಗಿರುತ್ತದೆ. ತ್ರಿವೃತ್ಕೃತವೆಂದರೆ ಮೂರು ವಸ್ತುಗಳ ಒಂದೊಂದು ಭಾಗವು ಒಟ್ಟಾಗಿ ಸೇರಿ ಉಂಟಾಗಿರುವ ಪದಾರ್ಥವು ಎಂದಭಿಪ್ರಾಯ. ಒಂದು ಬಿಳುಪು, ಒಂದು ಕೆಂಪು, ಒಂದು ಕಪ್ಪು ಬಣ್ಣದ ದಪ್ಪದಾರಗಳನ್ನು ತೆಗೆದುಕೊಂಡು ಮೂರನ್ನೂ ಸೇರಿಸಿ ಹೊಸೆದು ಬಣ್ಣದ ಹಗ್ಗವೊಂದನ್ನು ಸಿದ್ಧಮಾಡಿದೆ–ಎಂದಿಟ್ಟುಕೊಳ್ಳೋಣ. ಆಗ ಬಣ್ಣದ ಹಗ್ಗವೆಂದರೇನು? ಎಂದು ಯಾರಾದರೂ ಕೇಳಿದರೆ ಆ ಪದಾರ್ಥವನ್ನೇನೋ ತೋರಿಸಲೂಬಹುದು. ವ್ಯವಹರಿಸಲೂಬಹುದು. ಆದರೂ

ಅದು ತನ್ನ ಕಾರಣವಾದ ಮೂರು ಬಣ್ಣದ ದಾರಗಳಿಗಿಂತ ಬೇರೆಯಾಗಿರುವದಿಲ್ಲ. ಈ ಅರ್ಥದಲ್ಲಿ ಹಗ್ಗವನ್ನು 'ತ್ರಿವೃತ್ಕೃತರಜ್ಜು'ವೆಂದು ಕರೆಯಬಹುದು. ಮಬ್ಬುಗತ್ತಲೆಯಲ್ಲಿ ಇದರಲ್ಲಿ ಹಾವೆಂಬ ಭ್ರಾಂತಿಯೂ ಆಗಬಹುದು. ಇರಲಿ. ಆದರೆ ಹಗ್ಗವೆಂದರೆ ಮೂರು ದಾರಗಳೆಂಬುದೇ ಹೇಗೆ ಕಡೆಯಲ್ಲಿ ನಿಜವೆನಿಸಿರುವದೋ ಹಾಗೆಯೇ ಅಗ್ನಿಯೆಂಬ ಮಹಾಭೂತವನ್ನೂ ವಿಭಜನೆಮಾಡಿದಾಗ ಕೆಂಪು ಎಂಬುದು ತೇಜಸ್ಸಿನ ಭಾಗವಾಗಿದ್ದು ಬಿಳುಪೆಂಬುದು ನೀರಿನ ಭಾಗವಾಗಿದ್ದು, ಕಪ್ಪೆಂಬುದು ಪೃಥಿವಿಯ ಭಾಗವಾಗಿರುತ್ತದೆ. ಬೆಂಕಿಯ ಉರಿಯಲ್ಲಿ ಈ ಮೂರು ಬಣ್ಣಗಳೂ ಕಂಡುಬರುತ್ತವೆ. ಆದ್ದರಿಂದ ತ್ರಿವೃತ್ಕೃತವಾದ ಅಗ್ನಿಯೆಂಬುದು ತನ್ನ ಮೂಲಭೂತವಾದ ತೇಜೋಬನ್ನ ತನ್ಮಾತ್ರೆಗಳಿಗಿಂತ ಬೇರೆಯಾಗಿರುವದಿಲ್ಲ. ಈ ಪ್ರಕ್ರಿಯೆಯನ್ನೇ ಅನುಸರಿಸಿ ವಿಚಾರಮಾಡಿದಾಗ ಪ್ರತಿಯೊಂದು ವಸ್ತುವೂ ತನ್ನ ಕಾರಣಕ್ಕಿಂತ ಬೇರೆಯಾಗಿರುವದಿಲ್ಲವೆಂದೇ ಸಿದ್ಧವಾಗುವದರಿಂದ ಪರಮಕಾರಣವಾದ ಬ್ರಹ್ಮ ಅಥವಾ ಸತ್‌ಗಿಂತ ಬೇರೆಯಾಗಿ ಯಾವ ಜಗತ್ತೂ ಇರುವದಿಲ್ಲವೆಂದೇ ತಿಳಿದು ಬರುತ್ತದೆ. ಆದರೆ ಜಗತ್ತು ಇಲ್ಲ, ಇದು ಮಿಥ್ಯೆ ಎಂಬ ವಾದವು ಇಲ್ಲಿ ಪ್ರಕೃತವಲ್ಲ. ಜಗತ್ತಿನ ಮೂಲಕ ನಾವು ಅರಿತುಕೊಳ್ಳಬೇಕಾಗಿರುವ ಸದ್ಬ್ರಹ್ಮವು ತಾನೊಂದೇ ಪರಮಾರ್ಥವಾಗಿದ್ದು ಏಕಮೇವಾದ್ವಿತೀಯವಾಗಿದೆ- ಎಂಬುದೇ ಪ್ರಕೃತೋಪದೇಶದ ತಾತ್ಪರ್ಯವಾಗಿರುತ್ತದೆ.

ಈಗ ಕಾರ್ಯವಸ್ತುವಿನ ಯೋಗ್ಯತೆಯೇನೆಂಬುದನ್ನೂ ವಿಚಾರಮಾಡಬಹುದಾಗಿರುತ್ತದೆ. ಕಾರ್ಯವು ಕಾಣುತ್ತಿದೆಯೆಂದೂ ಅದ್ವೈತಿಗಳು ಒಪ್ಪಿರುತ್ತಾರೆ. ಮತ್ತು ಅದು ಬೌದ್ಧರ ಸಿದ್ಧಾಂತದಂತೆ ಅಸತ್ತಲ್ಲ-ಎಂದರೆ ಮೊಲದ ಕೊಂಬು, ಬಂಜೆಯ ಮಗನಂತಲ್ಲ-ಎಂಬಿದೂ ಅದ್ವೈತಿಗಳಿಗೆ ಸಮ್ಮತವೇ ಆಗಿದೆ. ಈ ಅರ್ಥದಲ್ಲಿ ಅವರು ಸತ್ಕಾರ್ಯವಾದಿಗಳೆನಿಸಿದ್ದಾರೆ. ಇರಲಿ. ಈಗ ಕಾರ್ಯವಸ್ತುವನ್ನು ವ್ಯವಹಾರದಲ್ಲಿ ಬಳಸುವಾಗ 'ಸತ್ತು' ಎಂದೇ ತಿಳಿದು ಬಳಸಬೇಕಾಗಿರುವದರಿಂದ ಆ ಕಾರ್ಯವಸ್ತ್ವನುಗತವಾದ ಸತ್ ಎಂಬಿದು ನಿಜವಾಗಿ ಬ್ರಹ್ಮವೇ-ಎಂದು ಅವರ ಅಭಿಪ್ರಾಯ. ಇದು ಎಲ್ಲರಿಗೂ ಒಪ್ಪಾಗಿದೆ. ಏಕೆಂದರೆ ಸತ್ ಎಂಬ ಪದಾರ್ಥವು ಕಾರ್ಯ-ಕಾರಣಗಳ ಸ್ಥಿತಿಯಲ್ಲಿಯೂ ಕೂಡ ಎರಡು ವಸ್ತುಗಳಾಗಿ ಇರುವದು ಯಾರ ಅನುಭವದಲ್ಲಿಯೂ ಇರುವದಿಲ್ಲ. ಆದ್ದರಿಂದ ವ್ಯವಹಾರಕಾಲಕ್ಕೆ ಸತ್ತೇ ದ್ವೈತವಾಗಿ ಕಂಡುಬರುತ್ತಿದೆ-ಎಂದರೆ ತಪ್ಪೇನಾದೀತು? ಮತ್ತು ಒಂದೇ ಸದ್ವಸ್ತುವು ವ್ಯವಹಾರಕಾಲಕ್ಕೆ ನಾನಾ ರೂಪಗಳಿಂದ ವಿವಿಧವಾಗಿ ತೋರಿಕೊಂಡಿದೆ-ಎಂದರೂ ಅಪರಾಧವೇನಾದೀತು? ಹೀಗೆ ವಿಚಾರಮಾಡಿದಾಗ ಸತ್ತನ್ನೇ "ಕಾರ್ಯ" "ವಿಕಾರ" "ನಾಮರೂಪ"ಗಳೆಂಬ ಹೆಸರುಗಳಿಂದಲೂ ಬಳಸಿರುತ್ತೇವೆಂಬುದು ಮನದಟ್ಟಾಗುತ್ತದೆ. "ಪ್ರಪಂಚವು ಮಿಥ್ಯೆ" ಎಂದಾಗ ನಮ್ಮ ಬುದ್ಧಿಯಲ್ಲೇನೇನು ತಪ್ಪುಕಲ್ಪನೆಗಳಿದ್ದವೋ ಅವೆಲ್ಲ ಈಗ

ಹಾರಿಹೋಗುತ್ತವೆ. ಸದ್ಬ್ರಹ್ಮವೊಂದೇ ಪರಮಾರ್ಥವಾಗಿ ಉಳಿಯುತ್ತದೆ. ಇದರಿಂದ ಕಾರ್ಯಪ್ರಪಂಚಕ್ಕೂ ವ್ಯಾವಹಾರಿಕಸತ್ತ್ವವನ್ನು ಅದ್ವೈತಿಗಳು ನೀಡಿದ್ದಾರೆಂದಾಗುವದರಿಂದ ಅದ್ವೈತಜ್ಞಾನಕ್ಕೂ ವ್ಯವಹಾರಕ್ಕೂ ವಿರೋಧವಿಲ್ಲವೆಂದು ಮನವರಿಕೆಯಾಗುತ್ತದೆ. ಆದರೆ ತಾರ್ಕಿಕರ ಅಭಿಪ್ರಾಯವು ಹೀಗಿರುವದಿಲ್ಲ. ಈ ವಿಷಯಕ್ಕೆ ಶ್ರೀ ಶಂಕರಾಚಾರ್ಯರು ಬರೆದಿರುವದೇನೆಂದರೆ: 'ಹೇಗೆ ತಾರ್ಕಿಕರು ಸತ್ತಿಗಿಂತ ಬೇರೆ ಯಾವ ವಸ್ತುವನ್ನು ಕಲ್ಪಿಸಿ, ಮತ್ತೆ ಅದೇ ವಸ್ತುವಿಗೇ ಹುಟ್ಟುವದಕ್ಕೆ ಮೊದಲೂ ಹಾಳಾದಮೇಲೂ ಅಸತ್ವವನ್ನು ಹೇಳುತ್ತಾರೋ ಹಾಗೆ ನಾವು (ವೇದಾಂತಿಗಳು) ಎಲ್ಲಿಯೂ ಸತ್ತಿಗಿಂತ ಬೇರೆಯಾದ ಅಭಿಧಾನವನ್ನಾಗಲಿ, ಅಭಿಧೇಯವಸ್ತುವನ್ನಾಗಲಿ ಕಲ್ಪಿಸಿರುವದಿಲ್ಲ; ಸತ್ತೇ ದ್ವೈತವೆಂಬ ವಿಶೇಷವಾಗಿಯೂ ತಪ್ಪಾಗಿ ತಿಳಿದುಬರುತ್ತಿರುವದರಿಂದ ಯಾವದೂ ಎಂದಿಗೂ ಅಸತ್ತಲ್ಲ– ಎಂದೇ ಹೇಳುತ್ತೇವೆ'– ಎಂದು (ಛಾ.6–2–3) ಬರೆದಿರುತ್ತಾರೆ. ಇದರ ಅಭಿಪ್ರಾಯವೇನೆಂದರೆ: ಕಾರ್ಯರೂಪವಾಗಿ ತೋರುವ ವಸ್ತುವೂ ಅದರ ಹೆಸರೂ ಎಲ್ಲವೂ ಸತ್ತೇ– ಎಂಬುದು ವೇದಾಂತಸಿದ್ಧಾಂತವು. ತಾರ್ಕಿಕರಾದರೊ, ಸತ್ತಿಗಿಂತ ವ್ಯತಿರಿಕ್ತವಾಗಿ ದ್ರವ್ಯ, ಗುಣ, ಕರ್ಮಾದಿಗಳನ್ನು ಒಪ್ಪಿ ಅವಕ್ಕೆ ಪ್ರಾಗಭಾವ– ಪ್ರಧ್ವಂಸಾಭಾವ– ರೂಪಗಳುಂಟೆಂದು ಹೇಳುವರು. ಇದು ವೇದಾಂತಿಗಳಿಗೆ ಒಪ್ಪಾಗಿಲ್ಲ. ಎಲ್ಲವೂ ಸತ್ತಿನ ರೂಪಾಂತರವೇ– ಎಂಬಿದು ವೇದಾಂತಿಗಳ ಮತವು.

ಈಗ ಜೀವತತ್ತ್ವವನ್ನು ವಿಚಾರಮಾಡಬಹುದಾಗಿದೆ. ಈ ಶ್ರುತಿಯಲ್ಲಿ ಸ್ಪಷ್ಟವಾಗಿ ಆ ಪರಾದೇವತೆಯೇ ಜೀವಾತ್ಮರೂಪದಿಂದ ತೇಜೋಬನ್ನಗಳನ್ನು ಪ್ರವೇಶಿಸಿ ನಾಮರೂಪಗಳನ್ನು ವ್ಯಾಕರಣಮಾಡುವೆನು– ಎಂದುಕೊಂಡು ಒಳಹೊಕ್ಕಿತು– ಎಂದು ತಿಳಿಸಿದೆ. ಬೇರೊಂದು ಶ್ರುತಿಯಲ್ಲಿ ಸೃಷ್ಟ್ವಾ– ಅನುಪ್ರಾವಿಶತ್ (ಸೃಷ್ಟಿಮಾಡಿ ಒಳಹೊಕ್ಕಿತು) ಎಂದು ''ಕ್ತ್ವಾ'' ಪ್ರತ್ಯಯವುಳ್ಳ ಕೃದಂತ ಶಬ್ದವನ್ನು ಪ್ರಯೋಗಮಾಡಿದೆ. ಹೇಗೆ ''ಭುಕ್ತ್ವಾ ವ್ರಜತಿ'' (ಊಟಮಾಡಿ ಹೊರಡುತ್ತಾನೆ) ಎಂಬಲ್ಲಿ ಊಟ ಮಾಡಿದವನೂ ಹೊರಡುವವನೂ ಒಬ್ಬನೇ ಆಗಿರುವನೋ ಆ ಸಮಾನಕರ್ತೃಕತ್ವವನ್ನೇ ಕ್ತ್ವಾಪ್ರತ್ಯಯವು ತಿಳಿಸುವದೋ ಹಾಗೆಯೇ ಇಲ್ಲಿಯೂ ''ಸೃಷ್ಟ್ವಾ ಅನುಪ್ರಾವಿಶತ್'' ಎಂಬ ಶ್ರುತಿಗೂ ಅರ್ಥಮಾಡಬೇಕು. ಜಗತ್ತನ್ನು ಸೃಷ್ಟಿಸಿದವನೇ ಒಳಹೊಕ್ಕಿರುವದರಿಂದ ಬ್ರಹ್ಮವೇ ಜೀವನು– ಎಂದಾಯಿತು. ಏಕೆಂದರೆ ಈ ಅರ್ಥವೇ ಶ್ರುತಿಗೂ ಅನುಭವಕ್ಕೂ ಹೊಂದುಗೆಯಾಗಿದೆ. ಹೇಗೆಂದರೆ ಸದ್ಬ್ರಹ್ಮವು ನಾನಲ್ಲವಾಗಿಬಿಟ್ಟರೆ ಯಾರಿಗೂ ಅದರ ವಿಷಯಕ್ಕೆ ಪ್ರೇಮವುಂಟಾಗುವದಿಲ್ಲ, ಅಥವಾ ಭಯವುಂಟಾಗಬಹುದು. ಆಗ ಮೋಕ್ಷವೆಂಬುದು ಅಭಯವಾದ ಪ್ರತಿಷ್ಠೆ ಎಂದು ಹೇಳಿದ್ದು ತಪ್ಪಾಗುವದು. ಶ್ರುತಿಯಲ್ಲಿಯೂ ವೇದಾಂತಸೂತ್ರಗಳಲ್ಲಿಯೂ ಸನ್ನಿಷ್ಠೆಯುಳ್ಳವನಿಗೇ ಮೋಕ್ಷವೆಂದೂ ಹೇಳಿರುತ್ತದೆ. ಆ ಸತ್ತು ಆತ್ಮನಾಗದೆ ಅನಾತ್ಮವೆನಿಸೀತೆ? ಆತ್ಮನೆಂದರೆ ನಾನಲ್ಲದೆ

ಮತ್ತೊಂದಾದೀತೆ? ಹೀಗಿರುವಲ್ಲಿ ಜೀವನು ತಾನು ಬ್ರಹ್ಮವಲ್ಲದೆ ಮತ್ತೇನಾದಾನು? ಇದನ್ನೇ ದೃಢಗೊಳಿಸಿ ಕಡೆಯಲ್ಲಿ ಒಂಬತ್ತು ಬಾರಿ 'ತತ್ತ್ವಮಸಿ' ಎಂದು ಶ್ರುತಿಯು ಉಪದೇಶಿರುತ್ತದೆ.

ಈಗ ಜೀವಾತ್ಮನಿಗೂ ಪರಮಾತ್ಮ(ಸದ್ವಸ್ತು)ನಿಗೂ ಅಭೇದವೇ ನಿಜವೆಂದಾದರೆ ಧರ್ಮ-ಕರ್ಮಾನುಷ್ಠಾನ, ಇಹಲೋಕಪರಕಲೋಕಗಳಲ್ಲಿ ಪುಣ್ಯಪಾಪಗಳ ವ್ಯವಹಾರ-ಮುಂತಾದವುಗಳಿಗೇನು ಗತಿ? ಶಾಸ್ತ್ರವು ಈ ವಿಚಾರಗಳನ್ನೂ ಪ್ರತಿಪಾದಿಸಿದೆಯಲ್ಲವೆ? ಆ ಶಾಸ್ತ್ರಭಾಗವು ಜೀವೇಶ್ವರರ ಅಭೇದಸಿದ್ಧಾಂತದಿಂದ ಅಪ್ರಮಾಣವೆಂದಾಗುವದಿಲ್ಲವೆ? ಎಂಬೀ ಪ್ರಶ್ನೆಗಳಿಗೂ ಉತ್ತರವನ್ನು ಕಂಡುಕೊಳ್ಳಬೇಕಾಗಿರುತ್ತದೆ. ಇದಕ್ಕೆ ಶ್ರೀಶಂಕರಾಚಾರ್ಯರು ಬರೆದಿರುವದೇನೆಂದರೆ: ಜೀವನ ಜೀವತ್ವವು 'ಛಾಯಾಮಾತ್ರವೇ'. ಹೇಗೆ ನೆರಳೆಂಬುದು ಪದಾರ್ಥವಲ್ಲವೋ ಹಾಗೆ ಜೀವನೂ ಸ್ವತಂತ್ರಪದಾರ್ಥನಲ್ಲ. ನೆರಳಿನಂತೆ ಜೀವನೂ ವ್ಯವಹಾರಪ್ರಪಂಚದಲ್ಲಿ ಬ್ರಹ್ಮಕ್ಕಿಂತ ಭಿನ್ನವಾಗಿ ವ್ಯವಹರಿಸಲ್ಪಡಬಹುದು. ಕರ್ಮಶಾಸ್ತ್ರಪ್ರಾಮಾಣ್ಯಸಿದ್ಧಿಗಾಗಿ ಜೀವ-ಪರಭೇದವನ್ನು ಪರಮಾರ್ಥವಾಗಿ ಒಪ್ಪಬೇಕಾದ ಅವಶ್ಯಕತೆಯೇನೂ ಇಲ್ಲ. ಕಲ್ಪನೆಯೇ ವ್ಯವಹಾರಸಾಗಣೆಗೆ ಸಾಕು. ಹೇಗೆ ಯಾರಾದರೊಬ್ಬರು "ಇದೊ, ನದಿಯ ದಡದಲ್ಲಿರುವ ಆಲದ ಮರದಲ್ಲಿ ಒಂದು ಭೂತವಿದೆ. ಅದಕ್ಕೆ ಐವತ್ತು ಸೇರು ಅಕ್ಕಿಯ ಬಲಿಪ್ರದಾನವಾಗಬೇಕು" ಎಂದುಬಿಟ್ಟರೆ ಜನರು ನಂಬಿ ನಡೆದುಕೊಳ್ಳುವರಲ್ಲವೆ? ಐವತ್ತು ಸೇರಿನ ಬಲಿ ಏಕೆ? ಎಂದರೆ ಯಕ್ಷನು ಅಷ್ಟೇ ದೊಡ್ಡದು-ಎಂಬಿದೇ ಉತ್ತರವು. ಎಷ್ಟು ದೊಡ್ಡ ಯಕ್ಷನಿರುವನೋ ಅಷ್ಟು ದೊಡ್ಡ ಬಲಿಯು-ಎನ್ನುವಾಗ ಯಕ್ಷನೇನೂ ನಿಜವಾಗಿರಬೇಕಾದದ್ದಿಲ್ಲ. ಏಕೆಂದರೆ ಮತ್ತೆ ಯಾರಾದರೂ ಅದೇ ಆಲದಮರವನ್ನು ಹತ್ತಿ ಪರೀಕ್ಷಿಸಿ ಅಲ್ಲಿ ಯಾವ ಯಕ್ಷನೂ ಇಲ್ಲ- ಎಂದುಬಿಟ್ಟರೆ ಬಲಿಪ್ರದಾನವೇ ಇಲ್ಲವಾಗುವದಲ್ಲವೆ? ಹೀಗೆಯೇ ನಾನು ಜೀವನು-ಎಂಬ ತಪ್ಪುಭಾವನೆಯಿರುವವರೆಲ್ಲರಿಗೂ ಧರ್ಮಕರ್ಮಾದಿಗಳ ಅನುಷ್ಠಾನವಿರುತ್ತದೆ. ಕರ್ಮಶಾಸ್ತ್ರವೂ ಅಂಥವರ ವಿಷಯದಲ್ಲಿ ಸಾರ್ಥಕವಾಗುತ್ತದೆ.

------

## ತ್ರಿವೃತ್ಕರಣ

ಓಮ್ ॥ ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ ಸೇಯಂ ದೇವತೇಮಾಸ್ತಿಸ್ರೋ ದೇವತಾ ಅನೇನೈವ ಜೀವೇನಾಽಽತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರೋತ್ ॥ 6-3-3

ಭಾವಾರ್ಥ:– ಅವುಗಳಲ್ಲಿ ಒಂದೊಂದನ್ನೂ ತ್ರಿವೃತ–ತ್ರಿವೃತವಾಗಿ ಮಾಡುವೆನು–ಎಂದು (ಯೋಚಿಸಿನೋಡಿತು). ಆ ಈ ದೇವತೆಯು ಈ ಮೂರು ದೇವತೆಗಳನ್ನು ಇದೇ ಜೀವಾತ್ಮನ ರೂಪದಿಂದ ಅನುಪ್ರವೇಶಮಾಡಿ ನಾಮರೂಪಗಳನ್ನು ವ್ಯಾಕರಣಮಾಡಿತು.

(ಪರಬ್ರಹ್ಮವು ಜೀವಾತ್ಮರೂಪದಿಂದ ಮಹಾಭೂತಗಳನ್ನು ಒಳಹೊಕ್ಕು ಒಂದೊಂದನ್ನೂ ಮೂರು ಮೂರರ ಬೆರಕೆಯಾಗಿ ಮಾಡಿ ವ್ಯವಹಾರಯೋಗ್ಯವಾಗುವಂತೆ ಉಂಟುಮಾಡಿತು. ಆದ್ದರಿಂದ ಮೂಲರೂಪದಿಂದ ವಿಚಾರಮಾಡಿದಾಗ ಎಲ್ಲವೂ ಪರಬ್ರಹ್ಮದಲ್ಲಿಯೇ ಒಂದಾಗಿ ಅದೊಂದೇ ಪರಮಾರ್ಥಸತ್ಯವೆಂದು ತಿಳಿದುಬರಲಿದೆ– ಎಂದಭಿಪ್ರಾಯ.)

## 40. ತ್ರಿವೃತ್ಕರಣ–ಪಂಚೀಕರಣಗಳು

ಉದ್ದಾಲಕನು ಶ್ವೇತಕೇತುವಿಗೆ ಸದ್ಬ್ರಹ್ಮವೇ ಜಗತ್ತೆಲ್ಲವು ಆಗಿದೆ–ಎಂಬ ತತ್ತ್ವವನ್ನು ಬೇರೆಬೇರೆಯ ರೀತಿಗಳಿಂದ ತಿಳಿಸಲಾರಂಭಿಸಿದ್ದಾನೆ. ಅದಕ್ಕಾಗಿ ಸೃಷ್ಟಿಪ್ರಕ್ರಿಯೆಯನ್ನು ದ್ವಾರವಾಗಿ ಮಾಡಿಕೊಳ್ಳಲಾಗಿದೆ. ಈ ಮಹಾಸೃಷ್ಟಿಯೂ ಹೊರತೋರಿಕೊಂಡು ಎಷ್ಟೋ ಕಾಲವು ಕಳೆದಿದೆ. ಆ ಕಾಲಾವಧಿಯಲ್ಲಿ ಎಷ್ಟೋ ಜನರು ಋಷಿಗಳು ವಿಜ್ಞಾನಿಗಳೂ ಸೃಷ್ಟಿರಹಸ್ಯವನ್ನು ಬಯಲುಮಾಡಲು ಪ್ರಯತ್ನಪಟ್ಟಿರುತ್ತಾರಾದರೂ ಜಗತ್ತಿನ ವಿಷಯಕ್ಕೆ ಹೇಳುವದಾದರೆ ಮಾನವನಿಗೆ ತಿಳಿದಿರುವದಕ್ಕಿಂತ ತಿಳಿಯದೆ ಇರುವದೇ ಅಧಿಕವಾಗಿದೆ–ಎಂಬಿದು ನಿತ್ಯಸತ್ಯವಾಗಿದೆ. ಹೀಗಿದ್ದರೂ ಉಪನಿಷತ್ತುಗಳು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರತಿಜ್ಞೆ ಮಾಡಿ ಒಂದಾನೊಂದು ಅಸಾಧಾರಣ ರೀತಿಯಿಂದ ಸೃಷ್ಟಿರಹಸ್ಯವನ್ನು ಭೇದಿಸಿ ಬೆಳಕನ್ನು ನೀಡಿದೆ. ಇವುಗಳ ಅನ್ವೇಷಣಾಕ್ರಮವು ಒಳಗಿನಿಂದ ಹೊರಕ್ಕೆ ಹೋಗುವ ಹಾದಿಯನ್ನು ಬಿಟ್ಟು ಹೊರಗಿನಿಂದ ಒಳಕ್ಕೆ ಹೋಗುವ ಪ್ರಯತ್ನದಲ್ಲಿಯೇ ಕೇಂದ್ರೀಕೃತವಾಗಿದೆ. ಆದ್ದರಿಂದ ಪ್ರತಿಜ್ಞಾಸಾಧನೆಯು ಕೈಗೂಡುವಂತಾಗಿದೆ. ಒಮ್ಮೆ ಇಂಥ ಮಹಾತತ್ತ್ವದ ಅರಿವಾಗಿಬಿಟ್ಟಿತೆಂದರೆ ಮುಂದೆ ಎಂದೆಂದಿಗೂ ಅರಿಯಲ್ಪಡಬೇಕಾದದ್ದು ಏನೂ ಉಳಿಯದಂತಾಗಿ ಜಿಜ್ಞಾಸೆಯು ಪರಿಸಮಾಪ್ತಿಯಾಗಿಬಿಡುತ್ತದೆ. ಆದ್ದರಿಂದ ಉಪನಿಷತ್ತಿನ ವಿಚಾರಕ್ರಮವನ್ನು ಪರಿಶೀಲನೆ ಮಾಡಿದಷ್ಟೂ ನಾವು ನಿಜವನ್ನೇ ಸಮೀಪಿಸುತ್ತೇವೆಂಬುದು ಖಂಡಿತವಾದ ವಿಷಯವಾಗಿದೆ. ಪ್ರಕೃತದಲ್ಲಿ ತ್ರಿವೃತ್ಕರಣವಿಚಾರವನ್ನು ಶ್ರುತಿಯಲ್ಲಿ ಹೇಳಿರುವಂತೆ ಮನನಮಾಡೋಣ.

ಈಗ ಮತ್ತೊಂದು ವಿಚಾರವನ್ನೂ ಪ್ರಸ್ತಾಪಿಸಬೇಕಾಗಿದೆ. ಅನೇಕ ವೇದಾಂತ ಗ್ರಂಥಗಳಲ್ಲಿ 'ಪಂಚೀಕರಣ'ವೆಂಬ ವಿಚಾರಸರಣಿಯಿರುತ್ತದೆ. ಸ್ವಲ್ಪಮಟ್ಟಿಗೆ ವೇದಾಂತ ತತ್ತ್ವಶ್ರವಣಮಾಡಿದವರಿಗೂ ಈ ಶಬ್ದವು ಕಿವಿಗೆ ಬಿದ್ದಿರುತ್ತದೆ. ಆದರೆ ಶ್ರುತಿಗಳಲ್ಲಿ

ಪಂಚೀಕರಣವಿಚಾರವಿರುವದಿಲ್ಲ. ತ್ರಿವೃತ್ಕರಣವು ಕಂಠೋಕ್ತವಾಗಿ ಹೇಳಲ್ಪಟ್ಟಿದೆ. ಈ ವಿಷಯದಲ್ಲಿ ಶ್ರೀಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ತಿಳಿಸಿರುವದೇನೆಂದರೆ: "ಹೇಗೆ ತ್ರಿವೃತ್ಕೃತವಾದ ಭೂತಗಳಲ್ಲಿ ಮೂರುರೂಪಗಳೇ ಸತ್ಯವೆಂಬುದು ತತ್ತ್ವವೋ ಹಾಗೆಯೇ ಪಂಚೀಕರಣಡ ವಿಷಯದಲ್ಲಿಯೂ ತಿಳಿದುಕೊಳ್ಳಬೇಕು. ಏಕೆಂದರೆ ನ್ಯಾಯವು ಸಮಾನವಾಗಿದೆ" ಎಂದಿರುತ್ತಾರೆ. ಇದರಿಂದ ಆಚಾರ್ಯರಿಗೆ ಪಂಚೀಕರಣಪ್ರಕ್ರಿಯೆಯೂ ಒಪ್ಪಾಗಿರುತ್ತದೆ–ಎಂದು ಕಂಡುಬರುತ್ತದೆ. ಆದರೆ ಶ್ರುತಿಯಲ್ಲಾಗಲಿ, ಭಾಷ್ಯದಲ್ಲಾಗಲಿ ಈ ಪ್ರಕ್ರಿಯೆಗಳನ್ನು ಸತ್ತೊಂದೇ ಏಕಮೇವಾದ್ವಿತೀಯವೆಂದು ತಿಳಿಸಲು ಉಪಾಯವಾಗಿ ಹೇಳಿರುತ್ತದೆಯೇ ಹೊರತು ತಾತ್ಪರ್ಯದಿಂದ ಹೇಳಿಲ್ಲವೆಂದು ನೆನಪಿಡಬೇಕು. ಹಾಗೆಂದೇ ಆಚಾರ್ಯರು ಸೂಚಿಸಿರುತ್ತಾರೆ.

ಈಗ ಶ್ರುತಿಯು ಸ್ವೀಕರಿಸಿರುವ ತ್ರಿವೃತ್ಕರಣಪ್ರಕ್ರಿಯೆಯಲ್ಲಿ ಉದಾಹರಿಸಿರುವ ಆದಿತ್ಯ, ಚಂದ್ರ, ವಿದ್ಯುತ್ತುಗಳೆಂಬ ತೇಜೋರೂಪವಾದ ದ್ರವ್ಯಗಳ ತ್ರಿವೃತ್ಕರಣವನ್ನು ತಿಳಿಯೋಣ. ತೇಜಸ್ಸೆಂದರೆ ಬೆಳಕು. ಇದನ್ನು ವಿಭಜನೆಮಾಡಿದಾಗ ಕೆಂಪು, ಬಿಳುಪು, ಕಪ್ಪು–ಎಂಬ ಮೂರು ಬಣ್ಣಗಳು ಕಂಡುಬರುವವು. ಆದಿತ್ಯನಾಗಲಿ, ಇತರ ಬೆಳಕಾಗಲಿ– ತೇಜಸ್ಸೇ ಆಗಿರುವದರಿಂದ ಈ ತೇಜೋದ್ರವ್ಯವು ತ್ರಿವೃತ್ಕೃತವಾದ ಮೇಲೆಯೇ ಆದಿತ್ಯನೆಂದು ಕರೆಯಲ್ಪಟ್ಟಿದೆ–ಎಂದು ಶ್ರುತಿಯ ಅಭಿಪ್ರಾಯ. ಈಗ ಆದಿತ್ಯನೆಂದರೇನು? ಎಂದು ವಿಚಾರಮಾಡಿದರೆ ಮೂರು ಬಣ್ಣಗಳನ್ನು ಬಿಟ್ಟರೆ ಸ್ವತಂತ್ರವಾಗಿ ಆದಿತ್ಯನೆಂಬ ತತ್ತ್ವವಿಲ್ಲ–ಎಂದೇ ಸಿದ್ಧವಾಗುತ್ತದೆ. ಏಕೆಂದರೆ ಅವನಲ್ಲಿರುವ ಮೂರು ಬಣ್ಣಗಳೂ ಕ್ರಮವಾಗಿ ತೇಜಸ್ಸು, ಅಪ್ಪು, ಪೃಥಿವೀ–ಎಂಬ ಮಹಾಭೂತಗಳಿಗೆ ಸೇರಿದ್ದಾಗಿದೆ. ಆದಿತ್ಯನದಾಗಿ ಉಳಿದದ್ದು ಏನೂ ಇರುವದಿಲ್ಲ. ಆಗ ಆದಿತ್ಯನ ಆದಿತ್ಯತ್ವವು ಹೋಯಿತು. ಮೂರು ರೂಪಗಳೆಂಬುದೇ ನಿಜವಾಯಿತು–ಎಂದರ್ಥ. ಇದೇ ತ್ರಿವೃತ್ಕರಣದ ಪ್ರಯೋಜನವಾಗಿದೆ. ಆದರೆ ಹೀಗೆ ಬೆಳಕನ್ನು ವಿಭಜನೆಮಾಡಿದಾಗ ಉಳಿಯುವ ರೂಪತ್ರಯಗಳೆಂಬಿವು ಕೇವಲ ಜಡವಸ್ತುಗಳಲ್ಲ. ಮತ್ತೇನೆಂದರೆ ಹಾಗೆ ಬ್ರಹ್ಮವೇ ತೋರಿಕೊಂಡಿದೆ– ಎಂದು ಅಭಿಪ್ರಾಯ. ರೂಪತ್ರಯವಾಗಿ ತೋರಿಕೊಂಡ ಬ್ರಹ್ಮವನ್ನು ಅರಿಯಲಾರದವರು ತಮ್ಮ ಬುದ್ಧಿಯಲ್ಲಿ ಆದಿತ್ಯ, ಚಂದ್ರ, ವಿದ್ಯುತ್ತುಗಳೆಂಬ ನಾಮರೂಪಗಳನ್ನು ಕಲ್ಪಿಸಿ ವ್ಯವಹರಿಸಿದ್ದಾರೆ. ಇಷ್ಟೇ ಹೊರತು ಸದ್ಬ್ರಹ್ಮಕ್ಕಿಂತ ಬೇರೆಯಾಗಿ ರೂಪತ್ರಯಗಳಾಗಲಿ ಆದಿತ್ಯಾದಿಗಳಾಗಲಿ ಇಲ್ಲ–ಎಂದೇ ತಾತ್ಪರ್ಯವು. ಏಕೆಂದರೆ ತೋರಿಕೆಯ ವಸ್ತುಗಳಿಗೆ ಸ್ವತಂತ್ರವಾದ ಅಸ್ತಿತ್ವವಿರುವದಿಲ್ಲ. ಹೀಗೆ ತ್ರಿವೃತ್ಕರಣವನ್ನು ಶ್ರುತಿಯು ಮೂಲವಸ್ತುವಿನ ವಿಜ್ಞಾನಕ್ಕಾಗಿ ಆಶ್ರಯಿಸಿ ವಿಚಾರಮಾಡಿ ಕಡೆಯಲ್ಲಿ ಆ ಮೂಲಭೂತವಸ್ತುವೆಂಬುದು ಸತ್ತೇ, ಅದೇ ಬ್ರಹ್ಮವು ಎಂದು ಉಪಸಂಹಾರಮಾಡಿರುತ್ತದೆ.

ಈಗ ತ್ರಿವೃತ್ಕರಣ–ಪಂಚೀಕರಣಗಳ ವಿವರವನ್ನು ತಿಳಿಯೋಣ. ಈ ಉಪನಿಷತ್ತಿನಲ್ಲಿ ಬ್ರಹ್ಮವು ಮೊದಲು ತೇಜಸ್ಸನ್ನು ಸೃಷ್ಟಿಸಿತು–ಎಂದು ತಿಳಿಸಿದೆ. ಆದರೆ ತೈತ್ತಿರಿಯೋಪನಿಷತ್ತಿನಲ್ಲಿ ಸೃಷ್ಟಿಕ್ರಮವನ್ನು ಹೇಳುವಾಗ ಆತ್ಮ(ಬ್ರಹ್ಮ)ನಿಂದ ಆಕಾಶವು ಮೊದಲು ಸೃಷ್ಟಿಯಾಯಿತು–ಎಂದು ಹೇಳಿದೆ. ಹೀಗೆ ಸೃಷ್ಟಿಪ್ರಕ್ರಿಯೆಯ ವಿವರಣೆಯಲ್ಲಿ ಉಪನಿಷತ್ತುಗಳಿಗೆ ಪರಸ್ಪರ ವಿಗಾನ (ಭಿನ್ನಾಭಿಪ್ರಾಯ)ವಿದೆ. ಆದರೆ ಬ್ರಹ್ಮದಿಂದಲೇ ಸೃಷ್ಟಿಯಾಯಿತು–ಎಂಬ ವಿಚಾರಕ್ಕೆ ಮಾತ್ರ ವಿಗಾನವಿಲ್ಲ, ಏಕಾಭಿಪ್ರಾಯವೇ ಇದೆ. ಈ ಕಾರಣದಿಂದಲೂ ಶ್ರುತಿಗಳಿಗೆ ಸೃಷ್ಟಿಯನ್ನು ತಿಳಿಸುವದರಲ್ಲಿ ಪರಮತಾತ್ಪರ್ಯವಿಲ್ಲ–ಎಂದಾಗುತ್ತದೆ. ಇದು ಹಾಗಿರಲಿ; ಭಾಷ್ಯಕಾರರು ಈ ಸೃಷ್ಟಿವಾಕ್ಯಗಳಿಗೆ ವಿರೋಧವನ್ನು ಪರಿಹಾರಮಾಡುವದಕ್ಕಾಗಿ ಛಾಂದೋಗ್ಯದಲ್ಲಿರುವ 'ತೇಜಸ್ಸನ್ನು ಸೃಷ್ಟಿಸಿತು' ಎಂಬ ವಾಕ್ಯಕ್ಕೆ ತೈತ್ತಿರೀಯಕ್ಕೂ ಅನುಗುಣವಾಗುವಂತೆ ಆಕಾಶ–ವಾಯುಗಳನ್ನು ಸೃಷ್ಟಿಸಿದ ಅನಂತರ ತೇಜಸ್ಸನ್ನುಂಟುಮಾಡಿತು, ಎಂದು ಅರ್ಥಮಾಡಬೇಕು–ಎಂದು ತಿಳಿಸಿದ್ದಾರೆ. ಇದರಿಂದ ಪಂಚೀಕರಣಪ್ರಕ್ರಿಯೆಗೆ ಅವಕಾಶವು ದೊರೆತಂತಾಗಿದೆ. ಹೀಗೆ ಐದು ಮಹಾ ಭೂತತನ್ಮಾತ್ರೆಗಳನ್ನು ಉಂಟುಮಾಡಿರುವ ಬ್ರಹ್ಮವು ಅವುಗಳನ್ನು ಪಂಚೀಕರಣಮಾಡಿತು ಅಥವಾ ತ್ರಿವೃತ್ಕರಣಮಾಡಿತು–ಎಂಬಿದು ಇಲ್ಲಿ ತಿಳಿಯಬೇಕಾದ ವಿಷಯವಾಗಿದೆ. ಪಂಚೀಕರಣಕ್ಕೆ ಉದಾಹರಣೆಯಾಗಿ ಮನುಷ್ಯದೇಹವನ್ನೇ ತೆಗೆದುಕೊಳ್ಳೋಣ. ಇದರಲ್ಲಿ ಮಾಂಸ, ಚರ್ಮ, ಎಲುಬು–ಮುಂತಾದ ಪೃಥಿವಿಯ ಗಟ್ಟಿಯಾದ ಅಂಶಗಳಿವೆ. ಇವೇ ಪ್ರಧಾನವಾಗಿರುವದರಿಂದ ಮನುಷ್ಯದೇಹವನ್ನು ಪಾರ್ಥಿವದೇಹವೆಂದೇ ಕರೆಯುತ್ತಾರೆ. ಆದರೆ ಈ ಪಾರ್ಥಿವಾಂಶವು ಶೇಕಡ ಐವತ್ತು ಭಾಗ ಮಾತ್ರವಿದೆ. ಇನ್ನುಳಿದ ಐವತ್ತು ಭಾಗದಲ್ಲಿ ಹನ್ನೆರಡೂವರೆಯಂತೆ ಅಪ್ಪು, ತೇಜಸ್ಸು, ವಾಯು, ಆಕಾಶಗಳು ಮನುಷ್ಯ ದೇಹದಲ್ಲಿವೆ. ಅಲ್ಲಿಗೆ ಐದು ಭೂತಗಳೂ ಸೇರಿ ಪಂಚೀಕೃತವಾಗಿ ಪಾಂಚಭೌತಿಕ ದೇಹವೆಂದು ಮನುಷ್ಯಶರೀರವು ಪ್ರಸಿದ್ಧವಾಯಿತು. ಇದು ಅನುಭವಕ್ಕೂ ಅನುಗುಣವಾಗಿದೆ. ತಿಂದ ಆಹಾರ, ನೀರುಗಳು, ಹೊಟ್ಟೆಯಲ್ಲಿ ಸೇರುವದರಿಂದಲೂ ಕಿವಿ, ಮೂಗಿನ ಹೊಳ್ಳೆಗಳು, ಗಂಟಲು, ಬಾಯಿಗಳಲ್ಲಿ ಖಾಲಿಸ್ಥಳವಿರುವದರಿಂದಲೂ ಆಕಾಶವಿದೆ–ಎಂದಾಯಿತು. ಉಸಿರಾಡುತ್ತಲೇ ಇರುವದರಿಂದ ವಾಯುವೂ ತಿಂದ ಅನ್ನವೂ ಜೀರ್ಣವಾಗುವದು, ಮೈಶಾಖವಾಗಿರುವದು–ಇವುಗಳಿಂದ ತೇಜಸ್ಸು ಇದೆಯೆಂದೂ, ರಕ್ತಸಂಚಾರಾದಿಗಳಿಂದ ನೀರಿನ ಅಂಶವೂ ಇದೆಯೆಂದೂ ಸುಲಭವಾಗಿ ತಿಳಿಯಬಹುದು. ಇದೇ ರೀತಿಯಾಗಿ ಭೂಮಿಯಲ್ಲಿ ಸೃಷ್ಟವಾಗಿರುವ ಶರೀರಗಳೆಲ್ಲ ಪಂಚೀಕೃತವಾಗಿವೆ. ಆದ್ದರಿಂದಲೇ ಈ ಶರೀರಾದಿಗಳಿಗೆ ಮೂಲವಸ್ತುಗಳಾದ ಪೃಥಿವ್ಯಾದಿಗಳೂ ಮೇಲಿನ ಕ್ರಮದಂತೆಯೇ ಪಂಚೀಕೃತವಾಗಿವೆ. ಹಾಗಿಲ್ಲವಾದರೆ ಅವು ವ್ಯವಹಾರಯೋಗ್ಯವಾಗಲಾರವು. ಹೀಗೆ ಪಂಚೀಕರಣವನ್ನು ತಿಳಿದುಕೊಂಡಮೇಲೆ

ತ್ರಿವೃತ್ಕರಣದ ಬಗ್ಗೆ ಯಾವ ಸಂಶಯವೂ ಇರುವದಿಲ್ಲ. ಏಕೆಂದರೆ ಪಂಚೀಕರಣದಲ್ಲಿ ತ್ರಿವೃತ್ಕರಣವು ಅಡಕವಾಗಿಯೇ ಬಿಟ್ಟಿದೆ. ಈ ಛಾಂದೋಗ್ಯಶ್ರುತಿಯಲ್ಲಿ ತ್ರಿವೃತ್ಕರಣವನ್ನು ಸ್ವೀಕರಿಸಿದೆ. ಶ್ರೀಶಂಕರಾಚಾರ್ಯರ ಅಭಿಪ್ರಾಯದಂತೆ ಇವೆರಡರಲ್ಲಿ ಯಾವ ಪ್ರಕ್ರಿಯೆಯಾದರೂ ಸರಿ, ಮೂಲವಸ್ತುವಿನ ಪರ್ಯಂತವಾಗಿ ನಮ್ಮ ವಿಚಾರಸರಣಿಯನ್ನೂ ಬುದ್ಧಿಯನ್ನೂ ಕೊಂಡೊಯ್ಯಲು ಸಹಾಯಕವಾಗಿದ್ದರೆ ಸಾಕು–ಈ ಪ್ರಕ್ರಿಯೆಗಳ ಪ್ರಯೋಜನವಿಷ್ಟೇ–ಎಂದು ನಿರ್ಣಯಿಸಿರುತ್ತಾರೆ. ತ್ರಿವೃತ್ಕರಣವು ಪಂಚೀಕರಣಕ್ಕಿಂತ ಸ್ಥೂಲವಾದ್ದರಿಂದ ಸಾಮಾನ್ಯರಿಗೆ ಬೇಗನೆ ತತ್ತ್ವಗ್ರಹಣಕ್ಕೆ ಅನುಕೂಲವಾದೀತೆಂದು ಭಾವಿಸಿ ಇಲ್ಲಿ ತ್ರಿವೃತ್ಕರಣವನ್ನೇ ಹೆಚ್ಚಾಗಿ ವಿಚಾರಮಾಡಿದೆ.

ಈಗ ತ್ರಿವೃತ್ಕರಣವನ್ನು ಆಧ್ಯಾತ್ಮಿಕವಾಗಿ ಶ್ರುತಿಯು ವಿವರಿಸಿರುವದನ್ನು ತಿಳಿಯೋಣ. ಮನುಷ್ಯನ ಶರೀರದೊಳಗೆ ಮನಸ್ಸು, ಪ್ರಾಣ, ವಾಕ್ಕುಗಳಿರುವದು ಎಲ್ಲರಿಗೂ ತಿಳಿದಿದೆ. ಇವು ಕ್ರಮವಾಗಿ ಅನ್ನ, ನೀರು, ಬೆಳಕು(ತೇಜಸ್ಸು)ಗಳಿಂದ ಆಗಿವೆ ಎಂದು ತಿಳಿಸಿದ್ದಾರೆ. ಇವುಗಳ ಪ್ರತಿಪಾದನೆಯು ಹೇಗೆಂದರೆ (1)ಊಟಮಾಡಿದ ಅನ್ನವು ಮೂರು ವಿಭಾಗಗಳಾಗಿ ಗಟ್ಟಿಯಾದ ನೀರಸಭಾಗವು ಪುರೀಷವಾಗಿ ಹೊರತಳ್ಳಲ್ಪಡುವದು. ಮಧ್ಯಮಭಾಗವು ಮಾಂಸವಾಗುವದು. ಸೂಕ್ಷ್ಮವಾದ ಭಾಗವು ಮನಸ್ಸಾಗುವದು. ಇದರ ಪರೀಕ್ಷೆಯು ಹೇಗೆಂದರೆಃ ಕೆಲವೇ ದಿನಗಳು ಊಟವಿಲ್ಲದೆ ನೀರನ್ನು ಮಾತ್ರ ಕುಡಿದುಕೊಂಡು ಬದುಕಿರಬಹುದು. ಆದರೆ ಹಾಗೆ ಉಪವಾಸಮಾಡಿದವನಿಗೆ ಸ್ಮರಣಶಕ್ತಿಯು ಇರುವದಿಲ್ಲ. ವೇದಪಠನಾದಿಗಳನ್ನು ಮಾಡಲು ಬರುವದಿಲ್ಲ. ಏಕೆಂದರೆ ಮನಸ್ಸು ತನ್ನ ಬಲವನ್ನು ಕಳೆದುಕೊಂಡಿರುವದೇ ಕಾರಣವು. ಮತ್ತೆ ಆಹಾರವನ್ನು ತೆಗೆದುಕೊಂಡರೆ ಮನಸ್ಸು ಬಲವಾಗಿ ಎಲ್ಲಾ ಆಲೋಚನೆಗಳು, ವಿದ್ಯಾಪ್ರಕಾಶಗಳಿಗೂ ಮನುಷ್ಯನು ಸಮರ್ಥನಾಗುತ್ತಾನೆ. ಇದರಿಂದ ತಿಳಿಯಬರುವದೇನೆಂದರೆಃ ಮನಸ್ಸು ಭೌತಿಕವೇ ಹೊರತು ನಿತ್ಯವೂ ನಿರವಯವವೂ ಅಲ್ಲ. ಅದು ತ್ರಿವೃತ್ಕೃತಮಹಾಭೂತಗಳ ವಿಕಾರವು. ಆದರೆ ಉಳಿದ ಇಂದ್ರಿಯಗಳಿಗಿಂತ ಸೂಕ್ಷ್ಮವೂ ಇಂದ್ರಿಯವಿಷಯಗಳನ್ನೆಲ್ಲ ವ್ಯಾಪಿಸಿಕೊಂಡಿರುವದೂ ಆಗಿದೆ. ಹೀಗೆಯೇ (2)ಕುಡಿದ ನೀರು ಸಹ ಮೂರು ಭಾಗವಾಗುತ್ತದೆ. ಅದರಲ್ಲಿಯೂ ಸ್ಥೂಲವಾದದ್ದು ಮೂತ್ರವಾಗಿ ಹೊರಬರುತ್ತದೆ. ಮಧ್ಯಮವಾದದ್ದು ರಕ್ತವಾಗುತ್ತದೆ. ಸೂಕ್ಷ್ಮವಾದದ್ದು ಪ್ರಾಣವಾಗುತ್ತದೆ. ಇದೇ ರೀತಿಯಾಗಿ. (3)ತೇಜಸ್ಸು ಸಹ ಮೂರು ಭಾಗಗಳಾಗಿ ಸ್ಥೂಲವಾದದ್ದು ಅಸ್ಥಿಯಾಗಿಯೂ ಮಧ್ಯಮವಾದದ್ದು ಮಜ್ಜೆ(ಅಸ್ಥಿಯೊಳಗಿರುವ ಜಿಡ್ಡು)ಯಾಗಿಯೂ ಸೂಕ್ಷ್ಮವಾದದ್ದು ವಾಕ್ (ಮಾತು)ಆಗಿಯೂ ಪರಿಣಾಮವಾಗುತ್ತದೆ. ಹೀಗೆ ವಾಕ್ಕು, ಪ್ರಾಣ, ಮನಸ್ಸುಗಳು ಮನುಷ್ಯನೊಳಗಡೆ ಇದ್ದುಕೊಂಡು ತ್ರಿವೃತ್ಕೃತವಾಗಿಯೇ ಕಂಡುಬಂದಿವೆ. ಇದೇ

ಪ್ರಕ್ರಿಯೆಯಿಂದ ಸದ್ಬ್ರಹ್ಮವನ್ನು ಹುಡುಕುವದು ಹೇಗೆಂದರೆ: ಅನ್ನವೆಂಬ ಕಾರ್ಯವು ಅಪ್ಪಿನಿಂದಾಗಿದೆ; ಅಪ್ಪು ತೇಜಸ್ಸಿನಿಂದಾಗಿದೆ; ತೇಜಸ್ಸು ಬ್ರಹ್ಮದಿಂದಾಗಿದೆ–ಆದ್ದರಿಂದ ಬ್ರಹ್ಮವೇ ಜಗನ್ಮೂಲವು–ಎಂಬಿದು ತ್ರಿವೃತ್ಕರಣದ ಮೂಲಕ ವಿಚಾರಕರಿಗೆ ತಿಳಿದುಬರುತ್ತದೆ. ಜಗತ್ತಿನ ಮೂಲ ವಸ್ತುಗಳ ಸಂಖ್ಯೆಯು ಕಡಿಮೆಯಾದಂತೆಲ್ಲ ವಿಜ್ಞಾನಿಗಳಿಗೂ ಸಂತೋಷವೇ ಸರಿ. ಏಕೆಂದರೆ ಆಗ ಜಗತ್ತನ್ನರಿಯುವದು ಸುಲಭವಾಗುತ್ತದೆ. ಹೀಗೆ ಜಗತ್ತಿನ ಮೂಲವನ್ನು ಹುಡುಕಲಾರಂಭಿಸಿದ ಋಷಿಗಳು ಕಟ್ಟಕಡೆಯಲ್ಲಿ 'ಸದ್ವಸ್ತುವೊಂದೇ ಪರಮಾರ್ಥವು. ಅದು ಮಾತ್ರವೇ ಎಂದೆಂದಿಗೂ ಇರುವದಾಗಿದೆ. ಅದನ್ನು ವಿಭಜಿಸಲಾಗುವದಿಲ್ಲ. ಒಂದು ವೇಳೆ ಅಲ್ಲಿಯೂ ವಿಭಜನೆಯನ್ನು ಕಲ್ಪಿಸಿದರೂ ವಿಭಕ್ತವಾದಂತೆ ಕಂಡುಬಂದವುಗಳೂ ಪೂರ್ಣಬ್ರಹ್ಮವೇ ಆಗಿಬಿಟ್ಟಿರುತ್ತವೆ' – ಎಂದು ಕಂಡುಕೊಂಡರು. ಇದೇ ತ್ರಿವೃತ್ಕರಣದ ಸಾರವು.

----

## ಸ್ವಪಿತಿ ಎಂಬ ಹೆಸರಿನಲ್ಲಿ ನಿಗೂಢವಾಗಿರುವ ತತ್ತ್ವ

**ಓಮ್ ||–ಯತ್ರೈತತ್ ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ತಸ್ಮಾದೇನಂ ಸ್ವಪಿತೀತ್ಯಾಚಕ್ಷತೇ–||**
**6–8–1**

ಭಾವಾರ್ಥ:– "ಎಲ್ಲಿ ಹೀಗೆ ಪುರುಷನು ಸ್ವಪಿತಿ ಎನಿಸಿಕೊಳ್ಳುವನೋ, ಎಲೈ ಸೋಮ್ಯನೆ, ಆಗ ಸತ್ತಿನೊಡನೆ ಸಂಪನ್ನನಾಗಿರುತ್ತಾನೆ. ಸ್ವ–ವನ್ನು (ತನ್ನನ್ನು) ಅಪೀತನಾಗಿರುತ್ತಾನೆ. ಆದ್ದರಿಂದ ಇವನನ್ನು ಸ್ವಪಿತಿ–ಎನ್ನುವರು."

(ಉದ್ದಾಲಕನು ತನ್ನ ಮಗನಾದ ಶ್ವೇತಕೇತುವಿಗೆ ಉಪದೇಶಮಾಡುವ ಸಂದರ್ಭದಲ್ಲಿ 'ಮಲಗಿದ್ದಾನೆ' ಎಂದು ಜನರು ಗಾಢನಿದ್ರೆಮಾಡುವವನ ವಿಷಯದಲ್ಲಿ ಹೇಳುವ ಸಂಸ್ಕೃತಭಾಷೆಯ 'ಸ್ವಪಿತಿ' ಎಂಬ ಕ್ರಿಯಾಪದದಲ್ಲಿ ಪರಬ್ರಹ್ಮತತ್ತ್ವದ ರಹಸ್ಯವು ಅಡಗಿದೆ–ಎಂದು ತಿಳಿಸಿರುತ್ತಾನೆ. ತನ್ನನ್ನು ತಾನು ಸೇರಿರುವದೇ ಗಾಢನಿದ್ರೆಯು–ಎಂದಭಿಪ್ರಾಯ).

## 41. ಸ್ವಪಿತಿ ಎಂಬ ನಾಮದ ಅರ್ಥ

ಛಾಂದೋಗ್ಯೋಪನಿಷತ್ತಿನ ವಿಚಾರಸರಣಿಯಲ್ಲಿ ಈಗ ನಾವು ಪರಬ್ರಹ್ಮ ಸ್ವರೂಪವನ್ನು ಮುಟ್ಟಲು ಅವಸ್ಥಾತ್ರಯಪ್ರಕ್ರಿಯಾಮಾರ್ಗದಿಂದ ಮತ್ತೊಮ್ಮೆ ಹೊರಡಲಿದ್ದೇವೆ. ಈವರೆಗೆ ಉದ್ದಾಲಕನು ತನ್ನ ಮಗನಿಗೆ ಕಾರ್ಯಕಾರಣಪ್ರಕ್ರಿಯೆಯ ಅವಲಂಬನೆಯಿಂದ ಸದ್ಬ್ರಹ್ಮವೊಂದೇ ಪರಮಾರ್ಥವು, ಅದೇ ಜಗನ್ಮೂಲವು–ಎಂದು

ವಿವರಿಸಿದ್ದಾನೆ. ಮತ್ತು ಸದ್ವಸ್ತುವೇ ಜೀವರೂಪದಿಂದ ಜಗತ್ತಿನಲ್ಲೆಲ್ಲ ಪ್ರವೇಶಿಸಿರುತ್ತದೆ– ಎಂದೂ ತಿಳಿಸಿಕೊಟ್ಟು 'ಜೀವನೆಂಬವನು ಮೃಷಾ– ಅವನು ನಿಜವಾಗಿ ಬ್ರಹ್ಮವೇ' ಎಂದೂ ಉಪದೇಶಿಸಿದ್ದಾನೆ. ಈ ತತ್ತ್ವಪ್ರತಿಪಾದನೆಗಾಗಿಯೇ ತ್ರಿವೃತ್ಕರಣಪ್ರಕ್ರಿಯೆಯನ್ನೂ ವಿವರಿಸಿದ್ದಾಗಿದೆ. ಇಷ್ಟಾದರೂ ಒಂದು ರೀತಿಯಲ್ಲಿ ಬ್ರಹ್ಮೋಪದೇಶವನ್ನು ಕೇಳುತ್ತಿರುವವರಿಗೆ ಪರಬ್ರಹ್ಮವೆಂದರೆ ಯಾವದೋ ಒಂದು ವಸ್ತುವಾಗಿರಬೇಕು– ಎಂಬ ಪರೋಕ್ಷ ಭಾವನೆಯೇ ಬೇರೂರಿಕೊಂಡಿರುತ್ತದೆ. ಅದನ್ನು ನಿರಾಕರಿಸಿ ಸಾಕ್ಷಾದಪರೋಕ್ಷವಾಗಿರುವ ಬ್ರಹ್ಮವನ್ನೇ ಸಾರ್ವತ್ರಿಕಪೂರ್ಣಾನುಭವದಿಂದ ನಿರೂಪಿಸಿ ಸದ್ಬ್ರಹ್ಮಪ್ರತಿಪತ್ತಿಯನ್ನು ದೊರಕಿಸಿಕೊಟ್ಟು ಮೋಕ್ಷಸಾಮ್ರಾಜ್ಯದಲ್ಲಿ ಜಿಜ್ಞಾಸುವನ್ನು ಪಟ್ಟಾಭಿಷೇಕ ಮಾಡಿಸುವದಕ್ಕಾಗಿಯೇ ಶ್ರುತಿಯು ಈಗ ಹೊರಟಿರುತ್ತದೆ. ಇದು ಹೇಗೆಂಬುದನ್ನು ನೋಡೋಣ:

ಸಾರ್ವತ್ರಿಕಪೂರ್ಣಾನುಭವವೆಂಬ ಮಾತನ್ನು ಈಗ ನಾವು ಬಳಸಿದ್ದೇವಷ್ಟೆ; ಹಾಗೆಂದರೇನು? ಎಂಬುದನ್ನು ವಿವರಿಸಲಾಗುವದು. ಅನುಭವ ಎಂಬುದು ಎಲ್ಲಾ ಪ್ರಮಾಣಗಳಿಗೂ ರಾಜನಾಗಿದ್ದು ಪ್ರಮಾಣಗಳನ್ನು ಪ್ರಮಾಣಗಳೆಂದು ಗೊತ್ತುಪಡಿಸುವ ಹಿಂತಡಿಕೆಯಾಗಿರುತ್ತದೆ ಆದ್ದರಿಂದ ಅದನ್ನು ಸ್ವಯಂಸಿದ್ಧ ಅಥವಾ ನಿತ್ಯಸಿದ್ಧವೆಂದು ಕರೆಯಬೇಕಾಗಿದೆ. ಇಂಥ ಅನುಭವವನ್ನು ಪ್ರತಿಯೊಬ್ಬನೂ ತನ್ನತನ್ನ ಸ್ವರೂಪಾನುಭವದಿಂದಲೇ ಕಂಡುಕೊಳ್ಳಬೇಕಾದದ್ದು ಅನಿವಾರ್ಯವಾಗಿದೆ. ಏಕೆಂದರೆ ಇಲ್ಲಿ ವಾಗಾದಿಗಳಾಗಲಿ ಮನಸ್ಸಾಗಲಿ ವ್ಯಾಪಾರಮಾಡುವದಿಲ್ಲ. ನಿದ್ರೆಯೆಂಬುದೊಂದು ಇಂಥ ಅನುಭವಕ್ಕೆ ಉದಾಹರಣೆಯಾಗಿದೆ. ಇದು ಎಲ್ಲರಿಗೂ ಅನುಭವದಲ್ಲಿದೆ. ನಾವು ನಮ್ಮ ನಿದ್ರೆಯನ್ನು ಯಾವ ಪ್ರಮಾಣಗಳಿಂದಲೂ ಅರಿಯುವದಿಲ್ಲ. ಏಕೆಂದರೆ ಅಲ್ಲಿ ಪ್ರಮಾಣಪ್ರಮೇಯವ್ಯವಹಾರವೇ ಇರುವದಿಲ್ಲ. ಹೀಗೆಯೇ ಅದು ಪ್ರಮಾಣರಹಿತವಾದ ಸ್ಥಿತಿಯಾಗಿದ್ದುಕೊಂಡಿದ್ದರೂ ಅಲ್ಲಿನ ಅನುಭವವನ್ನು ಇಲ್ಲವೆಂದು ಹೇಳಲೂ ಬರುವದಿಲ್ಲ. ಏಕೆಂದರೆ ಪ್ರತಿಯೊಬ್ಬನೂ ತನ್ನ ತನ್ನ ನಿದ್ರಾನುಭವವನ್ನು ಕುರಿತು ಎಚ್ಚರದಲ್ಲಿ ಪರಾಮರ್ಶಿಸಿ ಮಾತನಾಡುತ್ತಾನೆ. ಆದರೆ ತಾನೇ ತಾನಾಗಿ ಅಲ್ಲಿದ್ದಾಗ ಮಾತ್ರ ಅದೇನೆಂಬುದನ್ನು ತಿಳಿದಿರುವದಿಲ್ಲ. ತಿಳಿದಿರುವದಿಲ್ಲವಾದರೂ ತಾನೂ ಇರಲಿಲ್ಲವೆಂದು (ಶೂನ್ಯವೆಂದು) ಹೇಳುವದಿಲ್ಲ. ಹೀಗೆ ನಿದ್ರೆಯೆಂಬುದೊಂದು ತಿಳಿಯಲಾರದ, ಆದರೆ ಇಲ್ಲವೆಂದು ನಿರಾಕರಿಸಲಾಗದ ಒಗಟಾಗಿರುತ್ತದೆ. ಉಪನಿಷತ್ತಿನಲ್ಲಿ ಇದರ ತತ್ತ್ವವನ್ನು ವಿಚಾರಮಾಡುವದರ ಮೂಲಕ ಬ್ರಹ್ಮವನ್ನು ತಿಳಿಸುವದಕ್ಕಾಗಿ ಹೊರಟಿರುತ್ತದೆ. "ಎಲೈ, ಸೋಮ್ಯನೆ, ನಾನು ಹೇಳುವ ಸ್ವಪ್ನಾಂತವನ್ನು ಈಗ ತಿಳಿಯುವವನಾಗು" ಎಂದು ತಂದೆಯು ಹೇಳುವ ಮಾತಿಗೆ ಇದೇ ಅಭಿಪ್ರಾಯವು. ಆದ್ದರಿಂದ ಸಾರ್ವತ್ರಿಕಾನುಭವವಾದ ನಿದ್ರೆಯನ್ನು ಶಾಸ್ತ್ರದೃಷ್ಟಿಯಿಂದ ವಿಚಾರಿಸಿ ಕಂಡುಕೊಂಡಾಗ ಪೂರ್ಣಾನುಭವ

ರೂಪವಾದ ಬ್ರಹ್ಮದ ಅರಿವು ಉಂಟಾಗುತ್ತದೆ. ಪೂರ್ಣವೆಂದರೆ ಮನುಷ್ಯನಿಗೆ ಇರುವ ಎಲ್ಲಾ ಅವಸ್ಥೆಗಳನ್ನೂ ಒಟ್ಟಾಗಿ ವಿಚಾರಮಾಡಿದ ಅನಂತರ ಎಲ್ಲಾ ಸ್ಥಿತಿಯಲ್ಲಿಯೂ ಯಾವದು ಅಚ್ಚಳಿಯದೆ ಇದ್ದುಕೊಂಡಿರುವದೋ ಅದನ್ನು ಗೊತ್ತುಪಡಿಸಿಕೊಳ್ಳುವದು. ಹಾಗಾದಲ್ಲಿ ಮುಂದೆ ವಿಚಾರಮಾಡತಕ್ಕದ್ದಾಗಲಿ, ತಿಳಿಯತಕ್ಕದ್ದಾಗಲಿ ಏನೂ ಉಳಿಯುವದಿಲ್ಲವಾಗಿ ಪೂರ್ಣವೆನಿಸುವದು.

ಈಗ ವಾಚಕರು ಇನ್ನೊಂದು ವಿಷಯವನ್ನು ತಿಳಿದಿರಬೇಕು. ಸುಷುಪ್ತಿ ಎಂದರೆ ಗಾಢನಿದ್ರೆ–ಎಂದರ್ಥ. ಇದನ್ನು ವಿಚಾರಮಾಡುವವರಲ್ಲಿ ಎರಡು ದೃಷ್ಟಿಕೋನಗಳಿವೆ, ಲೌಕಿಕರೆಲ್ಲರೂ ಇದನ್ನು 'ಅವಸ್ಥೆ'ಯೆಂದು ತಿಳಿದಿದ್ದಾರೆ. ಹೇಗೆಂದರೆ ಎಚ್ಚರ–ಕನಸುಗಳಂತೆ ಇದು ಕೂಡ ಮಾನವನಿಗೆ ಬಂದುಹೋಗುವ ಅವಸ್ಥೆ. ಜೊತೆಗೆ ಇದು ತಾಮಸವಾದ ಸ್ಥಿತಿ. ಇಲ್ಲಿ ಏನೂ ಮಾಡಲಾಗುವದಿಲ್ಲ. ಏನನ್ನೂ ಅರಿಯಲಾಗುವದಿಲ್ಲ. ಆದ್ದರಿಂದ ಇದೊಂದು ಉಪಯೋಗವಿಲ್ಲದ ಅನುಭವಸ್ಥಿತಿ–ಎಂದು ಭಾವಿಸಿದ್ದಾರೆ. ಮುಂದುವರೆದು "ಎಚ್ಚರವೇ ಶ್ರೇಷ್ಠವಾದ ಅವಸ್ಥೆ. ಅದು ಕಾಲಪ್ರವಾಹದಲ್ಲಿ ನಿತ್ಯವಾಗಿದ್ದು ಪ್ರಮಾಣಪ್ರಮೇಯವ್ಯವಹಾರಗಳಿಗೆ ತಕ್ಕದ್ದಾಗಿದ್ದು ಮಾನವನಿಗೆ ಜೀವನಾಧಾರವಾಗಿದೆ. ಅದೇ ಜೀವನದ ಸಾರ. ಅದರ ದೃಷ್ಟಿಯಿಂದ ಕನಸುನಿದ್ರೆಗಳು ನಿಷ್ಪ್ರಯೋಜಕ" ಎಂದೇ ಭಾವಿಸಿದ್ದಾರೆ. ವ್ಯವಹಾರಕ್ಕೆ ಇಷ್ಟೇ ತಿಳಿವಳಿಕೆಯು ಸಾಕಾಗಬಹುದಾದರೂ ತತ್ತ್ವನಿರ್ಧಾರಣೆಗೆ ಇದು ಸಾಲದು. ಏಕೆಂದರೆ ಈ ತಿಳಿವಳಿಕೆಯಲ್ಲಿ ಪಕ್ಷಪಾತವಿದೆ, ಎಚ್ಚರವೇ ಶ್ರೇಷ್ಠವೆಂಬ ಅಹಂಕಾರವಿದೆ. ಮಾನವನಿಗೆ ಮೂರು ಅವಸ್ಥಾನುಭವಗಳೂ ಅನಿವಾರ್ಯವಾಗಿದ್ದು ಎಲ್ಲದರಲ್ಲಿಯೂ ತಾನಿದ್ದುಕೊಂಡಿದ್ದರೂ ಸ್ವಪ್ನಸುಷುಪ್ತಿಗಳನ್ನು ಕೈಬಿಟ್ಟು ಎಚ್ಚರವನ್ನೇ ಬೆನ್ನುಹತ್ತಿರುವ ದೋಷವಿಲ್ಲಿದೆ. ಸಮದೃಷ್ಟಿಯಿಂದ ಮಾತ್ರವೇ ತತ್ತ್ವನಿರ್ಧಾರಣೆಮಾಡಲಾದೀತೇ ಹೊರತು ಪಕ್ಷಪಾತದೃಷ್ಟಿಯಿಂದ ಮಾಡಲಾಗುವದಿಲ್ಲ. ಆದರೂ ಅದೇಕೊ. ತತ್ತ್ವನಿರ್ಧಾರಣೆಗೆಂದೇ ಹೊರಟಿರುವ ವೇದಾಂತಿಗಳಲ್ಲದ ಇತರ ದರ್ಶನಕಾರರುಗಳು ಕೂಡ ಈ ಪಕ್ಷಪಾತದೃಷ್ಟಿಯನ್ನೇ ಅವಲಂಬಿಸಿದ್ದರ ಫಲವಾಗಿ ಲಕ್ಷಣಪ್ರಮಾಣಗಳಿಂದಲೇ ವಸ್ತುಸಿದ್ಧಿಯೆಂಬ ಭ್ರಾಂತಿಗೆ ಪಕ್ಕಾಗಿದ್ದಾರೆ. ಹೀಗಿರುವದರಿಂದ ಶಾಸ್ತ್ರೀಯನಿರೂಪಣಾಕ್ರಮಕ್ಕೂ ಅನುಭವಕ್ಕೂ ಸಮ್ಮತವಾದ ವೇದಾಂತಿಗಳ ದೃಷ್ಟಿಯಿಂದ ಸುಷುಪ್ತಿಯನ್ನು ಹೇಗೆ ತಿಳಿಯಬೇಕೆಂಬುದನ್ನು ಈಗ ನೋಡೋಣ.

ಉದ್ದಾಲಕನು ಶ್ವೇತಕೇತುವಿಗೆ ಉಪದೇಶಿಸುವಾಗ ಹೀಗೆಂದಿರುತ್ತಾನೆ: "ಎಲೈ ಸೋಮ್ಯನೆ, ಮನುಷ್ಯನು ನಿದ್ರೆ ಮಾಡುತ್ತಿದ್ದಾನೆ–ಎನ್ನುವರಲ್ಲ, ಆಗ ಅವನು ಸತಿನೊಡನೆ ಒಂದಾಗಿರುತ್ತಾನೆ. ತನ್ನ ಸ್ವರೂಪವನ್ನೇ ಹೊಂದಿರುತ್ತಾನೆ. ಆದ್ದರಿಂದಲೇ 'ಸ್ವ–ಪಿತಿ'

ಎಂದು ಕರೆಯುವರು'' ಎಂದು ತಿಳಿಸಿರುತ್ತಾನೆ. ಇಲ್ಲಿ 'ಸ್ವಪಿತಿ' ಎಂಬ ಕ್ರಿಯಾಪದಕ್ಕೆ ಅವಯವಾರ್ಥವನ್ನು ಶ್ರುತಿಯು ಸ್ವೀಕರಿಸಿ ಪುರುಷನು ತನಿನಿದ್ರೆಯಲ್ಲಿ ಸದ್ಬ್ರಹ್ಮವನ್ನು ಹೊಂದಿರುತ್ತಾನೆ-ಎಂದು ಅಭಿಪ್ರಾಯಪಡುತ್ತದೆ. ಶ್ರೀಶಂಕರಭಗವತ್ಪಾದರು ಇಲ್ಲಿ ತಮ್ಮ ಭಾಷ್ಯದಲ್ಲಿ ವಿವರಣೆಯನ್ನು ನೀಡುವಾಗ 'ಮನಸ್ಸೇ ಮುಂತಾದವುಗಳ ಸಂಪರ್ಕ ದಿಂದುಂಟಾದ ಜೀವರೂಪವನ್ನು ಬಿಟ್ಟು ಪರಮಾರ್ಥಸತ್ಯವಾದ ತನ್ನದೇ ಆದ ಸದ್ರೂಪವಿದೆಯಲ್ಲ (ಅದನ್ನು) ಅಪೀತನಾಗುತ್ತಾನೆ; ಅದರಲ್ಲಿ ಲಯವಾದವನಾಗು ತ್ತಾನೆ'' ಎಂದು ತಿಳಿಸಿದ್ದಾರೆ. ಹಾಗೆಯೇ ಮುಂದುವರದು ಮತ್ತೆ ''ಜೀವನು ಶ್ರಮವನ್ನು ಹೋಗಲಾಡಿಸಿಕೊಳ್ಳುವದಕ್ಕೋಸ್ಕರ ತನ್ನ ದೇವತಾರೂಪವಾದ ಆತ್ಮನನ್ನು ಪಡೆದುಕೊಳ್ಳುತ್ತಾನೆ. (ಏಕೆಂದರೆ) ಸ್ವರೂಪದಲ್ಲಿ ನಿಂತ ಹೊರತು ಮತ್ತೆಲ್ಲಿಯೂ ಶ್ರಮವು ಪರಿಹಾರವಾಗಲಾರದು. ಲೋಕದಲ್ಲಿ ಜ್ವರವೇ ಮುಂತಾದ ಬೇನೆಯು ಹಿಡಿದವರಿಗೆ ಅದರಿಂದ ಬಿಡುಗಡೆಯಾಗಲು ಸ್ವರೂಪದಲ್ಲಿರುವದರಿಂದ ವಿಶ್ರಾಂತಿಯಾಗುವದು ಕಂಡಿಲ್ಲವೆ? ಅದರಂತೆಯೇ ಇಲ್ಲಿಯೂ ಆಗಬಹುದೆಂಬುದು ಯುಕ್ತವಾಗಿರುತ್ತದೆ'' ಎಂದು ವಿವರಿಸಿದ್ದಾರೆ. ಹೀಗೆ ಶ್ರುತಿ-ಭಾಷ್ಯಗಳ ಸಹಾಯದಿಂದ ನಾವು ಸುಷುಪ್ತಿಯನ್ನು ಅರ್ಥಮಾಡಿಕೊಳ್ಳಲು ಹೊರಟಾಗ ನಮಗೆ ಲೌಕಿಕದೃಷ್ಟಿಯ ದೋಷವು ತಿಳಿದುಬಂದು ಶ್ರೌತದೃಷ್ಟಿಯ ಹೆಚ್ಚುಗಾರಿಕೆಯು ಮನದಟ್ಟಾಗವದು. ಹೀಗೆ ಮನದಟ್ಟಾಗದೆ ಇದ್ದರೆ ಸುಷುಪ್ತಿಯ ತೊಡಕನ್ನು ಎಂದಿಗೂ ಬಿಚ್ಚಿಕೊಳ್ಳಲಾಗುವದಿಲ್ಲ. ಸುಷುಪ್ತಿಯ ಅನುಭವವು ಅರ್ಥವಾಗದೆ ಹೋದರೆ ಬ್ರಹ್ಮಜಿಜ್ಞಾಸೆಯು ಕೇವಲ ಪುಸ್ತಕಪ್ರತಿಪಾದ್ಯವಾದ ವೇದಾಂತ ವಿಷಯವಾಗಿಯೇ ಉಳಿದುಕೊಂಡು ವಾದವಿವಾದಗಳಿಗೂ ತರ್ಕಪ್ರಧಾನವಾದ ಪಾಂಡಿತ್ಯಪ್ರದರ್ಶನಕ್ಕೂ ನೆರವಾಗಬಹುದೇ ಹೊರತು ಮೋಕ್ಷದ್ವಾರವಾಗಿ ಕಂಡು ಕೊಂಡಂತೆ ಆಗುವದಿಲ್ಲ. ಮಾಂಡೂಕ್ಯೋಪನಿಷತ್ತಿನಲ್ಲಿಯೂ ಅವಸ್ಥಾತ್ರಯಗಳನ್ನು ತುರೀಯದ ಪ್ರತಿಪತ್ತಿಗೆ ದ್ವಾರಗಳೆಂದಿದೆಯೇ ಹೊರತು ಸುಷುಪ್ತಿಯನ್ನೇ ಮೋಕ್ಷವೆಂದು ಹೇಳಿಲ್ಲ. ಆದ್ದರಿಂದ ವಿಚಾರಕರು ಲೌಕಿಕ-ಶಾಸ್ತ್ರೀಯ ದೃಷ್ಟಿಭೇದಗಳನ್ನು ಅಳವಡಿಸಿ ಕೊಂಡು ಒಂದಕ್ಕೊಂದಕ್ಕೆ ಇರುವ ವ್ಯತ್ಯಾಸವನ್ನು ಮನಗಂಡು, ತತ್ತ್ವನಿರ್ಧಾರಣೆಗಾಗಿ ಹೊರಟಾಗ ಲೌಕಿಕದೃಷ್ಟಿಯನ್ನು ಕೈಬಿಟ್ಟು ಶಾಸ್ತ್ರೀಯದೃಷ್ಟಿಯನ್ನೇ ಅವಲಂಬಿಸಿಕೊಂಡು ಶ್ರುತ್ಯನುಗ್ರಹೀತವಾದ ಅವಸ್ಥಾತ್ರಯತರ್ಕದ ಸಹಾಯದಿಂದ ಬ್ರಹ್ಮವನ್ನು ನಿದಿಧ್ಯಾಸನ ಮಾಡಿಕೊಂಡು ಅನುಭವಾರೂಢವಾಗಿ ಮಾಡಿಕೊಳ್ಳಬೇಕು. ಈ ಹಾದಿಯಲ್ಲಿ ಸುಷುಪ್ತಿಯು ಜಿಜ್ಞಾಸುವಾದ ಮಾನವನಿಗೆ ಒಂದು ವರವಾಗಿದೆ.

ಈಗ ಶಾಸ್ತ್ರದೃಷ್ಟಿಯಿಂದ ಕಂಡುಕೊಂಡ ಸುಷುಪ್ತಿಯ ಅನುಭವವನ್ನು ವಿಚಾರಮಾಡೋಣ. ಇನ್ನುಮುಂದೆ ವಿಚಾರಕರು ಸುಷುಪ್ತಿಯನ್ನು ಒಂದು ಸ್ಥಾನವಾಗಿ ಮಾತ್ರ ಪರಿಗಣಿಸಬೇಕು, ಅಥವಾ ವ್ಯವಹಾರದೃಷ್ಟಿಯಿಂದ 'ಅವಸ್ಥೆ' ಎಂದರೂ ಸರಿ.

ಇದರಿಂದ ದೊರಕುವ ಲಾಭವೇನೆಂದರೆ: **"ಸುಷುಪ್ತಿಯೇ ಮುಕ್ತಿಯಲ್ಲ, ಬ್ರಹ್ಮವೇ ಮುಕ್ತ್ಯವಸ್ಥೆ"** ಸುಷುಪ್ತಿಯು ಬ್ರಹ್ಮವಾಗಿ ಕಂಡುಕೊಳ್ಳಲ್ಪಟ್ಟಾಗ ಮಾತ್ರವೇ ಮಾನವನು ಕೃತಕೃತ್ಯನಾಗುವನು. ಇಲ್ಲವಾದರೆ ನಿದ್ರೆಯು ಬರುವಂಥ ಮಾದಕಪದಾರ್ಥಗಳನ್ನು ತಿಂದು ಮೈಮರೆತು ನಿದ್ರೆಮಾಡಿದರೆ ಮೋಕ್ಷವು ದೊರಕಿದಂತೆ–ಎಂಬ ತಪ್ಪು ಅರ್ಥವಾದೀತು. ಹಾಗಾದರೆ ಶಾಸ್ತ್ರವು ಹೇಳುವದಾದರೂ ಏನನ್ನು? ಅದರ ಪ್ರತಿಪಾದನೆಯು–ಎಂದರೆ ತಾತ್ಪರ್ಯವು ಸುಷುಪ್ತಿಯ ವಿಷಯದಲ್ಲಿಯೊ? ಬ್ರಹ್ಮದ ವಿಷಯದಲ್ಲಿಯೊ? ಎಂದು ಯಾರಾದರೂ ಕೇಳಬಹುದು. ಇದಕ್ಕೆ ಉತ್ತರವೇನೆಂದರೆ: ಶ್ರುತಿಯು ಎಂದಾದರೂ ಲೋಕಸಿದ್ಧವಾದದ್ದನ್ನೇ ಹೇಳಲು ಹೊರಟೀತೆ? ಮಾನವನಿಗೆ ಬರುವ ಗಾಢನಿದ್ರೆಯನ್ನು ಅಪರೂಪವೋ–ಎಂಬಂತೆ ತಿಳಿಸಲು ಶ್ರುತಿಯು ಬೇಕೆ? ಎಂದಿಗೂ ಬೇಕಿಲ್ಲ. ಗಾಢನಿದ್ರೆಯಲ್ಲಿ 'ಏನೂ ಕಾಣುವದಿಲ್ಲ' ಎಂದು ಶ್ರುತಿಯೇಕೆ ಹೇಳಬೇಕು? ಇದು ಎಲ್ಲರಿಗೂ ತಿಳಿದಿರುವ ವಿಚಾರ. ಆದ್ದರಿಂದ ನಮಗೆ ಗೊತ್ತಿಲ್ಲದ ಅಪೂರ್ವವಾದ ವಿಷಯವನ್ನು ಹೇಳಿದರೆ ಮಾತ್ರವೇ ಶ್ರುತಿಯು ಪ್ರಮಾಣವಾಗುವದು. ಶ್ರುತಿಯು ಅಂಥ ಹೊಸ ವಿಷಯವೊಂದನ್ನು ತಾತ್ಪರ್ಯದಿಂದ ಹೇಳಲು ಈಗ ಹೊರಟಿದೆ. ಅದೇನೆಂದರೆ: "ಪ್ರತಿಯೊಬ್ಬ ಜೀವನೂ ತನ್ನ ಗಾಢನಿದ್ರೆಯಲ್ಲಿ ಸದ್ಬ್ರಹ್ಮದಲ್ಲಿ ಒಂದಾಗಿರುತ್ತಾನೆ." ಎಂಬಿದೇ ಈ ಹೊಸವಿಷಯವು. ಇದು ಲೋಕದಲ್ಲಿ ಯಾರಿಗೂ ತಿಳಿದಿರುವದಿಲ್ಲ. ಜನರೆಲ್ಲರೂ ಸುಷುಪ್ತಿಯನ್ನು ಒಂದು ತಾಮಸಸ್ಥಿತಿಯೆಂದೇ ಭಾವಿಸಿದ್ದಾರಲ್ಲವೆ? ಹೀಗೆ ಅಜ್ಞರು ಭಾವಿಸಿರುವದನ್ನು ಸರಿಯಲ್ಲವೆಂದೂ **ಸುಷುಪ್ತಿಯಲ್ಲಿ ಜೀವರುಗಳು ಸದ್ಬ್ರಹ್ಮದಲ್ಲಿ ಒಂದಾಗಿರುವರೆಂದೂ**–ಅಪೂರ್ವವಾದ ವಿಚಾರವನ್ನು ಶ್ರುತಿಯು–ಈಗ ತಿಳಿಸಿಕೊಟ್ಟು ನಮ್ಮನ್ನೆಲ್ಲ ಉದ್ಧಾರಮಾಡಿರುತ್ತದೆ. ಈ ವಿಚಾರವನ್ನು ಸುಲಭಗೊಳಿಸುವದಕ್ಕಾಗಿಯೇ ಉದ್ದಾಲಕ–ಶ್ವೇತಕೇತುಗಳ ಸಂವಾದರೂಪವನ್ನು ಉಪನಿಷತ್ತು ಧರಿಸಿರುತ್ತದೆ.

ಹೀಗೆ ಶ್ರುತಿಯು ಸುಷುಪ್ತಿಯ ಅನುಭವದ ವಿಚಾರದಲ್ಲಿ ನಮ್ಮ ಕಣ್ಣನ್ನು ತೆರೆಯಿಸಿದ್ದರೂ ಅನೇಕ ಜಿಜ್ಞಾಸುಗಳಿಗೂ ಇನ್ನೂ ಹಲವು ಬಗೆಯ ಸಂಶಯಗಳು ಕಾಡುತ್ತಿರಬಹುದು. ಅಂಥ ಸಂಶಯಗಳನ್ನು ಇನ್ನು ಮುಂದಿನ ವಿಚಾರಸರಣಿಯಲ್ಲಿ ಪರಿಹರಿಸಲಾಗುವದು. ಮುಖ್ಯವಾಗಿ ಸುಷುಪ್ತಿಯು ಅದ್ವೈತಾವಸ್ಥೆಯೆಂದು ನಮಗೆ ಕಂಡುಬಂದಿದ್ದರೂ ಅದು ಅನಿತ್ಯವಾಗಿರುವದರಿಂದ ಅಲ್ಲಿಂದ ಎದ್ದು ಬಂದದ್ದು ಹೇಗೆ? ಎಂಬಿದು ಒಂದು ಸಂಶಯವಾಗಿದೆ. ಇದನ್ನು ಶ್ರುತಿಯಲ್ಲಿಯೇ ದೃಷ್ಟಾಂತಪೂರ್ವಕವಾಗಿ ಮುಂದೆ ಪರಿಹರಿಸಲಾಗಿದೆ. ಜೀವನು ಹೊಂದುವ ವಿಶ್ರಾಂತಿಗೆ ಉದಾಹರಣೆಯನ್ನು ಇನ್ನು ಮುಂದೆ ವಿಚಾರಿಸೋಣ.

-----

## ಸುಷುಪ್ತಿಯಲ್ಲಿ ಪರಮಾತ್ಮಪ್ರಾಪ್ತಿಗೆ ದೃಷ್ಟಾಂತ

ಓಮ್॥ ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧೋ ದಿಶಂ ದಿಶಂ ಪತಿತ್ವಾ ಅನ್ಯತ್ರಾಯತನಮಲಬ್ಧ್ವಾ ಬಂಧನಮೇವ ಉಪಶ್ರಯತೇ ಏವಮೇವ ಖಲು ಸೋಮ್ಯ ತನ್ಮನಃ .....ಪ್ರಾಣಮೇವೋಪಶ್ರಯತೇ ಪ್ರಾಣಬನ್ಧನಂ ಹಿ ಸೋಮ್ಯ ಮನಃ॥ 6–8–2

ಭಾವಾರ್ಥ:– ಅದು ಹೇಗೆಂದರೆ : ಹಕ್ಕಿಯು ದಾರದಿಂದ ಕಟ್ಟಲ್ಪಟ್ಟು ದಿಕ್ಕುದಿಕ್ಕಿಗೆ ಹಾರಾಡಿ ಮತ್ತೊಂದೆಡೆಯಲ್ಲಿ ಇಂಬನ್ನು ಪಡೆಯದೆ ಕಟ್ಟಿದ ಸ್ಥಲವನ್ನೇ ಆಶ್ರಯಿಸುವದೋ ಹಾಗೆಯೇ ಈ ಮನಸ್ಸು ಕೂಡ ಪ್ರಾಣವನ್ನೇ ಆಶ್ರಯಿಸುತ್ತದೆ. ಸೋಮ್ಯನೆ, ಮನಸ್ಸು ಪ್ರಾಣಬಂಧನವಲ್ಲವೆ?

(ಕಾಲಿಗೆ ದಾರವನ್ನು ಕಟ್ಟಿ ದಾರದ ತುದಿಯನ್ನು ಒಂದು ಗೂಟಕ್ಕೆ ಬಿಗಿದಿದ್ದರೆ, ಅಂಥ ಹಕ್ಕಿಯು ಹಾರಾಡಿ ಸೋತು ವಿಶ್ರಾಂತಿಗಾಗಿ ಗೂಟವನ್ನೇ ಆಶ್ರಯಿಸುವಂತೆ ಮನ ಉಪಾಧಿಕನಾದ ಜೀವನೂ ಆಯಾಸಪರಿಹಾರಕ್ಕಾಗಿ ಪ್ರಾಣನೆಂಬ ಪರಮೇಶ್ವರನನ್ನೇ ಬಂದು ಸೇರುವನು–ಎಂದಭಿಪ್ರಾಯ.)

## 42. ಜೀವನಿಗೆ ಪರಮಾತ್ಮನೇ ಆಶ್ರಯ

ಈವರೆಗೆ ಶ್ರುತಿಯು ಅಪೂರ್ವವಾದ ವಿಷಯವನ್ನೇ ತಿಳಿಸುತ್ತದೆ–ಎಂದು ಜ್ಞಾಪಕ ಮಾಡಿಕೊಟ್ಟು ಸ್ವಪಿತಿ–ಎಂಬಲ್ಲಿ ಜೀವನು ಸುಷುಪ್ತಿಯಲ್ಲಿ ಪರಮಾತ್ಮನಲ್ಲಿ ಒಂದಾಗಿರುತ್ತಾನೆಂಬ ತತ್ತ್ವವನ್ನು ವೇದವು ತಿಳಿಸಿರುವದನ್ನು ಮನಗಾಣಿಸಿಕೊಡಲಾಗಿದೆ. ಈ ರೀತಿಯಾದ ಏಕತ್ವಪ್ರಾಪ್ತಿಗೆ ಲೌಕಿಕೋದಾಹರಣೆಯನ್ನು ಕೊಟ್ಟು ಜಿಜ್ಞಾಸುವನ್ನು ಅನುಗ್ರಹಿಸಲು ಇನ್ನುಮುಂದೆ ಶ್ರುತಿಯು ಹೊರಟಿರುತ್ತದೆ. ಯಾವದೇ ವಸ್ತುವಾಗಲಿ, ತಾನು ಲಯವಾಗುವಾಗ ತನ್ನ ಕಾರಣದಲ್ಲಿಯೇ ಒಂದಾಗಿಬಿಡುವದು ಲೋಕಪ್ರಸಿದ್ಧವಾಗಿದೆ. ಒಡವೆಯು ಚಿನ್ನವಾಗುವದು, ಮಡಕೆಯು ಮಣ್ಣಾಗುವದು–ಇದಕ್ಕೆ ಉದಾಹರಣೆಗಳು. ಹಾಗೆಯೇ ಸೃಷ್ಟಿಕಾಲಕ್ಕೆ ಸದ್ಬ್ರಹ್ಮದಿಂದ ಜೀವರೂಪದಲ್ಲಿ ಹೊರಬಂದ ಜೀವಾತ್ಮನು–ಗುಳ್ಳೆಯು ತಾನು ಒಡೆದುಕೊಂಡಾಗ ನೀರೇ ಆಗಿಬಿಡುವಂತೆ–ಲಯಕಾಲಕ್ಕೆ ಸದ್ ಬ್ರಹ್ಮವೇ ಆಗಿಬಿಡುವದು ನ್ಯಾಯವಾಗಿದೆ. ಅಲ್ಲದೆ ಜೀವಾತ್ಮನೂ ಚೇತನನಾಗಿದ್ದು ವ್ಯವಹಾರಮಾಡುವದರಿಂದ ಪರಮಚೇತನವಾದ ತನ್ನ ಸ್ವಸ್ವರೂಪವಾದ ಸತ್ತಿನಲ್ಲಿ ಒಂದಾಗುವದೆಂಬುದು ನಿಜವಾಗಿ ಜೀವಾತ್ಮನಿಗೆ ಹೆಚ್ಚಿನ ಮುಕ್ತಿಯೇ ಪರಮಾನಂದವೇ ಆಗಿರುತ್ತದೆ. ಮತ್ತು ಜೀವನಿಗೆ ಇಂಥ ಆನಂದಸ್ಥಿತಿಯು

ಸದ್ಬ್ರಹ್ಮದಲ್ಲಿ ಲಯವಾದ ಹೊರತು ಬೇರೊಂದು ಸ್ಥಳದಲ್ಲಿ ದೊರಕುವಂತೆಯೇ ಇಲ್ಲ. ಇದಕ್ಕೆ ಉದಾಹರಣೆಯನ್ನು ಶ್ರುತಿಯು ಈಗ ತಿಳಿಸುತ್ತಿದೆ.

ಚಿಕ್ಕಹುಡುಗರು ತಮಾಷೆಗಾಗಿ ಒಂದು ಜೀರಂಬೆಹುಳುವಿನ ಕಾಲಿಗೆ ದಾರವನ್ನು ಕಟ್ಟಿ ಆ ದಾರದ ತುದಿಯನ್ನು ಒಂದು ಗೂಟಕ್ಕೆ ಕಟ್ಟಿ ಹುಳುವು ಬೇರೆಬೇರೆ ದಿಕ್ಕುಗಳಿಗೆ ಹಾರುತ್ತಿರುವದನ್ನು ನೋಡುತ್ತಾ ಕಾಲಕಳೆಯುವದುಂಟು. ಉಪನಿಷತ್ತು ಈ ದೃಷ್ಟಾಂತವನ್ನೇ ತೆಗೆದುಕೊಂಡು ಜೀವನೆಂಬ ಜೀರಂಬೆಯು ಪ್ರಾಣನೆಂಬ ಹೆಸರಿನ ಪರಮಾತ್ಮನೆಂಬ ಗೂಟದಲ್ಲಿ ಕಟ್ಟಲ್ಪಟ್ಟವನಾಗಿ ಸಂಚಾರಮಾಡುತ್ತಾ ವಿಶ್ರಾಂತಿಗಾಗಿ ಗೂಟದಂತಿರುವ ಪ್ರಾಣನಲ್ಲಿಯೇ ಬಂದು ಸೇರುತ್ತಾನೆ–ಎಂದು ತಿಳಿಸಿರುತ್ತದೆ. ಇಲ್ಲಿ ನಿಜವೇನೆಂದರೆ: ಗೂಟದಂತೆ ಬ್ರಹ್ಮವೇನೂ ಅಚೇತನವಲ್ಲ. ದೃಷ್ಟಾಂತದಲ್ಲಿ ಎಲ್ಲ ವಿಷಯಗಳೂ ವಿವಕ್ಷಿತವಲ್ಲ. ಹಾಗಾದರೆ ಅದು ದೃಷ್ಟಾಂತವೇ ಆಗಲಾರದು. ಆದ್ದರಿಂದ ಹುಳುವು ವಿಶ್ರಾಂತಿಗಾಗಿ ತಾನು ಕಟ್ಟಲ್ಪಟ್ಟ ಜಾಗಕ್ಕೇ ಬರಲೇಬೇಕಾಗಿರುವಂತೆ–ಜೀವನು ತನ್ನ ಶರೀರೇಂದ್ರಿಯಕರಣಗಳು ಸೋತುಹೋಗಲಾಗಿ ಆಯಾಸಪರಿಹಾರಕ್ಕೆ ಸುಷುಪ್ತಿಯಲ್ಲಿ ಸದ್ಬ್ರಹ್ಮವೆಂಬ ತನ್ನ ಮೂಲಕ್ಕೇ ಬಂದು ಸೇರುತ್ತಾನೆ. ಆಗ ಅವನಿಗೆ ತಾನು ಏನಾದೆನೆಂಬುದು ಎಚ್ಚರದಲ್ಲಿ ಗೊತ್ತಾಗದೆ ಇರುತ್ತದೆ. ಏಕೆಂದರೆ ತಾನು ಜೀವನೆಂಬ ದ್ವೈತಭಾವನೆಯಾಗಲಿ ವ್ಯವಹಾರವಾಗಲಿ ಅಲ್ಲಿರುವದಿಲ್ಲ ಇಂಥ ಅನುಭವವನ್ನೇ ಅದ್ವೈತವೆನ್ನುವರು. ಇದು ಬ್ರಹ್ಮವಿದ್ಯೆಯಿಂದ ಆತ್ಯಂತಿಕವಾಗಿ ಉಂಟಾದರೆ ಮೋಕ್ಷವೆಂದೂ ತಾತ್ಕಾಲಿಕವಾಗಿ ಸ್ವಭಾವದಿಂದ ಆದರೆ ಸುಷುಪ್ತಿಯೆಂದೂ ವ್ಯವಹರಿಸಲ್ಪಡುತ್ತದೆ.

ಈಗ ಜೀವನಿಗೆ ಆಯಾಸವಾಗುವದೆಂದರೇನು? ವಿಚಾರಮಾಡೋಣ. ಜೀವಾತ್ಮನಲ್ಲಿ ಒಂದು ಮೂಲಭೂತವಾದ ತಪ್ಪು ಆಗಿರುತ್ತದೆ. ಅದು ಯಾವಾಗ, ಹೇಗೆ, ಎಂದು–ಆಯಿತು ಎಂಬುದು ಯಾರಿಗೂ ತಿಳಿಯದು. ಅದನ್ನು ವಿಚಾರಣೆಮಾಡಲು ಹೋದವರೆಲ್ಲ ಒಂದಲ್ಲ ಒಂದು ಬಗೆಯಲ್ಲಿ ಆ ತಪ್ಪಿನಲ್ಲಿಯೇ ಸಿಕ್ಕಿಕೊಂಡಿರುತ್ತಾರೆ. ಜೊತೆಗೆ ಅದೊಂದು ಮೂಲಭೂತವಾದ ತಪ್ಪೆಂದೇ ಯಾರಿಗೂ ಅನಿಸಿರುವದಿಲ್ಲ. ವ್ಯವಹಾರಪ್ರಪಂಚದಲ್ಲಿಯಂತೂ ಯಾರಿಗೂ ಅದರ ಪರಿವೆಯೇ ಇಲ್ಲ. ವ್ಯವಹಾರಕ್ಕೆ ಕಾಲಕ್ಕೆ ಅದು ಅಗತ್ಯವೂ ಆಗಿರುವದರಿಂದ ಯಾರು ತಾನೆ ಅದನ್ನು ತಪ್ಪೆಂದು ಗುರುತಿಸಲಾದೀತು? ಹಾಗಾದರೆ ಆ ತಪ್ಪು ಆಗಿದೆಯೆಂದು ಗೊತ್ತಾದದ್ದು ಹೇಗೆ? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವೇ ಜೀವಾತ್ಮನ ಆಯಾಸಸ್ಥಿತಿ. ಬ್ರಹ್ಮನಿಷ್ಠನಿಗೆ ಮಾತ್ರ ಈ ಒಗಟು ತಿಳಿದಿದೆ. ಜೀವಾತ್ಮಜ್ಞಾನಿಗಳಿಗೆ ಇದರ ಗುಟ್ಟು ತಿಳಿಯದೆ ಇದೆ. ಇದು ಹಾಗಿರಲಿ. ಆ ತಪ್ಪು ಏನು? ಎಂಬಿದನ್ನು ವಿಚಾರಮಾಡಿದರೆ ಪ್ರತಿಯೊಬ್ಬ

ಜೀವಾತ್ಮನೂ 'ನಾನು' 'ನನ್ನದು'–ಎಂದುಕೊಳ್ಳುತ್ತಿರುವದು. ಇದು ತಪ್ಪೇಕಾದೀತು? ಸರಿಯೇ ಅಲ್ಲವೆ? ಎಂದು ನಮಗೆ ಪ್ರಪ್ರಥಮವಾಗಿ ಕಂಡುಬರುತ್ತದೆ. ಕಳ್ಳತನವಾದಾಗ 'ಅಯ್ಯೋ ಪಾಪ'–ಎಂದು ಹೇಳುತ್ತಾ ಕಳ್ಳನನ್ನು ಹುಡುಕಲು ನಮಗೆ ಸಹಾಯಮಾಡಲು ಬಂದಿರುವವನೇ ಕಳ್ಳರ ಪೈಕಿ ಒಬ್ಬನಾಗಿರುವಂತೆ 'ನಾನು' (ಅಹಂ) ಎಂಬುದೂ ಅಂಥ ಅಪರಾಧಿಯೇ ಆಗಿರುತ್ತದೆ. ಅದರಲ್ಲಿ ಅಡಕವಾಗದೆ ಇರುವ ಪ್ರಪಂಚವೇ ಇಲ್ಲ. 'ಅ' ಕಾರದಿಂದ ಹಿಡಿದು 'ಹ' ಕಾರದವರೆಗಿನ ಸಮಸ್ತವೂ ಅದರಲ್ಲಿದೆ–ಎಂದು ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು ಹೇಳುತ್ತಿದ್ದರು. ಇರಲಿ. ಈ 'ಅಹಂ' ಎಂಬ ತಪ್ಪೇ ಜೀವನ ಬಂಡವಾಳವಾಗಿದೆ. ಇದರಿಂದ ಮುಂದಕ್ಕೆ 'ಮಮ' ಎಂಬ ಮತ್ತೊಂದು ತಪ್ಪು ಸೇರಿಕೊಂಡು ಪ್ರವೃತ್ತಿಯುಂಟಾಗಿ 'ದೇಹೇಂದ್ರಿಯಾದಿವಿಶಿಷ್ಟನಾದವನೇ ನಾನು' ಎಂದುಕೊಂಡಿರುವ ಜೀವನು ಪ್ರತಿದಿನವೂ, ಪ್ರತಿಜನ್ಮದಲ್ಲಿಯೂ, ಪ್ರತಿಯೊಂದು ಸೃಷ್ಟಿಯಲ್ಲಿಯೂ ಕರ್ಮಕರ್ತೃವಾಗಿ–ಭೋಕ್ತೃವಾಗಿ ಸಂಕಟಪಡುತ್ತಿರುವನು. ಇದೇ ಆಯಾಸದ ಪರಮಾವಧಿಯು. ಆದರೆ ಈ ಜೀವನ ಪ್ರಭುವಾದ ಹಾಗೂ ಅಂತರ್ಯಾಮಿಯೂ ಸರ್ವಜ್ಞನೂ ಸರ್ವಶಕ್ತನೂ ಸರ್ವೇಶ್ವರನೂ ಆದ ಪರಮಾತ್ಮನು ಇವನನ್ನು 'ನೀನು ಸಂಸಾರಿಯಲ್ಲ, ಕರ್ತೃವಲ್ಲ, ಭೋಕ್ತೃವಲ್ಲ, ನೀನು ಆನಂದಸ್ವರೂಪನಾದ ನಾನೇ'–ಎಂಬುದನ್ನು ಮನಗಾಣಿಸಿಕೊಡುವದಕ್ಕಾಗಿ ಪ್ರತಿದಿನವೂ ತನ್ನಲ್ಲೇ ಸ್ವಲ್ಪ ಕಾಲ ಅಡಕಮಾಡಿಟ್ಟುಕೊಂಡಂತೆ–ಏಕತ್ವಾನುಭವವನ್ನು ದಯಪಾಲಿಸುತ್ತಿರುವನು. ಅದೇ ಸುಷುಪ್ತಿಯು. ಆದರೆ ಈ ಜೀವನ ಅಹಂಕಾರವು ಎಷ್ಟು ಮಿತಿಮೀರಿದೆಯೆಂದರೆ: ಸದ್‌ಬ್ರಹ್ಮದಲ್ಲಿ ಒಂದಾಗಿದ್ದಾಗಲೂ ತಾನು ಬೇರೆಯಾಗಿಯೇ ಇದ್ದೆನೆಂದೇ ಎಚ್ಚರದಲ್ಲಿ ಹಟಹಿಡಿದಿರುವನು. ಶ್ರುತಿ ಮಾತೆಯು 'ಈ ಹಟವನ್ನು ಬಿಡು, ನೀನು ಬ್ರಹ್ಮವೇ; ನಿನ್ನಲ್ಲೇ ನೋಡಿಕೋ'–ಎಂದು ಕರುಣೆಯಿಂದ ಉಪದೇಶಿಸುತ್ತಿರುವಳು. ಇದನ್ನು ಕೇಳುವವರಾರು?

ಈಗ ಸುಷುಪ್ತಿಯಲ್ಲಿ ಮಾತ್ರವೇ ಜೀವನಿಗೆ ಆಯಾಸವು ಪರಿಹಾರವಾಗಿ ಆನಂದಪ್ರಾಪ್ತಿಯು ಏಕೆ ಆಗುತ್ತದೆ? ಎಂಬಿದನ್ನು ವಿಚಾರಿಸೋಣ. ನಿಜವಾಗಿ ನೋಡಿದರೆ ಚೆನ್ನಾಗಿ ನಿದ್ರೆಮಾಡಿ ಎದ್ದುಬಂದವನಿಗೆ ಆಯಾಸಪರಿಹಾರ, ಉತ್ಸಾಹ, ಚಟುವಟಿಕೆ, ಮಾನಸಿಕವಾಗಿ ಹೊಸತನ–ಇವುಗಳುಂಟಾಗುತ್ತಿರುವದು ಎಲ್ಲರ ಅನುಭವದಲ್ಲಿದೆ. ಎಲ್ಲರೂ ಪ್ರತಿದಿನವೂ ಏನೇ ವ್ಯವಹಾರಗಳಲ್ಲಿದ್ದರೂ ಸ್ವಲ್ಪ ಸಮಯವಾದರೂ ನಿದ್ರೆಯನ್ನು ಬಯಸುತ್ತಾರೆ. ರಾತ್ರೆ ಕೆಲಸಮಾಡುವವರು ಕೂಡ ಹಗಲಾದರೂ ನಿದ್ರೆಮಾಡಿಯೇ ತೀರುತ್ತಾರೆ. ಜನರಿಗೆ ತಿಳಿದೊ, ತಿಳಿಯದೆಯೊ, ನಿದ್ರೆಯು ಒಂದು ರೀತಿಯ ಅನಾಯಾಸವಾದ–ಆನಂದಸ್ಥಿತಿ ಎಂಬುದು ಸಾರ್ವತ್ರಿಕಾನುಭವಸಿದ್ಧವಾಗಿದೆ. ಹೀಗಿರುವಲ್ಲಿ ಈ ಆನಂದವನ್ನು ಬರವಣಿಗೆಯಿಂದ ತಿಳಿಸುವದೇನಿದೆ? ಆದರೂ ಆ

ಆನಂದದ ಕಡೆಗೆ ನಮ್ಮ ಲಕ್ಷ್ಯವನ್ನು ಹರಿಸುವದಕ್ಕಾಗಿ ಮುಂದುವರೆಯಬೇಕಾಗಿದೆ. ಪ್ರಕೃತ–ಜಗನ್ಮೂಲವಾದ ಸದ್ಬ್ರಹ್ಮವನ್ನೇ ಉಪನಿಷತ್ತುಗಳಲ್ಲಿ ವಿಜ್ಞಾನಾನಂದವು ಆಗಿದೆ–ಎಂದು ತಿಳಿಸಿದೆ. ಮತ್ತು ಆ ಬ್ರಹ್ಮವೇ ಎಲ್ಲರ ಆತ್ಮನೂ ಆಗಿದೆ–ಎಂಬ ತತ್ತ್ವವೇ ಸುಷುಪ್ತಿಯಲ್ಲಿ ಜೀವಾತ್ಮನು ಆಯಾಸಪರಿಹಾರದ ಮೂಲಕ ಆನಂದಪ್ರಾಪ್ತಿಯನ್ನು ಪಡೆಯುವದರ ಗುಟ್ಟಾಗಿದೆ. ವ್ಯವಹಾರದಲ್ಲಿ ಆನಂದ, ಸುಖ–ಎಂಬೀ ಶಬ್ದಗಳನ್ನು ನಾವು ಬಳಸುತ್ತೇವಾದರೂ ವಿಷಯೇಂದ್ರಿಯಗಳ ಸಂಪರ್ಕದಿಂದ ಲಭಿಸುವ ಸುಖಾಭಾಸವನ್ನೇ ಹಾಗೆ ಕರೆಯುತ್ತೇವೆ. ಆದರೆ–ಹೇಗೆ ಅಶ್ವತ್ಥಾಮನಿಗೆ ಆತನ ತಂದೆಯಾದ ದ್ರೋಣನು ರಾಜಗುರುವಾಗಿ ಹಸುಗಳನ್ನು ಪಡೆದ ಮೇಲೆ ದೊರಕಿದ ನಿಜವಾದ ಹಾಲನ್ನು ಕುಡಿಯುವದಕ್ಕೆ ಮುಂಚೆ ಅಕ್ಕಿಹಿಟ್ಟಿನ ನೀರೇ ಹಾಲೆನಿಸಿ ರುಚಿಯಾಗಿ ಕಂಡುಬಂದಿತ್ತೋ ಹಾಗೆ–ಸುಷುಪ್ತಿಯ ನಿಮಿತ್ತ ದೊರಕಿದ ಪರಮಾನಂದದ ರುಚಿಯು ವೈದಿಕತಿಳಿವಳಿಕೆಯ ಮೂಲಕ ನಮ್ಮದಾಗುವವರೆಗೂ ವಿಷಯಾನಂದ ವನ್ನೇ ನಿಜವಾದ ಆನಂದವೆಂದು ನಾವು ಭ್ರಮಿಸಿರುತ್ತೇವೆ. ಇರಲಿ. ನಾವು ಎಷ್ಟೇ ಹಟಹಿಡಿದರೂ ಸುಷುಪ್ತಿಯ ಅವಸ್ಥೆಯನ್ನಾಗಲಿ ಆಗ್ಗೆ ಸಂಭವಿಸುವ ಅದ್ವೈತಸ್ಥಿತಿ ಯನ್ನಾಗಲೀ ತಪ್ಪಿಸಿಕೊಳ್ಳಲಾಗುವದಿಲ್ಲ. ನಿದ್ರೆಯನ್ನೇ ಮಹಾಯೋಗಾದಿಸಾಧನಗಳಿಂದ ಗೆದ್ದಿದ್ದೇನೆ–ಎಂದು ಹೇಳುವವನು ಕೂಡ ಜೀವಮಾನದಲ್ಲಿ ಸ್ವಲ್ಪಕಾಲವಾದರೂ ನಿದ್ರೆಮಾಡಲೇಬೇಕಾಗುವದು. ಇನ್ನು ನಿರ್ವಿಕಲ್ಪಸಮಾಧಿಯಲ್ಲಿ ಕುಳಿತವರು ನಿದ್ರೆಯನ್ನು ಗೆದ್ದಿರುವರಲ್ಲವೆ? ಎಂದು ಕೇಳಬಹುದು. ನಿದ್ರೆಯನ್ನು ಗೆದ್ದರೇನು? ಅವರು ಅದ್ವೈತಸ್ಥಿತಿಯಲ್ಲಿರುವದನ್ನು ಅಲ್ಲಗಳೆಯಲಾದೀತೆ? ಒಂದೇ ಅದ್ವೈತಸ್ವರೂಪವೇ ಸುಷುಪ್ತಿ–ಸಮಾಧಿ–ಮೂರ್ಛೆಗಳಲ್ಲಿಯೂ ಇರುತ್ತದೆಯೆಂದು ಶ್ರೀಶಂಕರಾಚಾರ್ಯರು ಹೇಳಿರುವದನ್ನು ಕೇಳಿದ್ದೀರಷ್ಟೆ; ಆದ್ದರಿಂದ ಅವಸ್ಥೆಗಿಂತಲೂ ಅವಸ್ಥಾನುಭವವೇ ವಿಚಾರಣೀಯವಾಗಿರುವದರಿಂದ ನಮ್ಮ ಸ್ವರೂಪದ ಅರಿವಿಗೆ ಅವಸ್ಥೆಗಳು ದ್ವಾರಮಾತ್ರವೇ ಆಗಿರುತ್ತವೆ, ಹೀಗೆ ಅದ್ವಿತೀಯನಾಗಿರುವದೇ ಸುಷುಪ್ತಿಯಲ್ಲಿ ದೊರಕುವ ಆನಂದಕ್ಕೆ ಕಾರಣವಾಗಿರುತ್ತದೆ.

ಈಗ ಶ್ರುತಿಯು ಜಗನ್ಮೂಲವಾದ ಆನಂದವಸ್ತುವನ್ನು ಪ್ರಸ್ತಾಪಿಸಿ ಹೀಗೆನ್ನುತ್ತಿದೆ. "ಎಲೈ ಸೋಮ್ಯನೆ, ಜೀವರುಗಳೆಲ್ಲರೂ ಆನಂದದಿಂದ ಬಂದಿರುವದರಿಂದಲೇ ಆನಂದ ಮೂಲವನ್ನು ಪಡೆಯಲು ತವಕಿಸುತ್ತಿದ್ದಾರೆ; ನೀನು ಅನ್ನಮಯಶರೀರಿಯಾದ ಜೀವನಾಗಿರುವೆ. ನಿನ್ನ ಜೀವನಾಧಾರವಾದ ಅನ್ನಕ್ಕೇನು ಕಾರಣ? ಅದಕ್ಕೇನು ಕಾರಣ? ಎಂದು ಹುಡುಕುವವನಾಗು; ಕಡೆಯಲ್ಲಿ ಸತ್ತೇ ಎಲ್ಲಕ್ಕೂ ಕಾರಣವೆಂದು ತಿಳಿಯಲಿದೆ. ಏಕೆಂದರೆ ಮಗು, ಈ ಪ್ರಜೆಗಳೆಲ್ಲರೂ ಸತ್ತಿನಿಂದಲೇ ಬಂದಿರುವರು; ಅದರಲ್ಲಿಯೇ ಪ್ರತಿಷ್ಠೆ (ನೆಲೆ)ಯುಳ್ಳವರಾಗಿರುವರು" ಹೀಗೆ ಉಪದೇಶಮಾಡಿದ ಅನಂತರ

ಜಗನ್ಮೂಲವನ್ನು ಆತ್ಮನೆಂದೇ ಮತ್ತೊಮ್ಮೆ ಪ್ರಸ್ತಾಪಿಸಿ ಹೀಗೆಂದಿದೆ: ''ಅದು ಸತ್ಯವು; ಅದು ಆತ್ಮನು; ಅದೇ ನೀನು'' (ತತ್ತ್ವಮಸಿ) ಎಂಬುದು ಶ್ರುತಿಯ ಉಪಸಂಹಾರವಾಗಿದೆ.

ವಾಚಕರೆ, ಕಾರ್ಯಕಾರಣಪ್ರಕ್ರಿಯೆಯನ್ನೂ ಅವಸ್ಥಾತ್ರಯಪ್ರಕ್ರಿಯೆಯನ್ನೂ ಅಧ್ಯಾರೋಪಮಾಡಿಕೊಂಡು ಶ್ರುತಿಯು ಉಪದೇಶಿಸಿರುವ ಪ್ರತ್ಯಗಾತ್ಮಬೋಧವನ್ನು ಮನದಂದುಕೊಳ್ಳಿರಿ. ಶ್ರುತಿಯು ಉದ್ದಾಲಕಶ್ವೇತಕೇತುಗಳ ಸಂವಾದವನ್ನು ಮುಂದುವರೆಸಿ ಇನ್ನೂ ಎಂಟುಬಾರಿ ''ತತ್ತ್ವಮಸಿ'' ಎಂದು ಮುಂದೆ ಉಪದೇಶಿಸಲಿದೆ. ನಿಜವನ್ನು ಮನಗಾಣಿಸುವದಕ್ಕಾಗಿ ಪುನರುಕ್ತಿಯನ್ನು ಕೂಡ ಲೆಕ್ಕಿಸದೆ ಶ್ರುತಿಯು ಆದರದಿಂದ ಬ್ರಹ್ಮೋಪದೇಶವನ್ನು ಕೈಗೊಂಡಿದೆ. ಅದು ಮೊದಲು ಕಾರ್ಯಕಾರಣಪ್ರಕ್ರಿಯೆಯನ್ನು ಅಂಗೀಕರಿಸಿದ್ದೇಕೆಂದರೆ: ನಿತ್ಯಶುದ್ಧಬುದ್ಧಮುಕ್ತಸ್ವಭಾವವಾದ ಬ್ರಹ್ಮವನ್ನು ತಿಳಿಯಬೇಕಾದರೆ ಜಗತ್ತನ್ನು ನೆಪಮಾಡಿಕೊಂಡು ಅದಕ್ಕೆ ಮೂಲವನ್ನು ಹುಡುಕುವ ಮೂಲಕ ಬ್ರಹ್ಮಪ್ರತಿಪತ್ತಿಯನ್ನು ಜಿಜ್ಞಾಸುವಿಗೆ ಮಾಡಿಸೋಣವೆಂಬಿದೇ ಉದ್ದೇಶವಾಗಿದೆ. ಆದರೆ ಬ್ರಹ್ಮವನ್ನರಿತುಕೊಳ್ಳಬೇಕಾದ ಜಿಜ್ಞಾಸುವು ಅದನ್ನು ಪರೋಕ್ಷವಾಗಿ ಅರಿತುಕೊಂಡುಬಿಟ್ಟರೆ ತಪ್ಪಾಗಿಬಿಡುವದು. ಹಾಗಾಗದಿರಲೆಂದು ಬ್ರಹ್ಮವನ್ನು ಆತ್ಮನೆಂದೇ ತಿಳಿಸಿದ್ದಾಯಿತು. ಆತ್ಮಾನುಭವವು ಪ್ರಸಿದ್ಧವಾದರೂ ಅಜ್ಞಾನಿಗಳ ದೃಷ್ಟಿಯಿಂದ ಜೀವಾತ್ಮಾನುಭವವೇ ಹೆಚ್ಚು ಪ್ರಚುರವಾಗಿರುವದರಿಂದ ದ್ವೈತದಲ್ಲಿ ತಿಳಿವಳಿಕೆಯು ನಿಂತುಬಿಟ್ಟರೆ ಮತ್ತೆ ಅನರ್ಥವೇ ಆಗಿಬಿಡುವದು. ಅದಕ್ಕಾಗಿ ಸುಷುಪ್ತಿಯನ್ನುದಾಹರಿಸಿ ಅಲ್ಲಿರುವಂತೆ ಅದ್ವೈತಾನುಭವವನ್ನು ಮನಗಾಣಿಸಿಕೊಟ್ಟು ''ಅದೇ ಆತ್ಮನು ಅದೇ ಸತ್ಯವು ಅದೇ ನೀನು'' ಎಂದು ತಿಳಿಸಬೇಕಾಗಿ ಬಂತು. ಆದರೂ ಜಿಜ್ಞಾಸುವಿಗೆ ''ಸುಷುಪ್ತಿಯಲ್ಲಿನಾನು ಬ್ರಹ್ಮವನ್ನೇ ಸೇರಿದ್ದಲ್ಲಿಹಾಗೆಂತ ಏಕೆ ಗೊತ್ತಾಗುವದಿಲ್ಲ?'' ಎಂದು ಏಳಬಹುದಾದ ಸಂಶಯಕ್ಕೆ ಮುಂದೆ ಉತ್ತರಿಸಲಾಗುವದು.

---

## ಸತ್ಸಂಪತ್ತಿಯಲ್ಲಿ ಏಕತ್ವ

**ಓಮ್ ॥ತೇ ಯಥಾ ತತ್ರ ನ ವಿವೇಕಂ ಲಭನ್ತೇ ......ಏವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹ ಇತಿ॥ 6–9–2.**

ಭಾವಾರ್ಥ:– ಅವು ಹೇಗೆ ಅಲ್ಲಿ 'ನಾನು ಆ ವೃಕ್ಷದ ರಸವಾಗಿರುವೆನು, ನಾನು ಆ ವೃಕ್ಷದ ರಸವಾಗಿರುವೆನು' ಎಂದು ವಿವೇಕವನ್ನು ಹೊಂದುವದಿಲ್ಲವೋ ಹಾಗೆಯೇ ಸೋಮ್ಯನೇ, ಈ ಸರ್ವಪ್ರಜೆಗಳೂ ಸತ್ತಿನಲ್ಲಿ ಸಂಪನ್ನರಾಗಿ 'ಸತ್ತಿನಲ್ಲಿ ಸಂಪನ್ನರಾಗಿರುವೆವು' ಎಂದು ಅರಿಯದೆ ಇರುವರು.

(ಪ್ರತಿಯೊಬ್ಬ ಜೀವನೂ ತನ್ನ ಸುಷುಪ್ತಿಯಲ್ಲಿ ಪರಮಾತ್ಮನಲ್ಲಿಯೇ ಒಂದಾಗಿರುವನೆಂಬುದು ಶ್ರುತಿಯು ತಿಳಿಸುತ್ತಿರುವ ಹೊಸ ವಿಷಯವಾಗಿದೆ. ಆದರೆ ಲೌಕಿಕದೃಷ್ಟಿಯ ಜನರಿಗೆ ಹೀಗೆ ಸತ್ಸಂಪತ್ತಿಯಾಗಿರುವದು ಗೊತ್ತಾಗದೆ ಇರುವದಕ್ಕೆ ಅಲ್ಲಿ ದ್ವೈತವಿಲ್ಲದೆ ಇರುವದೇ ಕಾರಣವಾಗಿದೆ–ಎಂದಭಿಪ್ರಾಯ.)

## 43. ಸುಷುಪ್ತಿಯಲ್ಲಾಗಿರುವ ಏಕತ್ವ

ಉಪನಿಷತ್ಸಂದೇಶದಂತೆ ಜೀವರುಗಳೆಲ್ಲರ ಸಮೇತವಾದ ಇಡಿಯ ಜಗತ್ತು ಬ್ರಹ್ಮದಿಂದಲೇ ಹೊರಬಂದಿರುತ್ತದೆ. ಬ್ರಹ್ಮವನ್ನೇ ಆಶ್ರಯಿಸಿಕೊಂಡು ಜೀವಿಸಿರುತ್ತದೆ. ಕಡೆಗೆ ಬ್ರಹ್ಮದಲ್ಲಿಯೇ ಒಂದಾಗಿಬಿಡುತ್ತದೆ– ಎಂಬಿದು ತತ್ತ್ವವಾಗಿರುತ್ತದೆ. ಮಾನವನೂ ಜಗತ್ಸೃಷ್ಟಿಯಲ್ಲಿ ಒಂದು ಪ್ರಾಣಿಮಾತ್ರವಾದರೂ ಇವನಿಗೆ ಇರುವ ವಿಶೇಷಾನುಗ್ರಹಗಳ ನಿಮಿತ್ತವಾಗಿ ಈತನು ಬಂಧಮೋಕ್ಷಶಾಸ್ತ್ರಕ್ಕೆ ಅಧಿಕಾರಿಯಾಗಿರುತ್ತಾನೆ. ಅರ್ಥಿತ್ವಾದಿಗಳೇ ಮಾನವನಿಗೆ ದೈವದತ್ತವಾದ ಅನುಕೂಲಗಳು. ಉಳಿದ ಪ್ರಾಣಿಗಳಿಗೆ ಈ ಅನುಕೂಲವಿಲ್ಲ. ಹಾಗಾದರೆ ಪ್ರಾಣಿಗಳಲ್ಲಿಯೂ ಪರಮಾತ್ಮನೇ ಇದ್ದಾನೆಂಬುದು ಹೇಗೆ ಸರಿ? ಇದ್ದ ಮೇಲೆ ಅವುಗಳು ಕೂಡ ಆತ್ಮಜ್ಞಾನದಿಂದ ಮುಕ್ತಿಯನ್ನು ಹೊಂದಬೇಕಲ್ಲವೆ? ಎಂದರೆ ನಿಜ. ಬ್ರಹ್ಮವು ಎಲ್ಲೆಲ್ಲೂ ವ್ಯಾಪಿಸಿಕೊಂಡಿದ್ದು ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿರುವದೇನೂ ಹುಸಿಯಲ್ಲ. ಎಲ್ಲಾ ಜೀವಿಗಳೂ ಮುಕ್ತ್ಯರ್ಹರೆಂಬುದೂ ಒಪ್ಪತಕ್ಕ ಮಾತೇ ಸರಿ. ಆದರೂ ಮನುಷ್ಯನೊಡನೆ ಹೋಲಿಸಿದರೆ ಪ್ರಾಣಿಜನ್ಮಗಳಲ್ಲಿ ಮುಕ್ತಿಪ್ರಾಪ್ತಿಗೆ ಪ್ರಯತ್ನವು ತೀರ ಅಪರೂಪವಾಗಿದೆ. ''ಗಜೇಂದ್ರ''ನಂಥ ಪ್ರಾಣಿಗಳ ಮಟ್ಟಿಗೆ ಅಸಾಧಾರಣವೆಂದು ತಿಳಿಯಬೇಕು ಹಾಗೆಯೇ ಜಟಾಯು, ಸುಗ್ರೀವ, ಆಂಜನೇಯ– ಮುಂತಾದವರಿರ ಬಹುದು. ಆದರೆ ಮನುಷ್ಯತ್ವವನ್ನು ಲೆಕ್ಕಕ್ಕೆ ತೆಗೆದುಕೊಂಡಾಗ ಪ್ರಾಣಿಜನ್ಮಗಳು ಸರ್ವಸಾಧಾರಣವಾಗಿ ''ಭೋಗಜನ್ಮ''ಗಳೆನಿಸುವವು. ಅವು ಕೂಡ ಬೇರೊಂದು ಜನ್ಮದಲ್ಲಿ ಪುಣ್ಯವಶದಿಂದ ಮನುಷ್ಯರಾಗಿ ಹುಟ್ಟಿ ಬಾಳನ್ನು ಸಾರ್ಥಕಪಡಿಸಿಕೊಳ್ಳಲು ಸಾಧ್ಯವಾಗಬಹುದು. ಇರಲಿ. ಈಗ ಮನುಷ್ಯನು ಬಂಧಮೋಕ್ಷಶಾಸ್ತ್ರಕ್ಕೆ ಮುಖ್ಯ ಅಧಿ ಕಾರಿಯೆನಿಸಿರುವದರಿಂದ ಇವನಿಗೆ ಮುಕ್ತಿಯೆಂದರೆ ಸ್ವಸ್ವರೂಪಪ್ರಾಪ್ತಿಯೆಂದು ಏರ್ಪಡುತ್ತದೆ. ಬಂಧವೆಂದರೆ ಆ ಸ್ವರೂಪದಿಂದ ಜಾರಿದಂತೆ ಕಂಡುಬರುವ ಆಗಂತುಕಸ್ಥಿತಿಯೆಂದೂ ಗೊತ್ತಾಗುತ್ತದೆ. ಈ ಹಿನ್ನೆಲೆಯಲ್ಲೇ ಶಾಸ್ತ್ರವು ಮಾನವನಿಗೆ ವಿದ್ಯೆಯಿಂದ ಸ್ವಸ್ವರೂಪಪ್ರಾಪ್ತಿಯನ್ನು ನೆನಪುಮಾಡಿಕೊಡುತ್ತಿದೆ. ಅದಕ್ಕೆ ಮುಂಚೆ ಅವಿದ್ಯಾದೆಶೆಯಲ್ಲಿಯೂ ತಾನು ಪರಬ್ರಹ್ಮವೇ ಎಂಬುದು ಎಷ್ಟರಮಟ್ಟಿಗೆ ನಂಬಲು ಯೋಗ್ಯನೆಂಬುದನ್ನು ಸಾರ್ವತ್ರಿಕಾನುಭವವಾದ 'ಸುಷುಪ್ತಿ' ಯ ಉದಾಹರಣೆಯಿಂದ

ದೃಢಪಡಿಸುತ್ತದೆ. ಈಗ ಜಾಣನಾದ ಮಾನವನು ಈ ಉಪದೇಶದ ಕಡೆಗೆ ಕಣ್ಣುತೆರೆದು ನೋಡಬೇಕಾಗಿದೆ.

ಸುಷುಪ್ತಿಯು ಜೀವರುಗಳೆಲ್ಲರಿಗೂ ಸಮಾನವಾಗಿ ಸಂಭವಿಸುವ ಅವಸ್ಥೆಯಾಗಿದೆ. ಎಂಥ ಕ್ರೂರ ಪ್ರಾಣಿಯಾಗಲಿ, ಅದು ನಿದ್ರೆಮಾಡುತ್ತಿರುವಾಗ ತನ್ನ ಎಲ್ಲಾ ಗುಣಗಳಿಂದಲೂ ವಿಮುಕ್ತವಾಗಿರುತ್ತದೆ. ಆ ಕಾಲಕ್ಕೆ ಅದು ಎಚ್ಚರದ ತನ್ನನ್ನು ತಾನು ಮರೆತಿರುತ್ತದೆ. ಹಾಗೆಯೇ ಪ್ರತಿಯೊಬ್ಬ ಮಾನವನೂ–ಅವನು ಗಂಡಸಾಗಲಿ, ಹೆಂಗಸಾಗಲಿ–ವಿದ್ಯಾವಂತನಾಗಲಿ–ಅವಿದ್ಯಾವಂತನಾಗಲಿ, ಬಡವನಾಗಲಿ–ಧನಿಕನಾಗಲಿ, ರೋಗಿಷ್ಠನಾಗಲಿ–ನಿರೋಗಿಯಾಗಲಿ, ಪಾಪಿಯಾಗಲಿ–ಪುಣ್ಯವಂತನಾಗಲಿ, ಬಂದಿಖಾನೆಯಲ್ಲಿರುವವನಾಗಲಿ–ಮನೆಯಲ್ಲಿರುವವನಾಗಲಿ ತನ್ನ ಸುಷುಪ್ತಿಯಲ್ಲಿ 'ತಾನು' ಎನಿಸಿಕೊಂಡಿರಬಲ್ಲನೇ ಹೊರತು ವಿಶೇಷೋಪಾಧಿಗಳೇನನ್ನೂ ಉಳಿಸಿ ಕೊಂಡಿರುವದಿಲ್ಲ. ಇದೇಕೆಂಬುದು ವಿಚಾರಣೀಯವಾಗಿರುತ್ತದೆ. ಸ್ವಲ್ಪ ಚೆನ್ನಾಗಿ ಆಲೋಚಿಸಿ ಅನುಭವಾನುಗುಣವಾಗಿ ಶಾಸ್ತ್ರಾಚಾರ್ಯರು ತೋರಿಸಿಕೊಡುವ ವಿಚಾರಮಾರ್ಗದಂತೆ ಒಳಹೊಕ್ಕು ನೋಡಿದರೆ ಈ ಉಪಾಧಿಗಳು ಆಗಂತುಕವಾಗಿದ್ದು ನಮ್ಮ ಸ್ವರೂಪವಲ್ಲವಾಗಿರುವದರಿಂದಲೇ ಅವು ನಾವು ನಾವೇ ಆಗಿರುವಾಗ ತೋರಿಕೊಳ್ಳುವದಿಲ್ಲ. ಮತ್ತೇನೆಂದರೆ ದ್ವೈತಸಂಪರ್ಕದಿಂದಲೇ ಹಾಗೆ ನಮ್ಮ ಸ್ವರೂಪದೊಡನೆ ಕಲೆಬೆರೆತು ಕೆಲವೇ ಗೊತ್ತಾದ ಅವಸ್ಥೆಗಳಲ್ಲಿ ಅವು ತೋರಿ ಅನಂತರ ಕಣ್ಮರೆಯಾಗಿಬಿಡುವವೆಂದು ತಿಳಿದುಬರುತ್ತದೆ. ಇದನ್ನು ಸುಷುಪ್ತ್ಯನುಭವದ ಬಲದಿಂದ ಎಲ್ಲರೂ ಗಟ್ಟಿಮಾಡಿಕೊಳ್ಳಬಹುದು. ಈ ಅನುಭವಕ್ಕಾಗಿ ಯಾರೂ ಪರದಾಡಬೇಕಾಗಿಲ್ಲ, ಯೋಗಸಮಾಧಿಗಳನ್ನಾಗಲಿ, ಸಿದ್ಧಿ–ಮಹಾತ್ಮ್ಯಗಳನ್ನಾಗಲಿ–ಶರಣುಹೋಗಬೇಕಾಗಿಲ್ಲ, ಯೋಗಸಮಾಧಿಗಳನ್ನಾಗಲಿ, ತೀರಸ್ವಾಭಾವಿಕವಾದ ಈ ಸುಷುಪ್ತ್ಯನುಭವವು ಸಾರ್ವತ್ರಿಕವಾಗಿ ಆರೋಗ್ಯವಂತರಾದ ಎಲ್ಲರಿಗೂ ಪ್ರತಿದಿನವೂ ಸಂಭವಿಸುತ್ತದೆ; ಮತ್ತು ಆಗ ನಾವು ಸರ್ವಸಂಸಾರಧರ್ಮವಿಮುಕ್ತರಾಗಿಬಿಟ್ಟಿರುತ್ತೇವೆ. ಅಲ್ಲಿ ಯಾರೂ ನಮ್ಮನ್ನು ಹೆದರಿಸುವವರಿಲ್ಲ, ಹೊಗಳುವವರಿಲ್ಲ; ಕಾಡಿಬೇಡುವವರಿಲ್ಲ; ಏನೊಂದೂ ದುಃಖಲೇಶವಿಲ್ಲದ ಸುಖಸ್ವರೂಪವೇ ನಾವಾಗಿ ನಮ್ಮಲ್ಲೇ ಇದ್ದುಕೊಂಡು ಬಿಟ್ಟಿರುವೆವು. ನಾವಿಲ್ಲವಾದೆವೆಂಬ ಭಯವೂ ಅಲ್ಲಿರುವದಿಲ್ಲ. ಹಾಗಿದ್ದಿದ್ದರೆ ಯಾರೂ ಸುಷುಪ್ತಿಯನ್ನೇ ಬಯಸುತ್ತಿರಲಿಲ್ಲ. ಆದರೆ ಪ್ರತಿಯೊಬ್ಬನೂ ಪ್ರತಿದಿನವೂ ಯಾವಾಗ ಸುಷುಪ್ತಿಗೆ ಹೋದೇವು? ಎಂದೇ ಬಯಸುತ್ತಿರುತ್ತಾರೆ. ಇದು ಏಕೆ? ಅಲ್ಲೇನಿದೆ? ಎಂಬಿದನ್ನು ಈಗ ತಿಳಿಯೋಣ.

ಉದ್ದಾಲಕಶ್ವೇತಕೇತುಗಳ ಸಂವಾದರೂಪವಾದ ಶ್ರುತಿಯು ಪ್ರಶ್ನೋತ್ತರ ರೂಪದಿಂದ ವಿಷಯವನ್ನು ಹಗುರಮಾಡಿ ತಿಳಿಸುತ್ತಿದೆ. ಪ್ರಕೃತದಲ್ಲಿ ಮಗನು ತಂದೆಯನ್ನು ಹೀಗೆ ಕೇಳಿದ್ದಾನೆ : ''ಪೂಜ್ಯರೆ, ತಾವು ತಿಳಿಸುವಂತೆ ನಾವೆಲ್ಲರೂ ಸುಷುಪ್ತಿಯಲ್ಲಿ ಬ್ರಹ್ಮದಲ್ಲೇ ಒಂದಾಗುವದು ನಿಜವಾದರೆ, ಹಾಗೆ ಬ್ರಹ್ಮದಲ್ಲಿ ಒಂದಾಗಿದ್ದೆವು–ಎಂದು ನಮಗೇಕೆ ತಿಳಿಯುವದಿಲ್ಲ?'' ಇದು ಪ್ರಶ್ನೆಯ ಸಾರವಾಗಿದೆ. ಮತ್ತು ಈಗಿನ ಕಾಲಕ್ಕೂ ನಮಗೂ ಈ ಪ್ರಶ್ನೆಯು ಕಾಡುತ್ತಲೇ ಇದೆ. ಏಕೆಂದರೆ ನಿದ್ರೆಯಿಂದ ಎದ್ದು ಬಂದ ಯಾರಿಗೂ 'ನಾನು ಬ್ರಹ್ಮದಿಂದ ಹೊರಬಂದೆನು'–ಎಂದಾಗಲಿ, ನಿದ್ರೆಮಾಡುತ್ತಿದ್ದಾಗ 'ಬ್ರಹ್ಮದಲ್ಲಿ ಸೇರಿಹೋಗಿದ್ದೆನು'– ಎಂಬ ನೆನಪಾಗಲಿ ಉಳಿದಿರುವುದಿಲ್ಲ. ಹೀಗೆ ಎಚ್ಚರಪ್ರಧಾನವಾಗಿ ನಾವು ಕೇಳುತ್ತಿರುವ ಪ್ರಶ್ನೆಗೆ ನಿಜವಾಗಿಯೂ ಉತ್ತರವು ಅದೇ ಪ್ರಶ್ನೆಯಲ್ಲೇ ಅಡಕವಾಗಿದೆ. ಅದೇನೆಂದರೆ: **ಸತ್ತಿನಲ್ಲಿ ಒಂದಾಗಿರುವದೇ ವಿಶೇಷವಿಜ್ಞಾನವಿಲ್ಲದುದಕ್ಕೆ ನಿಮಿತ್ತವಾಗಿದೆ.** ಇದು ಯುಕ್ತಿಯುಕ್ತವೂ ಆಗಿದೆ. ಹೇಗೆಂದರೆ 'ನಾನು ಬ್ರಹ್ಮದಲ್ಲಿ ಒಂದಾಗಿದ್ದೆನು' ಎಂಬ ತಿಳಿವುಂಟಾಗಬೇಕಾದರೆ 'ನಾನು' ಬೇರೆಯಾಗಿದ್ದು 'ಬ್ರಹ್ಮವು' ಬೇರೆಯಾಗಿದ್ದು ಅದರಲ್ಲಿ ಒಂದಾಗಿರುವೆನೆಂಬ 'ತಿಳಿವು' ನನಗೆ ಉಂಟಾಗಬೇಕಾದ ಅವಶ್ಯಕತೆಯಿರುತ್ತದೆ. ಆದರೆ ಸುಷುಪ್ತಿಯಲ್ಲಿ ನಾನಾಗಲಿ, ಬ್ರಹ್ಮವಾಗಲಿ, ತಿಳಿವಾಗಲಿ ಬಿಡಿಬಿಡಿಯಾಗಿರುವದಿಲ್ಲ. ಅಲ್ಲಿ ಮನಸ್ಸಾಗಲಿ, ಪ್ರತ್ಯಯಗಳಾಗಲಿ–ಇರುವ ಸಂಭವವೇ ಇಲ್ಲ. ಹೀಗಿರುವ ಏಕತ್ವಸ್ಥಿತಿಯಲ್ಲಿ 'ಏಕೆ ಗೊತ್ತಾಗಲಿಲ್ಲ?' ಎಂದು ಯಾರನ್ನು ಎಲ್ಲಿ ಕೇಳಬೇಕು? 'ಎಲ್ಲಿ ಎಲ್ಲವೂ ಆತ್ಮನೇ ಆಗಿಬಿಟ್ಟಿದೆಯೋ ಅಲ್ಲಿ ಯಾರು ಏನನ್ನು ಕಂಡಾರು? ತಿಳಿದಾರು?' ಎಂದೇ ಶ್ರುತಿಯು ಏಕತ್ವಸ್ಥಿತಿಯಲ್ಲಿ ದ್ವೈತಾನುಭವವನ್ನು ಕುರಿತು ಆಕ್ಷೇಪಿಸುತ್ತಿದೆ. ಒಂದು ರೀತಿಯಲ್ಲಿ ನೋಡಿದರೆ ಪ್ರಶ್ನೆಯೇ ತಪ್ಪಾಗಿದೆ. ದ್ವೈತ ಪ್ರಪಂಚದಲ್ಲಿ ಕೇಳಬಹುದಾದ ಪ್ರಶ್ನೆಯನ್ನು ಅದ್ವೈತಸ್ಥಿತಿಯಲ್ಲಿ ಕೇಳಿದರೆ ಉತ್ತರವು ಹೇಗೆ ದೊರೆತೀತು? ಆದ್ದರಿಂದ ಅನುಭವಾನುಸಾರವಾಗಿ ಮಾಡುವ ಈ ತರ್ಕದಿಂದ ಸುಷುಪ್ತಿಯಲ್ಲಿರುವ ಅದ್ವೈತಸ್ಥಿತಿಯನ್ನೇ ಮತ್ತಷ್ಟು ಬಲಪಡಿಸಿದಂತಾಗುತ್ತದೆ. ವಿಚಾರಕರು ಇಲ್ಲಿ ಎಡವದೆ, ಜಾಗ್ರದ್ದೃಷ್ಟಿಯ ಪಕ್ಷಪಾತವನ್ನು ವಹಿಸದೆ–ಇದ್ದದ್ದು ಇದ್ದಂತೆ ಮನದಂದುಕೊಳ್ಳಬೇಕು. ಆಗಲೇ ನಿಜವು ಹೊರಬರಲಿದೆ.

ಈಗ ಶ್ರುತಿಯ ಏಕತ್ವವೆಂದರೇನು? ಹೇಗೆ? ಎಂಬಿದನ್ನು ಉದಾಹರಣೆಯಿಂದ ವಿವರಿಸಲು ಹೊರಟಿದೆ. ಅದನ್ನು ಕೇಳಿರಿ: ''ಮಗು, ಜೇನುನೊಣಗಳು ಹಾರಾಡುತ್ತಾ ಬೇರೆಬೇರೆಯ ಸ್ಥಳಗಳಲ್ಲಿರುವ ಬೇರೆಬೇರೆಯ ರುಚಿಯುಳ್ಳ ಹೂವುಗಳಿದ ರಸವನ್ನು ಸಂಗ್ರಹಿಸಿ ತಂದು ಜೇನುಗೂಡಿನಲ್ಲಿ ಕೂಡಿಟ್ಟಾಗ ಎಲ್ಲ ರಸಗಳೂ ಒಂದಾಗಿಬಿಟ್ಟಮೇಲೆ ಯಾವ ರಸವೂ ವಿಶೇಷವಾಗಿ 'ತಾನು'–ಎಂದು ಜೇನಾದಾಗ ಹೇಳಿಕೊಳ್ಳಲಾರವಲ್ಲವೆ?

ಇದಕ್ಕೆ ಅವೆಲ್ಲವೂ ಜೇನಿನಲ್ಲಿ ಒಂದಾಗಿರುವದೇ ಕಾರಣವಲ್ಲವೆ ?ರುಚಿಯನ್ನು ಗುರುತಿಸುವ ನಾಲಗೆಯು ಕೂಡ ಜೇನನ್ನು ಹುಳಿಯೆಂದಾಗಲಿ, ಸಿಹಿಯೆಂದಾಗಲಿ, ಉಪ್ಪೆಂದಾಗಲಿ ಹೇಳಲಾರದೆ ಹೋಗುವದಲ್ಲವೆ? ಇದನ್ನು ವಿಚಾರಮಾಡು, ಜೇನಿನ ರುಚಿಯನ್ನು 'ಜೇನು' ಎನ್ನಬಹುದೇ ಹೊರತು ಆ ಸ್ಥಿತಿಯಲ್ಲಿ ಹುಳಿಯಾಗಲಿ, ಸಿಹಿಯಾಗಲಿ–ವಿಂಗಡವಾಗಿ ಏಕೆ ತಿಳಿಯುವದಿಲ್ಲ? ಎಂದರೆ ಉತ್ತರವೇನಿದ್ದೀತು? ಹಾಗೆಯೇ–ತಿಳಿಯದೆ ಇರುವದೆಂಬ ತಪ್ಪನ್ನು ನಾಲಗೆಯ ಮೇಲಾಗಲಿ, ರಸಗಳ ಮೇಲಾಗಲಿ ಹಾಕಬಹುದೆ? ಅಥವಾ ಅವೆಲ್ಲವೂ ಸೇರಿ ಒಂದಾಗಿ ಜೇನಾದದ್ದೇ ತಪ್ಪೆನ್ನಲಾದೀತೆ? ಯಾವದೂ ಒಪ್ಪಾಗುವದಿಲ್ಲ. ಜೇನಿನ ರುಚಿಯನ್ನು ವ್ಯಾಖ್ಯಾನಮಾಡಲು ಹೋದದ್ದೇ ಅವಿವೇಕವಾಯಿತು. ಸುಮ್ಮನೆ ಜೇನನ್ನು ಸವಿದು ಬಾಯಿಚಪ್ಪರಿಸಿ ಆನಂದಪಡಬೇಕಾಗಿತ್ತು, ಅದೊಂದೇ ಜಾಣತನವೆನಿಸುತ್ತಿತ್ತು–ಎಂದರೆ ಯಾರಾದರೂ ವಿರೋಧವನ್ನು ಮಾಡಿಯಾರೆ? ಇಲ್ಲ. ಏಕೆಂದರೆ ಏಕತ್ವಾನುಭವದಲ್ಲಿ ವಿಕಲ್ಪವಿಲ್ಲ–ಎಂಬುದು ಎಲ್ಲರಿಗೂ ಅನುಭವಗಮ್ಯವಾಗಿರುವದೇ ಕಾರಣವಾಗಿದೆ''.

ಹೀಗೆಯೇ ಸುಷುಪ್ತಿಯನ್ನೂ ಅನುಭವದಿಂದಲೇ ವ್ಯಾಖ್ಯಾನಮಾಡಬೇಕು. ಒಂದು ವೇಳೆ ಕೆಲವು ಪ್ರಸಂಗಗಳಲ್ಲಿ ಅದನ್ನು ವ್ಯಾಖ್ಯಾನಮಾಡಲಾಗದಿದ್ದರೆ ಅನುಭವಶರಣರಾಗಿ ಸುಮ್ಮನಿರಬೇಕು. ಇಲ್ಲದ್ದನ್ನು ಕಲ್ಪಿಸಲು ಹೋಗಬಾರದು. ತರ್ಕಕ್ಕಿಂತಲೂ ಅನುಭವವೇ ಹೆಚ್ಚಿನದಾದ್ದರಿಂದ ಅದ್ವೈತಾನುಭವವು ಸ್ವಭಾವವಾಗಿರುವ ಅವಸ್ಥೆಯಲ್ಲಿ ದ್ವೈತಾನುಭವ ವುಳ್ಳ ಅವಸ್ಥೆಯ ಚೌಕಟ್ಟಿನಿಂದ ಕಾರ್ಯಕಾರಣಗಳನ್ನೂ ನಿಮಿತ್ತನೈಮಿತ್ತಿಕಭಾವಗಳನ್ನೂ ಊಹಿಸಲು ಹೊರಟರೆ ಅದು ಜಾಣತನವೆನಿಸುವದಿಲ್ಲ. ಇದು ದ್ವೈತಾವಸ್ಥೆಯ ಪಕ್ಷಪಾತಾನುಭವವೇ ಆಗಿ ನೆಲೆಗೊಳ್ಳುತ್ತದೆ. ಈ ಅನುಭವಕ್ಕೆ ಅವಸ್ಥಾತ್ರಯಾತೀತವಾದ ಬ್ರಹ್ಮವನ್ನು ಅನುಭವಾರೂಢವಾಗಿ ಮಾಡಿಕೊಡುವ ಯೋಗ್ಯತೆಯು ಇರುವದಿಲ್ಲ. ಆದ್ದರಿಂದಲೇ ಶ್ರೀಗೌಡಪಾದರವರು ಅವಸ್ಥೆಗಳನ್ನು ತುರೀಯಪ್ರತಿಪತ್ತಿಗೆ ದ್ವಾರವೆಂದೇ ಪರಿಗಣಿಸಿ ತುರೀಯವನ್ನು ವರ್ಣಿಸುವಾಗ ''ನಾಂತಃಪ್ರಜ್ಞಮ್–ನ ಬಹಿಃ ಪ್ರಜ್ಞಮ್'' ಎಂಬ ಉಪನಿಷತ್ತಿನ ಮಂತ್ರವನ್ನಾಶ್ರಯಿಸಿ ಮೂರವಸ್ಥೆಗಳನ್ನೂ ಅಪಲಾಪಮಾಡಿ ತುರೀಯನನ್ನು ಯಥಾಶ್ರುತವಾಗಿ ವ್ಯಾಖ್ಯಾನಮಾಡಿರುತ್ತಾರೆ. ಸುಷುಪ್ತ್ಯಾತ್ಮನನ್ನು ಪ್ರಾಜ್ಞನೆಂದಿರುವದು ಕೂಡ 'ಪ್ರಕರ್ಷೇಣ ಜನಾತೀತಿ ಪ್ರಜ್ಞಃ , ಪ್ರಜ್ಞಃ ಏವ ಪ್ರಾಜ್ಞಃ' ಎಂದೇ ಶ್ರೀಶಂಕರರೂ ವಿವರಿಸಿದ್ದಾರೆಯೇ ಹೊರತು 'ಪ್ರಾಯೇಣ ಅಜ್ಞಃ' ಎಂಬ ಪಕ್ಷವನ್ನು ಹಿಡಿದಿರುವದಿಲ್ಲ. ಮತ್ತು 'ಪ್ರಜ್ಞಪ್ತಿಮಾತ್ರಂ ಅಸ್ಯೈವ ಅಸಾಧಾರಣಂ ರೂಪಮಿತಿ ಪ್ರಾಜ್ಞಃ' (ಈ ಆತ್ಮನು ಕೇವಲ ಪ್ರಜ್ಞಪ್ತಿಮಾತ್ರನೆಂಬುದೇ ಸರಿ; ಅದೇ ಅವನ ಅಸಾಧಾರಣ ರೂಪವು) ಎಂದೇ ವಿವರಿಸಿದ್ದಾರೆ. ಈ ಎಲ್ಲಾ ಕಾರಣಗಳಿಂದ ನಮ್ಮ ಸುಷುಪ್ತ್ಯಾತ್ಮರೂಪವು

ಅವಿದ್ಯಾಕಾಮಕರ್ಮವಿನಿರ್ಮುಕ್ತವಾಗಿರುತ್ತದೆ–ಎಂಬಿದೇ ಪರಮಸಿದ್ಧಾಂತವು. ಈ ಸ್ವರೂಪವು ಸುಷುಪ್ತಿಯಲ್ಲಿ ತಾನೊಂದೇ ಆಗಿದ್ದುಕೊಂಡಿರುವದೇ–ಎಂದರೆ ಏಕತ್ವವೇ ಅದರ ತಿರುಳಾಗಿರುವದೇ ಎಚ್ಚರದಲ್ಲಿ 'ಏನನ್ನೂ ಅರಿಯಲಿಲ್ಲ' ಎಂಬ ವ್ಯವಹಾರಕ್ಕೆ ಕಾರಣವಾಗಿದೆ. ನಿಜವಾಗಿ ನೋಡುವದಾದರೆ ಸುಷುಪ್ತಿಯ ಏಕತ್ವವನ್ನು ಅನುಭವವೆಂದಾಗಲಿ, ಎಚ್ಚರದಲ್ಲಿ 'ನಾನು ಆಗ ಏನೂ ಅರಿಯಲಿಲ್ಲ' ಎಂಬುದನ್ನು ಸ್ಮೃತಿಯೆಂದಾಗಲಿ ಹೇಳಲು ಬರುವದಿಲ್ಲ; ಏಕೆಂದರೆ ಎರಡಕ್ಕೂ ಸಮಾನವಾದ ಕಾಲಾದಿಗಳಿಲ್ಲ; ಸುಷುಪ್ತಿಯಲ್ಲಿ ಕಾಲವೇ ಇಲ್ಲ. ಆದ್ದರಿಂದ 'ಏನೂ ಅರಿಯಲಿಲ್ಲ' ಎಂಬಿದೊಂದು ಬುದ್ಧಿಯ ವಿಕಲ್ಪಮಾತ್ರವೇ. ಅದಕ್ಕೆ ಬುಡವಿಲ್ಲ; ಕಾರಣವಿಲ್ಲ–ಎಂದೇ ಶ್ರೀ ಸುರೇಶ್ವರಾಚಾರ್ಯರು ಬರೆದಿದ್ದಾರೆ. ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ಸುಷುಪ್ತಿಯ ಏಕತ್ವವನ್ನು–ಎಚ್ಚರದ ಪಕ್ಷಪಾತದಿಂದ ಅಜ್ಞಾನವೆಂದು ವ್ಯಾಖ್ಯಾನ ಮಾಡುವವರಿಗೆ ಶ್ರೀಶಂಕರಾಚಾರ್ಯರೇ ಬುದ್ಧಿ ಹೇಳಬೇಕು. ಇಂಥವರು ಸರಿಯಾದ ಬ್ರಹ್ಮನಿಷ್ಠರನ್ನು ಬಳಿಸಾರಿ ಸಂಶಯಗಳನ್ನು ಬಿಡಿಸಿಕೊಳ್ಳಬೇಕೆಂದೂ ಕೇಳಿಕೊಳ್ಳಲಾಗಿದೆ.

ಈಗ ಮುಂದುವರೆದು ಶ್ರುತಿಯ ಉಪದೇಶವನ್ನು ಮನನಮಾಡೋಣ. ಶ್ರುತಿಯು "ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹೇ ಇತಿ" ಎಂಬ ವಾಕ್ಯದಲ್ಲಿ ಎಲ್ಲರಿಗೂ ಗೊತ್ತಿರುವಂತೆ 'ಸುಷುಪ್ತಿಯಲ್ಲಿ ಏನನ್ನೂ ಅರಿಯಲಿಲ್ಲವಷ್ಟೆ' ಎಂಬಿದನ್ನು ಅನುವಾದ ಮಾಡಿ 'ಎಲ್ಲಾ ಪ್ರಾಣಿಗಳೂ ಸುಷುಪ್ತಿಯಲ್ಲಿ ಸತ್ತಿನಲ್ಲಿ ಒಂದಾಗಿರುವವು' ಎಂಬಿದನ್ನು ಪ್ರತಿಪಾದನೆ ಮಾಡುತ್ತಿದೆ. ಏಕೆಂದರೆ ಸಾಮಾನ್ಯಜನರಿಗೆ ಸತ್ಸಂಪತ್ತಿಯ ವಿಚಾರವು ತಿಳಿದಿರುವದಿಲ್ಲ, ಆದ್ದರಿಂದ ಅದರ ಕಡೆಗೆ ನಮ್ಮ ಲಕ್ಷ್ಯವನ್ನು ಶ್ರುತಿಯು ಸೆಳೆಯುತ್ತಿದೆ. ಹಾಗೆಯೇ ಮುಂದುವರೆದು 'ಮಗು, ಈ ಸತ್ಸಂಪತ್ತಿಯನ್ನು ಅರಿಯದ್ದರ ಅನರ್ಥವನ್ನೇನು ಹೇಳಲಿ? ಪ್ರತಿಯೊಂದು ಪ್ರಾಣಿಯೂ ನಿದ್ರೆಯಿಂದೆದ್ದಾಗ–ನಿದ್ರೆಮಾಡುವ ಮೊದಲು ತಾನು ಏನಾಗಿತ್ತೋ–ಎಂದರೆ ಹುಲಿಯೋ–ಸಿಂಹವೋ–ಕರಡಿಯೋ–ಮನುಷ್ಯನೋ ಆಗಿತ್ತೋ ಅದೇ ಆಗಿ ಏಳುತ್ತದೆ. "ಆದ್ದರಿಂದ ಬ್ರಹ್ಮದಲ್ಲಿ ಸೇರಿದ ಮಾತ್ರಕ್ಕೆ ಮುಕ್ತಿಯಿಲ್ಲ, ಬ್ರಹ್ಮದಲ್ಲಿ ಸೇರಿದ್ದೇನೆ–ಎಂಬ ಜ್ಞಾನವೂ ಬೇಕು. ಅಂಥ ಜ್ಞಾನವೇ ಮೋಕ್ಷಸಾಧನವು"–ಎಂದು ತಂದೆಯು ತಿಳಿಸಿದ್ದಾನೆ. ಹೇಗೆಂದರೆ ಒಬ್ಬ ಮನುಷ್ಯನಿಗೆ ಎರಡು ಕಣ್ಣುಗಳನ್ನು ಬಿಗಿಯಾಗಿ ಕಟ್ಟಿ ಅವನನ್ನು ಕೈಹಿಡಿದು ಕರೆದುಕೊಂಡು ಟಿಕೆಟ್‌ನ್ನೂ ಕೊಡಿಸಿ ಒಂದು ವಸ್ತುಪ್ರರ್ಶನವನ್ನು (Exhibition) ಪೂರ ತಿರುಗಿಸಿಕೊಂಡು ಬಂದು ಮತ್ತೆ ಗೇಟಿನ ಹೊರಗೆ ಬಂದಾಗ ಕಣ್ಣುಗಳನ್ನು ಬಿಚ್ಚಿ 'ಎಲ್ಲವನ್ನೂ ನೋಡಿದೆಯೇನಪ್ಪ?' ಎಂದು ಕೇಳಿದರೆ ಅವನ ಗತಿಯೇನು? ಅವನ ಕೈಕಾಲುಗಳಿಗೆ ದಣಿವಾಗಿರಬಹುದು. ಎಲ್ಲಾ ಅಂಗಡಿಗಳ ಮುಂದೆಯೂ ಓಡಾಡಿರಬಹುದು. ಆದರೆ ಮಾತ್ರ ವಸ್ತುಪ್ರದರ್ಶನದ ನೋಟದ ಫಲವು ಅವನಿಗೆ ದಕ್ಕಿರುವದಿಲ್ಲವಲ್ಲವೇ? ಹಾಗೆಯೇ ಜೀವನು ತನ್ನ

ಆಗಂತುಕವಾದ ಅಜ್ಞಾನಮೋಹಬದ್ಧನಾಗಿ ದಿವ್ಯಚಕ್ಷುಸ್ಸೆಂಬ ಜ್ಞಾನವಿಲ್ಲದೆ ಸುಷುಪ್ತಿಯ ಆನಂದಕ್ಕೆ ಹೋದರೆ ಅವನಿಗೆ ತಾನು ಬ್ರಹ್ಮದಲ್ಲಿ ಒಂದಾಗಿದ್ದೇನೆಂಬುದು ಹೇಗೆ ತಿಳಿದೀತು? ಈ ಕಾರಣದಿಂದಲೇ ಸುಷುಪ್ತಿಯು ಅದ್ವೈತಾವಸ್ಥೆಯಾಗಿದ್ದರೂ ಮೋಕ್ಷವಲ್ಲ. ಏಕೆಂದರೆ ಅಲ್ಲಿ ಜ್ಞಾನವಿರುವದಿಲ್ಲ, ಜ್ಞಾನಾಭಾವವಿರುತ್ತದೆ. ಆತ್ಮನಾದರೊ, ಅಲ್ಲಿ ಜ್ಞಾನಾಭಾವಕ್ಕೇ ಸಾಕ್ಷಿಯಾಗಿದ್ದುಕೊಂಡು ಎಂದೆಂದೂ ಸರ್ವದೃಕ್ ಆಗಿಯೇ ಇರುವನು. ಇರಲಿ. ವಾಚಕರಿಗೆ ಈಗ ಸುಷುಪ್ತಿಯ ಅವಸ್ಥಾನುಭವಕ್ಕೂ ಅವಸ್ಥೆಯೇ ಅಲ್ಲದ ತುರೀಯ–ಮೋಕ್ಷಾನುಭವಕ್ಕೂ ವ್ಯತ್ಯಾಸವು ಗೊತ್ತಾಗಿರಬೇಕು. ಆದ್ದರಿಂದ ಎಚ್ಚರದಲ್ಲೇ ಶಾಸ್ತ್ರಾಚಾರ್ಯರನ್ನು ಬಳಿಸಾರಿ ಶ್ರವಣಾದಿ ಸಾಧನಗಳಿಂದ ಆತ್ಮಜ್ಞಾನವನ್ನು ಸಂಪಾದಿಸಿಕೊಂಡಲ್ಲಿ ಸುಷುಪ್ತಿಯಂತೆಯೇ ಎಚ್ಚರದಲ್ಲಿಯೂ ದ್ವೈತಸತ್ಯತ್ವವು ಕಾಣದಂತಾಗಿ ಜೀವನ್ಮುಕ್ತಿಯೇ ಲಭಿಸುವದು.

---

## ಜೀವನಿಗೆ ನಾಶವಿಲ್ಲ

ಓಮ್ ॥ ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತ ಇತಿ ಸ ಯ ಏಷೋऽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ॥ 6–11–3.

ಭಾವಾರ್ಥಃ– "(ಮಗು), ಜೀವನಿಂದ ರಹಿತವಾಗಿಯೇ ಇದು ಸಾಯುತ್ತದೆ. ಜೀವನು ಸಾಯುವದಿಲ್ಲ. ಆ ಈ ಅಣಿಮೆಯಿದೆಯಲ್ಲ, ಇದೆಲ್ಲವೂ ಐತದಾತ್ಮ್ಯವು. ಅದು ಸತ್ಯವು; ಅದೇ ಆತ್ಮನು; ಶ್ವೇತಕೇತುವೆ, ಅದೇ ನೀನಾಗಿರುವೆ"

(ದೇಹಾತ್ಮರುಗಳ ಗುಂಪಿನಲ್ಲಿ ದೇಹವು ಮರದಂತೆ ಇದೆ. ಜೀವವಿಲ್ಲದ ಮರದ ಕೊಂಬೆಯು ಒಣಗುತ್ತದೆ. ಹಾಗೆಯೇ ಜೀವಾತ್ಮನಿಲ್ಲದ ದೇಹವು ನಾಶವಾಗುವದು. ಆದರೆ ಕೊಂಬೆಯು ಹೋದರೆ ಅಥವಾ ಪೂರ್ತಿಯಾಗಿ ಮರವೇ ಬಿದ್ದುಹೋದರೂ ಜೀವವಿಲ್ಲ ವೆನ್ನಲಾಗುವದಿಲ್ಲ. ಏಕೆಂದರೆ ಬೇರೊಂದು ಮರದಲ್ಲಿ ಜೀವತತ್ತ್ವವು ಕಂಡುಬರುವದು. ಹಾಗೆಯೇ ಜೀವಾತ್ಮನು ದೇಹವನ್ನು ಬಿಟ್ಟರೂ ಅವನಿಗೆ ನಾಶವಿಲ್ಲ. ಅವನು ಪರಬ್ರಹ್ಮವೇ–ಎಂದು ಅಭಿಪ್ರಾಯ.)

## 44. ಶರೀರಕ್ಕೆ ನಾಶವೇ ಹೊರತು ಜೀವನಿಗಲ್ಲ

ಛಾಂದೋಗ್ಯೋಪನಿಷತ್ತಿನಲ್ಲಿ ಶ್ವೇತಕೇತು– ಉದ್ದಾಲಕರ ಸಂವಾದರೂಪದಿಂದ ಜೀವಬ್ರಹ್ಮರ ಐಕ್ಯವನ್ನು ಪ್ರತಿಪಾದನೆಮಾಡುವ "ತತ್ತ್ವಮಸಿ" ಮಹಾವಾಕ್ಯವು ಒಂಭತ್ತು

ಬಾರಿ ಬಂದಿರುತ್ತದೆ. ಹೀಗೆ ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುವ ಉದ್ದೇಶವೇನೆಂದರೆ: ಪ್ರತಿಪರ್ಯಾಯದಲ್ಲಿಯೂ ವಿಚಾರಕನಾದವನಿಗೆ ಬೇರೆಬೇರೆಯ ದೃಷ್ಟಿಕೋನದಿಂದ ಬರಬಹುದಾದ ಸಂಶಯಗಳನ್ನು ಪರಿಹರಿಸಿ ಪರಬ್ರಹ್ಮಸ್ವರೂಪದಲ್ಲಿಯೇ ಅವನನ್ನು ನೆಲೆನಿಲ್ಲುವಂತೆ ಮಾಡುವದೇ ಕರ್ತವ್ಯವಾಗಿದೆ. ಪ್ರಕೃತ ಸುಷುಪ್ತಿಯ ವಿಚಾರವು ಪ್ರಸ್ತುತವಾಗಿದ್ದು–ಹಿಂದಿನ ವಿಚಾರಸರಣಿಯಲ್ಲಿ ತಿಳಿಸಿರುವಂತೆ–ಸುಷುಪ್ತಿಯಲ್ಲಿ ಏಕತ್ವವಿರುವದರಿಂದ ಸತ್ಸಂಪತ್ತಿಯು ತಿಳಿಯದೆ ಹೋಗಿದೆ–ಎಂಬ ಸಮಾಧಾನವನ್ನು ಕೊಡಲಾಗಿದೆ. ಆದರೆ ಎದ್ದಮೇಲಾದರೂ ಅದು ಗೊತ್ತಾಗಬೇಡವೆ? ಏಕೆಂದರೆ ಎಚ್ಚರದಲ್ಲಿ ದ್ವೈತವಿರುವದರಿಂದ ಜ್ಞಾನವುಂಟಾಗಬಹುದಲ್ಲ? ಯಾರೊಬ್ಬರಿಗೂ ಎಚ್ಚರದ ಸ್ಥಿತಿಯಲ್ಲಿ ಅವರವರ ಸುಷುಪ್ತಿಯಲ್ಲಿ ಬ್ರಹ್ಮಪ್ರಾಪ್ತಿಯಾಗಿತ್ತೆಂದು ಎಂದೂ ಗೊತ್ತಾಗುವದೇ ಇಲ್ಲವಲ್ಲ? ಏಕೆ? ಎಂಬ ಸಂಶಯವು ಬರಬಹುದಾಗಿದೆ. ಅದಕ್ಕೆ ಶ್ರುತಿಯು ಈಗ ಉದಾಹರಣಪೂರ್ವಕವಾಗಿ ಉತ್ತರವನ್ನು ಹೇಳುತ್ತದೆ.

ಪ್ರಪಂಚದ ಜನಜೀವನಕ್ಕೆ ನೀರು ಅತ್ಯಗತ್ಯವಾದ ವಸ್ತುವಾಗಿದೆ. ಅದು ನದಿಗಳಿಂದ ಬಹಳಮಟ್ಟಿಗೆ ದೊರೆಯುತ್ತದೆ. ಪರ್ವತದ ಮೇಲೆ ಬೀಳುವ ಮಳೆಯಿಂದ ನದಿಗಳು ಹುಟ್ಟಿಹರಿಯುವವು. ಅನಂತರ ಸಮುದ್ರವನ್ನು ಸೇರುತ್ತವೆ. ಅವು ಹರಿಯುತ್ತಿರುವಾಗ ಗಂಗೆ, ಯಮುನೆ, ಕಾವೇರಿ, ತುಂಗಭದ್ರಾ–ಮುಂತಾದ ಹೆಸರುಗಳಿಂದಲೂ ಪಶ್ಚಿಮವಾಹಿನಿ, ಉತ್ತರವಾಹಿನಿ, ಶೀತಲವಾಹಿನಿ–ಎಂಬ ವಿಶೇಷನಾಮಗಳಿಂದಲೂ ಕರೆಯಲ್ಪಡುವವು. ಅನಂತರ ಸಮುದ್ರದಲ್ಲಿ ಎಲ್ಲಾ ನದಿಗಳೂ ಸೇರಿ ಒಂದಾಗಿಬಿಡುವವಾದ್ದರಿಂದ ತಮ್ಮ ನಾಮರೂಪಗಳನ್ನೂ ವಿಶೇಷವ್ಯವಹಾರವನ್ನೂ ಕಳೆದುಕೊಂಡುಬಿಡುವವು. ಪುನಃ ಬೇಸಿಗೆಯಲ್ಲಿ ಅದೇ ಸಮುದ್ರದ ನೀರೇ ಸೂರ್ಯನ ಶಾಖದಿಂದ ಆವಿಯಾಗಿ ಮೇಲಕ್ಕೆ ಏರಿ ಮೋಡಗಳಾಗಿ ಮಳೆಗರೆಯುವವು. ಮತ್ತೆ ಆಯಾ ಹೆಸರಿನ ನದಿಗಳಾಗಿ ಹರಿಯುವವು. ಇಷ್ಟೆಲ್ಲ ನಾವು ತಿಳಿದಿದ್ದರೂ ಯಾವ ನದಿಗೂ ತಾನು ಸಮುದ್ರದಿಂದಲೇ ಬಂದಿರುವೆನು–ಎಂಬ ಅರಿವಿರುವದಿಲ್ಲ. ಮತ್ತು ಹುಟ್ಟುವ ಮುಂಚೆ ತಾನು ಸಮುದ್ರವಾಗಿಯೇ ಇದ್ದೆನು ಎಂಬ ತಿಳಿವಳಿಕೆಯೂ ಇರುವದಿಲ್ಲ. ಈ ಉದಾಹರಣೆಯನ್ನು ವಾಚಕರು ತಮ್ಮ ತಮ್ಮ ಸುಷುಪ್ತಿಗೂ ಅನ್ವಯಿಸಿಕೊಳ್ಳಬೇಕೆಂದು ಶ್ರುತಿಯು ಉಪದೇಶಿಸುತ್ತಿದೆ.

ಈಗ ದಾರ್ಷ್ಟಾಂತಿಕವನ್ನು ವಿಚಾರಮಾಡೋಣ. ಸುಷುಪ್ತಿಯನ್ನೇ ಆನಂದಮಹಾಸಮುದ್ರವೆಂದಿಟ್ಟುಕೊಳ್ಳೋಣ. ಪರ್ವತದಂತೆ ಗಹನವಾದ ಪ್ರಪಂಚಜೀವನದಲ್ಲಿ ಜೀವರುಗಳ ಹುಟ್ಟು–ಬದುಕುಗಳು ಅವರವರ ಕರ್ಮಾನುಸಾರವಾಗಿ ಓಕ್ಕುವಿದಿಕ್ಕುಗಳಿಗೆ ನೀರಿನಂತೆ ಹರಿಯುತ್ತಿರುವವು. ಎಚ್ಚರಕನಸುಗಳಲ್ಲಿ ಇಂದ್ರಿಯಮನೋಬುದ್ಧಿಗಳೊಡೆಯ

ನಾದ ಜೀವನು ತನ್ನನ್ನು ಶರೀರಿಯೆಂದುಕೊಂಡು ಉಚ್ಚನೀಚಪದಾರ್ಥಗಳನ್ನು ಕಾಣುತ್ತಾ ಅವುಗಳಲ್ಲಿ ರಾಗದ್ವೇಷಗಳನ್ನು ಮಾಡುತ್ತಾ ಸಾಗುತ್ತಿರುವನು. ಈ ದೃಶ್ಯಮೋಹದಲ್ಲಿ ಅವನಿಗೆ ತಾನು ಯಾರು? ಎಲ್ಲಿಂದ ಬಂದೆನು? ಎಲ್ಲಿಗೆ ಹೋಗಿ ಸೇರಲಿರುವೆನು? ಎಂಬ ಯೋಚನೆಯೇ ಬರುವಂತಿಲ್ಲ ಇದೇ ಮಾಯೆಯು ಅಥವಾ ವ್ಯಾಮೋಹವು. ಆದರೇನು? ಈ ಜೀವನು ತಾನು ತನ್ನನ್ನು ವಿಚಾರಿಸಿಕೊಳ್ಳದಿದ್ದ ಮಾತ್ರಕ್ಕೆ ಜಗದ್ವ್ಯಾಪಾರವಾಗಲಿ, ನಿಯಮಗಳಾಗಲಿ ಬದಲಾದೀತೆ? ಆಗಲಾರದು. ಆದರೂ ಎಚ್ಚರದಲ್ಲಿ ವಿಚಾಮಾಡಿ ನೋಡುವ ಕೆಲವೇ ವಿವೇಕಿಗಳಿಗೆ ಒಂದು ನಿಜವು ತಿಳಿದುಬರುತ್ತದೆ. ಏನೆಂದರೆ: ಜೀವನೆಂಬುವನು ತನ್ನ ಸ್ವರೂಪದಿಂದ ಬ್ರಹ್ಮದಂತೆ ಸ್ವತಂತ್ರನಾಗಿ ಇರುವವನಲ್ಲ. ಅವನು ಬ್ರಹ್ಮದಿಂದ ಹೊರಬಂದಿರುವ ಆನಂದದ ಹನಿಯಾಗಿರುವನು. ಅಥವಾ ಸಮುದ್ರದಿಂದ ಮಳೆಯ ಮೂಲಕ ಹೊರಬಿದ್ದ ನದಿಯು ನೀರಿನಂತೆ ದೇಹೇಂದ್ರಿಯನಾಮರೂಪ ವಿಶಿಷ್ಟನಾಗಿ ತೋರಿಕೊಳ್ಳುತ್ತಿರುವನು. ಅವನು ಆಗ ತಾನು ಬ್ರಹ್ಮವೇ ಎಂಬುದನ್ನು ಅರಿಯಲಾರದ ಸ್ಥಿತಿಯಲ್ಲಿರುವನು. ಹೀಗಿದ್ದರೂ ಬ್ರಹ್ಮಕ್ಕಿಂತ ಎಂದಿಗೂ ಬೇರೆಯಾಗಿರಲಾರನು. ಏಕೆಂದರೆ ಅವನಿಗೆ ಸ್ವತಂತ್ರಸತ್ತೆಯಿರುವದಿಲ್ಲ. ಅವನು ಪ್ರತಿದಿನವೂ ಸುಷುಪ್ತಿಯಲ್ಲಿ ತನ್ನ ಸ್ವರೂಪದಲ್ಲಿ ಒಂದಾಗಿರುವನು. ಆ ಕಾಲಕ್ಕೆ ಏಕತ್ವವೇ ಪರಮವಾಗಿರುವದರಿಂದ ಏನನ್ನೂ ಅರಿಯಲಾರದವನಾಗಿರುವನು. ಏಕತ್ವವು ಅವನಿಗೆ ಸ್ವಭಾವವಾಗಿದ್ದರೂ ಎಚ್ಚರದಲ್ಲಿ ಅರಿತುಕೊಂಡು ಅನಂತರ ಏಕೀಭೂತ ನಾಗದಿರುವದರಿಂದ ಅವಸ್ಥಾಪ್ರತಿಬದ್ಧವಾದ ಆ ಏಕೀಭಾವವು ಸುಷುಪ್ತಿಯು ಇಲ್ಲವಾಗಲು ಅದೂ ಇಲ್ಲವಾದಂತೆ ಆಗಿಬಿಡುವದು. ಇದರಿಂದ ಮತ್ತೊಮ್ಮೆ ಮತ್ತೊಮ್ಮೆ–ಹೀಗೆ ಪ್ರತಿದಿನವೂ ಸುಷುಪ್ತಿಯಿಂದೆದ್ದವನಾಗಿ–ಮಲಗುವ ಮುಂಚೆ ತಾನು ಏನಾಗಿದ್ದನೋ ಅದೇ ಆಗಿ ಮುಂದುವರೆಯುವನು. ಇದೇ ಸಂಸಾರವು. ಸಂಸಾರಧರ್ಮಗಳು ವ್ಯವಹಾರದೃಷ್ಟಿಯಿಂದ ಎಚ್ಚರಕನಸುಗಳಲ್ಲಿ ಫಲರೂಪವಾಗಿಯೂ ಸುಷುಪ್ತಿಯಲ್ಲಿ ಬೀಜರೂಪವಾಗಿಯೂ ಬ್ರಹ್ಮಜ್ಞಾನವುಂಟಾಗುವವರೆಗೂ ಇದ್ದುಕೊಂಡಿರುವವು. ಜೀವನು ಸದ್ಗುರುವನ್ನು ಬಳಿಸಾರಿ ವೇದಾಂತತತ್ತ್ವವನ್ನು ವಿಚಾರಮಾಡಿ ಅರಿತುಕೊಂಡನಾದರೆ ಈ ಸಂಸಾರವು ಬಾಧಿತವಾಗಿ ಬಿಡುವದರಿಂದ ಅವಸ್ಥಾತ್ರಯ ರಹಿತನಾದ ತುರೀಯನೇ ತಾನೆಂದು ಗೊತ್ತಾಗಿ ಬಿಡುವದರಿಂದ ಸಂಸಾರವೇ ಇಲ್ಲವಾಗಿಬಿಡುವದು. ಆಗ ಸಂಶಯಗಳೂ ಇಲ್ಲವಾಗುವವು.

ಈಗ ಇನ್ನೊಂದು ಪ್ರಶ್ನೆಯನ್ನು ಎದುರಿಸಬೇಕಾಗಿದೆ. ಜೀವನು ಪರಮಾತ್ಮನಿಗಿಂತ ಭಿನ್ನನಲ್ಲವೆಂಬುದೇನೋ ಸರಿ. ಆದರೆ ಪರಮಾತ್ಮನೊಬ್ಬನೇ ಪರಮಾರ್ಥತತ್ತ್ವ ವೆಂದಾದರೆ ಸಂಸಾರವು ಯಾರಿಗೆ? ಎಂಬ ಪ್ರಶ್ನೆಯೇಳುತ್ತದೆ. ಪರಮಾತ್ಮನನ್ನೇ ಸಂಸಾರಿ–ಎನ್ನಲಾಗುವದಿಲ್ಲ. ಅವನು ನಿತ್ಯಶುದ್ಧಬುದ್ಧಮುಕ್ತಸ್ವಭಾವನೆಂದು ಶ್ರುತಿಯಲ್ಲಿ

ತಿಳಿಸಿದೆ. ಆದ್ದರಿಂದ ಸಂಸಾರಿಯಾದ ಜೀವನೊಬ್ಬನು ಬೇರೆಯಾಗಿರಬೇಕೆನಿಸುತ್ತದೆ. ಹೀಗೆ ಬೇರೆಯಾಗಿ ಜೀವನನ್ನು ಒಪ್ಪಿದರೂ ಮತ್ತೆ ಕೆಲವು ಸಂಶಯಗಳು ಬಗೆಹರಿಯುವದಿಲ್ಲ. ಹೇಗೆಂದರೆ–ಸಂಸಾರಿಯಾದ ಜೀವನಿಗೆ ಜನನಮರಣಗಳು ಉಂಟೆ? ಇಲ್ಲವೆ? ಎಂಬ ಪ್ರಶ್ನೆ ಹುಟ್ಟುತ್ತದೆ. ಉಂಟು–ಎಂದರೆ ಸತ್ತಮೇಲೆ ಜೀವನಿಲ್ಲವೆಂದಾಗಿ ಕರ್ಮಫಲಾನುಭವಕ್ಕೆ ಕರ್ತೃವೇ ಇಲ್ಲವಾಗಿ ಶಾಸ್ತ್ರವು ಅಪ್ರಮಾಣವಾಗುವದು. ಜೀವನಿಗೆ ಜನನಮರಣಗಳಿಲ್ಲ ಎಂದಾದರೆ ಆ ಜನನಮರಣಗಳನ್ನು ಯಾರಿಗೆ ಗಂಟುಹಾಕಬೇಕು? ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ. ಈ ವಿಷಯದಲ್ಲಿ ಶ್ರುತಿಯ ಸಮಾಧಾನವೇನೆಂದರೆ: ''ಮಗು, ಜೀವನಿಗೆ ಖಂಡಿತವಾಗಿ ಜನನಮರಣಗಳಿಲ್ಲ. ಅವನು ಚೈತನ್ಯಸ್ವರೂಪನಾಗಿದ್ದು ಅಜನಾಗಿರುತ್ತಾನೆ. ಆದರೂ ಉಪಾಧಿವಶದಿಂದ ದೇಹಾದಿಗಳು ಹುಟ್ಟಿದರೆ ಅವನೂ ಹುಟ್ಟಿದನೆನ್ನುವರು; ದೇಹವು ನಷ್ಟವಾದರೆ ಅವನೂ ನಾಶವಾದನು–ಎನ್ನುವರು. ಆದ್ದರಿಂದ ಜೀವತತ್ತ್ವವನ್ನು ಚೈತನ್ಯದೃಷ್ಟಿಯಿಂದ ನಿತ್ಯನೆಂದೂ ಅಸಂಸಾರಿಯೆಂದೂ ಪರಬ್ರಹ್ಮಕ್ಕಿಂತ ಅಭಿನ್ನನೆಂದೂ ತಿಳಿಯಬೇಕು. ಔಪಾಧಿಕದೃಷ್ಟಿಯಿಂದ ಸಂಸಾರಿಯೆಂದೂ ಕರ್ತೃಭೋಕ್ತೃವೆಂದೂ ತಿಳಿಯಬೇಕು. ಕರ್ತೃಭೋಕ್ತೃವೆನಿಸಿರುವನಾದರೂ ಜೀವನು ನಿತ್ಯನೇ ಎಂಬಿದು ಸಿದ್ಧಾಂತವು. ಆದ್ದರಿಂದ ಕರ್ಮಫಲಭೋಗಕ್ಕಾಗಿ ಅವನು ಜನ್ಮಾಂತರದೇಹಾಂತರಗಳನ್ನು ಪಡೆಯುತ್ತಿರುತ್ತಾನೆ. ಹೀಗೆ ಪಡೆಯುವಾಗ ಯಾವ ದೇಹವನ್ನು ಬಿಡುವನೋ ಅದು ಬಿದ್ದುಹೋಗುವದು. ಬೇರೊಂದು ದೇಹವನ್ನು ಸ್ವೀಕರಿಸಿದಾಗ ಅದು ಬೆಳೆಯುವದು. ಈ ನ್ಯಾಯದಿಂದ ತಿಳಿದು ಬರುವದೇನೆಂದರೆ: ಜೀವನಿಲ್ಲದ ದೇಹವು ನಾಶವಾಗುವದೇ ಹೊರತು ಜೀವನು ನಾಶವಾಗುವದಿಲ್ಲ. ಬಲ್ಬು ಬರ್ನ್ ಆದರೆ ಕತ್ತಲೆಯಾಗುವದು ನಿಜ. ಆದರೆ ಕರೆಂಟ್ ಏನೂ ಇಲ್ಲವಾಗುವದಿಲ್ಲ. ಹೊಸ ಬಲ್ಬ್ ಹಾಕಿದರೆ ಪುನಃ ಬೆಳಕು ಬರುವಂತೆಯೇ ಹೊಸಹೊಸ ದೇಹಗಳಲ್ಲಿ ಪುನಃ ಜೀವನು ಆವಿರ್ಭೂತನಾಗುವನು. ಆದ್ದರಿಂದ ಜೀವನನ್ನು ಜೀವನೆಂದು ವ್ಯವಹರಿಸಬೇಕಾದರೆ ಉಪಾಧಿಸಹಿತನನ್ನಾಗಿಯೇ ಕಂಡುಕೊಳ್ಳಬೇಕು. ಉಪಾಧಿಯಿಲ್ಲವಾದರೆ ಜೀವನ ಜೀವತ್ವವೂ ಬಾಧಿತವಾಗಿಬಿಡುವದರಿಂದ ಚೈತನ್ಯಸ್ವರೂಪದಿಂದ ಅಭೇದವೇ ನೆಲೆಗೊಳ್ಳುವದು. ''ಹೀಗೆ ಜೀವನೆನಿಸಿರುವ ನೀನು ಆ ಜಗತ್ಕಾರಣವಾದ ಪರಬ್ರಹ್ಮವೇ. ನಿನ್ನ ಜೀವತ್ವವೂ ಬ್ರಹ್ಮದ ಕಾರಣತ್ವವೂ ಎರಡೂ ಉಪಾಧಿಕೃತವೇ. ಎರಡು ಉಪಾಧಿಗಳನ್ನೂ ಕಿತ್ತೊಗೆದರೆ ಸದ್ಬ್ರಹ್ಮವೊಂದೇ ಪರಮಾರ್ಥವೆಂಬ ಜ್ಞಾನವು ಅನುಭವಾರೂಢವಾಗುವದು'' ಎಂದು ತಿಳಿಸಿದೆ.

ಈಗ ಜೀವನಿತ್ಯತ್ವವನ್ನು ಶ್ರುತಿಯು ಮತ್ತೊಂದು ಉದಾಹರಣೆಯಿಂದಲೂ ಹೇಗೆ ಸಾಧಿಸುತ್ತಿದೆ? ಎಂಬಿದನ್ನು ತಿಳಿಯೋಣ. ಒಂದು ದೊಡ್ಡ ಮರದ ಪೂರ್ಣಭಾಗಗಳನ್ನು

ಒಮ್ಮೆಗೇ ನೋಡಿದಾಗ ಕೆಲವು ಸಂದರ್ಭಗಳಲ್ಲಿ ವೈಚಿತ್ರ್ಯಗಳು ಕಂಡುಬರುತ್ತವೆ. ಆ ಮರದ ಒಂದು ಭಾಗಕ್ಕೆ ರೋಗವು ಅಂಟಿದ್ದರೆ ಅಥವಾ ಸಿಡಿಲು ಮುಂತಾದದ್ದರ ಸ್ಪರ್ಶವಾಗಿದ್ದರೆ ಅಲ್ಲಿ ಜೀವವಿರುವದಿಲ್ಲ. ಆದ್ದರಿಂದ ಬೆಳವಣಿಗೆಯೂ ಇರುವದಿಲ್ಲ. ಜೀವವಿರುವ ಉಳಿದ ಭಾಗಗಳಲ್ಲಿ ಬೆಳವಣಿಗೆಯಿದ್ದು ಹಸಿರಾಗಿರುವದು. ಹೂಹಣ್ಣುಗಳು ಕಾಣಿಸಿಕೊಳ್ಳುವವು. ಅಲ್ಲಿ ಸೌಂದರ್ಯವೂ ಜೀವನವೂ ಆನಂದವೂ ಅಡಗಿರುತ್ತವೆ. ಹಾಗೆಯೇ ಮನುಷ್ಯಶರೀರದಲ್ಲಿಯೂ ತಿಳಿಯಬೇಕು. ಇದರಿಂದ ಗೊತ್ತಾಗುವದೇನೆಂದರೆ: ಜೀವನು ಸಾಯುವದಿಲ್ಲ. ಜೀವನಿಲ್ಲದ ಭಾಗವು ಮಾತ್ರ ಸಾವನ್ನೂ ನಾಶವನ್ನೂ ಹೊಂದುವದು. ಹಾಗಾದರೆ ಜೀವನು ಶರೀರಾದಿಗಳಿಗಿಂತ ಬೇರೆಯೇ ಎಂದಾಯಿತಲ್ಲವೆ? ಎಂದರೆ ಶ್ರುತಿಯು ಹೌದು– ಎಂದೇ ಒಪ್ಪಿಕೊಳ್ಳುತ್ತದೆ. ಬೇರೆಯಾದ್ದರಿಂದ ವಿಂಗಡವಾಗಿ ಹಸು–ಕುದುರೆಗಳಂತೆ ಕಂಡುಬರಬೇಕಲ್ಲವೆ? ಎಂದರೆ ಇಲ್ಲವೆನ್ನುತ್ತದೆ. ಏಕೆಂದರೆ ಜೀವನೆಂಬುವನು ಸ್ವರೂಪದಿಂದ ಪರಿಚ್ಛಿನ್ನನಲ್ಲ; ಮೂರ್ತನಲ್ಲ, ಅಂತವುಳ್ಳವನಲ್ಲ; ಅವನು ಅಪರಿಚ್ಛಿನ್ನವೂ ಅಮೂರ್ತವೂ, ಅನಂತವೂ ಆದ ಬ್ರಹ್ಮವೇ ಆಗಿರುವನು. ಆದ್ದರಿಂದಲೇ ಅಪ್ರಮೇಯನೂ ಆಗಿದ್ದು ವಿಷಯವಾಗಿರುವ ವಸ್ತುಗಳಂತೆ ವಿಂಗಡವಾಗಿ ಕಂಡುಬರುವದಿಲ್ಲ. ಹೀಗೆ ಜೀವನು ನಿತ್ಯನಾಗಿರುವನು. ಭಗವದ್ಗೀತೆಯಲ್ಲಿಯೂ ಜೀವನ ವಿಷಯಕ್ಕೆ ತಿಳಿಸುವಾಗ ಅವನು ಹುಟ್ಟುಸಾವುಗಳಿಲ್ಲದವನೆಂದೂ ಅವಿನಾಶಿಯೂ ಅಪ್ರಮೇಯನೂ ಆಗಿರುವನೆಂದೂ ವರ್ಣಿಸಿದೆ.

ಈಗ ಈ ಜೀವ–ಬ್ರಹ್ಮರುಗಳ ಜಿಜ್ಞಾಸೆಯ ತಾತ್ಪರ್ಯವೇನೆಂಬುದನ್ನು ಗ್ರಹಿಸಬಹುದಾಗಿದೆ. ಯಾವ ವಾದಿಗಳಿಗಾಗಲಿ, ಮತಾಚಾರ್ಯರುಗಳಿಗಾಗಲಿ, ವಿಚಾರಕರಿಗಾಗಲಿ ಇಬ್ಬರು ಆತ್ಮರುಗಳಿದ್ದಾರೆಂಬುದು ಒಪ್ಪಿಗೆಯಾಗಿರುವದಿಲ್ಲ. ಹಾಗೆಯೇ ಆತ್ಮವು ಬ್ರಹ್ಮವಲ್ಲದ ಸಂಸಾರಿಯೆಂಬುದಾಗಲಿ ಬ್ರಹ್ಮವು ಆತ್ಮನಲ್ಲದ ಅನಾತ್ಮವೆಂಬುದಾಗಲಿ ಒಪ್ಪಾಗುವದಿಲ್ಲ. ಆತ್ಮಧರ್ಮಗಳೂ ಬ್ರಹ್ಮಧರ್ಮಗಳೂ ವ್ಯವಹಾರದೃಷ್ಟಿಯಿಂದ ಪರಸ್ಪರ ವಿರುದ್ಧವಾಗಿ ಕಂಡರೂ ಚೆನ್ನಾಗಿ ವಿಮರ್ಶಿಸಿ ನೋಡಿದಾಗ ಆತ್ಮನಲ್ಲಿ ಕಂಡುಬಂದ ಸಂಸಾರಿಧರ್ಮವು ಹುಸಿಯೆಂದೂ ಬ್ರಹ್ಮದ ಧರ್ಮಗಳಾದ ಸತ್ಯಜ್ಞಾನಾನಂದಗಳು ಪರಮಾರ್ಥವೆಂದೂ ಗೊತ್ತಾಗುವದು. ಇನ್ನುಳಿದಿರುವ ಸಮನ್ವಯವೆಂದರೆ ಬ್ರಹ್ಮವೂ ಆತ್ಮನೂ ಒಂದೇ–ಎಂಬ ಐಕ್ಯಜ್ಞಾನವೊಂದೇ ಆಗಿದೆ. ಅದನ್ನೇ 'ತತ್ತ್ವಮಸಿ' ಎಂದು ಶ್ರುತಿಯಲ್ಲಿ ಉಪದೇಶಿಸಿದೆ. ಈ ಐಕ್ಯಜ್ಞಾನವು ದೃಢವಾಗಿ ನೆಲೆಗೊಳ್ಳುವವರೆಗೂ ವಿಚಾರ–ಮನನ–ನಿದಿಧ್ಯಾಸಗಳನ್ನು ಜಿಜ್ಞಾಸುಗಳು ಮಾಡುತ್ತಿರಬೇಕು.

---

## ಸ್ಥೂಲವು ಸೂಕ್ಷ್ಮದ ಕಾರ್ಯವೇ

ಓಮ್ ॥ ಯಂ ವೈ ಸೋಮ್ಯ ಏತಮಣಿಮಾನಂ ನ ನಿಭಾಲಯಸ ಏತಸ್ಯ ವೈ ಸೋಮ್ಯ ಏಷೋಽಣಿಮ್ನ ಏವಂ ಮಹಾನ್ ನ್ಯಗ್ರೋಧಸ್ತಿಷ್ಠತಿ ಶ್ರದ್ಧತ್ಸ್ವ ಸೋಮ್ಯೇತಿ ॥ 6–12–2.

ಭಾವಾರ್ಥ:– ''ಸೋಮ್ಯ, ಯಾವ ಈ ಅಣಿಮೆಯನ್ನು ಕಾಣದಿರುವೆಯೋ ಇದೇ ಅಣಿಮೆಯಿಂದಲೇ ಸೋಮ್ಯನೆ, ಹೀಗೆ ದೊಡ್ಡದಾಗಿರುವ ಆಲದಮರವು (ಎದ್ದು) ನಿಂತಿದೆ, ಸೋಮ್ಯನೆ, ಶ್ರದ್ಧೆಯಿಡು.'' (ಹಾಗೆಯೇ ಸೂಕ್ಷ್ಮವಾದ ಸತ್ತಿನಿಂದ ಸ್ಥೂಲವಾದ ಜಗತ್ತು ಉಂಟಾಗಿದೆ).

(ಜಗತ್ಕಾರಣವಾದ ಸತ್ತು (ಬ್ರಹ್ಮವು) ಆಲದಬೀಜದ ಸೂಕ್ಷ್ಮವಾದ ಅಣುವಿನಂತೆ ಇದೆ. ಅದು ಕಣ್ಣಿಗೆ ಕಾಣಿಸುವದಿಲ್ಲವಾದರೂ ಅದಿಲ್ಲದೆ ಜಗತ್ತು ಉಂಟಾಗಲಾರದು. ಆದರೆ ಕಾಣದೆ ಇರುವದನ್ನು ಇದೆಯೆಂದು ನಂಬುವದು ಹೇಗೆ? ಎಂದು ತರ್ಕಮಾಡಬೇಡ– ಅದನ್ನು ಶ್ರದ್ಧೆಯಿಟ್ಟು ಅರಿತುಕೊ– ಎಂದಭಿಪ್ರಾಯ.)

## 45. ಅಣುವಾದ ಸತ್ತಿನಿಂದಲೇ ಜಗತ್ತು ಆಗಿದೆ

ಛಾಂದೋಗ್ಯೋಪನಿಷತ್ತಿನ ವಿಚಾರಸರಣಿಯಲ್ಲಿ ಈವರೆಗೆ ಸದ್ಬ್ರಹ್ಮದಿಂದಲೇ ಜಗತ್ತಿನ ಸೃಷ್ಟಿಯಾಗಿದೆಯೆಂದೂ ಅದೇ ಜೀವಾತ್ಮರೂಪದಿಂದ ಒಳಹೊಕ್ಕಿದೆಯೆಂದೂ ಜೀವತತ್ತ್ವವು ಅವಿನಾಶಿಯೆಂದೂ ನಿಜವಾಗಿ ಜೀವನು ಸದ್ಬ್ರಹ್ಮಕ್ಕಿಂತ ಬೇರೆಯಲ್ಲ ವೆಂದೂ ಸುಷುಪ್ತಿಯಲ್ಲಿ ಜೀವರುಗಳು ಸದ್ಬ್ರಹ್ಮದಲ್ಲಿಯೇ ಒಂದಾಗಿರುತ್ತಾರೆಂದೂ ತಿಳಿಸಿದ್ದಾಗಿದೆ. ಈಗ ಆ ಸದ್ಬ್ರಹ್ಮವು ಎಲ್ಲರ ಆತ್ಮನಾಗಿದ್ದರೂ ಏಕೆ ಪ್ರಸಿದ್ಧವಾಗಿ ತಿಳಿಯಬರುತ್ತಿಲ್ಲ? ಎಂಬಿದನ್ನು ವಿವರಿಸಲಾಗುವದು. ಮತ್ತು ಅದು (ಬ್ರಹ್ಮವು) ಅತ್ಯಂತ ಅಣುವಾಗಿದ್ದರೂ ಅದರಿಂದಲೇ ಸ್ಥೂಲವಾದ ಪ್ರಪಂಚವೆಲ್ಲವೂ ಹೇಗೆ ಹೊರಬಂದಿದೆ– ಎಂಬಿದನ್ನೂ ವಿಚಾರಮಾಡಲಾಗುವದು.

ಜಗನ್ಮೂಲವನ್ನು ವಿಚಾರಮಾಡುವವರಿಗೆಲ್ಲ ಒಂದು ಆಶೆಯಿರುತ್ತದೆ. ಏನೆಂದರೆ– ಮೂಲವಸ್ತುವು ಒಂದೇ ಆಗಿಬಿಟ್ಟಿದ್ದರೆ ಜಗತ್ತನ್ನೆಲ್ಲ ತಿಳಿಯಲು ಅನುಕೂಲ ವಾಗುತ್ತದೆ– ಎಂಬಿದು. ಇದೇನೋ ಸರಿ. ಇದರ ಜೊತೆಗೆ ಆ ವಸ್ತುವು ಅನಾತ್ಮವಾಗದೆ ಆತ್ಮನೇ (ತಾನೇ) ಆಗಿಬಿಟ್ಟದ್ದರಂತೂ ಇನ್ನೂ ಒಳ್ಳೆಯದಾಯಿತಲ್ಲವೆ? ಹಾಗೇಕೆ ವಿಚಾರಮಾಡಬಾರದು? ಎಂದು ವೇದಾಂತವು ಮಾನವನನ್ನು ಅಂತರ್ಮುಖತ್ವದ ಕಡೆಗೆ ಒಯ್ಯುತ್ತಿದೆ. ಏಕೆಂದರೆ ತನಗಿಂತ ಬೇರೆಯಾದದ್ದು ಒಂದಿದೆ; ಅದೇ ಸರ್ವಜ್ಞವು;

ಸರ್ವಶಕ್ತವು–ಎಂಬ ಮತದಲ್ಲಿ ಆ ಪರೋಕ್ಷವಸ್ತುವಿನ ವಿಷಯಕ್ಕೆ ಕುತೂಹಲವೂ ಭಯವೂ ಆಶ್ಚರ್ಯವೂ ಸ್ವಾಭಾವಿಕವಾಗಿರುತ್ತದೆ. ಇನ್ನೂ ಅದು ಸೂಕ್ಷ್ಮವೂ ಅವ್ಯಕ್ತವೂ ಆದಂತೆಲ್ಲ ವಿಚಾರಕರಲ್ಲಿ ಮತಭೇದಗಳೂ ತರ್ಕಗಳೂ ಎದ್ದುಕೊಳ್ಳುತ್ತವೆ. ಮರಣಾನಂತರವೇ ಅದನ್ನು ಬೇರೆಯ ಲೋಕದಲ್ಲಿಯೇ ಕಾಲಾಂತರದಲ್ಲಿ ಪಡೆಯತಕ್ಕದ್ದು–ಎಂದುಬಿಟ್ಟರಂತೂ ಕೇವಲ ಶ್ರದ್ಧಾಗಮ್ಯವಾಗಿಬಿಡುತ್ತದೆ. ಸಾರ್ವತ್ರಿಕವಾಗುವದಿಲ್ಲ, ವೈಜ್ಞಾನಿಕವೂ ಆಗುವದಿಲ್ಲ. ಆದ್ದರಿಂದ ಜಗನ್ಮೂಲವು ನಿಜವಾಗಿ ಯಾವದು? ಅದರ ಸ್ವರೂಪವೇನು? ಅದು ಅನಾತ್ಮವೊ, ಆತ್ಮನೊ–ಎಂಬಿದನ್ನು ನಿರ್ಣಯಿಸಹೊರಡುವವರು ಬಹಳ ಜಾಣರೂ ಸೂಕ್ಷ್ಮಮತಿಗಳೂ ಅನುಭವಿಗಳೂ ಆಗಿರಬೇಕು. ಭಾರತದೇಶದ ಋಷಿಗಳು ಇಂಥ ಮಹನೀಯರಾಗಿರುತ್ತಾರೆ. ಅವರಿಗೆ ಸೂಕ್ಷ್ಮವಸ್ತುದರ್ಶನಕ್ಕೆ ಬೇಕಾದ ಏಕಾಗ್ರವಾದ ಅಂತಃಕರಣವಿದೆ. ತಪಸ್ಸಿದೆ; ಶ್ರದ್ಧೆಯಿದೆ; ವಿಚಾರಶಕ್ತಿಯಿದೆ; ಆಗಮ (ಉಪದೇಶ)ವೂ ತದಂಗವಾದ ಮನನವೂ ಇದೆ. ಹೀಗೆಲ್ಲ ಋಷಿಗಳು ಅಸಾಧಾರಣಸಾಧನಸಾಮಗ್ರಿಗಳಿಂದ ಸಂಪನ್ನರಾಗಿದ್ದುದರಿಂದಲೇ ಸಾವಿರಾರು ವರ್ಷಗಳ ಹಿಂದೆಯೇ ಜಗನ್ಮೂಲವನ್ನು ಕಂಡುಕೊಂಡು ಅದೇ ಆತ್ಮನೆಂದು ಪ್ರತಿಪಾದಿಸಿ ತಿಳಿಸಿದರು. ಉಪನಿಷತ್ತುಗಳೆಂದರೆ ಈ ಜ್ಞಾನರಾಶಿಯೇ ಆಗಿವೆ. ಈಗಿನ ಕಾಲಕ್ಕೂ ಯಾವ ವಿಚಾರಕನಾದರೂ ಸರಿ, ಅವನು ಯಾವ ದೇಶದವನಾದರೂ ಆಗಲಿ, ಋಷಿಗಳಂತೆ ಸಾಧನಸಾಮಗ್ರಿಗಳನ್ನು ಜೋಡಿಸಿಕೊಂಡು ಉಪನಿಷತ್ತುಗಳು ತಿಳಿಸಿಕೊಡುವ ಅಂತರ್ಮುಖಮಾರ್ಗದಿಂದ ಪ್ರಯತ್ನಪಟ್ಟದ್ದೇ ಆದರೆ ಈಗಲೇ ಇಲ್ಲಿಯೇ ಜಗನ್ಮೂಲವನ್ನು ಅರಿತವನಾಗಿಬಿಡುತ್ತಾನೆ. ಅಷ್ಟೇ ಅಲ್ಲ; ಅದೇ ತಾನೆಂಬ ಐಕ್ಯಜ್ಞಾನದಿಂದ ಮುಕ್ತನೂ ಆಗಿಬಿಡುತ್ತಾನೆ.

ಈಗ ಉಪನಿಷತ್ತಿನ ವಿಚಾರಸರಣಿಯನ್ನು ನೋಡೋಣ. ಶ್ವೇತಕೇತುವಿಗೆ ಮತ್ತೊಂದು ಸಂದೇಹವುಂಟಾಯಿತು. ಜಗತ್ತಾದರೊ, ಬಹಳ ಸ್ಥೂಲವಾಗಿದೆ. ಭೂಮಿ, ಸೂರ್ಯ–ಚಂದ್ರರು, ನೀರು–ಬೆಂಕಿ ಮುಂತಾದವುಗಳು ಪರಿಣಾಮಿನಿತ್ಯಗಳೆನಿಸಿಕೊಂಡು ಸೃಷ್ಟಿಕಾಲದಿಂದಲೂ ಹಾಗೇ ಇದ್ದುಕೊಂಡಿವೆ. ಇನ್ನು ಅಂತರಿಕ್ಷಾದಿಲೋಕಗಳೂ ಅಲ್ಲಿರಬಹುದಾದ ಜೀವಿಗಳೂ ಎಲ್ಲವೂ ಸ್ಥೂಲವಾಗಿದ್ದುಕೊಂಡಿವೆ. ಹೀಗೆ ಎಲ್ಲೆಲ್ಲಿಯೂ ಸ್ಥೂಲಪ್ರಪಂಚವೇ ಕಂಡುಬರುತ್ತಿದೆ. ಇದು ಅತ್ಯಂತಸೂಕ್ಷ್ಮವಾದ, ಅಣುವಿಗಿಂತಲೂ ಅಣುವಾದ ಸದ್ವಸ್ತುವಿನಿಂದ ಬಂದಿದೆಯೆಂಬುದನ್ನು ತಿಳಿಯುವದು ಹೇಗೆ?–ಎಂಬ ಸಂಶಯವನ್ನು ಅವನು ತಂದೆಯ ಮುಂದಿಟ್ಟನು. ಆಗ ತಂದೆಯು ಎಂದಿನಂತೆ ದೃಷ್ಟಾಂತಮುಖದಿಂದಲೇ ವಿಷಯವನ್ನು ತಿಳಿಸೋಣವೆಂತ ತೀರ್ಮಾನಿಸಿ 'ಮಗು, ಇಲ್ಲಿ ಬಾ, ನೀನು ಒಂದು ಆಲದ ಮರದ ಬೀಜವನ್ನು ತೆಗೆದುಕೊಂಡು ಬಾ'–ಎಂದನು. ''ಪೂಜ್ಯರೆ,

ತಂದಿರುವೆನು'' ಎಂದು ಶ್ವೇತಕೇತುವು ತಿಳಿಸಿದನು. ?ಅದನ್ನು ಒಡೆದು ಚೂರುಮಾಡು'' ಎಂದು ತಂದೆಯು ಹೇಳಿದನು. ''ಒಡೆದೆನು'' ಎಂದು ಮಗನೆಂದನು; ''ನಿನಗೆ ಈಗ ಅದರಲ್ಲಿ ಏನು ಕಾಣುತ್ತಿದೆ?'' ಎಂದು ತಂದೆಯು ಕೇಳಿದನು. 'ಸಣ್ಣ ಸಣ್ಣ ಅಣುಗಳು ಕಾಣುತ್ತಿವೆ'–ಎಂದು ಮಗನೆಂದನು. 'ಅದರಲ್ಲಿ ಒಂದು ಅಣುವನ್ನು ಒಡೆಯಪ್ಪ' ಎಂದು ತಂದೆಯೆಂದನು. ''ಒಡೆದೆನು''–ಎಂದು ಮಗನೆಂದನು, ''ಈಗೇನು ಕಾಣುತ್ತಿದೆ? ಹೇಳು''–ಎಂದು ಉದ್ದಾಲಕನು ಕೇಳಿದನು. ''ಏನೂ ಕಾಣುವದಿಲ್ಲ'' ಎಂದು ಮಗನು ಉತ್ತರಿಸಿದನು.

ಈ ಸಂವಾದದ ಅಭಿಪ್ರಾಯವನ್ನು ಉದ್ದಾಲಕನು ಹೀಗೆ ನಿರ್ಣಯಿಸಿ ಹೇಳಿದನು. ಏನೆಂದರೆ ''ಮಗನೆ, ಈ ಸಣ್ಣದಾದ ಅಣುಭಾಗವನ್ನೇ ನೀನು ಕಾಣಲಾರೆ; ನಿಜ. ಆದರೆ ಇದೇ ಅಣುಶಕ್ತಿಯಿಂದಲೇ ದೊಡ್ಡದಾದ ಆಲದಮರವು ಬೆಳೆದು ನಿಂತಿರುತ್ತದೆ. ಬೀಜವಾಗಲಿ, ಬೀಜದ ಸೂಕ್ಷ್ಮಾವಯವಗಳಾಗಲಿ, ಕಾಣಬೇಕಾದ ಅವಶ್ಯಕತೆಯಿಲ್ಲ ಆದರೆ ಬೀಜವಿಲ್ಲವೆನ್ನಲಾಗುವದಿಲ್ಲ ಮತ್ತು ಬೀಜವಿಲ್ಲದೆ ಮರವು ಹುಟ್ಟಲೂ ಆರದು. ಹೀಗೆಯೇ ಅತಿಸೂಕ್ಷ್ಮವಾದ ಸದ್ಬ್ರಹ್ಮವೂ ಇದ್ದುಕೊಂಡಿದೆ. ಅದೇ ಜಗದ್ಬೀಜವು. ಅದು ಇದೆಯೆಂದು ಮೊದಲು ನಂಬು; ಅನಂತರ ಅದನ್ನು ಕಂಡುಕೊಳ್ಳುವದಕ್ಕೆ ಪ್ರಯತ್ನ ಮಾಡು'' ಹೀಗೆಂದು ತಂದೆಯ ಹೇಳಿದಾಗ ಶ್ವೇತಕೇತುವು ಸರಿ–ಎಂದು ತಲೆದೂಗಿದನು.

ಉಪನಿಷತ್ತಿನಲ್ಲಿ ತಿಳಿಸಿರುವಂತೆ ಈ ಸಂವಾದರೂಪವಾದ ವಿಷಯದ ಮೂಲ ವನ್ನು ನಾವು ಚೆನ್ನಾಗಿ ಮನನಮಾಡಬೇಕು. ಈಗಿನ ವಿಜ್ಞಾನಿಗಳು ಸತ್ಕಾರ್ಯವಾದಿಗಳ ಗುಂಪಿಗೇ ಸೇರಿರುತ್ತಾರೆ. ಬಹಳ ಮಟ್ಟಿಗೆ ಅವರು ಹಿಂದಿನ ಸಾಂಖ್ಯದರ್ಶನದವರನ್ನು ಹೋಲುತ್ತಾರೆ. ಸಾಂಖ್ಯರೂ ಸತ್ಕಾರ್ಯವಾದಿಗಳು. ಇದ್ದದ್ದು ಮಾತ್ರವೇ ಹುಟ್ಟುತ್ತದೆ– ಎನ್ನುವರು. ಎಳ್ಳಿನಲ್ಲಿ ಎಣ್ಣೆಯಿರುವದರಿಂದಲೇ ಎಳ್ಳನ್ನು ಹಿಂಡಿದಾಗ ಎಣ್ಣೆಯು ಬರುತ್ತದೆ; ಹಾಗಿಲ್ಲವಾದರೆ ಮರಳಿನಿಂದಲೂ ಎಣ್ಣೆಯನ್ನು ತೆಗೆಯಬಹುದಾಗಿತ್ತು. ಅದು ಸಾಧ್ಯವಿಲ್ಲ. ಏಕೆಂದರೆ ಎಣ್ಣೆಯು ಮರಳಿನಲ್ಲಿಲ್ಲ. ಆದ್ದರಿಂದ ಅದು ಮರಳಿನಿಂದ ಹುಟ್ಟುವಂತಿಲ್ಲ– ಎಂಬಿದೇ ಸತ್ಕಾರ್ಯವಾದವು. ವೇದಾಂತಿಗಳು ವ್ಯವಹಾರದೃಷ್ಟಿಯಿಂದ ಸತ್ಕಾರ್ಯವಾದಿಗಳೇ ಆಗಿರುತ್ತಾರೆ. ಆದರೆ ವೇದಾಂತಿಗಳಿಗೆ ಅಸತ್ಕಾರ್ಯವಾದ, ಹಾಗೂ ಶೂನ್ಯವಾದಗಳನ್ನು ಖಂಡಿಸುವದಕ್ಕಾಗಿ ಮಾತ್ರವೇ ಸತ್ಕಾರ್ಯವಾದವು ಉಪಯುಕ್ತವಾಗಿದೆಯೇ ಹೊರತು ಸಾಂಖ್ಯರಂತೆ ಕಾರಣವು ಕಾರ್ಯಾಕಾರವಾಗಿ ಪರಿಣಾಮವೂ ಆಗುತ್ತದೆ–ಎಂಬಿದರಲ್ಲಿ ತಾತ್ಪರ್ಯವಿಲ್ಲ. ಇರಲಿ. ಕೆಲವು ದೂರದವರೆಗೆ ಸತ್ಕಾರ್ಯವಾದವು ಬ್ರಹ್ಮವನ್ನು ಅರಿಯುವದಕ್ಕೆ ಸಹಾಯಕವಾಗಿರುವದಂತೂ ನಿಜ. ಇಲ್ಲಿ ಕೊಟ್ಟಿರುವ ದೃಷ್ಟಾಂತ ಹಾಗೂ ದಾರ್ಷ್ಟಾಂತಿಕದ ಸಮನ್ವಯವನ್ನು ಕುರಿತ ಅನ್ವೇಷಣೆಯನ್ನು ಆಗಮಾನುಗುಣವಾಗಿ ಎಂದಿನಂತೆ ಮುಂದುವರೆಸಬೇಕು. ಕೇವಲ

ದೃಷ್ಟಾಂತ–ತರ್ಕಗಳಿಂದ ವಸ್ತುಸಿದ್ಧಿಯನ್ನು ವೇದಾಂತಿಗಳು ಮಾಡುವದಿಲ್ಲ. ಅಷ್ಟೇ ಅಲ್ಲ; ಸಿದ್ಧವಸ್ತುವೇ ಆಗಿರುವ ಪರಬ್ರಹ್ಮವನ್ನು ಅಧ್ಯಾರೋಪಗಳನ್ನು ಅಲ್ಲಗಳೆಯುವದರ ಮೂಲಕ ತಿಳಿಸುವದು ಮಾತ್ರವೇ ವೇದಾಂತದರ್ಶನದ ಗುರಿಯಾಗಿರುತ್ತದೆ.

ಈಗ ಮತ್ತೊಂದು ಪ್ರಶ್ನೆಯೇಳಬಹುದಾಗಿದೆ. ಬ್ರಹ್ಮವೆಂಬ ಜಗತ್ಕಾರಣವಸ್ತುವು ಸೂಕ್ಷ್ಮವಾಗಿರುವದರಿಂದ ದೃಗ್ಗೋಚರವಲ್ಲ; ಆದರೆ ಅದನ್ನು ಇಲ್ಲವೆನ್ನಲಾಗುವದಿಲ್ಲ– ಎಂದಿಂತು ತಿಳಿದದ್ದಾಯಿತು. ಹಾಗೆಯೇ ಶ್ರದ್ಧೆಯಿಂದಲೇ ಅನ್ವೇಷಣೆಯನ್ನು ಮುಂದುವರೆಸೋಣ. ಆದರೆ ಅದು ಎಂದಾದರೂ ಯಾರಿಗಾದರೂ ಕಂಡುಬಂದಿದೆಯೆ? ಹೇಗೆ? ಅದನ್ನು ಕಂಡವರಿದ್ದಾರೆಯೆ? ಇದ್ದರೆ ಯಾವ ಉಪಾಯದಿಂದ ಅವರು ಕಂಡುಕೊಂಡರು? ಎಂದು ಕೇಳಬಹುದಲ್ಲವೆ? ಈವರೆಗೂ ಯಾರೂ ಕಂಡುಕೊಂಡೇ ಇಲ್ಲವಾದರೆ ಅದು ಇಲ್ಲವೆಂದೇ ಏಕೆ ನಿಶ್ಚಯಿಸಬಾರದು? ಶ್ರದ್ಧೆಯನ್ನು ಎಷ್ಟು ದೂರದವರೆಗೆ ಮತ್ತು ಕಾಲದವರೆಗೆ ಕಾಪಾಡಿಕೊಳ್ಳಲಾದೀತು? ಬ್ರಹ್ಮವು ಇರುವ ವಸ್ತುವೇ ಆದರೆ ಒಂದಲ್ಲ–ಒಂದು ರೀತಿಯಿಂದ ಅನುಭವಗೋಚರವಾಗಬೇಕಲ್ಲವೆ? ಎಂದು ಕೇಳಬಹುದಾಗಿದೆ. ಇದಕ್ಕೆ ಉಪನಿಷತ್ತು ಹೀಗೆ ಉತ್ತರಿಸಿದೆ:–

''ಮಗು, ಒಂದು ಉಪ್ಪಿನಗಟ್ಟಿಯನ್ನು ತೆಗೆದುಕೊಂಡು ಒಂದು ಪಾತ್ರೆಯ ನೀರಿನಲ್ಲಿ ಮುಳುಗಿಸು. ಕೆಲವು ಗಂಟೆಗಳ ಅನಂತರ ಅದನ್ನು ಹಾಗೆಯೇ ತೆಗೆದುಕೊಂಡು ಬಾ'' ಎಂದು ತಂದೆಯು ಹೇಳಿದನು. ಮಗನು ಹಾಗೆಯೇ ಮಾಡಿದಾಗ ಕೆಲವು ಸಮಯವು ಕಳೆದ ಅನಂತರ ಕೈಯಿಂದ ಎಷ್ಟು ಗರಬಾಡಿದರೂ ಉಪ್ಪಿನ ಗಟ್ಟಿಯು ಸಿಗಲಿಲ್ಲ. ಕಾರಣವೇನೆಂದರೆ ಅದು ನೀರಿನಲ್ಲಿ ಕರಗಿಹೋಗಿತ್ತು. ಪೆಚ್ಚು ಮುಖದಿಂದ ಬಂದು ತಂದೆಗೆ ವಿಷಯವನ್ನು ತಿಳಿಸಿದನು. ಆಗ ತಂದೆಯು ''ಹೆದರಬೇಡ, ನೀನು ಮುಳುಗಿಸಿದ್ದ ಉಪ್ಪು ನಾಶವಾಗಿಲ್ಲ; ಇದ್ದೇ ಇದೆ. ಅದನ್ನು ನಿನಗೆ ಅನುಭವಕ್ಕೆ ತಂದುಕೊಡುತ್ತೇನೆ. ಆ ಪಾತ್ರೆಯನ್ನು ತೆಗೆದುಕೊಂಡು ಬಾ''? ಎಂದನು. ಮಗನು ಹಾಗೆಯೇ ಮಾಡಲು ತಂದೆಯು ಆ ಪಾತ್ರೆಯ ನೀರನ್ನು ಒಂದು ಗೊತ್ತಾದ ಭಾಗದಲ್ಲಿ ಸೌಟಿನಿಂದ ತುಂಬಿ ಮಗನ ಕೈಗೆ ಹಾಕಿ ''ಕುಡಿ'' ಎಂದನು. ''ನೀರನ್ನು ಕುಡಿದಾಗ ಹೇಗಿತ್ತು''? ಎಂದು ಕೇಳಲು ''ಉಪ್ಪಾಗಿತ್ತು'' ಎಂದು ಮಗನು ಹೇಳಿದನು. ಇದೇ ರೀತಿಯಾಗಿ ಪಾತ್ರೆಯ ಎಲ್ಲಾ ಭಾಗಗಳಿಂದಲೂ ನೀರನ್ನೆತ್ತಿ ಕುಡಿಸಿದ ತಂದೆಯು ಹೀಗೆಂದನು: ''ಮಗು ಯಾವ ಉಪ್ಪು ಮೊದಲು ಗಟ್ಟಿಯಾಗಿದ್ದಾಗ ಕೈಗೆ ಹಿಡಿದುಕೊಳ್ಳಲು ಸಿಗುತ್ತಿತ್ತೋ ಅದು ಕರಗಿದಾಗ ಹಸ್ತದಿಂದ ಗ್ರಹಿಸಲಾಗಲಿಲ್ಲ. ಆದರೆ ಉಪ್ಪು ಇಲ್ಲವಾಗಿಲ್ಲ ಇದ್ದುಕೊಂಡೇ ಇದೆ. ಈಗ ಅದನ್ನು ತಿಳಿಯಲು ಕೈಯಿನ ಬದಲು ನಾಲಗೆಯನ್ನು ಉಪಯೋಗಿಸಬೇಕಾಯಿತಲ್ಲವೆ? ಹಾಗೆಯೇ ಅಣುವಾಗಿರುವ ಜಗದ್ಬೀಜವಾದ ವಸ್ತುವನ್ನು ಅರಿಯಲು ಸ್ಥೂಲವಾದ

ಇಂದ್ರಿಯಗಳನ್ನು ಉಪಯೋಗಿಸಿ ಬಹಿರಂಗದಲ್ಲಿಯೇ ಹುಡುಕುತ್ತಿದ್ದರೆ ಕಾಣಲಾಗುವದಿಲ್ಲ. ಆದ್ದರಿಂದ ಇಂದ್ರಿಯಗಳನ್ನು ಒಳಸರಿಸಿಯಿಕೊಂಡು ಅಂತರ್ಮುಖ ನಾಗಿ ಯೋಗದಿಂದ–ಎಂದರೆ ಚಿತ್ತಸಮಾಧಾನದಿಂದ ನಿನ್ನಲ್ಲಿಯೇ ನೀನು ನೋಡಿಕೊಂಡಲ್ಲಿ ಆ ಬ್ರಹ್ಮವೇ ನೀನೆಂದು ಕಂಡುಕೊಳ್ಳುವೆ. ಏಕೆಂದರೆ ಅದೇ ನೀನಾಗಿರುವೆ''–ಎಂದನು. ಆಗ ಶ್ವೇತಕೇತುವು ಹೌದು–ಎಂದು ಒಪ್ಪಿಕೊಂಡನು. ಇದರಿಂದ ತಿಳಿಯಬರುವದೇನೆಂದರೆ: ಆತ್ಮನನ್ನು ವಿಷಯ (Object) ನನ್ನಾಗಿ ಮಾಡಿಕೊಂಡು ಹುಡುಕಿದಷ್ಟೂ ಸಿಗುವದರಬದಲು ದೂರನಾಗುವನು. ಎಂದೆಂದಿಗೂ ಆತ್ಮನ ಛಾಯಾಚಿತ್ರವನ್ನು ತೆಗೆಯುವದಾಗಲಿ, ತೂಕವನ್ನು ಕಂಡುಹಿಡಿಯುವದಾಗಲಿ ಸಾಧ್ಯವಿಲ್ಲ. ಹಾಗೆ ಮಾಡಹೊರಟವರು ತಪ್ಪು ಗ್ರಹಿಕೆಯಿಂದ ಅನಾತ್ಮವನ್ನೇ ಆತ್ಮನೆಂದು ನಿರ್ಣಯಿಸುವ ಸಂಭವವಿದೆ. ಇದು ಅವಿದ್ಯೆಯೇ ಸರಿ. ಈ ಅನ್ವೇಷಣೆಯಲ್ಲಿ ವಿಜ್ಞಾನದ ಹಾದಿ ಸರಿಯಲ್ಲವೆಂದೇ ಹೇಳಬೇಕಾಗಿದೆ. ಅಧ್ಯಾತ್ಮದ ಮಾರ್ಗವು ಹೇಗಿರುವದೆಂದರೆ: ಕಂಡುಹಿಡಿಯಲು ಹೊರಟವನನ್ನೇ ಅದು ವಿಚಾರಕ್ಕೆ ಒಳಪಡಿಸಿಕೊಳ್ಳುತ್ತದೆ. ಆಗ ಯಾವ ಬಹಿರಂಗವಾದ ಯಂತ್ರಸಾಧನಗಳಾಗಲಿ, ಇಂದ್ರಿಯಗಳಾಗಲಿ, ಮನಸ್ಸಾಗಲಿ ಬೇಕಾಗುವದಿಲ್ಲ. ಆದರೆ ಅವುಗಳ ವ್ಯಾಪಾರವು ಶಾಂತವಾಗುವದು ತೀರ ಅಗತ್ಯವಾಗಿರುತ್ತದೆ. ಉಳಿದೆಲ್ಲ ಕರಣಗಳ ವ್ಯಾಪಾರವನ್ನೂ ಪ್ರಯತ್ನದಿಂದ ನಿಲ್ಲಿಸಿದ ಮೇಲೂ ಮನೋವ್ಯಾಪಾರವನ್ನು ಇಲ್ಲವಾಗಿಸಲು ಬಹಳ ಶ್ರಮಪಡಬೇಕಾಗುವದು. ಅದು ಅಭ್ಯಾಸದಿಂದ ದಕ್ಕಿದಕೂಡಲೆ ದ್ವೈತವಿಲ್ಲವಾಗಲು ಆತ್ಮಸತ್ಯಾನುಬೋಧವು ಆಗುವದರಿಂದ ಹೊಸದಾಗಿ ಆತ್ಮದರ್ಶನವಾದಂತೆ ಅನುಭವವಾಗುವದು. ಆದರೆ ಆತ್ಮನು ಪ್ರಮಾತೃವೆನಿಸಿದ್ದವನ ತಿರುಳೇ ಆಗಿಬಿಟ್ಟಿರುವನು. ಇದನ್ನು ಶ್ರುತಿಯಲ್ಲಿ 'ಕೇನ ಕಂ ಪಶ್ಯೇತ್'', ಎಂದು ಹೊಗಳಿದೆ.

------

## ಆಚಾರ್ಯೋಪದೇಶದಿಂದ ಜ್ಞಾನ

**ಓಮ್ ॥ ಪಂಡಿತೋ ಮೇಧಾವೀ ಗಂಧಾರಾನೇವ ಉಪಸಂಪದ್ಯೇತ ಏವಮೇವೇಹಾಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ ॥ 6–14–2.**

**ಭಾವಾರ್ಥ:–** ಪಂಡಿತನೂ ಮೇಧಾವಿಯೂ (ಆದವನು) ಗಂಧಾರವನ್ನೇ ಸೇರಿಕೊಳ್ಳುವನೋ ಹಾಗೆಯೇ ಇಲ್ಲಿ ಆಚಾರ್ಯವಂತನಾದ ಪುರುಷನೇ ಅರಿತು ಕೊಳ್ಳುತ್ತಾನೆ. ಅವನಿಗೆ ಎಲ್ಲಿಯವರೆಗೆ ಬಿಡುಗಡೆಯಾಗುವದಿಲ್ಲವೋ ಅಲ್ಲಿಯವರೆಗೇ ತಡ; ಆಗಲೇ ಸಂಪನ್ನನಾಗುವನು.

(ಬ್ರಹ್ಮವು ಎಲ್ಲರ ಆತ್ಮನೇ ಆಗಿದ್ದರೂ ಎಲ್ಲಾ ಜೀವರುಗಳೂ ಸುಷುಪ್ತಿಯಲ್ಲಿ ಬ್ರಹ್ಮದಲ್ಲಿಯೇ ಒಂದಾಗಿದ್ದರೂ 'ನೀನೇ ಬ್ರಹ್ಮವು' ಎಂದು ತಿಳಿಸುವ ಆಚಾರ್ಯನೂ ಅದನ್ನು ಕೇಳಿ ವಿಚಾರಮಾಡಿ ಬ್ರಹ್ಮಜ್ಞಾನದಿಂದ ಮುಕ್ತಿಯನ್ನು ಸಂಪಾದಿಸಿಕೊಳ್ಳುವ ಅಧಿಕಾರಿಯೂ ಅಗತ್ಯವು–ಎಂದಭಿಪ್ರಾಯ).

## 46. ಗುರುವಿನಿಂದಲೇ ಪರಮಪುರುಷಾರ್ಥ

ಉದ್ದಾಲಕಶ್ವೇತಕೇತುಗಳ ಸಂವಾದರೂಪವಾದ ಈವರೆಗಿನ ವಿಚಾರಸರಣಿಯಲ್ಲಿ ಅತ್ಯಂತ ಅಣುವಾದ, ಜಗನ್ಮೂಲವಾದ ಪರಬ್ರಹ್ಮವನ್ನು ಇಂದ್ರಿಯಾದಿಗಳ ಮೂಲಕ ಅರಿತುಕೊಳ್ಳಲಾಗದೆಂದು ತಿಳಿಸಿದ್ದಾಗಿದೆ. ಆದರೆ ಉಪ್ಪಿನ ದೃಷ್ಟಾಂತದಲ್ಲಿ ವಿವಕ್ಷಿತವಾಗಿರುವ ಅಂಶದಂತೆ–ಕಣ್ಣಿನಿಂದ ನೋಡಲಾಗದ್ದನ್ನು ನಾಲಗೆಯಿಂದ ತಿಳಿಯಬಹುದಾಗಿದೆ– ಎಂಬ ವಿವರಣೆಯಂತೆ, ದಾರ್ಷ್ಟಾಂತಿಕವಾದ ಜಗನ್ಮೂಲವನ್ನು ಇಂದ್ರಿಯಗಳ ಮೂಲಕ ಅಲ್ಲದಿದ್ದರೂ ಬೇರೊಂದು ರೀತಿಯಿಂದ ತಿಳಿಯಬಹುದಾಗಿದೆ– ಎಂದು ಹೇಳಿದಂತಾಯಿತು. ಇದರಿಂದ ಪ್ರಚೋದಿತನಾದ ಶ್ವೇತಕೇತುವು ಮತ್ತೆ ತನಗೆ ಬ್ರಹ್ಮವನ್ನು ಉಪದೇಶಿಸಬೇಕೆಂದು ಬೇಡಿಕೊಂಡಿರುತ್ತಾನೆ. ಆಗ ಆಚಾರ್ಯನು ಗಂಧಾರದೇಶದ ಸಾಹುಕಾರನ ಉದಾಹರಣೆಯನ್ನು ನೀಡಿ ಮುಮುಕ್ಷುವೂ ಮೇಧಾವಿಯೂ ಆದ ಶಿಷ್ಯನು ಗುರೂಪದೇಶದಿಂದ ತತ್ತ್ವನಿರ್ಧಾರಣೆ ಮಾಡಿಕೊಂಡು ಕೃತಕೃತ್ಯನಾಗಬಹುದೆಂದು ತಿಳಿಸಿದ್ದಾನೆ. ಇದರ ವಿವರವನ್ನು ನೋಡೋಣ.

ಈಗ ಗಂಧಾರದೇಶದ ಸಾಹುಕಾರನ ಕಥೆಯನ್ನು ಕೇಳಿರಿ. ಈಗಿನ ಭೂಪಟದಂತೆ ಗಂಧಾರದೇಶವು ಆಫಘಾನೀಸ್ಥಾನವಾಗಿದೆ ಎಂದು ತಿಳಿದುಬಂದಿದೆ. ಹಿಂದಿನ ಕಾಲಕ್ಕೆ ರೈಲು, ವಿಮಾನ–ಮುಂತಾದ ಪ್ರಯಾಣಸೌಕರ್ಯಗಳಿರಲಿಲ್ಲವಾದ್ದರಿಂದ ಗಂಧಾರ ದೇಶದಿಂದ ಕಾಲುನಡಗೆಯಿಂದಲೇ ವ್ಯಾಪಾರಕ್ಕಾಗಿ ಭಾರತದೇಶಕ್ಕೆ ಹೊರಟ ಶ್ರೀಮಂತನೊಬ್ಬನು ನಡುದಾರಿಯಲ್ಲಿ ಜೊತೆಗಾರರಿಂದ ಹೇಗೋ ಬೇರೆಯಾಗಿಬಿಟ್ಟನು. ಆತನು ಒಂಟಿಯಾಗಿ ಕಣಿವೆದಾರಿಯಲ್ಲಿ ನಡೆದುಬರುತ್ತಿರುವಾಗ ಕಳ್ಳರ ಕೈಗಳಿಗೆ ಸಿಕ್ಕಿಬಿದ್ದನು. ಆ ದುಷ್ಟರು ಅವನನ್ನು ಕಣ್ಣುಕಟ್ಟಿ ಕೈಕಾಲುಗಳಿಗೂ ಹಗ್ಗವನ್ನು ಬಿಗಿದು–ತಾನೇ ಬಿಚ್ಚಿಕೊಳ್ಳಲಾಗದಂತೆ ಮಾಡಿ–ಒಂದು ಗುಂಡಿಯಲ್ಲಿ ಕೆಡವಿ ಹೊರಟುಹೋದರು. ಆತನ ಹಣಕಾಸುಗಳನ್ನೂ ನಗನಾಣ್ಯಗಳನ್ನೂ ಅಪಹರಿಸಿಬಿಟ್ಟರು. ಆಗ ಆತನು ದಿಕ್ಕುಗಾಣದೆ 'ಅಯ್ಯೊ, ನಾನೊಬ್ಬ ಗಂಧಾರದೇಶದ ಸಾಹುಕಾರನು. ಕಳ್ಳರಿಂದ ಈ ದುಃಸ್ಥಿತಿಗೆ ಒಯ್ಯಲ್ಪಟ್ಟೆನು. ನನ್ನನ್ನು ಯಾರಾದರೂ ಮೇಲಕ್ಕೆತ್ತಿ ಕಣ್ಣುಕಟ್ಟುಗಳನ್ನು ಬಿಚ್ಚಿ ಕಾಪಾಡುವವರಿಲ್ಲವೆ?' ಎಂದು ಕೂಗಿಕೊಳ್ಳುತ್ತಿದ್ದನು. ಅವನ ಪುಣ್ಯಶೇಷದಿಂದ ಅದೇ ಹಾದಿಯಲ್ಲಿ ಮತ್ತೊಬ್ಬ ಕಾರುಣಿಕನಾದ ಹಾದಿಹೋಕನು

ಬಂದನು. ಗುಂಡಿಯಿಂದ ಮನುಷ್ಯರ ಕೂಗು ಕೇಳಬರುತ್ತಿದ್ದುದನ್ನು ಆಲಿಸಿ ಆತನು ಆ ಗುಂಡಿಯಿರುವ ಜಾಗವನ್ನು ಹುಡುಕಿ ಬಗ್ಗಿನೋಡಿದನು. ಕರುಣೆಯುಂಟಾದ ಅವನು ಉಪಾಯದಿಂದ ಈ ಸಾಹುಕಾರನನ್ನು ಮೇಲಕ್ಕೆತ್ತಿ ಕುಳ್ಳಿರಿಸಿ ಇವನ ಕಣ್ಣುಕಟ್ಟನ್ನೂ ಕೈಕಾಲುಗಳ ಹಗ್ಗವನ್ನೂ ಬಿಚ್ಚಿ ಬಂಧನದಿಂದ ಬಿಡುಗಡೆಮಾಡಿದನು. ಅನಂತರ ಇವನನ್ನು ಸಮಾಧಾನಗೊಳಿಸಿ 'ಅಯ್ಯಾ, ಈಗ ನೀನಿರುವದು ಒಂದು ಗೊಂಡಾರಣ್ಯವು. ಇಲ್ಲಿಂದ ಉತ್ತರದಿಕ್ಕಿಗೆ ಗಂಧಾರದೇಶವಿದೆ. ಈ ಕಡೆಗೆ ಉತ್ತರದಿಕ್ಕಾಗುತ್ತದೆ. ನೀನು ಮೆಲ್ಲನೆ ಎದ್ದು ಹೊರಟೆಯಾದರೆ ಕ್ರಮವಾಗಿ ಗಂಧಾರವನ್ನು ಸೇರುವೆ, ನಿನಗೆ ಶುಭವಾಗಲಿ, ಹೊರಡು' ಎಂದನು. ಅನಂತರ ಪಂಡಿತನೂ ಮೇಧಾವಿಯೂ ಆದ ಆ ಸಾಹುಕಾರನು ಉತ್ತರದಿಕ್ಕಿಗೆ ಪ್ರಯಾಣಮಾಡುತ್ತಾ ನಡುನಡುವೆ ವಿಚಾರಿಸಿಕೊಳ್ಳುತ್ತಾ ಮುಂದುವರೆದನು. ಕಡೆಗೆ ಗಂಧಾರದೇಶವನ್ನು ತಲುಪಿದನು. ಹೀಗೆ ಉಪನಿಷತ್ತಿನಲ್ಲಿ ದೃಷ್ಟಾಂತವಾಗಿ ಗಂಧಾರಸಾಹುಕಾರನ ಕಥೆಯನ್ನು ನಿರೂಪಿಸಲಾಗಿದೆ.

ಶ್ರೀ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ದಾರ್ಷ್ಟಾಂತಿಕಸಮನ್ವಯವನ್ನು ಹೀಗೆ ತಿಳಿಸಿದ್ದಾರೆ: ಈ ಜೀವನೆಂಬುವನೇ ಸಾಹುಕಾರನು. ಇವನ ನಿಜಸ್ವರೂಪವಾದ ಪರಬ್ರಹ್ಮವೇ ಗಂಧಾರದೇಶವು. ಅಲ್ಲಿಂದ ಹೊರಟವನಾಗಿ ಈ ಜೀವಾತ್ಮನು ಭೋಗಗಳ ಆಸೆಯಿಂದ ಶರೀರವೆಂಬ ಪ್ರಪಂಚವನ್ನು ಪ್ರವೇಶಿಸಿದ್ದಾನೆ. ಈ ದೇಹಪ್ರಪಂಚವೇ ಒಂದು ದೊಡ್ಡ ಅರಣ್ಯವಾಗಿದೆ. ಹುಲಿ, ಸಿಂಹ, ಕರಡಿ–ಮುಂತಾದ ಸ್ಥಾನದಲ್ಲಿ ಇಲ್ಲಿ ರೋಗಗಳು, ದೈಹಿಕಕೊರತೆಗಳಿದ್ದುಕೊಂಡಿವೆ. ಪಾಪಪುಣ್ಯವೆಂಬ ಕಳ್ಳರಿದ್ದಾರೆ. ವಾತಪಿತ್ತಕಫಾದಿಗಳೆಂಬ ದೋಷಪೂರ್ಣವಾದ ನದೀತಟಾಕಗಳಿವೆ. ಶೀತೋಷ್ಣಗಳ ಬಾಧೆಯಿರುತ್ತದೆ. ಇದರಿಂದ ಸುಖದುಃಖಗಳಾಗುತ್ತಿವೆ. ಜೀವನಿಗೆ ಮೋಹವೆಂಬ ಬಟ್ಟೆಯನ್ನು ಕಳ್ಳರು ಕಣ್ಣುಗಳಿಗೆ ಬಿಗಿದಿರುತ್ತಾರೆ. ಹಣ, ಹೆಂಡತಿ, ಮಕ್ಕಳು, ನೆಂಟರಿಷ್ಟರು, ದನಕರುಗಳೆಂಬ ವಸ್ತುಗಳ ಮೇಲಿನ ಅಭಿಮಾನವೆಂಬ ಹಗ್ಗಗಳಿಂದಲೂ ಕಟ್ಟಲಾಗಿದೆ. ಇಂಥ ಸ್ಥಿತಿಯಲ್ಲಿ ಸಂಸಾರವೆಂಬ ಗುಂಡಿಗೆ ಪಾಪಪುಣ್ಯಗಳೆಂಬ ಕಳ್ಳರಿಂದ ತಳ್ಳಲ್ಪಟ್ಟು–'ಅಯ್ಯೋ, ನಾನು ಕೆಟ್ಟೆನು, ನಾನು ಇಂಥವನ ಮಗನು, ಇಂಥವನ ಮೊಮ್ಮಗನು, ಇವರೆಲ್ಲ ನನ್ನ ನೆಂಟರು, ನಾನು ಸುಖಿಯು, ಅಥವಾ ನಾನು ದುಃಖಿಯು; ಅಜ್ಞಾನಿಯು ಅಥವಾ ಪಂಡಿತನು; ನಾನು ಹುಟ್ಟು ಸಾವುಮುಪ್ಪುಗಳುಳ್ಳವನು. ನನ್ನ ಮಗನು ಸತ್ತನು, ಹೆಂಡತಿಯು ನಷ್ಟವಾದಳು; ನಾನು ಹೇಗೆ ಬದುಕಿರಲಿ? ನನಗೇನು ಗತಿ?' ಎಂದೆಲ್ಲ ಈ ಜೀವನು ಕಿರಿಚಿಕೊಳ್ಳುತ್ತಿರುವನು. ಇಂಥ ಸ್ಥಿತಿಯಲ್ಲಿ ಪುಣ್ಯಫಲದಿಂದ ಸದ್ಬ್ರಹ್ಮವನ್ನು ಬಲ್ಲ ಶ್ರೋತ್ರಿಯನೂ ವಿರಕ್ತನೂ ಪರಮಕಾರುಣಿಕನೂ ಆದ, ಬಂಧನದಿಂದ ಬಿಡುಗಡೆಹೊಂದಿರುವ ಬ್ರಹ್ಮನಿಷ್ಠನಾದ ಗುರುವು ದೊರಕಲಾಗಿ ಅವನ ಉಪದೇಶದಿಂದ

ಮೆಲ್ಲಮೆಲ್ಲನೆ ತಪ್ಪುತಿಳಿವಳಿಕೆಯು ಮಾಯವಾಗುತ್ತಾ ಬರಲಾಗಿ ಕಡೆಯಲ್ಲಿ ಸದ್ಗುರುವು "ಅಯ್ಯ, ನೀನು ಸಂಸಾರಿಯಲ್ಲ, ಹಾಗೂ ಇಂಥವನ ಮಗನು–ಎಂಬಿದೇ ಮುಂತಾದ ಅನಾತ್ಮಧರ್ಮವುಳ್ಳವನಲ್ಲ; ಮತ್ತೇನೆಂದರೆ: ಯಾವ ಸದ್ಬ್ರಹ್ಮವಿದೆಯೋ ಅದೇ ನೀನಾಗಿರುವೆ" ಎಂದು ತಿಳಿಸುವ ಮೂಲಕ ಅಜ್ಞಾನಾವರಣವನ್ನು ತೆರೆಯಲಾಗಿ–ಗಂಧಾರಪುರುಷನಂತೆ ತನ್ನ ಸ್ವರೂಪವನ್ನು ಹೊಂದಿ ಸುಖಿಯಾಗಿ ನೆಲೆನಿಂತು ಬಿಡುವನು–ಎಂದು ಆಚಾರ್ಯರು ವಿವರಿಸಿದ್ದಾರೆ.

ಈಗ ದೃಷ್ಟಾಂತ–ದಾರ್ಷ್ಟಾಂತಿಕಗಳ ಸಮನ್ವಯದ ತಾತ್ಪರ್ಯವನ್ನು ತಿಳಿಯೋಣ. ಪ್ರತಿಯೊಬ್ಬ ಜೀವನೂ ಪರಮಾರ್ಥದೃಷ್ಟಿಯಿಂದ ಬ್ರಹ್ಮವೇ ಆಗಿದ್ದರೂ ಹಾಗೂ ನಿತ್ಯ ಶುದ್ಧಬುದ್ಧಮುಕ್ತಬ್ರಹ್ಮವೇ ತಾನಾಗಿದ್ದುಕೊಂಡು ಏಕಮೇವಾದ್ವಿತೀಯನಾಗಿ ಅಸಂಸಾರಿಯಾಗಿರುವ ಅನುಭವವು ಸುಷುಪ್ತಿಯಲ್ಲಿ ಕಂಡುಬಂದಿದ್ದರೂ ಎಚ್ಚರ ಕನಸುಗಳಲ್ಲಿ–ಅದರಲ್ಲಿಯೂ–ಗ್ರಾಹ್ಯಗ್ರಾಹಕರೂಪದಿಂದ ಸತ್ಯವಾಗಿರುವಂತೆಯೇ ಅನುಭವಿಸಲ್ಪಡುತ್ತಿರುವ ಎಚ್ಚರದಲ್ಲಿ ವಾಸನಾವಶದಿಂದ ಬಹುಕಾಲದಿಂದಲೂ ತಾನು ಸಂಸಾರಿಯಾಗಿದ್ದೇನೆಂಬ ಭಾವನೆಯೇ ಈ ಜೀವನಿಗೆ ಪ್ರಬಲವಾಗಿದ್ದುಕೊಂಡಿರುವದು. ಇದು ಎಲ್ಲ ಜೀವರಿಗೂ ಸಮಾನವಾಗಿರುವದರಿಂದ ವಿದ್ಯಾವಂತರಾಗಲಿ, ಅವಿದ್ಯಾವಂತರಾಗಲಿ–'ಸಂಸಾರಿಯು ತಾನು' ಎಂಬ ತಿಳಿವಳಿಕೆಯನ್ನೇನೂ ಮೀರಿರುವದಿಲ್ಲ. ಈ ಸ್ಥಿತಿಯಲ್ಲಿಯೇ ಶಾಸ್ತ್ರೋಪದೇಶವು ಅಗತ್ಯವಾಗಿದೆ. ವಿದ್ಯಾವಂತಜೀವರುಗಳು ಕೆಲವರು ತಮ್ಮ ತಿಳಿವಳಿಕೆಯನ್ನು (ಅನಾತ್ಮಶಾಸ್ತ್ರಗಳನ್ನು) ಅವಿದ್ಯಾವಂತರಾದ ಜೀವರುಗಳಿಗೆ ಬೋಧಿಸಿದ ಮೇಲೂ ಅವರನ್ನೂ ವಿದ್ಯಾವಂತರನ್ನಾಗಿ ಮಾಡಿದಮೇಲೂ 'ನಾನು ಜೀವಾತ್ಮನು, ಸಂಸಾರಿಯು' ಎಂಬ ಭಾವನೆಯು ಹೋಗಿರುವದಿಲ್ಲ. ಆದ್ದರಿಂದ ಅಸಂಸಾರಿಯಾದ ಆತ್ಮನ ಸ್ವರೂಪಜ್ಞಾನಕ್ಕೆ ಆ ತತ್ತ್ವವನ್ನರಿತ ಬ್ರಹ್ಮನಿಷ್ಠನಾದ ಆಚಾರ್ಯನೇ ಬೇಕು. ಅವನೇ ಉಪದೇಶಮಾಡಬೇಕು. ಕಗ್ಗತ್ತಲೆಯ ಗುಂಡಿಯಲ್ಲಿ ಬಿದ್ದಿರುವವನನ್ನು ಎತ್ತಲು ಬೆಳಕಿನ ವಾತಾವರಣದಲ್ಲಿ ಮೇಲಿದ್ದುಕೊಂಡು ಕಣ್ಣುಬಿಟ್ಟು ನೋಡುತ್ತಿರುವವನೇ ಹೇಗೆ ಸಮರ್ಥನೋ ಮತ್ತು ಆತನಿಗೆ ಗುಂಡಿಯಲ್ಲಿ ಬಿದ್ದಿರುವವನ ವಿಷಯಕ್ಕೆ ಉದ್ಧಾರಮಾಡಬೇಕೆಂಬ ಕರುಣೆಯಿರಬೇಕಾದದ್ದೂ ಅವಶ್ಯವೋ ಹಾಗೆಯೇ **'ನಾನು ಈ ದೇಹಾದಿ ಸಂಘಾತವಿಶಿಷ್ಟನಲ್ಲ; ದಾರಾಪತ್ಯಕ್ಷೇತ್ರವಿತ್ತಾದಿ ದೂರನಾದ ಸಾಕ್ಷಿಯೂ ನಿತ್ಯನೂ ಪ್ರತ್ಯಗಾತ್ಮನೂ ಆದ ಶಿವನೇ ನಾನು'** ಎಂಬ ದೃಢಪ್ರಜ್ಞೆಯುಳ್ಳ ಜ್ಞಾನನಿಷ್ಠನೂ ಕೃಪಾಳವೂ ಆದ ಆಚಾರ್ಯನು ತನ್ನ ಉಪದೇಶದಿಂದ ಶಿಷ್ಯನಾದ ಜೀವನನ್ನು ಉದ್ಧಾರ ಮಾಡಬಲ್ಲವನಾಗಿರುತ್ತಾನೆ. ಇಂಥ ಆಚಾರ್ಯನು ವ್ಯವಹಾರ ದೃಷ್ಟಿಯಿಂದ ಎಲ್ಲರಂತೆ ದೇಹಧಾರಿಯಾಗಿದ್ದು ಲೋಕದ ಜನರೊಡನೆಯೇ ಬೆರೆದಿದ್ದರೂ

ಉಪದೇಶಮಾಡುವಾಗ ಆತನು ತನ್ನ ಬ್ರಹ್ಮಸ್ವರೂಪಾನುಭವದಿಂದ ಚ್ಯುತನಾಗದೆ ನೆಲೆನಿಂತು ತತ್ತ್ವಬೋಧೆಯನ್ನು ಮಾಡುವದರಿಂದ, ಅಥವಾ ತಾನು ಉಪದೇಶಕ ನೆಂಬುದನ್ನು ಮರೆತು ತನ್ನ ಅನುಭವವನ್ನು ವಾಕ್ಕುಗಳ ಮೂಲಕ ಪ್ರಕಟಿಸುವದರಿಂದ, ಅಥವಾ ಉತ್ತಮಾಧಿಕಾರಿಗಳಾದ ಶಿಷ್ಯರಿದ್ದರೆ ಮೌನವ್ಯಾಖ್ಯಾನದಿಂದಲೇ ಬ್ರಹ್ಮತತ್ತ್ವವನ್ನು ಪ್ರಕಟಿಸುವದರಿಂದ ಶಿಷ್ಯಕೋಟಿಯು ಉದ್ಧಾರವಾಗುತ್ತದೆ. ಈ ರೀತಿಯಿಂದ ಅಜ್ಞಾನಿಗಳು ಜ್ಞಾನಿಗಳಿಂದಲೇ ಕೃತಾರ್ಥರಾಗಬೇಕಾಗಿದೆ.

ಹೀಗೆ ಆಚಾರ್ಯೋಪದೇಶವು ಜ್ಞಾನಪ್ರಾಪ್ತಿಗೂ ಆ ಮೂಲಕ ಮೋಕ್ಷಕ್ಕೂ ಅತ್ಯಗತ್ಯವಾಗಿದ್ದರೂ ಕೇವಲ ಅಷ್ಟರಿಂದಲೇ ಮುಕ್ತಿಯಾದೀತೆಂದು ತಿಳಿಯಬಾರದು. ಏಕೆಂದರೆ ಮತ್ತೊಂದು ರೀತಿಯಿಂದ ಶಿಷ್ಯನ ಪ್ರಯತ್ನವೂ ಅಷ್ಟೇ ಅಗತ್ಯವಾಗಿರುತ್ತದೆ. ಈ ವಿಷಯದಲ್ಲಿ ಭಾಷ್ಯಕಾರರು ತಿಳಿಸುವದೇನೆಂದರೆ: ಹೇಗೆ ದೃಷ್ಟಾಂತದಲ್ಲಿ ತಿಳಿಸಿದ ಗಂಧಾರದೇಶದ ಸಾಹುಕಾರನು ಹಾದಿಹೋಕನು ತಿಳಿಸಿದ ಮಾರ್ಗದಲ್ಲಿ ನಡೆಯುತ್ತಾ ನಡುನಡುವೆ ವಿಚಾರಿಸಿಕೊಳ್ಳುತ್ತಾ ಇರುವವನಾಗಿರಬೇಕೋ ಮತ್ತು ಗಂಧಾರದೇಶವನ್ನೇ ತಲುಪುವ ಆಸೆಯುಳ್ಳವನಾಗಿರಬೇಕೋ–ಬೇರೆ ದೇಶಗಳಲ್ಲಿ ಸಂಚರಿಸುವ ಅಭಿಲಾಷೆಯಿಲ್ಲದವನಾಗಿರಬೇಕೋ–ಮೂಢನಾಗಿರಬಾರದೋ–ಹಾಗೆಯೇ ಜಿಜ್ಞಾಸುವು ಗುರುಗಳು ಹೇಳಿದ ತತ್ತ್ವವಿಚಾರವನ್ನು ಮನಸ್ಸಿನಲ್ಲಿ ಮೂಡಿಸಿಕೊಂಡು ಅದನ್ನೇ ಮನನಮಾಡುತ್ತಾ ಏಕನಿಷ್ಠೆಯಿಂದಿರುವವನಾಗಿದ್ದು, ನಡುನಡುವೆ ಅನುಭವಾನುಸಾರಿಯಾದ ತರ್ಕದಿಂದ ತನ್ನ ತಿಳಿವಳಿಕೆಯನ್ನು ಶೋಧಿಸಿಕೊಳ್ಳುತ್ತಾ ಇರಬೇಕು. ಪ್ರಾಪಂಚಿಕ ವ್ಯವಹಾರಗಳಲ್ಲಿ ವಿರಕ್ತನಾಗಿಯೂ ಮುಮುಕ್ಷುವಾಗಿಯೂ ಇರಬೇಕು. ತಮೋಗುಣದಿಂದ ಭಾವಿತವಾದ ಅಂತಃಕರಣವುಳ್ಳವನಾಗಿರಬಾರದು. ವಿಷಯಭೋಗಗಳ ಚಾಪಲ್ಯವೂ ಇರಬಾರದು. ಹೀಗಿದ್ದರೆ ತತ್ತ್ವವು ಅನುಭವಾರೂಢವಾಗುವದು.

ಇನ್ನು ಜ್ಞಾನವಾದ ಅನಂತರ ಯಾವಾಗ ಮುಕ್ತಿಯಾಗುತ್ತದೆ? ಎಂಬ ವಿಷಯಕ್ಕೆ ಶ್ರುತಿಯು ಹೀಗೆ ತಿಳಿಸುತ್ತಿದೆ. ಇದು ವ್ಯವಹಾರದೃಷ್ಟಿಯಿಂದ ಹೇಳಿದ ಅಭಿಪ್ರಾಯವೆಂದು ತಿಳಿಯಬೇಕು. ಏನೆಂದರೆ "ಎಲ್ಲಿಯವರೆಗೆ ಈ ದೇಹದಿಂದ ಬಿಡುಗಡೆಯಾಗಲಿರುವದೋ ಅಲ್ಲಿಯವರೆಗೇ ತಡ"–ಎಂದು ತಿಳಿಸಿರುತ್ತದೆ. ಇದರ ಅಭಿಪ್ರಾಯವೇನೆಂದರೆ: ಬದುಕಿರುವಾಗಲೇ ಜ್ಞಾನಪ್ರಾಪ್ತಿಯಾಗುವದು ಸರಿಯಾದದ್ದು. ಏಕೆಂದರೆ ಸತ್ತಮೇಲೆ ಅದು ಆಗುವದೆಂದು ಹೇಳಿದರೆ ಜ್ಞಾನದ ವಿಷಯಕ್ಕೆ ಯಾರಿಗೂ ವಿಶ್ವಾಸವೇ ಉಳಿಯುವದಿಲ್ಲ. ಇನ್ನು ಜ್ಞಾನವಾದ ಮೇಲೆ ಮುಕ್ತಿಗೆ ವ್ಯವಧಾನವೇನೂ ಇರುವದಿಲ್ಲ. ಜ್ಞಾನಸಮಕಾಲದಲ್ಲಿಯೇ ಮೋಕ್ಷಪ್ರಾಪ್ತಿಯಾಗುವದೆಂದು ವೇದಾಂತಸಿದ್ಧಾಂತವಿದೆ.

ಜ್ಞಾನವು ಬಂದ ಕೂಡಲೆ ಶರೀರವು ಬಿದ್ದು ಹೋಗಬೇಕಾಗಿಲ್ಲ. ಜ್ಞಾನವೇನೂ ಒಂದು ರೋಗವಲ್ಲ. ಆದ್ದರಿಂದ ಜ್ಞಾನಿಯಾದವನಿಗೆ ವ್ಯವಹಾರದೃಷ್ಟಿಯಿಂದ ಪ್ರಾರಬ್ಧಕರ್ಮವು ಪೂರೈಸುವವರೆಗೂ ಶರೀರವು ಇದ್ದುಕೊಂಡು ಬಾಧಿತಾನುವೃತ್ತಿಯಿಂದ ಲೋಕವ್ಯವಹಾರವು ಸಾಗಬಹುದಾಗಿದೆ. ಆದ್ದರಿಂದಲೇ ಜ್ಞಾನಿಗಳ ಉಪದೇಶವು ಲೋಕಕ್ಕೆ ದೊರಕಲು ಸಾಧ್ಯವಾಯಿತು. ಈ ರೀತಿಯಲ್ಲಿ ಬದುಕಿರುವಾಗಲೇ ಜೀವನ್ಮುಕ್ತಿಯನ್ನು ಪಡೆದವನು ಅಶರೀರತ್ವವನ್ನು ಪಡೆಯುವವನು– ಎಂದಭಿಪ್ರಾಯ.

——————

## ಸತ್ಯವಾದ ಬ್ರಹ್ಮವನ್ನು ನಂಬಿದವನಿಗೇ ಮುಕ್ತಿ

ಓಮ್ ॥ ಸ ಯಥಾ ತತ್ರ ನಾದಾಹ್ಯೇತೈತದಾತ್ಮ್ಯಮಿದಗ್ಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ॥ 6–16–3

ಭಾವಾರ್ಥ:– ಅವನು ಹೇಗೆ ಅಲ್ಲಿ ಸುಡಲ್ಪಡುವದಿಲ್ಲವೋ (ಹಾಗೆಯೇ ಇಲ್ಲಿಯೂ) ಇದೆಲ್ಲವೂ ಐದಾತ್ಮ್ಯವು. ಅದು ಸತ್ಯವು. ಅದೇ ಆತ್ಮನು. ಶ್ವೇತಕೇತುವೆ, ಅದೇ ನೀನಾಗಿರುವೆ– ಎನ್ನಲು ಇವನ ಆ (ಉಪದೇಶ)ವನ್ನು ಅರಿತುಕೊಂಡನು, ಅರಿತುಕೊಂಡನು.

(ಸತ್ಯಾಭಿಸಂಧ (ಸತ್ಯವನ್ನೇ ನಂಬಿರುವವ) ನು ಹೇಗೆ ಬಾಹ್ಯವಾದ ವಿಕಾರಗಳಿಗೆ ಸಿಲುಕದೆ ತಾನೇ ಆಗಿದ್ದುಕೊಂಡು ಅನೃತದಿಂದ ಬಿಡುಗಡೆಹೊಂದುವನೋ ಹಾಗೆಯೇ ಸದ್ಬ್ರಹ್ಮವನ್ನು ಅರಿತಿರುವವನು ಮರಣದ ಅನಂತರ ಪರಬ್ರಹ್ಮದಲ್ಲಿಯೇ ಸೇರಿ ಒಂದಾಗಿಬಿಡುವನು.)

## 47. ಜ್ಞಾನಿಗೆ ಮತ್ತೆ ಶರೀರಗ್ರಹಣವಿಲ್ಲ

ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದ ಕಡೆಯ ಮಂತ್ರವನ್ನು ಈಗ ನಾವು ವಿಚಾರಮಾಡಬೇಕಾಗಿದೆ. ಇದುವರೆಗಿನ ವಿಚಾರಸರಣಿಯಲ್ಲಿ ತಿಳಿಸಿರುವಂತೆ ಬ್ರಹ್ಮ–ಆತ್ಮರು ಒಂದೇ ವಸ್ತುವಿನ ಎರಡು ಹೆಸರುಗಳೇ ಹೊರತು ಅನಾತ್ಮವಾದ ಬ್ರಹ್ಮವಾಗಲಿ, ಬ್ರಹ್ಮವಲ್ಲದ ಆತ್ಮನಾಗಲಿ ಇರುವದಿಲ್ಲ. ಆದರೂ ಅವಿದ್ಯೆಯಿಂದ ಈ ಬ್ರಹ್ಮಾತ್ಮಭೇದ ಬುದ್ಧಿಯು ನಮಗೆ ಉಂಟಾಗಿರುವದರಿಂದ ಬ್ರಹ್ಮಜ್ಞನಾದ ಆಚಾರ್ಯನ ಉಪದೇಶವು ನಮಗೆ ದೊರಕಲಾಗಿ ಬ್ರಹ್ಮಜ್ಞಾನವುಂಟಾಗಿ ಅವಿದ್ಯೆಯು ಇಲ್ಲವಾಗುವದು.

ಅವಿದ್ಯೆಯು ಇಲ್ಲವಾದರೆ ಇನ್ನು ಶರೀರವು ಬೀಳುವದೇ ತಡ–ವಿದೇಹ ಮುಕ್ತಿಯಾಗಿಬಿಡುವದು ಎಂದು ಶ್ರುತಿಯಲ್ಲಿ ಹೇಳಿದೆ. ಜ್ಞಾನಿಯ ದೃಷ್ಟಿಯಿಂದ ಶರೀರವಾಗಲಿ ಪ್ರಾರಬ್ಧವಾಗಲಿ ಯಾವಾಗಲೂ ಇಲ್ಲವೇ ಇಲ್ಲ. 'ಅವನು ಬ್ರಹ್ಮವೇ ಆಗಿದ್ದು ಬ್ರಹ್ಮವನ್ನು ಸೇರಿಕೊಳ್ಳುತ್ತಾನೆ' ಎಂದೇ ಶ್ರುತಿಯಲ್ಲಿ ಮತ್ತೊಂದು ಕಡೆ ಹೇಳಿರುತ್ತದೆ. ಆದರೂ ಶ್ವೇತಕೇತುವಿನಂಥ ಪೃಚ್ಛಕನ ದೃಷ್ಟಿಯಿಂದ ಜ್ಞಾನಿಯಾಗಿರಲಿ, ಅಜ್ಞಾನಿಯಾಗಿರಲಿ– ಎಲ್ಲರೂ ಭೌತಿಕಶರೀರವನ್ನು ಬಿಟ್ಟು ತೆರಳುವದು ಲೋಕಾನುಭವ ಸಿದ್ಧವಾಗಿರುವದರಿಂದ ಜ್ಞಾನಿಯ ಮರಣವು ಹೇಗೆ ಸಂಭವಿಸುತ್ತದೆ? ಎಂದು ಕೇಳಬಹುದಾಗಿದೆ. ಮೊದಲು ಶ್ರುತಿಯು ಅದನ್ನೇ ವಿವರಿಸಲಿದೆ.

ಈಗ ಮರಣವೆಂದರೇನು? ಎಂಬಿದನ್ನು ವಿಚಾರಮಾಡೋಣ. ಸಾಯುತ್ತಿರುವವನನ್ನೂ ಸತ್ತವನನ್ನೂ ನಾವೆಲ್ಲರೂ ನೋಡಿದ್ದೇವೆ. ಆದರೆ ಇದು ಪರೋಕ್ಷಾನುಭವವು. ಸಾಯುವವನಿಗೆ ಏನಾಯಿತೆಂಬುದಾಗಲಿ ಅವನು ಎಲ್ಲಿಗೆ ಹೋದನೆಂಬುದಾಗಲಿ ಯಾವ ರೀತಿಯಿಂದಲೂ ನಮಗೆ ತಿಳಿಯುವಂತಿಲ್ಲ. ಆದ್ದರಿಂದ ಇಂಥ ವಿಷಯದಲ್ಲಿ ವಿಜ್ಞಾನವು (Science) ಕೂಡ ಉಪಯೋಗಕ್ಕೆ ಬಾರದಿರುವಾಗ ಶ್ರುತಿಪ್ರಮಾಣವನ್ನೇ ಅವಲಂಬಿಸದೆ ಬೇರೆ ಗತಿಯಿಲ್ಲ. ಶ್ರುತಿಯು ಸಾವನ್ನು ಎರಡು ರೀತಿಯಿಂದ ವ್ಯಾಖ್ಯಾನಮಾಡುತ್ತದೆ. ಒಂದು ಜ್ಞಾನದ ಅನಂತರ ಸಂಭವಿಸುವದು; ಮತ್ತೊಂದು ಎಲ್ಲರಂತೆ ಅಜ್ಞಾನಿಯಾಗಿಯೇ ಸಾಯುವದು. ಅಜ್ಞಾನಿಯ ಸಾವಿನ ವಿಷಯವನ್ನು ಈಗಾಗಲೇ ಶ್ರುತಿಯು ತಿಳಿಸಿಬಿಟ್ಟಿದೆ. ಅದು ಹೇಗೆಂದರೆ: ಸಾಯಲಿರುವವನಿಗೆ ಮೊದಲು ಇಂದ್ರಿಯಗಳು ಶಾಂತವಾಗಿಬಿಡುವವು. ಎಂದರೆ ಮೊದಲು ಮಾತು ನಿಂತುಹೋಗುವದು. ಅದು ಮನಸ್ಸಿನಲ್ಲಿ ಒಂದಾಗಿ ಬಿಡುವದು. ಅನಂತರ ಮನಸ್ಸೂ ಲಯವಾಗಿ ಪ್ರಾಣದಲ್ಲಿ ಸೇರಿಬಿಡುವದು. ಆಗ ಅವನು ಯಾರನ್ನೂ ಗುರುತುಹಿಡಿಯುವದಿಲ್ಲ; ಯಾರೊಡನೆಯೂ ಮಾತನಾಡುವದಿಲ್ಲ. ಕಡೆಗೆ ಕೇವಲ ಉಸಿರಾಡುತ್ತಿದ್ದವನು ಅದನ್ನೂ ನಿಲ್ಲಿಸಿಬಿಡುವನು. ಮುಂದೇನಾಯಿತೆಂಬುದು ನೋಡುತ್ತಿರುವವರಿಗೆ ತಿಳಿಯುವದಿಲ್ಲ. ಆದರೆ ಶ್ರುತಿಯು ಹೇಳುವಂತೆ ಅವನ ಪ್ರಾಣವು ತೇಜಸ್ಸಿನಲ್ಲಿ ಒಂದಾಗುವದು. ಕಟ್ಟಕಡೆಗೆ ಆ ತೇಜಸ್ಸು ಪರದೇವತೆ (ಬ್ರಹ್ಮ)ಯಲ್ಲಿ ಲಯವಾಗಿಬಿಡುವದು.

ಇದೇ ರೀತಿಯಾದ ಮರಣವೇ ಜ್ಞಾನಿಗೂ ಉಂಟಾಗುತ್ತದೆ– ಎಂದು ಶ್ರುತಿಯಲ್ಲಿ ಒಪ್ಪಿರುತ್ತದೆ. ಹೀಗೆ ಲೌಕಿಕರ ದೃಷ್ಟಿಯಿಂದ–ಸತ್ತವನ ವಿಷಯದಲ್ಲಿ ಅವನು ಜ್ಞಾನಿಯಾಗಿರಲಿ, ಅಜ್ಞಾನಿಯಾಗಿರಲಿ– ಏನೂ ವ್ಯತ್ಯಾಸವು ಗೊತ್ತಾಗುವದಿಲ್ಲ. ಆದರೆ

ಜ್ಞಾನಿಯಾಗಿದ್ದವನು ಬದುಕಿರುವಾಗಲೇ ತನ್ನ ಮರಣವನ್ನು ಏನೆಂದು ಭಾವಿಸುತ್ತಾನೆ? ಎಂಬುದನ್ನು ಅಧ್ಯಾತ್ಮಶಾಸ್ತ್ರದಿಂದ ಊಹಿಸಿ ತಿಳಿಸಬಹುದಾಗಿದೆ. ಆದರಂತೆ ಜ್ಞಾನಿಯು ಪ್ರಾರಬ್ಧಶರೀರವನ್ನು ಬಿಡುವಾಗ ಬಹಳ ನೆಮ್ಮದಿಯಿಂದಿರುತ್ತಾನೆ. ಅಜ್ಞಾನಿಯಂತೆ ದೇಹತ್ಯಾಗದ ವಿಷಯಕ್ಕೆ ಭಯಪಡುವದಿಲ್ಲ. 'ಶರಣರ ಸಾವು ಮರಣದಲ್ಲಿ'–ಎಂಬ ಗಾದೆಯಂತೆ ಶರಣರು ಮರಣವನ್ನು ಮಹಾನವಮಿಯಾಗಿ ಆಚರಿಸುವರು. ಒಂದು ಮರಕ್ಕೆ ಅದರ ಯಾವದೋ ಒಂದು ಭಾಗದಲ್ಲಿ ಒಣಗಿಹೋಗಿರುವ ಎಲೆಯ ವಿಷಯಕ್ಕೆ–ಅದು ಎಲ್ಲಿ ಬಿದ್ದೀತೆಂಬ ಚಿಂತೆಯು ಹೇಗೆ ಇರುವದಿಲ್ಲವೋ–ಹಾಗೆಯೇ ಜ್ಞಾನಿಗೆ ಪ್ರಾರಬ್ಧ ಶರೀರವೆಂಬುದು ಒಣಗಿದ ಎಲೆಗೆ ಸಮವೆಂದು ತಿಳಿಯಬೇಕು. ಅಥವಾ ಪೊರೆ ಬಿಟ್ಟಿರುವ ಹಾವಿಗೆ ಪೊರೆಯಲ್ಲಿ ಹೇಗೆ ಅಭಿಮಾನವಿರುವದಿಲ್ಲವೋ ಹಾಗೆ–ಎಂದೂ ತಿಳಿಯಬಹುದು. ಅಜ್ಞಾನಿಗೆ ಮಾತ್ರ ಇಂಥ ಪರಿಸ್ಥಿತಿಯು ಇರಲಾರದು. ಅವನು ಅಭಿಮಾನವನ್ನು ಬಿಟ್ಟಿರುವದಿಲ್ಲವಾದ್ದರಿಂದ ಶರೀರವು ಬಿದ್ದುಹೋದರೂ ಸೂಕ್ಷ್ಮ (ಲಿಂಗ) ಶರೀರವು ಅವನಿಗೆ ಅಂಟಿಕೊಂಡು ಮತ್ತೆ ಕರ್ಮಫಲವನ್ನು ಅನುಭವಿಸಲು ಜನ್ಮಾಂತರಗಳನ್ನುಂಟುಮಾಡುವದು. ಆದ್ದರಿಂದ ಮೇಲು ನೋಟಕ್ಕೆ ಜ್ಞಾನ್ಯಜ್ಞಾನಿಗಳ ದೇಹತ್ಯಾಗವು ಒಂದೇ ಆಗಿ ಕಂಡರೂ ನಿಜಸ್ಥಿತಿಯಲ್ಲಿ ಅಜಗಜಾಂತರ ವ್ಯತ್ಯಾಸವಿರುತ್ತದೆ. ಹೇಗೆ ಒಂದು ಗ್ರೂಪ್ ಫೋಟೋದಲ್ಲಿ ನೋಡಿದಾಗ ಎಲ್ಲಾ ಮನುಷ್ಯರ ತಲೆಗಳೂ ಒಂದೇ ರೀತಿಯಾಗಿ ಕಂಡುಬಂದರೂ ಅದರಲ್ಲಿ ವಿದ್ಯಾವಂತ ಅವಿದ್ಯಾವಂತರೆಂಬ ಭೇದವಿದ್ದೇ ಇದೆಯೋ ಹಾಗೆಯೇ ಇಲ್ಲಿಯೂ ತಿಳಿಯಬೇಕು. ಆದ್ದರಿಂದ ಆಚಾರ್ಯೋಪದೇಶವನ್ನು ಹೊಂದಿ ಪಂಡಿತನೂ ಮೇಧಾವಿಯೂ ಆದವನು ತನ್ನ ಆತ್ಮನನ್ನು ಬ್ರಹ್ಮವೆಂದೇ ಬದುಕಿರುವಾಗಲೇ ಕಂಡುಕೊಂಡಿದ್ದನಾದರೆ ಅವನ ಸತ್ಸಂಪತ್ತಿಕ್ರಮವು ಅಜ್ಞಾನಿಗಿಂತ ಭಿನ್ನವಾಗಿರಬೇಕಾದದ್ದು ಯುಕ್ತವೇ ಆಗಿದೆ. ಇದನ್ನು ಶ್ರುತಿಯು ವಿಶಿಷ್ಟರೀತಿಯಿಂದ ಹೇಗೆ ವಿವರಿಸುತ್ತದೆ ಎಂಬುದನ್ನು ನೋಡೋಣ.

ಜ್ಞಾನಿಗಳ ಮರಣವನ್ನು ಅರ್ಥಮಾಡಿಕೊಳ್ಳಬೇಕಾದರೆ ದೇವತೋಪಾಸಕರ ಮರಣದೊಡನೆ ಹೋಲಿಸಬೇಕಾಗುತ್ತದೆ. ತೀರ ಅಜ್ಞಾನಿಗಳ ಸಾವು ಇಲ್ಲಿ ಉಪಯೋಗಕ್ಕೆ ಬರುವದಿಲ್ಲ. ಉಪಾಸಕರ ಸಾವು ಹೇಗಿರುವದೆಂದರೆ: 'ದೇವೋ ಭೂತ್ವಾ ದೇವಾನಪ್ಯೇತಿ' ಎಂದಂತೆ ಅವರುಗಳು ಬದುಕಿರುವಾಗಲೇ ದೇವತಾಸಾಕ್ಷಾತ್ಕಾರವನ್ನು ಪಡೆದಿದ್ದು ಕೊನೆಯಲ್ಲಿ ಆ ದೇವತೆಯ ಸಾಯುಜ್ಯವನ್ನು ಸೇರಿಬಿಡುವರು. ಅಂಥವರು ದೇಹವನ್ನು ಬಿಡುವಾಗ ಅವರ ಪ್ರಾಣವು ಹೃದಯದಿಂದ ಮೇಲಕ್ಕೆ ಹರಡಿರುವ ಸುಷುಮ್ನಾನಾಡಿಯಿಂದ ಹೊರಟು ಬ್ರಹ್ಮರಂಧ್ರದ ಮೂಲಕ ಹೊರಬೀಳುವದು. ಆ ಪ್ರಾಣಕ್ಕೆ ಅಂತ್ಯಕಾಲದಲ್ಲಿ

ಉಪಾಸಕನ ಹೃದಯದ ತುದಿಯು ಬೆಳಗಿ ದಾರಿ ತೋರಿಸುವದು. ಆ ಬೆಳಕಿನ ಸಹಾಯದಿಂದ ಅವನು ಬ್ರಹ್ಮಲೋಕವನ್ನು ಸೇರುವನು—ಎಂದು ಶ್ರುತಿಯಲ್ಲಿ ತಿಳಿಸಿದೆ. ಅಲ್ಲಿಗೂ ದೇಹದಿಂದ ಉತ್ಕ್ರಾಂತಿಯು ಉಪಾಸಕನಿಗೂ ಅನಿವಾರ್ಯವೆಂದೇ ಆಗುತ್ತದೆ. ಆದರೆ ಜ್ಞಾನಿಗಾದರೂ, 'ನ ತಸ್ಯ ಪ್ರಾಣಾ ಉತ್ಕ್ರಾಮಂತಿ ಅತ್ರೈವ ಸಮವನೀಯಂತೇ' ಎಂಬ ಶ್ರುತಿವಾಕ್ಯದಂತೆ ಉತ್ಕ್ರಮಣವೇ ಸಂಭವಿಸುವದಿಲ್ಲ. ಮತ್ತೇನೆಂದರೆ: ಅವನ ಪ್ರಾಣಗಳು ಪರಬ್ರಹ್ಮದಲ್ಲಿ ಲಯವಾಗಿಬಿಡುವವು. ಆದ್ದರಿಂದಲೇ ಜ್ಞಾನಿಗಳು ದೇಹತ್ಯಾಗಮಾಡಿದಾಗ ಸ್ವರ್ಗಸ್ಥರಾದರು—ಎಂದು ಹೇಳದೆ ಬ್ರಹ್ಮೀಭೂತರಾದರು—ಎಂದು ಜನರು ಹೇಳುತ್ತಾರೆ. ಹೀಗೆ ಜ್ಞಾನಿಯ ಪ್ರಾಣವು ಮರಣಕಾಲಕ್ಕೆ—ಬೆಲೂನಿನಲ್ಲಿದ್ದ ಗಾಳಿಯು ಅದು ಒಡೆದುಹೋಗುತ್ತಲೂ ಮಹಾವಾಯುಮಂಡಲದಲ್ಲಿ ಒಂದಾಗುವಂತೆ—ಮಹಾಪ್ರಾಣದಲ್ಲಿ (ಪರಬ್ರಹ್ಮದಲ್ಲಿ) ಒಂದಾಗಿಬಿಡುವದು. ಇದೇ ಆತ್ಯಂತಿಕಮೋಕ್ಷವು. ಇಂಥ ಮೋಕ್ಷವನ್ನು ಪಡೆದವನಿಗೆ ಸಂಸಾರಕ್ಕೆ ಪುನರಾವೃತ್ತಿಯಿರುವದಿಲ್ಲ. ಮತ್ತೆ ಶರೀರಗ್ರಹಣವೂ ಇರುವದಿಲ್ಲ.

ಇಷ್ಟು ವಿಚಾರಗಳನ್ನು ಕೇಳಿದಮೇಲೂ ಕಡೆಯದಾಗಿ ಶ್ವೇತಕೇತುವಿಗೆ ಒಂದು ಸಂಶಯವು ಬಂದಿತು. ಮರಣಾನಂತರ ಎಲ್ಲರೂ ಒಂದೇ ಬ್ರಹ್ಮದಲ್ಲಿ ಸೇರುತ್ತಾರಾದರೆ ಅಜ್ಞಾನಿಗಳು ಮಾತ್ರ ಸಂಸಾರಕ್ಕೆ ಮರಳಿ ಬರುವದಕ್ಕೂ ಜ್ಞಾನಿಗಳು ಬಾರದೆ ಇರುವದಕ್ಕೂ ಕಾರಣವೇನು? ಎಂಬಿದೇ ಆ ಸಂಶಯವು. ಉತ್ಕ್ರಾಂತಿಯೂ ಜನ್ಮಾಂತರ ಲೋಕಾಂತರ ಗಳ ಪ್ರಾಪ್ತಿಯೂ—ಎಲ್ಲವೂ ಬ್ರಹ್ಮದಲ್ಲೇ ಆಗುತ್ತದೆಯಲ್ಲವೆ? ಬ್ರಹ್ಮವನ್ನು ಬಿಟ್ಟು ಯಾವದೂ ಇಲ್ಲ. ಬ್ರಹ್ಮವಿಲ್ಲದ ಸ್ಥಳವೂ ಇಲ್ಲ. ಹೀಗಿರುವಲ್ಲಿ ಸತ್ತಾಗ ಅಜ್ಞಾನಿಗೂ ಬ್ರಹ್ಮದಲ್ಲಿಯೇ ಸಂಪತ್ತಿಯಾಗಿರಬೇಕು. ಹಾಗೆ ಆಗಿರುವದೇ ನಿಜವಾದರೆ ಬ್ರಹ್ಮ ಸಂಪತ್ತಿಯ ಲಾಭವು ಜ್ಞಾನಿ—ಅಜ್ಞಾನಿಗಳಿಬ್ಬರಿಗೂ ಸರಿಸಮಾನವಾಗಿದ್ದಲ್ಲಿ ಜ್ಞಾನಿಗೆ ಮಾತ್ರ ಆತ್ಯಂತಿಕಮುಕ್ತಿಯೆಂದೂ ಅಜ್ಞಾನಿಗೆ ಮತ್ತೆ ಸಂಸಾರಪ್ರಾಪ್ತಿಯೆಂದು ಭೇದವೇಕೆ ಉಂಟಾಯಿತು? ಎಂಬಿದು ಅವನ ಪ್ರಶ್ನೆಯ ಸಾರ. ಮುಂದುವರೆದು ನೋಡಿದರೆ ಮರಣನಿಮಿತ್ತದಿಂದ ಒಮ್ಮೆ ಬ್ರಹ್ಮಸಂಪತ್ತಿಯಾಗಲಾಗಿ ಅದೇ ಮುಕ್ತಿಯೆನಿಸಿ ಬಿಡುವದರಿಂದ ಜ್ಞಾನಕ್ಕಾಗಿ ಏಕೆ ಶ್ರಮಪಡಬೇಕು? ಎಂಬ ಭಾವವೂ ಆ ಪ್ರಶ್ನೆಯಲ್ಲಿ ಅಡಕವಾಗಿರುವಂತಿದೆ. ಇದರಿಂದ ಮರಣವೇ ಮುಕ್ತಿಯೆಂಬ ಚಾರ್ವಾಕಸಿದ್ಧಾಂತವೂ ಸರಿಯೆಂದೇ ಕಂಡುಬರುವ ಸಂಭವವಿದೆ. ಹೀಗೆ ಸಂಶಯವುಂಟಾಗಲಾಗಿ ಶ್ರುತಿಯು ಒಂದು ಉದಾಹರಣೆಯ ಮೂಲಕ ಸಂಶಯವನ್ನು ಪರಿಹರಿಸಿ ಸಿದ್ಧಾಂತವನ್ನು ಸ್ಥಾಪನೆಮಾಡುತ್ತದೆ. ಅದರ ವಿವರವು ಹೀಗಿದೆ:

ಹಿಂದಿನ ಕಾಲಕ್ಕೆ ಕಳ್ಳತನಮಾಡಿದವನನ್ನು ಶಿಕ್ಷಿಸುವಾಗ ಆತನು ಕಳ್ಳನು ಹೌದೇ– ಎಂಬಿದನ್ನು ನಿಸ್ಸಂಶಯವಾಗಿ ನಿರ್ಧರಿಸಬೇಕಾಗುತ್ತಿದ್ದ ಸಂದರ್ಭದಲ್ಲಿ ಒಂದು ಪರೀಕ್ಷೆಯನ್ನು ಒಡ್ಡುತ್ತಿದ್ದರು. ಚೆನ್ನಾಗಿ ಬೆಂಕಿಯಲ್ಲಿ ಕಾಯಿಸಿದ ಕೊಡಲಿಯನ್ನು ಮುಂದಿಟ್ಟು 'ನೀನು ಕಳ್ಳನಲ್ಲವಾದರೆ– ಅದನ್ನು ಹಿಡಿದುಕೊ, ಅದು ಸುಡುವದಿಲ್ಲ' ಎನ್ನುತ್ತಿದ್ದರು. ಆಗ ಅಪರಾಧಿಯು ಪೇಚಿಗೆ ಸಿಲುಕುತ್ತಿದ್ದನು. ಏಕೆಂದರೆ ಸುಳ್ಳುಸುಳ್ಳಾಗಿ ಕದ್ದಿಲ್ಲವೆಂದು ಬಾಯಲ್ಲಿ ಹೇಳುವದಕ್ಕೂ ಕಾದ ಕೊಡಲಿಯನ್ನು ಮುಟ್ಟುವದಕ್ಕೂ ತಾರತಮ್ಯವಿದೆಯಲ್ಲವೆ? ಕಳ್ಳನೇ ಆದವನಿಗೆ ಅದನ್ನು ಮುಟ್ಟಲು ಮನಸ್ಸಿನಲ್ಲಿ ಅಳುಕು ಇರುವದಲ್ಲವೆ? ಆ ಅಳುಕನ್ನೇ 'ಅನೃತಾಭಿಸಂಧಿ' ಯೆನ್ನುವರು. ಸುಳ್ಳನ್ನು ನಂಬುವದೇ ಅನೃತಾಭಿಸಂಧಿಯು. ಇಂಥವನಿಗೆ ಬೆಂಕಿಯು ಸುಡುತ್ತಿದ್ದುದರಿಂದ ಕಳ್ಳನೆಂದೇ ನಿಶ್ಚಯವಾಗುತ್ತಿದ್ದ ಶಿಕ್ಷೆಗೆ ಗುರಿಯಾಗುತ್ತಿದ್ದನು. ಆದರೆ ಏನೂ ಕದಿಯದೆ ಇದ್ದವನಿಗೆ ಹೀಗೆ ಪರೀಕ್ಷೆಯನ್ನೊಡ್ಡಿದಾಗ ಅವನು ಭಯವಿಲ್ಲದೆ ಮುಟ್ಟಿಯೇ ಬಿಡುತ್ತಿದ್ದನು. ಸತ್ಯವನ್ನು ನಂಬಿದ್ದ ಅಂಥವನಿಗೆ ಹನುಮಂತನ ಬಾಲಕ್ಕೆ ಬೆಂಕಿಬಿದ್ದರೂ ಸುಡದಿರುವಂತೆ ತಾಪವಾಗುತ್ತಿರಲಿಲ್ಲ. ಆಗ ಅವನು ಬಿಡುಗಡೆಯನ್ನು ಹೊಂದುತ್ತಿದ್ದನು. ಈಗ ಕಾಲವು ಬದಲಾಗಿದೆ. ಕದಿಯದವನಿಗೂ ಬೆಂಕಿಯು ಸುಡುತ್ತದೆಯಲ್ಲವೆ? ಬೆಂಕಿಗೆ ಕಳ್ಳನಾರು? ಸತ್ಯವಂತನಾರು? ಎಂಬುದೇನು ಗೊತ್ತು? ಎಂದು ನಾವು ಆಡಿಕೊಳ್ಳುತ್ತಿದೇವೆ. ಈಗಿನ ಕಾಲದಲ್ಲಿ ಹೀಗೆಯೇ ಸರಿ. ಏಕೆಂದರೆ ಅಗ್ನಿಯನ್ನು ದೇವತೆಯೆಂದು ನಾವು ಕಂಡುಕೊಂಡಿಲ್ಲ. ಆದರೆ ಹಿಂದಿನ ಕಾಲಕ್ಕೆ ಜನರು ಹೆಚ್ಚು ಹೆಚ್ಚು ಸತ್ಯವಂತರಾಗಿದ್ದುದರಿಂದ ಅವರು ಅಪಮಾನವನ್ನೇ ಬೆಂಕಿಯ ಸುಡುವಿಕೆಗಿಂತ ತೀವ್ರವಾಗಿ ಭಾವಿಸುತ್ತಿದ್ದರು. ಸತ್ಯಪರೀಕ್ಷೆಗಾಗಿ ಸೀತೆಯಂಥವಳು ಅಗ್ನಿಪ್ರವೇಶಮಾಡಿದ್ದೂ ಆಕೆಯನ್ನು ಅಗ್ನಿಯು ಸುಡದೇ ಇದ್ದದ್ದೂ ಇತಿಹಾಸಕಥಾ ಪ್ರಸಿದ್ಧವಾಗಿದೆ. ಇರಲಿ. ಪ್ರಕೃತದಲ್ಲಿ ನಿಜವನ್ನು ನಂಬುವದು, ಸುಳ್ಳನ್ನು ನಂಬುವದು– ಹೇಗೆ ಬಿಡುಗಡೆಗೂ ಬಂಧನಕ್ಕೂ ನಿಮಿತ್ತವಾಗಿರುವದೋ ಹಾಗೆಯೇ ಮರಣಕಾಲಕ್ಕೂ ತನ್ನ ಆತ್ಮನನ್ನು ಬ್ರಹ್ಮವೆಂದೇ (ವಿನಾಶವಿಲ್ಲದ್ದೆಂದೇ) ಕಂಡುಕೊಂಡಿರುವದು, ಕಂಡುಕೊಳ್ಳದೆ ಇರುವದು– ಎಂಬ ತಾರತಮ್ಯದಿಂದ ಬಂಧಮೋಕ್ಷಗಳಾಗುತ್ತವೆ– ಎಂದು ಉದ್ದಾಲಕನು ತಿಳಿಸಿರುತ್ತಾನೆ. ತನ್ನ ಸ್ವರೂಪವನ್ನು ಜನನಮರಣರಹಿತವೂ ಅಮೃತವೂ ಅಭಯವೂ ಆದ ಬ್ರಹ್ಮವೆಂದೇ ತಿಳಿದವನಿಗೆ ಮರಣವಾಗಲಿ, ಮರಣೋತ್ತರ ಕಾಲವಾಗಲಿ ಎಲ್ಲಿ ಬರಬೇಕು? ಇದೇ ಜ್ಞಾನದ ಪರಮಾವಧಿಯು.

--------

## ಶ್ವೇತಕೇತುವು ಸದ್ಬ್ರಹ್ಮವೇ ತಾನೆಂದು ಅರಿತುಕೊಂಡದ್ದು

**ಓಮ್ ॥ ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ತದ್ಧಾಸ್ಯ ವಿಜಜ್ಞೌ॥ 6–16–3.**

ಭಾವಾರ್ಥಃ– 'ಇದೆಲ್ಲವೂ ಐತದಾತ್ಮ್ಯವು; ಅದು ಸತ್ಯವು; ಅದೇ ಆತ್ಮನು, ಶ್ವೇತಕೇತುವೆ, ಅದೇ ನೀನಾಗಿರುವೆ'–ಎನ್ನಲು ಇವನ (ಆ ಉಪದೇಶವನ್ನು) ಅರಿತುಕೊಂಡನು.

(ಉದ್ದಾಲಕನು ದೃಷ್ಟಾಂತಗಳ ಸಹಾಯದಿಂದ ಒಂಭತ್ತುಬಾರಿ ಮಾಡಿದ 'ಅದೇ ನೀನಾಗಿರುವೆ' ಎಂಬ ಉಪದೇಶವನ್ನು ವಾಕ್ಯಜ್ಞಾನದಿಂದಲೇ ಪಡೆದುಕೊಂಡ ಶ್ವೇತಕೇತುವು 'ತಾನೇ ಬ್ರಹ್ಮ'ವೆಂದರಿತಕೂಡಲೇ ಕೃತಕೃತ್ಯನಾದನು–ಎಂದಭಿಪ್ರಾಯ.)

## 48. ತತ್ತ್ವಮಸಿ ವಾಕ್ಯಾರ್ಥ

ಈಗ 'ತತ್ತ್ವಮಸಿ' ಮಹಾವಾಕ್ಯದ ಅಭಿಪ್ರಾಯವನ್ನು ಉಪಸಂಹಾರಮಾಡಿ ಈವರೆಗಿನ ಎಲ್ಲಾ ವಿಷಯಗಳನ್ನೂ ಕ್ರೋಢೀಕರಿಸಿ ತಿಳಿಯೋಣ.

ಉದ್ದಾಲಕಶ್ವೇತಕೇತುಸಂವಾದರೂಪವಾದ ಆರನೆಯ ಅಧ್ಯಾಯವು ವೇದಾಂತ ಸಿದ್ಧಾಂತದ ಪರಮತಾತ್ಪರ್ಯವಾದ ಜೀವಬ್ರಹ್ಮರುಗಳ ಐಕ್ಯವನ್ನೇ ತಿಳಿಸಿಕೊಡುತ್ತದೆ–ಎಂದು ಆದಿಶಂಕರಾಚಾರ್ಯರು ಅಭಿಪ್ರಾಯಪಡುತ್ತಾರೆ. ಆ ಮಹನೀಯರ ಭಾಷ್ಯಗ್ರಂಥವು ಈಗಲೂ ನಾಗರಿಕಪ್ರಪಂಚದಲ್ಲಿವೇದಾಂತವಿಚಾರಜಿಜ್ಞಾಸುಗಳ ವೇದಿಕೆಯಲ್ಲಿ ಅಗ್ರಪೂಜ್ಯವಾಗಿಯೇ ವಿರಾಜಮಾನವಾಗಿದೆ. ಯಾವದೇ ಪೂರ್ವಾಗ್ರಹವಿಲ್ಲದೆ ಜಿಜ್ಞಾಸುವು ಪದವಾಕ್ಯಪ್ರಮಾಣಗಳನ್ನು ಬಳಸಿಕೊಂಡು ಯಥಾಶ್ರುತವಾದ ಉಪನಿಷದರ್ಥವನ್ನು ಸಂಪ್ರದಾಯಾಗಮಾನುಸಾರವಾಗಿ ಭಗವತ್ಪಾದರ ಭಾಷ್ಯದ ಬೆಳಕಿನಲ್ಲಿ ಅಧ್ಯಯನಮಾಡಿ ಮನನಮಾಡಿದ್ದೇ ಆದರೆ ತತ್ತ್ವಮಸಿ–ಉಪದೇಶದ ವಿಷಯಕ್ಕೆ ಬರಬಹುದಾದ ಸಂಶಯಗಳೆಲ್ಲ ಪರಿಹಾರವಾಗಿಯೇ ತೀರುತ್ತವೆ. ಆದರೆ ಜಿಜ್ಞಾಸುವು ತನ್ನನ್ನು ತಾನೇ ಪರೀಕ್ಷಿಸಿಕೊಂಡು ಈ ವಿಚಾರಸರಣಿಗೆ ತಕ್ಕ ಅರ್ಹತೆಗಳೊಡನೆ ಪ್ರವೇಶಿಸಬೇಕು. ಬಾಹ್ಯಾಕಾಶಯಾತ್ರೆಗೆ ತಕ್ಕ ತರಬೇತಿಯನ್ನು ಪಡೆದುಕೊಂಡ ಅನಂತರವೇ ಗಗನನೌಕೆಯನ್ನು ಪ್ರವೇಶಿಸುವದು ಎಷ್ಟು ಸಮಂಜಸವೋ ಹಾಗೆಯೇ ಈ ಅಂತರಾಕಾಶರಹಸ್ಯಜ್ಞಾನಕ್ಕೂ ಪೂರ್ವಸಿದ್ಧತೆಯು ತೀರ ಅಗತ್ಯವೆಂದು ಬೇರೆ ಹೇಳಬೇಕಾಗಿಲ್ಲ.

ಈಗ ಪ್ರಕೃತವಿಚಾರಕ್ಕೆ ಬರೋಣ. 'ನೀನೇ ಅದಾಗಿರುವೆ' ಎಂಬ ವಾಕ್ಯವು ಶ್ವೇತಕೇತುವನ್ನು ಕುರಿತು ತಂದೆಯು ಹೇಳಿದ್ದಾಗಿರುವದರಿಂದ ತಿಳಿದುಕೊಂಡ ಶ್ವೇತಕೇತುವು 'ನಾನು ಅದಾಗಿರುವೆನು' ಎಂಬ ನಿಶ್ಚಯದಲ್ಲಿನೆಲೆಗೊಂಡಿರುತ್ತಾನೆ–ಎಂದು ಗೊತ್ತಾಗುತ್ತದೆ. ''ಅದು ಎಂಬುದು ಸತ್ಯವು, ಅದೇ ಆತ್ಮನು''–ಎಂಬ ಹಿಂದಿನ ವಾಕ್ಯಗಳನ್ನೂ ಸೇರಿಸಿಕೊಂಡು ಅರ್ಥಮಾಡಿಕೊಂಡಲ್ಲಿ 'ನಾನು ಸದ್ಬ್ರಹ್ಮವು' ಎಂದೇ ವಾಕ್ಯಾರ್ಥವಾಗುವದು. ಇದನ್ನೇ ''ಅಹಂ ಬ್ರಹ್ಮಾಸ್ಮಿ'' ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ತಿಳಿಸಿದೆ. ನಿಜವಾಗಿ ಈ ವಾಕ್ಯವು 'ಅಹಂ' ಎಂಬೀ ಸರ್ವನಾಮಪದವನ್ನೂ 'ಅಸ್ಮಿ' ಎಂಬ ಕ್ರಿಯಾಪದವನ್ನೂ ಒಳಗೊಂಡಿದ್ದರೂ 'ಬ್ರಹ್ಮ'ದಲ್ಲಿಯೇ ಅವೆರಡೂ ಲಯವಾಗುತ್ತದೆ. ಏಕೆಂದರೆ ತಿಳಿದವನಿಗೆ ತಾನೇ ಆತ್ಮನು, ಬ್ರಹ್ಮವು ಎಂಬ ಅನುಭವವಾಗಿಬಿಟ್ಟಿರುವದು, ಅದು ಅದ್ವೈತವೇ ಎಂಬಿದರಲ್ಲಿ ಸಂಶಯವಿಲ್ಲ. ಹೀಗೆ 'ತತ್ತ್ವಮಸಿ' ವಾಕ್ಯವು 'ಅಹಂ ಬ್ರಹ್ಮಾಸ್ಮಿ' ಎಂಬುದರೊಡನೆ ಒಂದಾದಾಗ ಪದ, ವಾಕ್ಯ, ಸಂಸರ್ಗಗಳೆಂಬ ಶಬ್ದಪ್ರಪಂಚದ ವ್ಯವಹಾರಗಳೆಲ್ಲವೂ ಶಾಂತವಾಗಿ ತಾನೊಂದೇ ಕೇವಲವಾಗಿರುವ ಆತ್ಮಾನುಭವದಲ್ಲಿ ನಮ್ಮನ್ನು ನೆಲೆಗೊಳಿಸುವದು. ಇದಕ್ಕಾಗಿಯೇ ತಾನು ಮಾತ್ರವೇ ಇದ್ದುಕೊಂಡಿರುವ ಸಾರ್ವತ್ರಿಕಾನುಭವವಾದ 'ಸುಷುಪ್ತಿ'ಯನ್ನು ಉದಾಹರಣೆಯಾಗಿ ಮೊಟ್ಟಮೊದಲಿಗೆ ಉದ್ದಾಲಕನು ಶ್ವೇತಕೇತುವಿಗೆ ತಿಳಿಸಿರುತ್ತಾನೆ. ಈ ಸುಷುಪ್ತ್ಯನುಭವವನ್ನು–ಎಂದರೆ ಸುಷುಪ್ತ್ಯವಸ್ಥೆಯನ್ನಲ್ಲ–ಅದರ ದ್ವಾರದಿಂದ ತೋರಿಕೊಳ್ಳುವ ಸ್ವರೂಪಾನುಭವವನ್ನು ಶ್ರುತಿಯ ಉಪದೇಶದಂತೆ ವಾಚಕರು ಮನನಮಾಡಿ ಕಂಡುಕೊಳ್ಳಬೇಕು. ಆಗ ಒಮ್ಮೆಗೇ ಬ್ರಹ್ಮಾನುಭವವು ನಮ್ಮದಾಗಿಬಿಡುವದು.

ಹೀಗೆ ಸುಷುಪ್ತಿಯಲ್ಲಿ ಬ್ರಹ್ಮವೇ ನಾವಾಗಿದ್ದುಕೊಂಡಿರುವದು ನಮ್ಮ ಅನುಭವವೇ ಆಗಿದ್ದರೂ ನಮಗೇಕೆ ಸತ್ಸಂಪತ್ತಿಯು ತಿಳಿದುಬರುತ್ತಿಲ್ಲ? ಸುಷುಪ್ತಿಯೇನೂ ಅಪರೂಪದ ಅವಸ್ಥೆಯಲ್ಲ ಅಥವಾ ಸಮಾಧಿಯಂತೆ ಶತಪ್ರಯತ್ನಗಳಿಂದ ಸಂಪಾದಿಸಿಕೊಳ್ಳಬೇಕಾದ ವೈಯುಕ್ತಿಕಾನುಭವವೂ ಅಲ್ಲ. ಆದ್ದರಿಂದ ಸರ್ವಸಾಧಾರಣವಾಗಿಯೇ ಬ್ರಹ್ಮಭಾವವು ತಿಳಿದುಬರಬೇಕಲ್ಲವೆ? ಎಂಬ ಶಂಕೆಗೆ ಸಮಾಧಾನವಾಗಿ 'ನಿಜ; ಹಾಗೆಯೇ ಸರಿ; ತನ್ನನ್ನು ತಾನು ತಿಳಿದುಕೊಳ್ಳಬೇಕಾದದ್ದೂ ಇಲ್ಲ; ಏಕೆಂದರೆ ತಿಳಿಯುವವನೇ ತಾನಾಗಿದ್ದಾನೆ. ಆದರೆ ಸುಷುಪ್ತಿಯಲ್ಲಿ ಏಕತ್ವವಿರುವದೇ ದ್ವೈತವನ್ನರಿಯದಂತೆ ಮಾಡಿರುತ್ತದೆ. ಹೇಗೆ ಜೇನಿನಲ್ಲಿ ಒಂದುಗೂಡಿರುವ ಷಡ್ರಸಗಳು ಜೇನಾದಾಗ ತಮ್ಮನ್ನು ತಾವು ಬಿಂಗಡವಾಗಿ ಹೊರಪಡಿಸಿಕೊಳ್ಳಲಾರವೋ, ಹಾಗೆ ಜೀವರುಗಳು ಏಕತ್ವಾನುಭವದಲ್ಲಿ ಒಂದಾಗಿದ್ದಾಗ ತಾನು ಇಂಥವನೆಂದಾಗಲಿ, ಸದ್ಬ್ರಹ್ಮದಲ್ಲಿ ಸೇರಿದ್ದೇನೆಂದಾಗಲಿ ಅರಿಯಲಾರರು.

ಇದರಿಂದಲೂ ಸಿದ್ಧವಾಗುವದೇನೆಂದರೆ: ಜೀವನು ತನ್ನ ಜೀವತ್ವವನ್ನು ಸುಷುಪ್ತಿಯಲ್ಲಿ ಕಳೆದುಕೊಂಡುಬಿಡುವದರಿಂದ ಅದು ಅವನ ಸ್ವಭಾವವಲ್ಲವೆಂದೇ ಆಗುವದು. ಹೀಗೆ ದ್ವೈತಾವಸ್ಥೆಯಲ್ಲಿ ಜೀವನೆನಿಸಿರುವ ನೀನೇ ಅದಾಗಿರುವೆ—ಎಂದು **ಎರಡನೆಯ ಬಾರಿಗೆ** ಉದ್ದಾಲಕನು ತಿಳಿಸಿರುತ್ತಾನೆ.

ಹಾಗಾದರೆ ಎಚ್ಚರವಾದಮೇಲಾದರೂ ನಾವು ಸತ್ತಿನಿಂದ ಬಂದಿರುತ್ತೇವೆ—ಎಂದೇಕೆ ತಿಳಿಯುವದಿಲ್ಲ? ಹೇಗೂ ಎಚ್ಚರದಲ್ಲಿ ಬಿಡಿಬಿಡಿಯಾದ ಜ್ಞಾನವಿರುತ್ತದೆ. 'ಬೇರೊಂದು ಊರಿನಿಂದ ಬಂದವನಿಗೆ ಇಂಥ ಊರಿಂದ ನಾನು ಬಂದೆನು'—ಎಂದು ಗೊತ್ತಿರುವಂತೆ ಬ್ರಹ್ಮದಿಂದ ಎದ್ದುಬಂದಿರುವೆನು—ಎಂದೇಕೆ ಎಚ್ಚರದಲ್ಲಿ ತಿಳಿಯುವದಿಲ್ಲ? ಎಂಬ ಸಂಶಯಕ್ಕೆ ಹೀಗೆ ಸಮಾಧಾನವನ್ನು ಕೊಡಲಾಗಿದೆ: ನಿಜ, ಸದ್ಬ್ರಹ್ಮದಿಂದ ಬಂದಿರುವದು ಅನುಭವವೇ ಆದರೂ ಅದರಲ್ಲಿ ಸೇರಿದ್ದಾಗ ತನ್ನ ಔಪಾಧಿಕ ನಾಮರೂಪಗಳನ್ನು ಕಳೆದುಕೊಂಡುಬಿಟ್ಟಿದ್ದನಾದ್ದರಿಂದ ತಿಳಿಯುವಂತಿಲ್ಲ. ಹೇಗೆ ನದಿಗಳು ಸಮುದ್ರವನ್ನು ಸೇರಿದಾಗ ತಮ್ಮ ನಾಮರೂಪಗಳನ್ನು ಕಳೆದುಕೊಂಡು ಬಿಡುವದರಿಂದ ಅವುಗಳನ್ನು ಬಿಡಿಬಿಡಿಯಾಗಿ ಗುರುತಿಸಲಾಗುವದಿಲ್ಲವೋ ಹಾಗೆಯೇ ಸತ್ಸಂಪತ್ತಿಯಾದಾಗ ನಾಮರೂಪಗಳ ವಿಶೇಷಾಭಾವದಿಂದ ಬೇರೆಯಾಗಿ ತಿಳಿದುಬರುವದಿಲ್ಲ—ಎಂದು **ಮೂರನೆಯ ಬಾರಿಗೆ** ತಿಳಿಸಿರುತ್ತದೆ.

ಹಾಗಾದರೆ ಸುಷುಪ್ತಿಕಾಲಕ್ಕೆ ಜೀವರುಗಳೆಲ್ಲರೂ ಕಾರಣಬ್ರಹ್ಮದಲ್ಲೇ ಲಯಹೊಂದಿಬಿಡುವದಾದರೆ ನಾಶವಾಗಿಯೇಬಿಡಬೇಕಲ್ಲವೆ? ಆದರೆ ಅನುಭವವು ಹಾಗಿಲ್ಲ. ಪ್ರತಿಯೊಬ್ಬ ಜೀವನೂ ತಾನು ಸುಷುಪ್ತಿಗೆ ಹೋಗುವ ಮುಂಚೆ ಏನಾಗಿದ್ದನೋ ಅದಾಗಿಯೇ ಅನಂತರವು ಎಚ್ಚರದಲ್ಲಿ ಏಳುವನಲ್ಲವೆ? ಇದು ಹೇಗೆ? ಎಂಬ ಸಂಶಯಕ್ಕೆ ಸಮಾಧಾನವಾಗಿ: ಸರಿಯೆ; ಯಾವ ಜೀವನೂ ತನ್ನ ಸ್ವರೂಪವನ್ನು ಬಿಟ್ಟು ಬೇರೆಲ್ಲಿಯೂ ವಿಶ್ರಾಂತಿಯನ್ನು ಹೊಂದುವದಿಲ್ಲ; ಹೊಂದುವಂತೆಯೂ ಇಲ್ಲ. ಆದರೆ ಸುಷುಪ್ತಿಕಾಲಕ್ಕೆ ಜೀವನು ಸಹಜವಾಗಿ ಎಂದರೆ ತನಗೆ ಅರಿವಿಲ್ಲದೆ ಬ್ರಹ್ಮವನ್ನು ಸೇರಿಬಿಡುತ್ತಾನಾದ್ದರಿಂದ ಅವನ ಜೀವತ್ವವು ಎಚ್ಚರದ ದೃಷ್ಟಿಯಿಂದ ಬೀಜವಾಗಿ ಉಳಿದುಬಿಟ್ಟಿರುತ್ತದೆ—ಎನ್ನಬೇಕಾಗಿದೆ. ಹೇಗೆ ಒಂದು ಮರದ ಒಂದು ಕೊಂಬೆಯು ಒಣಗಿದ ಮಾತ್ರಕ್ಕೆ ಮರವೇ ಒಣಗುವದಿಲ್ಲವೋ, ಮರವು ಪೂರ ಒಣಗಬೇಕಾದರೆ ಅದರ ಎಲ್ಲಾ ಭಾಗದಿಂದಲೂ ಜೀವವು ಬಿಟ್ಟುಹೋಗಬೇಕೋ ಹಾಗೆಯೇ ಸುಷುಪ್ತಿಯಲ್ಲಿಯೂ ಜೀವನು ತನ್ನ ಎಚ್ಚರದ ಶರೀರವನ್ನು ಪೂರ ಬಿಟ್ಟು ಬ್ರಹ್ಮದಲ್ಲಿ ಸೇರಿರುವದಿಲ್ಲ, ಪ್ರಾಣವಾಯುವಿನಿಂದ ಕಾಪಾಡಿಕೊಂಡೇ ಇರುತ್ತಾನೆ. ಇದಕ್ಕೆ ಅವನ ಅಜ್ಞಾನವೇ ನಿಮಿತ್ತವು. ಆದ್ದರಿಂದ ಸತ್ಸಂಪತ್ತಿಯ ಅನಂತರವೂ ಹಿಂದಿನ ಶರೀರಕ್ಕೇ ಎಚ್ಚರಕಾಲಕ್ಕೆ ಮರಳಿ ಬರುವನು.

ಒಂದು ವೇಳೆ ಜೀವನು ಮರಣಕಾಲಕ್ಕೆ ಭೌತಿಕದೇಹವನ್ನೇ ಬಿಟ್ಟು ಹೊರಟರೂ ಜೀವತ್ವವು ಅವನಲ್ಲಿ ಉಳಿದುಕೊಂಡಿರುವದರಿಂದ ಮತ್ತೊಂದು ದೇಹವನ್ನು ಪಡೆಯುವನೇ ಹೊರತು ಮುಕ್ತನಾಗುವದಿಲ್ಲ. ಆದ್ದರಿಂದ ಬ್ರಹ್ಮವಿದ್ಯೆಯಿಂದ ಜೀವತ್ವವನ್ನು ಅಳಿದರೆ ಮಾತ್ರ ಆ ಬ್ರಹ್ಮವೇ ತಾನೆಂದು ಗೊತ್ತಾಗುವದು—ಎಂದು ನಾಲ್ಕನೆಯಬಾರಿಗೆ ತಿಳಿಸಲಾಗಿದೆ.

ಹಾಗಾದರೆ ಜೀವರುಗಳೊಡಗೂಡಿದ ಈ ಸ್ಥೂಲಪ್ರಪಂಚವು ಸೂಕ್ಷ್ಮವಾದ ಅಣುವಾದ ಬ್ರಹ್ಮದಿಂದ ಹೊರಬಂದಿದೆಯೆಂಬುದನ್ನು ನಂಬುವದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಉದ್ದಾಲಕನು ಒಂದು ಆಲದ ಬೀಜವನ್ನು ತರಿಸಿ ಅದನ್ನು ಒಡೆದು ನೋಡು—ಎಂದು ಮಗನಿಗೆ ತಿಳಿಸಿ ಕಡೆಗೆ ಅದರಲ್ಲಿರುವ ತೀರ ಅಣುವಾದ ಹಾಗೂ ಸ್ಥೂಲದೃಷ್ಟಿಗೆ ಗೋಚರವಾಗದ ವಸ್ತುವೇ—ಹೇಗೆ ದೊಡ್ಡ ಆಲದಮರವು ಬೆಳೆಯುವದಕ್ಕೆ ಕಾರಣವಾಗಿದೆಯೋ ಹಾಗೆಯೇ ಅಣುವಾದ ಬ್ರಹ್ಮದಿಂದಲೇ ಸ್ಥೂಲಸೂಕ್ಷ್ಮವಾಗಿ ಕಂಡುಬರುತ್ತಿರುವ ಚೇತನಾಚೇತನಜಗತ್ತೆಲ್ಲವು ಹೊರ ಬಂದಿರುತ್ತದೆ—ಎಂದು ಐದನೆಯ ಬಾರಿಗೆ ತಿಳಿಸಿರುತ್ತಾನೆ.

ಅನಂತರ ಜಗನ್ಮೂಲವಾದ ಸತ್ತು ಏಕೆ ಕಾಣಿಸುವದಿಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಲವಣದೃಷ್ಟಾಂತವನ್ನು ಕೊಟ್ಟು ಹೇಗೆ ಹರಳಾಗಿದ್ದ ಸ್ಥಿತಿಯಲ್ಲಿ ಉಪ್ಪು ಕಣ್ಣಿಗೂ ಕೈಗಳಿಗೂ ಗೋಚರವಾಗಿದ್ದರೂ ನೀರಿನಲ್ಲಿ ಕರಗಿದ ಅನಂತರ ಕೈಗೆ ಸಿಗದೆ ಇದ್ದರೂ ನಾಲಗೆಯಿಂದ ಗೊತ್ತುಪಡಿಸಲಾಗುವದೋ ಹಾಗೆಯೇ ಸದ್ಬ್ರಹ್ಮವನ್ನೂ ಉಪಾಯಾಂತರದಿಂದ ತಿಳಿಯಲು ಸಾಧ್ಯವಿದೆ—ಎಂದು ಆರನೆಯ ಬಾರಿಗೆ ಉದ್ದಾಲಕನು ತಿಳಿಸಿರುತ್ತಾನೆ.

ಅನಂತರ ಆ ಉಪಾಯವು ಯಾವದು? ಎಂಬ ಪ್ರಶ್ನೆಗೆ ಗಂಧಾರದೇಶದ ಸಾಹುಕಾರನ ಉದಾಹರಣೆಯನ್ನು ನೀಡಿ ಹೇಗೆ ಆ ಸಾಹುಕಾರನು ಅಡವಿಯಲ್ಲಿ ತನಗೆ ಕಣ್ಣುಕಟ್ಟುಗಳನ್ನು ಬಿಚ್ಚಿ, ಹಾದಿಯನ್ನು ಉಪದೇಶಿಸಿ ಉಪಕಾರಮಾಡಿದವನ ಸಹಾಯದಿಂದ ತಾನೂ ಜಾಣತನದಿಂದ ಪ್ರಯಾಣಮಾಡಿ ಊರನ್ನು ಸೇರಿದನೋ ಹಾಗೆಯೆ ಜಿಜ್ಞಾಸುವೂ ಆಚಾರ್ಯೋಪದೇಶಬಲದಿಂದ ವಿಚಾರ, ಮನನ, ನಿದಿಧ್ಯಾಸನಗಳ ಮೂಲಕ ಬ್ರಹ್ಮವನ್ನು ಅರಿತುಕೊಳ್ಳುವನು—ಎಂದು ಏಳನೆಯ ಬಾರಿಗೆ ತಿಳಿಸಲಾಗಿದೆ.

ಅನಂತರ ಮುಮುಕ್ಷುವಾದವನು ವಿಚಾರದಿಂದ ಬ್ರಹ್ಮವನ್ನು ಪರೋಕ್ಷವಾಗಿ ಅರಿತುಕೊಳ್ಳಲಾಗಿ ಕಡೆಗೆ ಬ್ರಹ್ಮದಲ್ಲಿಯೇ ಸೇರುವ ಬಗೆ ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಹೀಗೆಂದಿದೆ. ಹೇಗೆ ಸಾಯಲಿರುವವನು ಒಂದೊಂದೇ ಇಂದ್ರಿಯ

ಸಂಬಂಧವನ್ನು ಕಳೆದುಕೊಂಡು ಕಡೆಗೆ ಪ್ರಾಣವೂ ದೇಹದಿಂದ ಹೊರಡಲಾಗಿ ಶಾಸ್ತ್ರದೃಷ್ಟಿಯಂತೆ ಪರದೇವತೆಯಲ್ಲಿ ಒಂದಾಗುವನೋ ಹಾಗೆಯೇ ಮುಮುಕ್ಷುವೂ ಸತ್ತಿನಲ್ಲಿ ಒಂದಾಗಿ ಬಿಡುವನು– ಎಂದು ಎಂಟನೆಯ ಬಾರಿಗೆ ತಿಳಿಸಲಾಗಿದೆ.

ಕಡೆಯದಾಗಿ ಪ್ರಲಯದಲ್ಲಾಗಲಿ, ಮರಣದಲ್ಲಾಗಲಿ, ಸುಷುಪ್ತಿಯಲ್ಲಾಗಲಿ ಬ್ರಹ್ಮವನ್ನು ಪಡೆಯುವದು ಜ್ಞಾನಿ–ಅಜ್ಞಾನಿಗಳಿಗೆ ಸರಿಸಮಾನವಾದರೂ ಅಜ್ಞಾನಿಯು ಮಾತ್ರವೇ ಮರಳಿ ಸಂಸಾರಕ್ಕೆ ಏಕೆ ಬರಬೇಕು? ಜ್ಞಾನಿಗೇಕೆ ಮರಳುವಿಕೆಯಿಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಹೀಗೆಂದಿದೆ: ನಿಜ; ಇಬ್ಬರೂ ಬ್ರಹ್ಮವನ್ನೇ ಪಡೆದರೂ ಸತ್ಯ–ಅನೃತಗಳಲ್ಲಿನ ನಿಷ್ಠೆಯೇ ಈ ವ್ಯತ್ಯಾಸಕ್ಕೆ ಕಾರಣ. ಹೇಗೆಂದರೆ ಸತ್ಯವಂತನಿಗೆ ಬೆಂಕಿಯು ಸುಡದೆ ಸುಳ್ಳು ಹೇಳಿದವನಿಗೆ ಸುಡುವದು ಒಂದು ಕಾಲಕ್ಕೆ ಪ್ರಸಿದ್ಧವಾಗಿತ್ತೋ ಹಾಗೆಯೇ ಬ್ರಹ್ಮವೇ ತಾನೆಂಬ ಸತ್ಯಾಭಿಸಂಧನಿಗೆ ಪುನರಾವೃತ್ತಿಯಿಲ್ಲ, ತಾನು ಬ್ರಹ್ಮವೆಂದರಿಯದೆ ದೇಹತ್ಯಾಗ ಮಾಡಿದವನಿಗೆ ಪುನರಾವೃತ್ತಿಯುಂಟು– ಎಂದು ಹೇಳಿ "ಎಲೈ ಶ್ವೇತಕೇತುವೆ, ಅದೇ ಸತ್ಯವು, ಅವನು ಆತ್ಮನು, ಅವನೇ ನೀನು" ಎಂದು ಒಂಬತ್ತನೆಯಬಾರಿಗೆ ತಿಳಿಸಿ ಉಪಸಂಹಾರ ಮಾಡಿದೆ.

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥



# ಏಳನೆಯ ಅಧ್ಯಾಯ

## (ನಾರದ–ಸನತ್ಕುಮಾರ ಸಂವಾದ–ಭೂಮವಿದ್ಯೆ)

## ಶೋಕವನ್ನು ದಾಟುವ ಉಪಾಯ

**ಓಮ್ ॥ ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ ತರತಿ ಶೋಕಮಾತ್ಮ-ವಿತ್ ಇತಿ ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾನ್ ಶೋಕಸ್ಯ ಪಾರಂ ತಾರಯತು ॥ 7–1–3**

ಭಾವಾರ್ಥ:– "ಭಗವಂತನಂಥವರಿಂದ ಆತ್ಮನನ್ನು ಬಲ್ಲವನು ಶೋಕವನ್ನು ದಾಟುವನೆಂದು ನಾನು ಕೇಳಿರುತ್ತೇನೆ. ಭಗವಂತನೆ, ನಾನು ಶೋಕಿಸುತ್ತಿದ್ದೇನೆ. ಆ ನನ್ನನ್ನು ಭಗವಂತನು ಶೋಕದ ಪಾರವನ್ನು ದಾಟಿಸಬೇಕು.

(ನಾರದನು ಒಮ್ಮೆ ಸನತ್ಕುಮಾರರ ಬಳಿಗೆ ಬಂದು 'ಪೂಜ್ಯರೆ, ನನಗೆ ಎಲ್ಲ ವಿದ್ಯೆಗಳೂ ತಿಳಿದಿವೆ. ಆದರೆ ಶೋಕವು ಮಾತ್ರ ಹೋಗಿಲ್ಲ; ಆತ್ಮಜ್ಞಾನಿಯು ಶೋಕವನ್ನು ದಾಟುವನೆಂದು ಕೇಳಿದ್ದೇನೆ. ಅಂಥ ಆತ್ಮವಿದ್ಯೆಯನ್ನು ನನಗೆ ಹೇಳಿಕೊಡಿರಿ' ಎಂದು ಕೇಳಿಕೊಂಡಿರುತ್ತಾನೆ.)

## 49. ನಾರದ–ಸನತ್ಕುಮಾರರ ಸಂವಾದ

ಛಾಂದೋಗ್ಯ ಉಪನಿಷತ್ತಿನ ಏಳನೆಯ ಅಧ್ಯಾಯದ ವಿಷಯಗಳನ್ನು ಕುರಿತು ಈಗ ವಿಚಾರಮಾಡೋಣ. ಈ ಅಧ್ಯಾಯವೂ ತತ್ತ್ವವಿಚಾರಪ್ರಧಾನವಾಗಿದೆ. ಬ್ರಹ್ಮವಿದ್ಯೆಯಲ್ಲಿ ಇಲ್ಲಿ 'ಭೂಮವಿದ್ಯೆ' ಯೆಂದು ಕರೆದಿದೆ. ಭೂಮಾ ಎಂದರೆ ಬಹಳ ದೊಡ್ಡದು ಎಂದರ್ಥ. ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದಮೇಲೂ ಇನ್ನೂ ಯಾವದು ಅದಕ್ಕಿಂತ ಮಿಗಿಲಾಗಿರುವದೋ ಯಾವ ತತ್ತ್ವವು ತಾನೊಂದೇ ಆಗಿದ್ದುಕೊಂಡು ಉಳಿದೆಲ್ಲವನ್ನೂ ತನ್ನಲ್ಲಿಯೇ ಅಡಕಮಾಡಿಕೊಂಡಿದೆಯೋ ಆ ವಸ್ತುವೇ ಭೂಮವು. ಭೂಮವೆಂದರೆ ಬ್ರಹ್ಮವೇ. ಆದ್ದರಿಂದ ಬ್ರಹ್ಮವಿದ್ಯೆಯನ್ನು ಅಥವಾ ಆತ್ಮವಿದ್ಯೆಯನ್ನು "ಭೂಮವಿದ್ಯೆ" ಯೆಂಬ ಪರ್ಯಾಯನಾಮದಿಂದ ಇಲ್ಲಿ ವಿವರಿಸಲಾಗಿದೆ. ವಿಷಯವು ಸುಲಭವಾಗಿ ತಿಳಿಯುವದಕ್ಕಾಗಿ ಹಾಗೂ ಆತ್ಮವಿದ್ಯೆಯನ್ನು ಗುರುಶಿಷ್ಯಪರಂಪರೆಯಿಂದಲೇ ತಿಳಿಯಬೇಕೆಂಬ ಸಂಪ್ರದಾಯಪರಿಪಾಲನೆಗಾಗಿ ನಾರದಸನತ್ಕುಮಾರರ ಕಥೆಯನ್ನು ಕೊಡಲಾಗಿದೆ.

ನಾರದರ ಪರಿಚಯವು ಪುರಾಣಗಳನ್ನು ಕೇಳಿರುವವರಿಗೆಲ್ಲ ಇದೆ. ನಾಟಕಗಳಲ್ಲಿಯೂ ನಾವು ಪಾತ್ರಧಾರಿ–ನಾರದರನ್ನು ನೋಡಿದ್ದೇವೆ. ಬಹಳ ಜನರಿಗೆ

ನಾರದರೆಂದರೆ ಚಾಡಿಕೋರನೆಂಬ ಭಾವನೆಯಿದೆ. ಇದು ತಪ್ಪು. ನಾರದರು ದೇವರ್ಷಿಗಳು. ಭಗವಂತನೇ ತನ್ನ ವಿಭೂತಿಯೋಗದಲ್ಲಿ ''ದೇವರ್ಷಿಗಳಲ್ಲಿ ನಾನು ನಾರದನು'' ಎಂದು ಹೇಳಿಕೊಂಡಿರುತ್ತಾನೆ. ನಾರದನ ಸ್ವಭಾವವು ಎಲ್ಲರಿಗೂ ಸಮನಾಗಿರುವದು, ನಿಜವನ್ನೇ ನುಡಿಯುವದು, ಮುಂದೆ ಬರುವ ವಿಪತ್ತುಗಳು ವಿಷಯಕ್ಕೆ ಸೂಚನೆಕೊಡುವದು, ವೃತ್ತಾಂತಗಳನ್ನು ಮರೆಮಾಚದೆ ಅವರವರಿಗೆ ಸಂಬಂಧಪಟ್ಟದ್ದನ್ನು ತಿಳಿಸುವದು, ಸದಾಕಾಲವೂ ಭಗವನ್ನಾಮಕೀರ್ತನಮಾಡುತ್ತಾ ಮೂರು ಲೋಕಗಳಲ್ಲಿಯೂ ಸಂಚರಿಸುವದು–ಇವುಗಳೆನ್ನಬಹುದು. ಮತ್ತು ಈ ಮಹನೀಯರು ಎಲ್ಲಾ ವಿದ್ಯೆಗಳ ಪರಿಚಯವುಳ್ಳವರು. ಇಂಥವರಿಗೂ ಶೋಕವು ಹೋಗಿರಲಿಲ್ಲವೆಂಬುದು ಪ್ರಕೃತವಾದ ವಿಷಯವು. ಇನ್ನು ಸನತ್ಕುಮಾರರನ್ನು ಪರಿಚಯಮಾಡಿಕೊಳ್ಳೋಣ. ಆ ಮಹನೀಯರು ಸೃಷ್ಟಿಯ ಆರಂಭದಲ್ಲಿ ಬ್ರಹ್ಮನಿಂದ ನಿವೃತ್ತಿಧರ್ಮಪರಿಪಾಲನೆಗಾಗಿ ಮಾನಸಸೃಷ್ಟಿಯ ಕ್ರಮದಿಂದ ಹೊರಬಂದವರು. ಧರ್ಮಜ್ಞಾನವೈರಾಗ್ಯ–ಬ್ರಹ್ಮವಿದ್ಯೆಗಳ ಭಂಡಾರವಾಗಿರುವವರು. ವೀತಶೋಕರೂ ಆತ್ಮರತರೂ ಆತ್ಮಜ್ಞಾನಿಗಳೂ ಯೋಗೀಶ್ವರರೂ ಆಗಿರುವವರು. ಇವರನ್ನು ಭಗವಾನ್ ಕುಮಾರಸ್ವಾಮಿ(ಷಣ್ಮುಖ)ಯ ಅವತಾರವೆಂದು ಹೇಳುತ್ತಾರೆ. ಇಂಥ ಗುರುವಿನ ಸನ್ನಿಧಿಗೆ ಒಮ್ಮೆ ನಾರದರು ಬಂದರು.

''ಪೂಜ್ಯರೆ, ನನಗೆ ಉಪದೇಶಮಾಡಬೇಕು''–ಎಂದು ಹೇಳುತ್ತಾ ನಾರದರು ಸನತ್ಕುಮಾರರಿಗೆ ವಂದಿಸಿದರು. ಆಗ ಸನತ್ಕುಮಾರರು ''ಅಯ್ಯ, ಈವರೆಗೆ ನೀನು ತಿಳಿದುಕೊಂಡಿರುವದರ ವಿವರಗಳನ್ನು ಹೇಳಿದರೆ, ಅನಂತರ ಮುಂದಕ್ಕೆ ನಿನಗೆ ಬೇಕಾದ ವಿದ್ಯೆಯನ್ನು ಹೇಳಬಹುದಾಗಿದೆ; ಇಲ್ಲಿಯವರೆಗೆ ನೀನು ಕಲಿತಿರುವದೇನು? ಹೇಳು''–ಎಂದರು. ಆಗ ನಾರದರು ''ಪೂಜ್ಯರೆ, ನಾನು ನಾಲ್ಕುವೇದಗಳು, ಪುರಾಣಗಳು, ಇತಿಹಾಸಗಳು, ವೇದಾಂಗಗಳು, ದರ್ಶನಗಳು, ಯಂತ್ರ, ಮಂತ್ರ, ತಂತ್ರಶಾಸ್ತ್ರಗಳು, ಗಾಂಧರ್ವ, ವೈದ್ಯ, ಶಿಲ್ಪ, ಗಣಿತ–ಇತ್ಯಾದಿಗಳನ್ನೆಲ್ಲ ಬಲ್ಲವನಾಗಿರುತ್ತೇನೆ. ಆದರೇನು? ನನಗೆ ಇಷ್ಟೆಲ್ಲ ತಿಳಿದಿದ್ದರೂ ದುಃಖಪರಿಹಾರವಾಗಿರುವದಿಲ್ಲ. ಶೋಕಮೋಹಗಳು ನನ್ನನ್ನು ಪೀಡಿಸುತ್ತಲೇ ಇವೆ. ನಾನು ದೊಡ್ಡವರಲ್ಲಿ ಕೇಳಿದ್ದಂತೆ ಶೋಕವನ್ನು ಹೋಗಲಾಡಿಸಿಕೊಳ್ಳಬೇಕಾದರೆ ಆತ್ಮಜ್ಞಾನವನ್ನೇ ಸಂಪಾದಿಸಬೇಕೆಂಬುದು ಗೊತ್ತಾಗಿದೆ. ಆದ್ದರಿಂದ ತಾವು ನನಗೆ ಆತ್ಮವಿದ್ಯೆಯನ್ನು ಉಪದೇಶಿಸಿ ನನ್ನ ಶೋಕವನ್ನು ಹೋಗಲಾಡಿಸಬೇಕು'' ಎಂದು ಕೇಳಿಕೊಂಡರು.

ಈ ವಿಚಾರಸರಣಿಯು ಈಗಿನ ಕಾಲಕ್ಕೆ ನಮ್ಮೆಲ್ಲರನ್ನೂ ಎಚ್ಚರಗೊಳಿಸುವಂತಿದೆ. ಜನರ ವಿದ್ಯಾಭ್ಯಾಸ, ಜ್ಞಾನಪ್ರಸಾರಕ್ಕಾಗಿ ಸರ್ಕಾರದವರು ಕೋಟಿಗಟ್ಟಲೆ ಹಣವನ್ನು ವೆಚ್ಚಮಾಡಿದಮೇಲೂ ಪ್ರಜೆಗಳ ಶೋಕವೇನೂ ಪರಿಹಾರವಾಗಿರುವದಿಲ್ಲ. ಈಗಿನ

ವಿದ್ಯಾಭ್ಯಾಸವು 'ವಿದ್ಯಾಭಾಸ'ವಾಗಿ ಪರಿಣಮಿಸಿದ್ದು ನಕಲಿ ಪದವೀಧರರನ್ನೂ ಹೊರತಂದಿದೆ. ಒಂದು ವೇಳೆ ಅಸಲುಪದವೀಧರರಾದರೂ 'ಬಹುತ್ ವಿದ್ಯಾ–ಭಾತ್ ನಹಿ' ಎಂದಂತೆ ಹೊಟ್ಟೆಗೆ ಆಹಾರವಿಲ್ಲದೆ ಯುವಕರು ನಿರುದ್ಯೋಗಿಗಳಾಗಿ ಸೋಮಾರಿಗಳಾಗಿ ಬೇಜವಾಬ್ದಾರಿಯಿಂದ ಜೀವಿಸುವಂಥ ಪರಿಸ್ಥಿತಿಯನ್ನು ಉಂಟು ಮಾಡಿದೆ. ಇದಕ್ಕೆಲ್ಲ ಕಾರಣಗಳೇನೇ ಇರಲಿ, ಒಂದು ವೇಳೆ ಸರ್ಕಾರದವರು ಶ್ರಮಪಟ್ಟು ಎಲ್ಲರಿಗೂ ಉದ್ಯೋಗ, ಹೊಟ್ಟೆಬಟ್ಟೆಗಳ ಸಮಸ್ಯೆಗಳನ್ನು ಸಂಪೂರ್ಣವಾಗಿ ಪರಿಹರಿಸಿದ ಮೇಲೂ ಜನರ ರೋಗರುಜಿನಗಳು, ಆಧ್ಯಾತ್ಮಿಕಕೋಪತಾಪಗಳು, ಶೋಕಮೋಹ ಗಳನ್ನೇನೂ ಪರಿಹರಿಸಲಾರರು. ಎಂಥ ವಿಜ್ಞಾನದ ಪ್ರಗತಿಯಿಂದಲೂ ಈ ಸಮಸ್ಯೆಗಳು ಪರಿಹಾರವಾಗುವಂತೆಯೇ ಇಲ್ಲ. ಆದ್ದರಿಂದ ಬ್ರಹ್ಮವಿದ್ಯೆಯೊಂದನ್ನು ಬಿಟ್ಟರೆ ಉಳಿದವುಗಳೆನ್ನೆಲ್ಲ 'ಅವಿದ್ಯೆ'ಯೆಂದೇ ಅಧ್ಯಾತ್ಮಶಾಸ್ತ್ರದಲ್ಲಿ ತಿಳಿಸಿದೆ. ಏಕೆಂದರೆ ಲೌಕಿಕವಿದ್ಯೆಗಳು ನಿತ್ಯವಾದ ಶಾಂತಿ, ಸುಖ, ಆನಂದಗಳನ್ನು ನೀಡಲಾರವು. ಆತ್ಮವಿದ್ಯೆಯಿಂದ ಮಾತ್ರವೇ ಶೋಕಮೋಹಗಳನ್ನು ನೀಗಿಕೊಳ್ಳಬೇಕಾಗಿರುವಲ್ಲಿ, ಅದು ಎಂದೆಂದಿಗೂ ಮಾನವನಿಗೆ ಅತ್ಯಗತ್ಯವಾಗಿರುವಲ್ಲಿ ಸರ್ಕಾರದವರು ಈ ವಿದ್ಯೆಯನ್ನು ತಮ್ಮ ಪಠ್ಯಕ್ರಮದಲ್ಲಿ ಕೈಬಿಟ್ಟಿದ್ದರೂ, ಜಾಣರಾದವರು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲೇಬೇಕು. ಈ ವಿಷಯದಲ್ಲಿ ನಾರದರೇ ನಮಗೆ ಮೇಲುಪಂಕ್ತಿಯಾಗಿರು ತ್ತಾರೆ. ಭಾರತೀಯರಾದ ನಾವು ಅಧ್ಯಾತ್ಮವಿದ್ಯೆಯನ್ನು ತಿರಸ್ಕರಿಸಿದ್ದೇ ಆದರೆ ಭಾರತದಲ್ಲಿ ನಾವು ವಾಸಿಸಲು ಅರ್ಹರೇ ಅಲ್ಲ–ಎಂದು ತಿಳಿಯಬೇಕು.

ಈಗ ಪ್ರಕೃತವಿಚಾರಕ್ಕೆ ಬರೋಣ. ನಾರದರು ತಮಗೆ ತಿಳಿದಿದ್ದುದನ್ನೆಲ್ಲ ಸಂಕ್ಷೇಪವಾಗಿ ವಿವರಿಸಿದರು. ವಿದ್ಯೆಗಳ ಹೆಸರುಗಳನ್ನೆಲ್ಲ ಪಟ್ಟಿಮಾಡಿ ಹೇಳಿದರು. ಪ್ರಾಯಶಃ ಅವರಿಗೆ ತಾನು ಇಷ್ಟೊಂದು ವಿದ್ಯೆಗಳನ್ನು ಬಲ್ಲವನೆಂಬ ಸಾತ್ತ್ವಿಕಾಹಂಕಾರವೂ ಜಿಜ್ಞಾಸುತ್ವದೊಡನೆ ಇದ್ದುಕೊಂಡಿರಬೇಕು. ಅದೇನೂ ತಪ್ಪಲ್ಲ. ಅಲ್ಪವಿದ್ಯೆಯುಳ್ಳವನೇ ಮಹಾಗರ್ವದಿಂದಿರುತ್ತಾನೆ. ಇನ್ನು ಸಾಕಷ್ಟು ಲೌಕಿಕವಿದ್ಯೆಗಳೆಲ್ಲವನ್ನೂ ನಿಷ್ಕೃಷ್ಟವಾಗಿ ತಿಳಿದಿರುವವನು ಸ್ವಲ್ಪ ಅಹಂಕಾರಯುಕ್ತನಾಗಿರುವದು ಆಶ್ಚರ್ಯವಲ್ಲ. ಆದರೆ ಬ್ರಹ್ಮವಿದ್ಯೆಯನ್ನು ಬಲ್ಲವನ ಮುಂದೆ ಮಾತ್ರ ಅವನ ಜಂಭವು ನಡೆಯಲಾರದು. ಈ ವಿಷಯದಲ್ಲಿ ಶ್ವೇತಕೇತುವಿನ ಉದಾಹರಣೆಯನ್ನು ಹಿಂದೆಯೇ ತಿಳಿಸಿದೆ. ಇರಲಿ; ನಾರದರು ಸನತ್ಕುಮಾರರ ಆಚಾರ್ಯತ್ವವನ್ನು ಗೌರವಿಸಿಯೇ ವಿನಯದಿಂದ ಬಳಿ ಸಾರಿರುತ್ತಾರೆ. ಇದು ಸನತ್ಕುಮಾರರಿಗೂ ಗೊತ್ತಿದೆ. ಆದ್ದರಿಂದ ಅವರು ಹೀಗೆಂದರು; "ಎಲೈ ನಾರದನೆ, ಈವರೆಗೆ ನೀನು ತಿಳಿದಿರುವದೇನೆಂದು ನಮಗೆ ಅರಿವಾಯಿತು. ಲೌಕಿಕ ವಿದ್ಯೆಗಳು ಎಷ್ಟೇ ವಿಸ್ತಾರವಾಗಿದ್ದು ಹೊರಗಿನ ವಿಷಯಗಳನ್ನೇ ಕುರಿತು ಬಹಿರ್ಮುಖವಾಗಿ ವಿಚಾರಮಾಡಿ ಸೂಕ್ಷ್ಮ–ಸೂಕ್ಷ್ಮತರವಾದ ಸಿದ್ಧಾಂತಗಳಿಗೆ ಬಂದು ಮುಟ್ಟಿದ್ದರೂ ಆ

ಸಿದ್ಧಾಂತಾನುಗುಣವಾದ ನಿಯಮಗಳಿಂದ ಇನ್ನೂ ಹೊಸಹೊಸ ವಿಷಯಗಳ ಶೋಧನೆಯಲ್ಲಿ ಮುಂದುವರೆಯುತ್ತಿದ್ದರೂ ಆ ವಿದ್ಯೆಗಳು ಮಾನವನಿಗೆ ತೃಪ್ತಿಯನ್ನೇನೂ ನೀಡಲಾರವು. ಹಾಗೂ ಸಂಶಯಗಳನ್ನು ಸಂಪೂರ್ಣವಾಗಿ ಕತ್ತರಿಸಿಹಾಕಲಾರವು. ಮತ್ತು ತಿಳಿಯಬೇಕಾದದ್ದನ್ನೆಲ್ಲ ತಿಳಿಸಿ ಇನ್ನೇನೂ ತಿಳಿಯಬೇಕಾದದ್ದು ಬಾಕಿ ಇರುವದಿಲ್ಲ–ಎಂಬ ಮಜಲಿಗೆ ಬಂದು ಮುಟ್ಟಲಾರವು. ಇದಕ್ಕೆ ಕಾರಣವೇನೆಂದರೆ: ಅವು ಅನಾತ್ಮವನ್ನೇ ಅನ್ವೇಷಿಸುವ ವಿದ್ಯೆಗಳಾಗಿವೆ. ಅನಾತ್ಮದ ತಿರುಳು ನಾಮ ಮಾತ್ರವೇ. ನಾಮ–ಎಂದರೆ ಹೆಸರು. ಹೆಸರೆಂಬುದು ಬರಿಯ ಕಲ್ಪನೆ. ವಸ್ತುವೇನೂ ಅಲ್ಲಿ ನಿಜವಾಗಿರುವದಿಲ್ಲ. ನೂರು ರೂಪಾಯಿಗಳು–ಎಂದು ನೋಟಿನ ಮೇಲೆ ಬರೆದಿದ್ದರೆ ಅದು ಬರವಣಿಗೆ ಮಾತ್ರವೇ. ಅಲ್ಲಿ ನೂರು ನಾಣ್ಯಗಳಾಗಲಿ, ಲೋಹವಾಗಲಿ ಇಲ್ಲ. ಕೇವಲ ಒಂದು ಕಾಗದದ ತುಂಡುಮಾತ್ರವೇ ಅದು–ಎಂಬುದೇ ಹೇಗೆ ಎಂದೆಂದಿಗೂ ನಿಜವೋ ಹಾಗೆಯೇ ಇಡಿಯ ಪ್ರಪಂಚ (ದ್ವೈತ)ವೆಲ್ಲವೂ ನಾಮರೂಪಗಳೇ ಆಗಿವೆ. ನಿಜವೇನೂ ಅದರಲ್ಲಿ ಇರುವದಿಲ್ಲ. ರೂಪಕ್ಕಿಂತಲೂ ನಾಮವು ಹೆಚ್ಚು ವ್ಯಾಪಕವಾಗಿದ್ದರೂ ನಾಮಕ್ಕೂ ತಿರುಳಾದುದನ್ನು ಹುಡುಕಿ ಕಂಡುಕೊಳ್ಳಬೇಕೇ ಹೊರತು ನಾಮವೇ ಪದಾರ್ಥವಲ್ಲ. ಆದ್ದರಿಂದ ಈಗ ನೀನು ತಿಳಿದಿರುವದೆಲ್ಲ 'ನಾಮವೊಂದೇ'–ಎಂದುಬಿಟ್ಟರು ಒಬ್ಬ ಸುಪ್ರಸಿದ್ಧನೂ ಅಂತರ ರಾಷ್ಟ್ರೀಯವಿಖ್ಯಾತನೂ ಮಹಾಸಂಗೀತರತ್ನನೂ ಆದವನನ್ನು ಕುರಿತು 'ನಿನಗೆ ತಿಳಿದಿರುವದೆಲ್ಲ ಇಷ್ಟೇ; ಸರಿಗಮಪದನಿ–ಏಳೇ ಅಕ್ಷರಗಳು ಎಂದುಬಿಟ್ಟರೆ ಹೇಗೆ ದಂಗಾಗಿ ಬಿಡುವನೋ ಹಾಗೆ ನಾರದನೂ ಆಗಿಬಿಟ್ಟನು.

ಈ ರೀತಿಯಾಗಿ ನಾರದನ ತಿಳಿವಳಿಕೆಗಳಿಗೆಲ್ಲ ಸನತ್ಕುಮಾರರು 'ನಾಮ'ವನ್ನು ಬಳಿದುಬಿಟ್ಟರೆಂದು ವಾಚಕರು ಭಾವಿಸಬಾರದು. ವ್ಯವಹಾರಪ್ರಪಂಚದಲ್ಲಿ 'ನಾಮ'ವೇ ಸಾರವಾಗಿರುವದು ನಿಜ. ಇದು ಆಚಾರ್ಯರಿಗೂ ತಿಳಿದಿದೆ. ಅವರೇನೂ ವ್ಯವಹಾರವನ್ನು ತಿಳಿಯದವರಲ್ಲ. ನಾಮದ ಬೆಲೆಯನ್ನು ಅವರು ಗೊತ್ತುಪಡಿಸುವಂತೆ ನಮ್ಮಿಂದ ಗೊತ್ತುಪಡಿಸಲಾಗುವದಿಲ್ಲ. ಆದ್ದರಿಂದಲೇ ನಾರದನನ್ನು ಕುರಿತು 'ಎಲೈ ನಾರದನೆ, ಕೇಳು; ನಾಮವೂ ಬ್ರಹ್ಮವೇ ಎಂದು ತಿಳಿ. ಬ್ರಹ್ಮವು ಎಲ್ಲವೂ ಆಗಿರುವದರಲ್ಲಿ ನಾಮವು ಬ್ರಹ್ಮವಲ್ಲದೆ ಹೋದೀತೆ? ಆದ್ದರಿಂದ ನಿನ್ನ ವಿದ್ಯೆಗಳೆಲ್ಲವೂ ಬ್ರಹ್ಮದ ನಾನಾಮುಖಗಳನ್ನು ಅರಿಯುವದರಲ್ಲಿ ಸಾರ್ಥಕವಾಗಿವೆ. ಹಾಗೆ ವಿಶಿಷ್ಟವಾಗಿ ಚಿಂತನೆಮಾಡುವದೇ ಪೂರ್ಣಬ್ರಹ್ಮವನ್ನರಿಯಲು ಮೊದಲನೆಯ ಮೆಟ್ಟಿಲಾಗಿದೆ. ಸಾಮಾನ್ಯಜನರಿಗೆ ನಾಮದ ಮಹಿಮೆಯು ತಾನೆ ಏನು ತಿಳಿದಿದ್ದೀತು? ಯಾವನಾದರೊಬ್ಬ ಪದವೀಧರನು ತನ್ನ ಹೆಸರಿನ ಮುಂದೆ ಬಿ.ಎ. ಎಂದು ಬರೆದುಕೊಂಡರೆ ಅದು ನಿಜವಾಗಿಯೂ ಅವನು ವಿದ್ಯಾಭ್ಯಾಸಕ್ಕಾಗಿ ಹದಿನೈದು ವರ್ಷಗಳು ಪಟ್ಟ ಶ್ರಮದ ಹೆಗ್ಗುರುತಾಗಿರುವದು. ಆದರೆ ಶ್ರಮಪಡದೆ ಇರುವವನೂ ಆ ಎರಡು ಅಕ್ಷರಗಳನ್ನು 'ನಾನೂ ಹೆಸರಿನ ಮುಂದೆ ಬರೆದುಕೊಂಡರೇನು'?

ಎನ್ನಬಹುದೆ? ಒಂದು ವೇಳೆ ಬರೆದುಕೊಂಡರೂ ಅವನಿಗೆ ತಿಳಿವಳಿಕೆಯು ವಶವಾದೀತೆ? ಆದ್ದರಿಂದ ನಾಮಬ್ರಹ್ಮವು ಜಗತ್ತಿನಲ್ಲಿ ನಿರಂತರವೂ ಪೂಜ್ಯವಾದುದು. ಅದರ ವಿಶ್ವತೋಮುಖಗಳೇ ವಿದ್ಯಾರಾಶಿಗಳು. ಒಂದೊಂದು ವಿದ್ಯೆಯೂ ಅಪಾರವಾಗಿದೆ. ಅವುಗಳೆಲ್ಲವೂ ಮಾನವನಿಗೆ ಜೀವನದಲ್ಲಿ ತಾತ್ಕಾಲಿಕವಾದ ಆನಂದವನ್ನು ನೀಡುತ್ತವೆ. ಜನರೂ ಅಂಥ ವಿದ್ಯಾವಂತರನ್ನು ಗೌರವಿಸುತ್ತಾರೆ. ವ್ಯಾವಹಾರಿಕಪ್ರಪಂಚದಲ್ಲಿ ಅಂಥ ವಿದ್ಯಾವಂತರಿಂದ ಉಪಕಾರವೂ ಸಮಾಜಸೇವೆಯೂ ಆಗುತ್ತಿದೆ. ಇಂಥ ವಿಚಾರಗಳನ್ನೆಲ್ಲ ತಿರಸ್ಕರಿಸಲಾದೀತೆ? ನಾಮಬ್ರಹ್ಮವನ್ನು ನೀನು ಈವರೆಗೆ ಉಪಾಸನೆಮಾಡಿರುವದು ಸರಿ, ಎಂದು ಹೊಗಳಿದರು.

ಅನಂತರ ಸನತ್ಕುಮಾರರು ನಾಮಬ್ರಹ್ಮದ ಉಪಾಸನೆಗೆ ಫಲವನ್ನೂ ತಿಳಿಸಿದರು. ಎಲ್ಲೆಲ್ಲಿ ನಾಮದ ವ್ಯಾಪ್ತಿಯಿರುವದೋ ಅಲ್ಲೆಲ್ಲ ನಾಮಬ್ರಹ್ಮೋಪಾಸಕನಿಗೆ ಸ್ವಾತಂತ್ರ್ಯವಿರುವದು. ಅವನು ಅಲ್ಲೆಲ್ಲ ಪೂಜ್ಯನಾಗುವನು–ಎಂದೂ ವಿವರಿಸಿದರು. ಹೀಗೆ ಸಕಲವಿದ್ಯೆಗಳ ಸಾರವೇ ನಾಮವು. ಆ ನಾಮವು ಬ್ರಹ್ಮ, ಆತ್ಮ, ಅಕ್ಷರ, ನಾರಾಯಣ, ವಾಸುದೇವ, ಶಿವ, ಶಂಕರ–ಎಂಬುದಾಗಿ ನಾನಾ ಭೇದಗಳಿಂದ ಎಲ್ಲರ ಕಿವಿಗಳಿಗೂ ಭೂಷಣವಾಗಿರುವದು. ಮಹಾತ್ಮರುಗಳು ನಾಮಕೀರ್ತನೆಯನ್ನೇ ಸಂಸಾರವನ್ನು ದಾಟುವ ಸಾಧನವೆಂದೂ ತಿಳಿಸುತ್ತಿರುವರು. ನಾಮವನ್ನು ಭಗವಂತನ ಕೀರ್ತಿಪತಾಕೆ ಎಂದು ವೇದವು ಸ್ತುತಿಸುತ್ತಿರುವದು. ನಾಮೋಚ್ಚಾರಣೆಗೆ ಮನುಷ್ಯಮಾತ್ರದವರಿಗೆಲ್ಲ ಭಗವಂತನು ಅನುಕೂಲಮಾಡಿಕೊಟ್ಟಿರುವನು. ಅವನ ದಯೆಯನ್ನು ಏನೆಂದು ವರ್ಣಿಸೋಣ?

---

## ವಾಕ್ಕೆಂಬ ಬ್ರಹ್ಮ

**ಓಮ್ ॥ ವಾಗ್ವಾವ ನಾಮ್ನೋ ಭೂಯಸೀ ವಾಗ್ವಾ ಋಗ್ವೇದಂ ವಿಜ್ಞಾಪಯತಿ.....ಯದ್ವೈ ವಾಗ್ ನಾಭವಿಷ್ಯತ್ ನ ಧರ್ಮೋ ನಾಽಧರ್ಮೋ .......ನ ಸತ್ಯಂ ನಾಽನೃತಂ ............ವಾಗೇವೈತತ್ಸರ್ವಂ ವಿಜ್ಞಾಪಯತಿ ವಾಚ– ಮುಪಾಸ್ವ ॥ 7–2–1.**

ಭಾವಾರ್ಥ:– ವಾಕ್ಕೇ ನಾಮಕ್ಕಿಂತ ಹೆಚ್ಚಿನದು. ವಾಕ್ಕೇ ಋಗ್ವೇದವನ್ನು ತಿಳಿಸಿಕೊಡುತ್ತದೆ. ವಾಕ್ಕು ಇಲ್ಲದಿದ್ದರೆ ಧರ್ಮವಾಗಲಿ, ಸತ್ಯವಾಗಲಿ, ಸುಳ್ಳಾಗಲಿ (ತಿಳಿಯಬರುತ್ತಿರಲಿಲ್ಲ). ವಾಕ್ಕೇ ಎಲ್ಲವನ್ನೂ ತಿಳಿಸಿಕೊಡುತ್ತದೆ. ಆದ್ದರಿಂದ ವಾಕ್ಕನ್ನು ಉಪಾಸನೆಮಾಡು.

(ಮಾತು-ಎಂಬುದು ಒಂದು ಹೆಚ್ಚಿನ ಐಶ್ವರ್ಯವು. ಮಾತೆಂಬುದೇ ಶಬ್ದವು. ಋಗ್ವೇದಾದಿಶಾಸ್ತ್ರಗಳೆಲ್ಲವೂ ಶಬ್ದರಾಶಿಯೇ ಆಗಿವೆ. ಮಾನವನಿಗೆ ಮಾತಿಲ್ಲವಾಗಿದ್ದರೆ ಕತ್ತಲೆಯಲ್ಲಿರಬೇಕಾಗುತ್ತಿತ್ತು, ಧರ್ಮಾಧರ್ಮಗಳನ್ನಾಗಲಿ, ಸತ್ಯಾನೃತಗಳನ್ನಾಗಲಿ ಮಾತಿಲ್ಲವಾಗಿದ್ದರೆ ತಿಳಿಸಲಾಗುತ್ತಿರಲಿಲ್ಲ. ಅದೇ ನಾಮಕ್ಕಿಂತ ಹೆಚ್ಚಿನದು-ಎಂದಭಿಪ್ರಾಯ.)

## 50. ವಾಗುಪಾಸನೆ

ಈವರೆಗೆ ತಿಳಿಸಿರುವಂತೆ ನಾಮವನ್ನು ಬ್ರಹ್ಮವೆಂದು ಉಪಾಸನೆ ಮಾಡುವಂತೆ ನಾರದರಿಗೆ ಸನತ್ಕುಮಾರರು ಉಪದೇಶಿಸಿದ ಅನಂತರ ನಾಮಬ್ರಹ್ಮದ ತತ್ತ್ವವನ್ನು ಅರಿತುಕೊಂಡ ನಾರದರು 'ಅದಕ್ಕಿಂತಲೂ ಹೆಚ್ಚಿನದಿರಬಹುದೆ? ಏಕೆಂದರೆ ಗುರುಗಳು ನಾಮದಲ್ಲಿ ಬ್ರಹ್ಮಬುದ್ಧಿಯನ್ನಿಡು-ಎಂದೇ ಹೇಳಿದ್ದಾರೆ. ನಾಮವೇ ಸರ್ವಸ್ವವೆಂದಿಲ್ಲ. ಆದ್ದರಿಂದ ಬ್ರಹ್ಮದೃಷ್ಟಿಯನ್ನು ಮಾಡುವದಕ್ಕೆ ನಾಮಕ್ಕಿಂತ ಹೆಚ್ಚಿನ ಉಪಾಧಿಯೇನಾದರೂ ಇದ್ದೀತೆ? ಅದನ್ನೇಕೆ ತಿಳಿಯಬಾರದು?'-ಎಂದು ಆಲೋಚಿಸಿದರು. ಅನಂತರ ಗುರುಗಳನ್ನು ಕುರಿತು 'ಪೂಜ್ಯರೆ, ನಾಮಕ್ಕಿಂತ ಹೆಚ್ಚಿನ ತತ್ತ್ವವಿದೆಯೆ?' ಎಂದು ಕೇಳಿದರು. ಇದೆ-ಎಂದೇ ಸನತ್ಕುಮಾರರು ಉತ್ತರಿಸಿದರು. 'ಹಾಗಾದರೆ ಅದನ್ನು ಹೇಳೋಣವಾಗಲಿ' ಎಂದು ನಾರದರು ಕೇಳಿದಾಗ ವಾಗ್ಬ್ರಹ್ಮವನ್ನು ಸನತ್ಕುಮಾರರು ಅದರ ಮಹಿಮಾತಿಶಯಗಳೊಡನೆ ವಿವರಿಸಲಾರಂಭಿಸಿದರು. ಅದನ್ನು ಈಗ ವಿಚಾರಮಾಡೋಣ.

ಭೌತಿಕದೃಷ್ಟಿಯೇ ಪ್ರಧಾನವಾಗಿ ಉಳ್ಳ ಬಹಿರ್ಮುಖರಾದ ಪ್ರಾಕೃತಜನರಿಗೆ ಈ ವಿಚಾರಸರಣಿಯು ಹಿಡಿಸುವದಿಲ್ಲವೆಂಬುದು ನಿಜವೇ. ಆದರೇನು? ಪ್ರಾಕೃತರು ಕೂಡ ನಾಮವನ್ನೂ ವಾಕ್ಕನ್ನೂ ಬಿಟ್ಟೇನೂ ಜೀವಿಸಲಾರರು. ಅವರು ನಾಮವಾಕ್ಕುಗಳ ಗುಟ್ಟನ್ನು ತಿಳಿಯದೆ ಇರಬಹುದೇ ಹೊರತು ಅವುಗಳಿಗೆ ಹೊರತಾದವರಲ್ಲ. ವಿದ್ಯುಚ್ಛಕ್ತಿಯನ್ನು ಉಪಯೋಗಿಸುವವರೆಲ್ಲರಿಗೂ ವಿದ್ಯುಚ್ಛಕ್ತಿಯ ವಿಜ್ಞಾನ (Science) ವೇನೂ ಇರಬೇಕಾಗಿಲ್ಲ. ವಿದ್ಯುಚ್ಛಕ್ತಿಯ ಸಾಮಾನ್ಯನಿಯಮಗಳಾದ ಪರ-ವಿರುದ್ಧ-ಉದಾಸೀನ (Positive, Negative, Neutral) ಸ್ವಭಾವಗಳು ಕೂಡ ಅವರಿಗೆ ತಿಳಿದಿರುವದಿಲ್ಲವಲ್ಲವೆ? ಹಾಗೆಯೇ ಅಧ್ಯಾತ್ಮಶಾಸ್ತ್ರದಲ್ಲಿಯೂ ನಾಮ, ವಾಕ್ಕು, ಮನಸ್ಸು-ಮುಂತಾದ ತತ್ತ್ವಗಳ ನಿಜವು ಪ್ರಾಕೃತರಿಗೆ ಗೊತ್ತಿರುವದಿಲ್ಲವೆಂದರೆ ಆಶ್ಚರ್ಯವೇನಿಲ್ಲ. ನಾವೆಲ್ಲ ಹೆಚ್ಚಿನ ವಿದ್ಯಾವಂತರೆಂದೂ ಡಿಗ್ರಿಗಳನ್ನು ಹೆಸರಿನಮುಂದೆ ಒಂದಾದಮೇಲೆ ಒಂದರಂತೆ ಜೋಡಿಸಿಕೊಂಡಿರುವೆವೆಂದೂ ಹೆಮ್ಮೆಪಟ್ಟುಕೊಂಡಾಗ ನಮ್ಮ ಪೂರ್ವಜರೇ ಆದ ಋಷಿಗಳು ನಗದೆ ಇದ್ದಾರೆ? ಇರಲಿ. ಅಧ್ಯಾತ್ಮದೃಷ್ಟಿ

ಪ್ರಧಾನರಾದ ಋಷಿಗಳು (ಬ್ರಹ್ಮ) ತತ್ತ್ವವನ್ನೇ ನೇರಾಗಿ ಕಂಡುಕೊಂಡವರಾದ್ದರಿಂದ ನಾಮ–ವಾಕ್ಕುಗಳ ವಿಷಯಕ್ಕೆ ಅವರಿಗೆ ಅಲ್ಪಬುದ್ಧಿಯುಂಟಾಗಿರುವದು ಸಹಜವೇ. ಆದ್ದರಿಂದಲೇ ಅಲ್ಪದಲ್ಲಿ ನೈಜಸುಖವಿಲ್ಲವೆಂದರಿತು ಭೂಮ(ಬ್ರಹ್ಮ)ವನ್ನು ಅವರು ಕಂಡುಕೊಂಡರು. ಆದರೂ ನಮ್ಮಂಥ ಸಾಮಾನ್ಯರಿಗಾಗಿ ಅಲ್ಪವಾದರೂ ನಾಮ–ವಾಕ್ಕು–ಮನಸ್ಸು–ಪ್ರಾಣತತ್ತ್ವಗಳೂ ಉಪಾಸ್ಯಗಳೆಂದೇ ಕೃಪೆಮಾಡಿ ತಿಳಿಸಿಕೊಟ್ಟರು. ಈ ವಿಚಾರಪ್ರವಾಹದಲ್ಲಿ ಈಗ ವಾಕ್ಕೆಂಬ ಬ್ರಹ್ಮದ ವಿವರವನ್ನು ಸನತ್ಕುಮಾರರು ಈಗ ವಿವರಿಸಲಿದ್ದಾರೆ.

ವಾಕ್ಕು ಎಂದರೆ ಸ್ಫುಟವಾದ ವರ್ಣಾತ್ಮಕವಾದ ಶಬ್ದತತ್ತ್ವವು. ಇದು ಮನುಷ್ಯನ ಬಾಯಿಯಿಂದ ಹೊರಬೀಳುವದಾಗಿದೆ. ಶಬ್ದವನ್ನು ವಿಷಯವೆಂದೂ ವಾಕ್ಕನ್ನು ಇಂದ್ರಿಯವೆಂದೂ ವಿಂಗಡಿಸಿ ಹೇಳುತ್ತಾರೆ. ಆದರೂ ವಿಷಯವು ಇಂದ್ರಿಯಾಧೀನ ವಾಗಿರುವದರಿಂದ ಹಾಗೂ ಇಂದ್ರಿಯವನ್ನು ಬಳಸದೆ ವಿಷಯವನ್ನು ಗ್ರಹಿಸುವದು ಆಗಲಾರದಾದ್ದರಿಂದ ಇಂದ್ರಿಯಪ್ರಧಾನವಾಗಿಯೇ ಇಲ್ಲಿ ವಾಗ್ಬ್ರಹ್ಮವನ್ನು ತಿಳಿಸಲಾಗಿದೆ. ಶಬ್ದರೂಪವಾದ ವಿಷಯವೂ ಇದರಲ್ಲಿ ಅಡಕವಾಗಿಬಿಟ್ಟದೆ. ಭಾರತೀಯ ಸಂಸ್ಕೃತಿಯಲ್ಲಿ ಶಬ್ದಶಾಸ್ತ್ರವೆಂದೇ ಒಂದು ಪ್ರಸಿದ್ಧವಾದ ಶಾಸ್ತ್ರವಿದೆ. ಅದನ್ನು ವ್ಯಾಕರಣಶಾಸ್ತ್ರವೆಂದೂ ಕರೆಯುವರು. ಪಾಣಿನಿಗಳು ಇದರ ಕರ್ತೃಗಳು. ಈ ಶಾಸ್ತ್ರದಂತೆ ಶಬ್ದವು ವರ್ಣಾತ್ಮಕವಾಗಿದ್ದು ಆ ವರ್ಣಗಳು ಪುರುಷನ ಅಥವಾ ಸ್ತ್ರೀಯ ಬಾಯೊಳಗಿನ ಎಂಟು ಸ್ಥಾನಗಳಲ್ಲಿ ಹುಟ್ಟುವವು. ವರ್ಣಗಳ ಸಂಯೋಜನೆಯಿಂದ ಪದಗಳೂ ಪದಗಳಿಂದ ವಾಕ್ಯಗಳೂ ವಾಕ್ಯಗಳಿಂದ ಸಾಹಿತ್ಯವೂ ಭಾಷೆಯೂ ಹೊರಬಂದಿದೆ. ಇವೆಲ್ಲವನ್ನೂ ಒಳಗೊಂಡು ವಾಕ್ಕೆಂದು ಇಲ್ಲಿ ಕರೆಯಲಾಗಿದೆ. ಪ್ರತಿಯೊಂದು ಶಬ್ದವೂ ಬಹಿರಂಗದಲ್ಲಿ ಅಕ್ಷರಪ್ರಧಾನವಾಗಿದ್ದು ಅಂತರಂಗದಲ್ಲಿ ಭಾವನಾಪ್ರಧಾನವಾಗಿದೆ. ಆದ್ದರಿಂದ ಭಾವನೆಗಳಿಗೆ ಶಬ್ದಗಳು ಅಧೀನವಾಗಿವೆ–ಎನ್ನಬಹುದು. ಈ ಕಾರಣದಿಂದಲೇ ಬೇರೆ ಬೇರೆಯ ದೇಶದ ಜನರು ತಮ್ಮ ತಮ್ಮ ಭಾವನೆಗಳನ್ನು ಬೇರೆಬೇರೆಯ ಶಬ್ದಗಳ ರೂಪದಿಂದ ಹೊರಹಾಕುವದರಿಂದ ವರ್ಣಮಾಲೆಗಳೂ ಭಾಷೆಗಳೂ ಸಾಹಿತ್ಯವೂ ಬೇರೆಬೇರೆಯಾಗಿ ಸೃಷ್ಟಿಯಾಗಿವೆ. ಇವೆಲ್ಲವು ಸೇರಿ 'ವಾಗ್ದೇವಿಯ ಸಂಸಾರ'ವೆಂದು ಕರೆಯಬಹುದು. ವಾಗ್ದೇವಿಯು ಎಲ್ಲಾ ಭಾಷೆಗಳಿಗೂ ತಾಯಿಯು. ಆಕೆಯ ಮಕ್ಕಳಾದ, ವಿವಿಧ ಭಾಷೆಗಳನ್ನು ಬಳಸುತ್ತಿರುವ ನಾವೆಲ್ಲರೂ ಬಹಿರಂಗವಾದ ಭಾಷೆಯನ್ನು ಬಿಟ್ಟು ಅಂತರಂಗದ ಭಾವಪ್ರಧಾನವಾದ ಭಾಷೆಯಿಂದ ವ್ಯವಹರಿಸಿದ್ದೇ ಆದರೆ ಈಗಿನ ಕಾಲದಲ್ಲಿ ಎದ್ದಿರುವ ಭಾಷಾಸಂಬಂಧವಾದ ಎಲ್ಲಾ ಗೊಂದಲಗಳೂ ಮಾಯವಾಗುವವು. ಇದಕ್ಕೆ ತಕ್ಕ ಅಂತಃಕರಣಸಂಸ್ಕಾರವು ಅವಶ್ಯ. ಇದು ಹಾಗಿರಲಿ. ಬಹಿರಂಗವಾದ ಭಾಷಾ ರೂಪವಾದ ವಾಕ್ಕು, ವೈದಿಕ–ಲೌಕಿಕವಿಭಾಗದಿಂದ ಎರಡಾಗಿದೆ. ಲೌಕಿಕದಲ್ಲಿಯೂ

ಶಾಸ್ತ್ರೀಯ, ಜನಸಾಮಾನ್ಯ–ಎಂದು ಎರಡು ಭಾಗವಿದೆ. ಮತ್ತೊಂದು ದೃಷ್ಟಿಯಿಂದ ಗ್ರಂಥಸ್ಥ, ಆಡುಭಾಷೆ–ಎಂದೂ ವಿಂಗಡಿಸಬಹುದಾಗಿದೆ. ಹೀಗೆ ವಿಚಾರಮಾಡುತ್ತಾ ಹೋದರೆ ವರ್ಣಾತ್ಮಕಶಬ್ದಭಂಡಾರವೇ ಸಕಲಶಾಸ್ತ್ರಗಳಾಗಿಬಿಟ್ಟಿವೆ. ಈ ನಾಗರಿಕಜಗತ್ತಿನಲ್ಲಿ ಎಷ್ಟು ಶಾಸ್ತ್ರಗ್ರಂಥಗಳಿವೆಯೋ, ಯಾವ ಯಾವ ದೇಶ, ಭಾಷೆ, ವಿಷಯ, ಕಾಲಗಳಿಗೆ ಸಂಬಂಧಪಟ್ಟು ವಾಕ್ ಪ್ರಪಂಚವನ್ನೆಲ್ಲ ಅವು ವ್ಯಾಪಿಸಿ ಕೊಂಡಿವೆಯೋ–ಅವೆಲ್ಲವನ್ನೂ ಪೂರ್ಣವಾಗಿ ಬಲ್ಲವನು ಯಾವನಿದ್ದಾನು? ಈ ಅಭಿಪ್ರಾಯದಲ್ಲಿವಾಕ್ಕು ಬಹುದೊಡ್ಡದೇ ಸರಿ. ಅದನ್ನು ಬ್ರಹ್ಮವೆಂದು ಅರಿತು ಉಪಾಸನೆ ಮಾಡುವದೂ ಸೂಕ್ತವಾಗಿದೆ.

ಇಂಥ ವಾಕ್ಪ್ರಪಂಚದಲ್ಲಿ ಪೂರ್ಣವಾಗಿ ಅರಿತುಕೊಳ್ಳುವದು ಮಾನವನೊಬ್ಬನಿಗೆ ಅಸಾಧ್ಯವಾದರೂ ಇದರ ಸಾರವನ್ನು ಗ್ರಹಿಸುವ ಪ್ರಯತ್ನವನ್ನಾದರೂ ಮಾಡಬಹುದು. ಹಾಲಿನಿಂದ ಬೆಣ್ಣೆಯನ್ನು ತೆಗೆಯುವಂತೆ ವಾಕ್‌ಪ್ರಪಂಚದ ಸಾರವಾದ ವೇದಗಳನ್ನು ಋಷಿಗಳು ಹೊರಗಡೆವಿರುತ್ತಾರೆ. ವೇದಗಳಲ್ಲಿ ಮನುಷ್ಯನಿಗೆ ಅತ್ಯಗತ್ಯವಾದ ಕರ್ಮಜ್ಞಾನಗಳ ತತ್ತ್ವವೆಲ್ಲವೂ ಅಡಕವಾಗಿದೆ. ವೇದಗಳ ಜೊತೆಗೆ ವೇದಾಂಗ, ಇತಿಹಾಸ ಪುರಾಣಾದಿಗಳನ್ನೂ ಸೇರಿಸಿಕೊಂಡರೆ ಎಲ್ಲಾ ಲೌಕಿಕವಿದ್ಯೆಗಳನ್ನೂ ಸ್ವೀಕರಿಸದಂತೆಯೇ ಆಗುವದು. ಏಕೆಂದರೆ ಪುರಾಣಗಳಲ್ಲಿ ಭೌತಿಕವಿಜ್ಞಾನವೇ ಮುಂತಾದ ಎಲ್ಲಾ ಲೌಕಿಕಶಾಸ್ತ್ರಗಳೂ ಅಡಕವಾಗಿರುತ್ತವೆ. ಹೀಗೆ ವಾಕ್‌ಪ್ರಪಂಚದ ಸಾರವನ್ನು ಮಥಿಸಿದ ಮೇಲೂ ಮನುಷ್ಯನಿಗೆ ಅದನ್ನು ಅರಗಿಸಿಕೊಳ್ಳಲಾಗುವಂತಿಲ್ಲ. ಸನತ್ಕುಮಾರರೇನೋ ವಾಕ್ಕು ಎಂಬುದು ಋಗ್ವೇದಾದಿ ಸಮಸ್ತ ಶಾಸ್ತ್ರಗಳನ್ನೂ ವ್ಯಾಪಿಸಿದೆ–ಎಂದೇ ವರ್ಣಿಸಿ ಉಳಿದ ವಿದ್ಯೆಗಳನ್ನೂ ಅದರಲ್ಲಿಯೇ ಅಡಕಮಾಡಿ ಸ್ತುತಿಸಿದ್ದಾರೆ. ಆದರೂ ವೇದಶಾಸ್ತ್ರಗಳ ಪ್ರಪಂಚವೇನೂ ಕಿರಿದಾದುದಲ್ಲ. ಆದ್ದರಿಂದ ಅವುಗಳ ಸಾರವನ್ನೂ ಮತ್ತೆ ಕಂಡುಕೊಳ್ಳಬೇಕಾಗುವದು. ಇದು ಹಾಗಿರಲಿ, ವಾಕ್ ಪ್ರಪಂಚವು ಯಾವಾಗ ಮಾನವನಿಗೆ ಪೂರ್ಣವಾಗಿ ಎಟುಕಲಾರದೆಂದು ಕಂಡು ಬಂದಿತೋ ಆಗ ಆ ಪ್ರಪಂಚದ ಕೆಲವು ಶಾಸ್ತ್ರಗಳ ಕೆಲವು ಭಾಗಗಳನ್ನೇ ನಾವು ಅರಿಯಲು ಯತ್ನಿಸಬೇಕಾಗುವದು. ಇದು ಕೂಡ ನಮಗೆ ವಾಕ್ಕಿನ ವಿಷಯಕ್ಕೆ ಶ್ರದ್ಧಾಭಕ್ತಿಗಳನ್ನು ತಂದುಕೊಡುತ್ತದೆ. ಈ ಅಭಿಪ್ರಾಯದಂತೆ ನಾವು ಅಕ್ಷರ ವಿದ್ಯೆಯ 'ಓನಾಮ'ವನ್ನಾದರೂ ಅಭ್ಯಾಸಮಾಡಬೇಕು. ಓದು–ಬರಹಗಳು ತಿಳಿದವನಾದರೂ ಸಾಕು. ಅಂಥವನು ವಾಕ್ ಪ್ರಪಂಚವನ್ನು ಬ್ರಹ್ಮವೆಂದು ಉಪಾಸನೆಮಾಡಬಹುದು. ಇನ್ನು ಯಾವದಾದರೂ ಒಂದೆರಡು ಶಾಸ್ತ್ರಗಳನ್ನೇ ಕಲಿತಿದ್ದರೆ ವಾಗ್‌ಬ್ರಹ್ಮದಲ್ಲಿ ಮನಸ್ಸನ್ನು ನೆಲೆಗೊಳಿಸುವದು ಸುಲಭವೇ ಆದೀತು. ಆದರೆ ದುರದೃಷ್ಟವೆಂದರೆ ಈಗಿನ ಕಾಲದ ಅಕ್ಷರವಿದ್ಯಾನಿಪುಣರು ತಮ್ಮ ತಿಳಿವಳಿಕೆಯನ್ನು ಹೀಗೆ ಬ್ರಹ್ಮಚಿಂತನೆಗೆ ಸಾಧನವಾಗಿ ಬಳಸುತ್ತಿಲ್ಲ.

ವಿಪರೀತವಾಗಿ–ಎಂದರೆ ಪ್ರಾಪಂಚಿಕಸುಖಭೋಗಗಳ ಸಾಧನೆಗೆ ಬಳಸುತ್ತಿರುವರು. ಇದರಿಂದ ಸ್ವಾರ್ಥತೆಯು ಹೆಚ್ಚಿ ಅಕ್ಷರಜ್ಞರಿಂದ ಅಕ್ಷರಜ್ಞರಲ್ಲದವರಿಗೆ ಅನೇಕ ಅನ್ಯಾಯಗಳೂ ಸಂಭವಿಸುತ್ತಿವೆ. ಈ ದುರುಪಯೋಗದ ಅರಿವಾದರೂ ಮಾನವನಿಗೆ ಉಂಟಾದರೆ ಮುಂದಾದರೂ ತಿದ್ದಿಕೊಳ್ಳಬಹುದಾಗಿದೆ. ಪ್ರಕೃತ–ಸಾಕ್ಷರನಾದ ಮನುಷ್ಯನು ತಿರುಗುಮುರುಗಾಗಬಾರದು. ಆಗ ಅವನು ರಾಕ್ಷಸನೇ ಆಗುವನೆಂದು ಸುಭಾಷಿತವೂ ಸಾರುತ್ತಿದೆ. ಸಾಕ್ಷರನಾದ ಸಾಧಕನು ತನ್ನ ಜ್ಞಾನವನ್ನೂ ಹಾಗೂ ವಾಕ್ಕನ್ನೂ ಬ್ರಹ್ಮ ಬುದ್ಧಿಯಿಂದ ಕಂಡುಕೊಳ್ಳಬೇಕೆಂದು ಇಲ್ಲಿ ತಿಳಿಸಲಾಗಿದೆ. ಇದರಿಂದ ಭೂಮ ಬ್ರಹ್ಮದ ಅರಿವಿಗೆ ಮುಂದೆ ಸಹಾಯವಾಗುವದರಲ್ಲಿ ಸಂಶಯವಿಲ್ಲ.

ಹೀಗೆ ವಾಕ್‌ಪ್ರಪಂಚವನ್ನು ಪರಿಚಯಮಾಡಿಕೊಂಡದ್ದಾಯಿತು. ಒಂದು ವೇಳೆ ಈ ವಾಕ್ಕು ಇಲ್ಲದಿದ್ದಲ್ಲಿ ಜಗತ್ತು ಹೇಗಿರುತ್ತಿತ್ತು? ಎಂಬಿದನ್ನೂ ಸನತ್ಕುಮಾರರು ತಿಳಿಸಿದ್ದಾರೆ. ವಾಕ್ಕೆಂಬುದೇ ಒಂದು ಬೆಳಕು–ಎಂದೂ ಉಪನಿಷತ್ತಿನಲ್ಲಿದೆ. ಬೆಳಕಿಲ್ಲದೆ ವ್ಯವಹಾರವು ಹೇಗೆ ಸಾಗಲಾರದೋ ಹಾಗೆ ಜಗತ್ತೂ ವಾಕ್ಕಿಲ್ಲವಾಗಿದ್ದರೆ ಶೂನ್ಯವಾಗಿ ಬಿಡುತ್ತಿತ್ತು ಏಕೆಂದರೆ ಧರ್ಮಾಧರ್ಮಗಳನ್ನಾಗಲಿ, ಸತ್ಯಾನೃತಗಳನ್ನಾಗಲಿ–ನಾವು ತಿಳಿಯಲಾಗುತ್ತಿರ ಲಿಲ್ಲ. ಪ್ರಾಣಿಗಳಿಗೂ ಕೂಡ ನಮ್ಮಂತೆ ಭಾಷಾವ್ಯವಹಾರವಿಲ್ಲದಿದ್ದರೂ ಧ್ವನಿಯಿಂದಲೇ ತಮ್ಮ ಸುಖದುಃಖಾದಿಗಳನ್ನು ಅವು ಪ್ರಕಟಗೊಳಿಸುವವು. ಆದ್ದರಿಂದ ಅವುಗಳಿಗೆ ವಾಕ್ಕೇ ಬೆಳಕು–ಎಂದಾಯಿತು. ಮನುಷ್ಯನಿಗೊ, ಎಂದರೆ ಧರ್ಮಾದರ್ಮಗಳ ವಿವೇಕವೂ ಅಗತ್ಯವಾಗಿದೆ. ಇಲ್ಲವಾದರೆ ಜಗದ್ವ್ಯಾಪಾರವು ನಡೆಯುವದಿಲ್ಲ. ಉದಾಹರಣೆಗೆ ಸಾಲವನ್ನು ಪಡೆದುಕೊಂಡವನು ಅದನ್ನು ಹಿಂದಿರುಗಿಸುವದು ಕರ್ತವ್ಯವಲ್ಲವೆ? ಅದನ್ನು ಅವನು ಮಾತಿನಿಂದಾಗಲಿ, ಬರಹದಿಂದಾಗಲಿ ದೃಢಪಡಿಸಬೇಕಲ್ಲವೆ? ಹಾಗೆಯೇ ಪರಲೋಕ–ಪುನರ್ಜನ್ಮಗಳ ವಿಷಯದಲ್ಲಿಯೂ ಅವನು ತಿಳಿದುಕೊಳ್ಳಲು ಶಾಸ್ತ್ರರೂಪವಾದ ವಾಕ್ಕೂ ಬೇಕೇಬೇಕಲ್ಲವೆ? ಇನ್ನು ನಿಜ–ಸುಳ್ಳುಗಳನ್ನು ಮಾತಿನಿಂದಲೇ ಗೊತ್ತುಮಾಡಬೇಕಾಗಿದೆಯಲ್ಲವೆ? ಶಬ್ದಗಳೇ ಇಲ್ಲವಾದರೆ ಈ ವ್ಯವಹಾರವೇ ಇಲ್ಲವಾಗುತ್ತದೆಯಲ್ಲವೆ? ಮೂಕಪ್ರಾಣಿಗಳಿಗಾಗಲಿ, ಮಾತುಬಾರದವರಿಗಾಗಲಿ ಸುಳ್ಳು ಹೇಳುವದರಿಂದ ಪಾಪವುಂಟಾದೀತೆಂಬ ಭಯವಿದೆಯೆ? ಮಾತನ್ನು ಬಳಸುವವನಿಗೆ ತಾನೆ ಸತ್ಯಾನೃತಗಳ ಭಯವು ಪ್ರಾಪ್ತವಾಗುತ್ತದೆ? ಆದ್ದರಿಂದ ಈ ಎಲ್ಲಾ ವ್ಯವಹಾರಗಳಿಗೂ ವಾಕ್ಕೇ ಆಧಾರವಾಗಿದೆ.

ಮಾನವನು ತನ್ನ ವಾಕ್‌ಪ್ರಪಂಚವನ್ನು ಹೆಚ್ಚು ಚೆನ್ನಾಗಿ ಕಾಪಾಡಿಕೊಂಡಲ್ಲಿ ಬ್ರಹ್ಮಕ್ಕೆ ಹತ್ತಿರವಾಗುವನು. ಗೀತೆಯಲ್ಲಿ ವಾಙ್ಮಯತಪಸ್ಸೆಂದು ವರ್ಣಿಸಿರುವದನ್ನು ನೋಡಿರಿ. ಇದರಿಂದ ಮಾತನ್ನು ಕಾಮಧೇನುವಿನಂತೆ–ಎಂದು ತಿಳಿಯಬೇಕು. ಅದು ಚೆನ್ನಾಗಿ

ಪ್ರಯೋಗಿಸಲ್ಪಟ್ಟು ಪ್ರಿಯವೂ ಹಿತವೂ ಸತ್ಯವೂ ಅನುದ್ವೇಗಕರವೂ ಆಗಿದ್ದರೆ ಅದೇ ವಾಗ್ಬ್ರಹ್ಮದ ಉಪಾಸನೆಯೆನಿಸುವದು. ದೇವರು ನಮಗೆ ದಯಪಾಲಿಸಿರುವ ಈ ವಾಕ್ಕನ್ನು ವೇದೋಚ್ಚಾರಣೆಗೆ ಸಮಾನವಾದ ರೀತಿಯಲ್ಲಿ ಪವಿತ್ರವಾಗಿ ಬಳಸಬೇಕು. ಮಿಕ್ಕ ಮಾತುಗಳನ್ನು ಬಿಡಬೇಕು. ವಾಕ್‌ಶಕ್ತಿಯೆಲ್ಲವನ್ನೂ ಬ್ರಹ್ಮಪ್ರಾಪ್ತಿಗೆ ದ್ವಾರವಾಗಿ ಮಾಡಿಕೊಳ್ಳಬೇಕು. ಆಗ ವಾಗ್ದೇವಿಯು ಸುಪ್ರೀತಳಾಗುವಳು. ವ್ಯವಹಾರವನ್ನು ಕೂಡ ಪರಿಶುದ್ಧವಾಕ್ಕುಗಳಿಂದಲೇ ಸಾಗಿಸಬೇಕು. ಅನಿವಾರ್ಯಸಂದರ್ಭದಲ್ಲಿ ಮೌನ ವಾಗಿದ್ದರೂ ತಪ್ಪಲ್ಲ. ಹೀಗೆ ವಾಗೋಪಾಸನೆಮಾಡುವದೇ ಸರಸ್ವತೀ ಆರಾಧನೆ ಯೆನಿಸುವದು. ಶರನ್ನವರಾತ್ರೆಯಲ್ಲಿ ನಾವು ಈ ವಾಗ್ದೇವಿಯನ್ನು ಬ್ರಹ್ಮರೂಪದಿಂದ ಕಂಡುಕೊಂಡು ಆರಾಧಿಸಿ ಕೃತಾರ್ಥರಾಗೋಣ.

------

## ಮನಸ್ಸೆಂಬ ಬ್ರಹ್ಮ

**ಓಮ್ ॥ ಮನೋ ವಾವ ವಾಚೋ ಭೂಯಃ .......ಮನೋ ಹ್ಯಾತ್ಮಾ ಮನೋ ಹಿ ಲೋಕೋ ಮನೋ ಹಿ ಬ್ರಹ್ಮ ಮನ ಉಪಾಸ್ವ ॥ 7–3–1.**

ಭಾವಾರ್ಥ:– ಮನಸ್ಸೇ ವಾಕ್ಕಿಗಿಂತ ದೊಡ್ಡದು. ಮನಸ್ಸೇ ಆತ್ಮನು; ಮನಸ್ಸೇ ಲೋಕವು. ಮನಸ್ಸೇ ಬ್ರಹ್ಮವು; ಮನಸ್ಸನ್ನು ಉಪಾಸನೆಮಾಡು.

(ಆಲೋಚಿಸು–ಎಂದು ಹೇಳುವದು ಮನುಷ್ಯ ಮಾತ್ರದವನಿಗೇ ಮೀಸಲು. ಉಳಿದ ಜೀವಿಗಳಿಗೆ ಈ ಶಕ್ತಿಯಿಲ್ಲ, ಆಲೋಚನೆಗೆ ಸಾಧನವಾದದ್ದೇ ಮನಸ್ಸು. ಮಾತನಾಡುವ ಮುಂಚೆಯೇ ಆಲೋಚಿಸಿರಬೇಕಾಗುವದು. ಆದ್ದರಿಂದ ವಾಕ್ಕಿಗಿಂತ ಮನಸ್ಸು ಹೆಚ್ಚಿನದಾಯಿತು. ಅದನ್ನೇ ಬ್ರಹ್ಮವೆಂದು ಉಪಾಸನೆಮಾಡು–ಎಂದು ಸನತ್ಕುಮಾರರು ನಾರದರಿಗೆ ಉಪದೇಶಿಸಿರುತ್ತಾರೆ.)

## 51. ಮನೋಬ್ರಹ್ಮೋಪಾಸನೆ

ಸನತ್ಕುಮಾರರು ನಾರದರಿಗೆ ವಾಗ್‌ಬ್ರಹ್ಮದ ಮಹಿಮೆಯನ್ನು ತಿಳಿಸಿದ ಅನಂತರ ಅದೇ ಕಡೆಯದೆಂದು ಹೇಳಲಿಲ್ಲವಾದ್ದರಿಂದ ಪೃಚ್ಛಕರಾದ ನಾರದರಿಗೆ ಪ್ರಶ್ನೆ ಮಾಡಲು ಮತ್ತೆ ಅವಕಾಶವು ದೊರೆಯಿತು. ಆಗ ಅವರು 'ಪೂಜ್ಯರೇ ವಾಕ್ಕಿಗಿಂತ ಹೆಚ್ಚಿನದೊಂದು ತತ್ತ್ವವು ಇರಬಹುದೆ?' ಎಂದು ಕೇಳಲು 'ಇದೆ, ಅದೇ ಮನಸ್ಸು' ಎಂದರು. ಮುಂದುವರೆದು ಮನೋಬ್ರಹ್ಮವನ್ನು ವಿವರಿಸಲಾರಂಭಿಸಿದರು. ಅದನ್ನು ನೋಡೋಣ.

ಅಧ್ಯಾತ್ಮಶಾಸ್ತ್ರವು ಯಾವಾಗಲೂ ಹೆಸರಿಗೆ ತಕ್ಕಂತೆ ಮಾನವನ ಒಳತತ್ತ್ವಗಳನ್ನೇ ಹುಡುಕಿ ಪರಮಾರ್ಥಸತ್ಯದವರೆಗೂ ವಿಚಾರಕನನ್ನು ಒಯ್ಯುತ್ತದೆ. ಆದ್ದರಿಂದ ಅಂತರ್‌ಮುಖರಾಗದ ಪ್ರಾಕೃತರಿಗೆ ಎಂದೆಂದಿಗೂ ಈ ಶಾಸ್ತ್ರವಾಗಲಿ, ವಿಚಾರ ಸರಣಿಯಾಗಲಿ ರುಚಿಸುವದಿಲ್ಲ. ಕೆಲವರು 'ಅಧ್ಯಾತ್ಮೋಪನ್ಯಾಸಗಳಿಗೆ ಹೆಚ್ಚು ಜನರು ಸೇರುವದಿಲ್ಲ; ಅದರಲ್ಲಿ ಮನರಂಜನೆಯು ಏನೇನೂ ಇರುವದಿಲ್ಲ; ಆದ್ದರಿಂದ ಅಂಥ ಕಾರ್ಯಕ್ರಮಗಳೇ ಬೇಡ'–ಎಂದು ತಿರಸ್ಕರಿಸುತ್ತಾರೆ. ಇದರಲ್ಲಿ ನಿಜಾಂಶವಿದೆ. ಅಧ್ಯಾತ್ಮವು ಅನಧಿಕಾರಿಗಳಿಗೆ ದಕ್ಕುವದಿಲ್ಲವೆಂಬುದೇ ಅದು. ಹೀಗಿರುವಲ್ಲಿ ಹಕ್ಕು ಸ್ಥಾಪನೆಯ ಉದ್ದೇಶದಿಂದ ಬಲಾತ್ಕಾರವಾಗಿ ಯಾರಾದರೂ ಅಧ್ಯಾತ್ಮವಿಚಾರವನ್ನು ವಶಪಡಿಸಿಕೊಳ್ಳಲಾದೀತೆ? ಆದ್ದರಿಂದಲೇ ಅಧ್ಯಾತ್ಮೋಪದೇಶಕ್ಕೆ ತಕ್ಕವರನ್ನು ಮಾತ್ರವೇ ಚುನಾಯಿಸಿಕೊಂಡು ಉಪದೇಶವನ್ನು ಹೇಳಬೇಕಾಗುವದು. ತಪಸ್ವಿಗಳಲ್ಲದ, ಭಕ್ತರಲ್ಲದ, ಶ್ರವಣಕ್ಕೂ ಅರ್ಹರಲ್ಲದ–ಮತ್ತು ಭಗವಂತನನ್ನೆ ದ್ವೇಷಿಸುವಂಥವರಿಗೆ ತತ್ತ್ವವನ್ನೂ ಹೇಳಬಾರದೆಂದು ಪರಮಾತ್ಮನೇ ಅಪ್ಪಣೆಕೊಡಿಸಿದ್ದಾನೆ. ಇದರಿಂದ ಸಿದ್ಧವಾಗುವ ದೇನೆಂದರೆ: ಯಾರು ಅಂತರ್ಮುಖಿಗಳಾಗಿ ವಿಚಾರಮಾಡುತ್ತಾರೋ ಅಂಥವರೆಲ್ಲರೂ ಅಧಿಕಾರಿಗಳೆಂದು ಆಗುವದು. ವೇದಾಂತಪಾಠವು ಇತರ ಪಾಠಗಳಂತೆ ವಿದ್ಯಾರ್ಥಿಗಳಿಗೆ ಮಾತ್ರವೇ ಮೀಸಲಾಗಿರುತ್ತದೆ. ವಿದ್ಯಾರ್ಥಿಯು ಆಯಾ ವಿಷಯದ ಪಾಠಗಳನ್ನು ಅರ್ಥಮಾಡಿಕೊಳ್ಳಲು ಅರ್ಹನಾಗಿರಬೇಕು. ಅವನು ಪ್ರತಿ ದಿನವೂ ಪಾಠವನ್ನು ಶ್ರವಣಮಾಡಿ ಶ್ರದ್ಧೆಯಿಂದ ಅಭ್ಯಾಸಮಾಡಬೇಕು. ಸಹಪಾಠಿಗಳೊಡನೆ ಮಾತ್ರವೇ ಬೆರೆಯಬೇಕು. ಕಾಲೇಜು ಅಥವಾ ಸ್ಕೂಲಿಗೆ ಸಮಯಕ್ಕೆ ಸರಿಯಾಗಿ ಹಾಜರಾಗಲೇಬೇಕು. ಶುಲ್ಕವೇ ಮುಂತಾದವುಗಳನ್ನು ಪಾವತಿಮಾಡಿರಬೇಕು. ಪಠ್ಯಗ್ರಂಥಗಳನ್ನೂ ಬರಹಸಾಮಗ್ರಿಗಳನ್ನೂ ಹೊಂದಿರಬೇಕು. ಇಷ್ಟೆಲ್ಲ ನಿಯಮಗಳು ಏಕೆ? ಎಂದು ಕೇಳುವಂತಿಲ್ಲ. ಹಾಗೆಯೇ ವೇದಾಂತಶ್ರವಣಕ್ಕೆ ಅಧಿಕಾರಿಯಾಗುವವನು ಮೊದಲು ಮುಮುಕ್ಷುವಾಗಿರಬೇಕು. ಸಜ್ಜನರ ಸಂಗ, ಸದಾಚಾರಗಳನ್ನೇ ಬೆಳೆಯಿಸಿ ಕೊಂಡಿರಬೇಕು. ಸದ್ಗುರುವನ್ನೇ ಬಳಿಸಾರಬೇಕು. ಪ್ರಣಿಪಾತ, ಪರಿ ಪ್ರಶ್ನೆ, ಸೇವೆ–ಮುಂತಾದವುಗಳಿಂದ ಬ್ರಹ್ಮವಿದ್ಯೆಯನ್ನು ಬಯಸಬೇಕು. ಯಥೋಚಿತವಾಗಿ ವಿತ್ತಶಾಠ್ಯವಿಲ್ಲದೆ ಗುರುದಕ್ಷಿಣೆಯನ್ನು ನೀಡಬೇಕು. ಹೀಗಿದ್ದರೆ ಅಧ್ಯಾತ್ಮವಿದ್ಯೆಯು ವಶವಾಗುವದು. ಇಂಥ ಅಧಿಕಾರಿಗಳು ವಿರಳರಾದ್ದರಿಂದಲೇ ಎಲ್ಲಾ ಊರುಗಳಲ್ಲಿಯೂ ಅಧ್ಯಾತ್ಮಪ್ರವಚನಗಳನ್ನು ನಡೆಸಲಾಗುವದಿಲ್ಲ. ಅಧ್ಯಾತ್ಮವಿಚಾರವು ಜನ ಸಮುದಾಯಕ್ಕೆಲ್ಲ ತಲುಪುವಂತೆ ಪ್ರಚಾರಮಾಡುವದೂ ಸಾಧ್ಯವಾಗುವದಿಲ್ಲ. ಆದರೆ ಬಯಸಿದವರಿಗೆ ಮಾತ್ರ ಅದು ದೊರಕುವಂತೆ ಮಾಡಬಹುದಾಗಿದೆ. ಹೀಗಿರುವದರಿಂದ ಅಧ್ಯಾತ್ಮ ಪ್ರಚಾರವು ಗುಪ್ತಗಾಮಿನಿಯಾಗಿಯೇ ಕಾಲವನ್ನು ತಳ್ಳಬೇಕಾಗಿರುವದು ಅನಿವಾರ್ಯ

ವಾಗಿದೆ. ಈ ಪ್ರಾಸಂಗಿಕವಿಷಯವನ್ನು ಕೈಬಿಡೋಣ. ಪ್ರಕೃತವಾದ ಮನೋಬ್ರಹ್ಮವಿಚಾರಕ್ಕೆ ಬರೋಣ. ಮನಸ್ಸನ್ನು ಕುರಿತು ವಿಚಾರಮಾಡುವವರಿಗಾಗಲಿ, ಮನಃಶಾಸ್ತ್ರಜ್ಞರಿಗಾಗಲಿ, ಈ ವಿಜ್ಞಾನಯುಗದಲ್ಲಿ ಬರವಿಲ್ಲ. ಮನಸ್ಸನ್ನು ವಶಗೊಳಿಸಿಕೊಳ್ಳುವದು, ಬೇರೊಬ್ಬರ ಮನಸ್ಸಿನ ಮೇಲೆ ಪರಿಣಾಮವನ್ನು ಬೀರುವದು–ಇಂಥವರೂ ಸಿಗಬಹುದು. ಯೋಗಾದಿಸಾಧನಗಳನ್ನು ಹೇಳಿಕೊಡುವ ಅಥವಾ ಖಾಯಿಲೆಗಳನ್ನು ಗುಣಪಡಿಸುವ ನಂಬಿಕೆಯನ್ನು ಹುಟ್ಟಿಸಿ ಅಜ್ಞರ ಮನಸ್ಸನ್ನು ಗೆಲ್ಲುವಂಥವರು ಸಿಗಬಹುದು. ಆದರೆ ಮನಸ್ಸೆಂಬುದನ್ನೇ ಬ್ರಹ್ಮವೆಂದು ಚಿಂತಿಸುವಂತೆ–ಅದರ ಮಹಿಮೆಯನ್ನು ವರ್ಣಿಸಿ ತಿಳಿಸುವ ಸನತ್ಕುಮಾರರಂಥ ಗುರುಗಳು ಅಪರೂಪರೆಂದೇ ಹೇಳಬೇಕು. ಏಕೆಂದರೆ ಮನೋಬ್ರಹ್ಮೋಪಾಸನೆಯ ಮೂಲಕ ಪರಬ್ರಹ್ಮವನ್ನು ಮುಟ್ಟಿಸಿ ಸಾಧಕನನ್ನು ಕೃತಾರ್ಥನನ್ನಾಗಿ ಮಾಡುವದೇ ಇಂಥ ಗುರುಗಳ ಪರಮೋದ್ದೇಶವಾಗಿರುತ್ತದೆ.

ಈಗ ವಾಕ್ಕಿಗಿಂತ ಮನಸ್ಸು ಹೆಚ್ಚು ಹೇಗೆ? ಎಂಬುದನ್ನು ನೋಡೋಣ. ಉಪನಿಷತ್ತಿನಲ್ಲಿ ಒಂದು ದೃಷ್ಟಾಂತದ ಮೂಲಕ ಇದನ್ನು ವಿವರಿಸಿದೆ. ಕೆಲವು ದೇವತಾ ವಿಗ್ರಹಗಳನ್ನು ಒಂದು ಡಬ್ಬಿಯಲ್ಲಿ(ಸಂಪುಟ)ಟ್ಟು ಪೂಜಿಸುವದು ನಮ್ಮಲ್ಲಿ ವಾಡಿಕೆಯಿದೆ. ವಿಗ್ರಹಗಳು ಚಿಕ್ಕವಾಗಿದ್ದರೆ ಹತ್ತಾರು ಪ್ರತಿಮೆಗಳು ಒಂದು ಡಬ್ಬಿಯಲ್ಲಿ ಅಡಕವಾಗುವವು. ಹಾಗೆಯೇ ಒಂದೆರಡು ಪುಟ್ಟ ಹಣ್ಣುಗಳು ಅಥವಾ ನೆಲ್ಲಿಕಾಯಿಯಂಥ ವಸ್ತುಗಳನ್ನು ನಮ್ಮ ಮುಷ್ಟಿಯಲ್ಲಿ ಅಡಿಗಿಸಿಟ್ಟುಕೊಳ್ಳಬಹುದು. ಹಾಗೆಯೇ ಮನಸ್ಸಿನಲ್ಲಿ ಮಾತು–ಮುಂತಾದದ್ದೆಲ್ಲವು ಅಡಕವಾಗಿರುತ್ತದೆ. ಏಕೆಂದರೆ ಮಾತನಾಡುವ ಮೊದಲು ಮನಸ್ಸಿನಲ್ಲಿ ಚಿಂತಿಸಬೇಕಾಗುತ್ತದೆ. ಉದಾಹರಣೆಗೆ ನಾನು 'ಋಗ್ವೇದವನ್ನು ಅಧ್ಯಯನಮಾಡಬೇಕು' ಎಂದುಕೊಂಡ ಅನಂತರವೇ ವೇದವನ್ನು ಉಚ್ಚರಿಸುತ್ತೇವೆ. ಮತ್ತೂ ''ಇಂಥ ಕೆಲಸವನ್ನು ಮಾಡಬೇಕು; ಇಂಥಲ್ಲಿಗೆ ಹೋಗಬೇಕು; ಇಂಥವರನ್ನು ಭೇಟಿಮಾಡಬೇಕು, ಇಂಥ ಪದಾರ್ಥವನ್ನು ಕೊಳ್ಳಬೇಕು.'' ಇತ್ಯಾದಿಯಾಗಿ ಯೋಚನೆ ಮಾಡಿಕೊಂಡ ಅನಂತರವೇ ಆಯಾ ಕರ್ಮಗಳಲ್ಲಿ ತೊಡಗುತ್ತೇವೆ. ಆದ್ದರಿಂದ ನಮ್ಮ ಕಾಮಕರ್ಮಗಳೂ ಪ್ರವೃತ್ತಿನಿವೃತ್ತಿಗಳೂ ಧರ್ಮಾಧರ್ಮಗಳೂ ಎಲ್ಲವೂ ಮೊದಲು ಮನಸ್ಸಿನಲ್ಲಿ ಅಂಕುರಿಸಿಯೇ ಅನಂತರ ನಿಜರೂಪವನ್ನು ಪಡೆಯುತ್ತವೆ. ಈ ಅರ್ಥದಲ್ಲಿ ಎಲ್ಲಕ್ಕಿಂತಲೂ ಮನಸ್ಸು ದೊಡ್ಡದಾಯಿತು. ಅದರಲ್ಲಿಯೇ ಎಲ್ಲಾ ವ್ಯವಹಾರಗಳೂ ಅಡಕವಾದಂತಾಯಿತು. ಮನಸ್ಸಿದ್ದರೆ ಮಾತ್ರ ನಾವು ಕರ್ತೃಗಳೂ ಭೋಕ್ತೃಗಳೂ ಆಗಿರುವೆವು. ಅದಿಲ್ಲವಾದರೆ ನಾವಿರುವೆವಾದರೂ ವ್ಯವಹಾರವಂತರಾಗಿರುವದಿಲ್ಲ. ಆದ್ದರಿಂದ ವ್ಯವಹಾರಪ್ರಪಂಚದಲ್ಲಿ ಮನಸ್ಸೇ ಪ್ರಭುವು, ಅದೇ ಈಶ್ವರನು, ಅದೇ ಬ್ರಹ್ಮವು.

ಆದ್ದರಿಂದ ಅದನ್ನು ಬ್ರಹ್ಮವೆಂದು ಉಪಾಸನೆಮಾಡು–ಎಂದು ಸನತ್ಕುಮಾರರು ತಿಳಿಸಿರುತ್ತಾರೆ.

ಇಂಥ ಅಪೂರ್ವವಾದ ಹಾಗೂ ಉಳಿದ ಪ್ರಾಣಿಗಳಿಗೆ ಇಲ್ಲದ–ಮನುಷ್ಯನಿಗೆ ಮಾತ್ರವೇ ದೇವರು ದಯಪಾಲಿಸಿರುವ–ಮನಸ್ಸನ್ನು ಬ್ರಹ್ಮವೆಂದು ಚಿಂತಿಸಬೇಕಾದ ಅಗತ್ಯವು ಈ ಕಾಲಕ್ಕೆ ಬಹಳವಾಗಿದೆ. ಏಕೆಂದರೆ ಬಹುಜನರಿಗೆ ಈ ಕಲಿಯುಗದಲ್ಲಿ ಮನಸ್ಸೆಂಬುದು ದೇವರುಕೊಟ್ಟಿರುವ ವರವಾಗದೆ ಶಾಪವಾಗಿ ಪರಿಣಮಿಸಿದೆ. ಈಚೆಗೆ ಪ್ರಪಂಚದಲ್ಲಿ ವಿಜ್ಞಾನಶಾಸ್ತ್ರದ ಶೋಧನೆಯ ಫಲವಾಗಿ ಇಂದ್ರಿಯಗಳನ್ನು ಬೆರಗುಗೊಳಿಸುವಂಥ ಭೋಗಸಾಧನಸಾಮಗ್ರಿಗಳ ಸೃಷ್ಟಿಯಿಂದ ಜನರ ಮನಸ್ಸು ಸಂಪೂರ್ಣವಾಗಿ ಅಂತಃಕರಣವೆಂಬ ಹೆಸರನ್ನು ಬದಲಾಯಿಸಿಕೊಂಡು ಬಹಿಃಕರಣವಾಗಿ ಪರಿವರ್ತಿತವಾಗಿಬಿಟ್ಟಿದೆ. ಅದು ಇಂದ್ರಿಯಗಳ ಬೆನ್ನುಹತ್ತಿ ಹೋಗಿ ಕಾಮ, ಕ್ರೋಧ, ಲೋಭಾದಿಗಳಿಂದ ಮಲಿನವಾಗಿ ತನ್ನತನವನ್ನು ಕಳೆದುಕೊಂಡಿದೆ. ಆ ಮನಸ್ಸಿಗೆ ತನ್ನ ಇನ್ನೊಂದು ಮುಖವಾದ ಸತ್ಯ, ಅಹಿಂಸೆ, ಪ್ರಾಮಾಣಿಕತೆ, ಶಾಂತಿ, ಸಮಾಧಾನ, ತಿತಿಕ್ಷೆ, ಅನಸೂಯೆ–ಮುಂತಾದ ಸ್ವಭಾವಗಳೇ ಮರೆತುಹೋಗಿದೆ. ಇಂಥ ಮನಸ್ಸನ್ನು ಬ್ರಹ್ಮವೆಂದು ಚಿಂತಿಸಲು ಹೇಗೆ ತಾನೆ ಯೋಗ್ಯವಾದೀತು? ಈಗಿನ ಕಾಲದ ವಿದ್ಯಾಭ್ಯಾಸ, ಶಿಕ್ಷಣ, ಆದರ್ಶ, ಜೀವನೋಪಾಯಸಾಧನಗಳು, ಕಸುಬುಗಳು, ಆಡಳಿತ–ಎಲ್ಲವೂ ಮನಸ್ಸಿನ ಆಸುರೀಸಂಪತ್ತನ್ನೇ ಎತ್ತಿ ಹಿಡಿಯುತ್ತಿರುವಲ್ಲಿ ಆ ಮನಸ್ಸಿಗೆ ತನ್ನ ಆತ್ಮನಾಶವಾಗಲಿ, ಪರರ ನಾಶವಾಗಲಿ ಹೇಗೆ ಗೊತ್ತಾಗಬೇಕು? ಇದನ್ನು ಈಗಲಾದರೂ ಇಂಥ ಅನರ್ಥಪರಂಪರೆಯಿಂದ ಎತ್ತಿ ಉದ್ಧಾರಮಾಡಿಕೊಳ್ಳಬೇಕು. ಇದಕ್ಕೆ ಮಾನವನು ತಾನು ತಾನೇ ಪ್ರಯತ್ನಪಡಬೇಕು. ಈಗಿನ ಪರಿಸ್ಥಿತಿಯಲ್ಲಿ ಮನಸ್ಸು ಎಷ್ಟರ ಮಟ್ಟಿಗೆ ಸಂಕುಚಿತವಾಗಿ ತನ್ನ ಬ್ರಹ್ಮಭಾವವನ್ನು ಕಳೆದುಕೊಂಡಿದೆಯೆಂದರೆ: ಮಗನಿಗೆ ತಂದೆ ತಾಯಿಗಳು ಬೇಡವಾಗಿದೆ; ಗೃಹಸ್ಥನಾದ ಯುವಕನಿಗೆ ಧರ್ಮಪತ್ನಿಯು ಬೇಡವಾಗಿದ್ದಾಳೆ. ಸೊಸೆಗೆ ಅತ್ತೆಯು, ಶಿಷ್ಯನಿಗೆ ಗುರುವು–ಬೇಡವಾಗಿದ್ದಾರೆ. ಹಣವೊಂದೇ ಎಲ್ಲರ ಮನಸ್ಸಿಗೂ ಮೆಚ್ಚಾಗಿದೆ. ಅಥವಾ ಹಣವನ್ನು ವ್ಯಯಮಾಡಿ ಮನರಂಜನೆಯನ್ನು ಸ್ವೇಚ್ಛೆಯಾಗಿ ಮಾಡಿಕೊಳ್ಳುವದು ಇಷ್ಟವಾಗಿದೆ. ಇನ್ನುಳಿದ ಧರ್ಮಕರ್ಮಗಳು, ಸದಾಚಾರಗಳು, ಸಂಸ್ಕಾರಗಳು, ದಾನವ್ರತತಪೋನುಷ್ಠಾನಗಳ, ಕಡೆಗೆ ಜಾತಿಧರ್ಮ ಕುಲಧರ್ಮಗಳೂ ನಾಚಿಕೆ, ಭಯ, ನರಕಭೀತಿಗಳೂ ಬೇಡವಾಗಿ ಬಿಟ್ಟಿವೆ. ಇಷ್ಟೆಲ್ಲಾ ಕ್ರಾಂತಿಯನ್ನುಂಟುಮಾಡಿರುವದು ಮಾನವನ ಮನಸ್ಸು ಮಾತ್ರವೇ. ಅದು ಅಧ್ಯಾತ್ಮಸಂಬಂಧವನ್ನು ಕಳಚಿಕೊಂಡದ್ದೇ ಈ ದುರವಸ್ಥೆಗೆ ಕಾರಣವೆನ್ನಬೇಕಾಗಿದೆ.

ಅಧ್ಯಾತ್ಮವಿದ್ಯೆಯ ಸಂಸ್ಕಾರವಿದ್ದ ಹಿಂದಿನ ಕಾಲದ ಜನರ ಮನಸ್ಸು ಹೇಗಿತ್ತು? ಎಂಬಿದನ್ನು ಈಗ ನೋಡೋಣ. ಇದರಿಂದ ಮನೋಬ್ರಹ್ಮದ ಮಹಿಮೆಯು ತಿಳಿಯಲಿದೆ. ಋಷಿಗಳ ಕಾಲವನ್ನು ನಾವು ವಿಚಾರಮಾಡಿದರೆ ಆಗ ಅವರುಗಳು ಸಹ ನಮ್ಮಂತೆಯೇ ದೇಹಧಾರಿಗಳೂ ಹಸಿವು, ಬಾಯಾರಿಕೆಗಳು, ಜನನ–ಮರಣಗಳುಳ್ಳವರೂ ಆಗಿದ್ದರು. ಅವರಿಗೂ ಆಸೆ–ಆಕಾಂಕ್ಷೆಗಳಿದ್ದವು. ಆದರೆ ಆ ಮಹನೀಯರುಗಳು ತಮ್ಮ ತಪೋಧ್ಯಾನ–ಸಮಾಧ್ಯಾದಿ ಸಾಧನಗಳಿಂದ ಅಂತಃಕರಣವನ್ನು ಬಹಳ ಸ್ವಚ್ಛವಾಗಿರಿಸಿ ಕೊಂಡಿದ್ದರು. ಯಂತ್ರಗಳ ಸಹಾಯವಿಲ್ಲದೆ ದೂರಶ್ರವಣ, ದೂರದರ್ಶನ, ಲೋಕಾಂತರ ಗಮನಗಳು ಅವರಿಗೆ ಸಾಧ್ಯವಾಗಿತ್ತು ಅವರುಗಳು ಶಾಪಾನುಗ್ರಹ ಸಮರ್ಥರಾಗಿದ್ದರು. ದೇವತೆಗಳನ್ನು ಕೂಡ ನಮ್ಮ ಮನೋದಾರ್ಢ್ಯದಿಂದ ತಾವಿದ್ದಲ್ಲಿಗೆ ಬರಮಾಡಿಕೊಳ್ಳುತ್ತಿದ್ದರು. ಋಗ್ವೇದಾದಿಶಾಸ್ತ್ರಗಳನ್ನೆಲ್ಲ ಅವರು ಕಂಡುಹಿಡಿದಿದ್ದರು. ವೇದಾಂಗಗಳು, ದರ್ಶನಗಳು, ಇತಿಹಾಸಪುರಾಣಗಳು, ಧರ್ಮಶಾಸ್ತ್ರಗಳು, ಶಿಲ್ಪ, ವೈದ್ಯ, ಸಂಗೀತ, ನೃತ್ಯ, ಗಣಿತ, ವಾಸ್ತುಕಲಾದಿ ವಿದ್ಯೆಗಳನ್ನು ವಿವರಿಸುವ ಗ್ರಂಥಗಳನ್ನೆಲ್ಲ ರಚಿಸಿದರು. ವ್ಯವಹಾರವನ್ನು ಕೂಡ ಅವರು ಅಚ್ಚುಕಟ್ಟಾಗಿ ನಿರ್ವಹಿಸಿ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ನೀತಿ, ಸಮಾಜಶಾಸ್ತ್ರಗಳನ್ನೆಲ್ಲ ಬರೆದಿಟ್ಟರು. ತಮ್ಮ ಜೀವಿತಗಳನ್ನೇ ಮುಡುಪಾಗಿಟ್ಟು ಸತ್ಯ, ಧರ್ಮ, ದಯೆ, ತಿತಿಕ್ಷೆ, ಶಾಂತಿ, ದಾನ, ತ್ಯಾಗ, ಸಂನ್ಯಾಸಾದಿಗಳ ಆದರ್ಶಗಳನ್ನು ಎತ್ತಿತೋರಿಸಿದರು. ಇಷ್ಟೆಲ್ಲವೂ ಅವರುಗಳಿಂದ ಹೇಗೆ ಸಾಧ್ಯವಾಯಿತು? ಅವರೂ ನಮ್ಮಂತೆಯೇ ಮರ್ತ್ಯರೂ ಅಲ್ಪಶಕ್ತರೂ ಅಲ್ಲವೆ? ಎಂದು ಕೇಳಿದರೆ–ಅವರು ಮನಸ್ಸನ್ನು ಗೆದ್ದು ಅದಕ್ಕೆ ಒಡೆಯರಾಗಿ ಅದನ್ನು ಒಳಮುಖವಾಗಿ ಸರಿಯಿಸಿ ಅದನ್ನು ಬ್ರಹ್ಮವಾಗಿಸಿಕೊಂಡಿದ್ದರಿಂದಲೇ ಸಾಧ್ಯವಾಗಿತ್ತು–ಎಂದೇ ಉತ್ತರಿಸಬೇಕಾಗಿದೆ. ಏಕೆಂದರೆ ದೇಹದೃಷ್ಟಿಯಿಂದ ನಮಗೂ ಅವರಿಗೂ ಹೆಚ್ಚು ವ್ಯತ್ಯಾಸಗಳಿಲ್ಲ. ಮನೋದಾರ್ಢ್ಯ, ಮನೋಜಯಗಳಿಂದಲೇ ಅವರು ಮಹಾತ್ಮರೆನಿಸಿದ್ದರು–ಎಂಬಿದನ್ನು ಒಪ್ಪಿಕೊಳ್ಳಲೇ ಬೇಕಾಗಿದೆ. ಇಂಥ ಮಹಾತ್ಮರ ಮನಸ್ಸು ಬ್ರಹ್ಮಪಟ್ಟಕ್ಕೆ ಏರಲು ಯೋಗ್ಯವಾದುದೆಂದೂ ಅದನ್ನು ಬ್ರಹ್ಮವೆಂದು ಚಿಂತಿಸಬೇಕೆಂದೂ ಹೇಳುವದರಲ್ಲಿ ತಪ್ಪೇನಿದ್ದೀತು?

ಸನತ್ಕುಮಾರರು ಇಂಥ ಮನೋಬ್ರಹ್ಮದ ಉಪಾಸಕನಿಗೆ ಫಲವನ್ನು ಹೇಳುತ್ತಾ ಎಲ್ಲಿಯವರೆಗೆ ಮನಸ್ಸಿನ ವ್ಯಾಪ್ತಿಯಿರುವದೋ ಅಲ್ಲಿಯವರೆಗೂ ಈ ಉಪಾಸಕನಿಗೆ ಸ್ವಾತಂತ್ರ್ಯವಿರುತ್ತದೆ–ಎಂದು ತಿಳಿಸಿದ್ದಾರೆ. ಇನ್ನಾದರೂ ನಾವು ನಮ್ಮ ಮನಸ್ಸನ್ನು ಒಳಮುಖವಾಗಿರಿಸಿಕೊಂಡು ಅಮೃತರಾಗೋಣ.

---

# ಸಂಕಲ್ಪ–ಚಿತ್ತಬ್ರಹ್ಮಗಳು

**ಓಮ್ ॥ ಸಂಕಲ್ಪೋ ವಾವ ಮನಸೋ ಭೂಯಾನ್....ಸಂಕಲ್ಪ ಮುಪಾಸ್ಸ್ವ। ಚಿತ್ತಂ ವಾವ ಸಂಕಲ್ಪಾದ್ ಭೂಯಃ ...ಚಿತ್ತ ಮುಪಾಸ್ಸ್ವ ॥ 7–4,5.**

ಭಾವಾರ್ಥ:– ಸಂಕಲ್ಪವೇ ಮನಸ್ಸಿಗಿಂತ ಹೆಚ್ಚಿನದು.........ಸಂಕಲ್ಪವನ್ನು ನೀನು ಉಪಾಸನೆಮಾಡುವವನಾಗು; (ಸಂಕಲ್ಪಕ್ಕಿಂತ ಹೆಚ್ಚನದು ಇದೆಯೆ? ಇದೆ). ಚಿತ್ತವು ಸಂಕಲ್ಪಕ್ಕಿಂತಲೂ ದೊಡ್ಡದು..........ಚಿತ್ತವನ್ನು (ಬ್ರಹ್ಮವೆಂದು) ಚಿಂತಿಸುವವನಾಗು.

(ಸನತ್ಕುಮಾರರು ನಾರದನಿಗ ನಾಮಾದಿ– ಪ್ರಾಣಾಂತವಾದ ತತ್ತ್ವಗಳನ್ನು ವಿವರಿಸುತ್ತಾ ಹೆಚ್ಚು ಹೆಚ್ಚಿನದನ್ನು ಬ್ರಹ್ಮವೆಂದು ಚಿಂತಿಸುವಂತೆ ಹೇಳುತ್ತಾಬಂದಿರುತ್ತಾರೆ. ಈ ವಿಚಾರಸರಣಿಯಲ್ಲಿ ಈಗ ಅಧ್ಯಾತ್ಮವಾಗಿ ಸಂಕಲ್ಪವನ್ನೂ ಅದಕ್ಕಿಂತ ಹೆಚ್ಚಿನದಾದ ಚಿತ್ತವನ್ನೂ ಬ್ರಹ್ಮವೆಂದು ಉಪಾಸನೆಮಾಡುವಂತೆ ತಿಳಿಸಿರುತ್ತಾರೆ.)

# 52. ಸಂಕಲ್ಪ–ಚಿತ್ತಗಳ ಉಪಾಸನೆ

ನಾರದ–ಸನತ್ಕುಮಾರರ ಸಂವಾದದಲ್ಲಿ ಈಗ ನಾವು ಅಧ್ಯಾತ್ಮವಾಗಿರುವ ಸೂಕ್ಷ್ಮತತ್ತ್ವಗಳ ವಿಚಾರಸರಣಿಗೆ ಬಂದು ಮುಟ್ಟಿದ್ದೇವೆ. ವಿಚಾರವು ಸೂಕ್ಷ್ಮವಾಗಿಯೂ ಅಂತರ್ಮುಖವಾಗಿಯೂ ಆದೆಂತೆಲ್ಲ ಸಾಮಾನ್ಯಜನರಿಗೆ ಬೇಸರವಾಗುವದು ಸಹಜ. ಕೆಲವು ವಾಚಕರುಗಳು 'ಇಂಥ ಉಪದೇಶಗಳ ಬದಲು ಕಥೆಗಳನ್ನಾದರೂ ಪ್ರಕಟಿಸಿರಿ'–ಎಂದೇ ನನ್ನನ್ನು ಕೇಳಿರುವದೂ ಉಂಟು. ಆದರೆ 'ಅಧ್ಯಾತ್ಮಪ್ರಕಾಶ'ವು 'ಚಂದಮಾಮ' ನಲ್ಲ–ಎಂಬಿದು ಅವರಿಗೆ ತಿಳಿದಿರಲಾರದು. ಇರಲಿ. ಸೂಕ್ಷ್ಮತತ್ತ್ವ ವಿಚಾರಗಳ ವಿಷಯಕ್ಕೆ ಜನರ ಒಲವು ಹೇಗಿದೆ? ಎಂಬಿದು ಇದರಿಂದ ತಿಳಿದಂತಾಗಿದೆ. ಪ್ರಕೃತ–ಮನೋಬ್ರಹ್ಮವನ್ನು ವಿವರಿಸಿದ ಸನತ್ಕುಮಾರರನ್ನು ಕುರಿತು ನಾರದರು 'ಪೂಜ್ಯರೆ, ಮನಸ್ಸಿಗಿಂತ ದೊಡ್ಡದು ಇದೆಯೆ? ಎಂದು ಕೇಳಿದಾಗ 'ಇದೆ; ಅವೇ ಸಂಕಲ್ಪ ಹಾಗೂ ಚಿತ್ತಗಳು' ಎಂದಿದ್ದಾರೆ. ಉಪನಿಷತ್ತಿನಲ್ಲಿ ಇವೆರಡನ್ನೂ ಬೇರೆಬೇರೆಯ ಖಂಡಗಳಾಗಿ ವಿಂಗಡಿಸಿಯೇ ವಿವರಿಸಲಾಗಿದೆ. ನಾನು ವಿಚಾರ ಸೌಕರ್ಯಕ್ಕಾಗಿ ಒಟ್ಟಿಗೆ ಸ್ವೀಕರಿಸಿ ವ್ಯಾಖ್ಯಾನಮಾಡಲಿದ್ದೇನೆ.

ಮನುಷ್ಯನ ಈಗಿನ ಮನಃಸ್ಥಿತಿಯನ್ನೂ ಇದೇ ಮನುಷ್ಯನ ಹಿಂದಿನ ಕಾಲದ ಮನಃಸ್ಥಿತಿಯನ್ನೂ ಕುರಿತು ಹಿಂದಿನ ಉಪದೇಶದಲ್ಲಿ ಪ್ರಸ್ತಾಪಿಸಿದೆ. ಆದರೆ ಮನಸ್ಸಿಗೆ ನಾನಾಮುಖಗಳಿವೆ–ಎಂಬಿದನ್ನು ಮಾತ್ರ ಈಗ ಪ್ರಸ್ತಾಪಿಸಲಾಗುವದು. ಈಗ ನಮಗೆ

ಗೊತ್ತಿರುವಂತೆ ಮನಸ್ಸು ಸಂಶಯ, ಕಾಮ, ಅಸೂಯೆ, ಭಯ, ಕ್ರೋಧಾದಿಗಳ ರೂಪದಿಂದ ಎಲ್ಲರಿಗೂ ಅನುಭವದಲ್ಲಿದೆ. ಇವೇ ಅಧಿಕವಾಗಿರುವಂಥವರಿಗೆ ಸಂಕಲ್ಪ–ಚಿತ್ತಗಳೆಂಬ ಮನಸ್ಸಿನ ಉಳಿದ ಮುಖಗಳನ್ನು ಪರಿಚಯಮಾಡಿಕೊಳ್ಳಲಾಗುವದಿಲ್ಲ. ಇದರಿಂದಲೇ ಮಾನವನು ದುರ್ಬಲನಾಗಿಬಿಟ್ಟಿರುವನು. ಅವನ ಸಂಕಲ್ಪವೇ ಬುಡಭದ್ರವಿಲ್ಲದ್ದಾದರೆ ಜೀವನದಲ್ಲಿ ಏನನ್ನು ತಾನೆ ಸಾಧಿಸಿಯಾನು? ಉದಾಹರಣೆಗೆ ತಾನು ಬ್ರಹ್ಮಚಾರಿಯಾಗಿಯೇ ಉಳಿದು ದೇಶಸೇವೆಯೊ, ಈಶಸೇವೆಯೊ, ಸಮಾಜಸೇವೆಯೊ–ಮಾಡುವೆನೆಂದು ಸಂಕಲ್ಪಿಸುವದು ಸುಲಭ. ಅದನ್ನು ಪೂರ್ಣವಾಗಿ ಜೀವನದಲ್ಲಿ ಜಾರಿಗೆ ತಂದವರು ಎಷ್ಟು ಮಂದಿ ಸಿಗಬಲ್ಲರು? ಹೀಗೆಯೇ ಉದಾತ್ತ ಧ್ಯೇಯಗಳೆಲ್ಲರ ವಿಚಾರಕ್ಕೂ ತಿಳಿಯಬೇಕು. ಮನುಷ್ಯನು ತನ್ನ ಜೀವನದಲ್ಲಿ ಇಹಲೋಕದ ಭೋಗಗಳನ್ನು ಮೀರಿದ ಯಾವದಾದರೊಂದು ಉದಾತ್ತ ಧ್ಯೇಯಸಾಧನೆಗೆ ಸಂಕಲ್ಪಮಾಡಬೇಕು. ಅನಂತರ ಅದನ್ನು ಸಾಧಿಸಲು ಶ್ರಮಿಸಬೇಕು. ಆಗ ಮಾತ್ರವೇ ಅಧ್ಯಾತ್ಮವಿದ್ಯೆಯು ಹೇಗೆ ಪ್ರಯೋಜನಕಾರಿಯಾದೀತೆಂದು ತಿಳಿದೀತು. ಧ್ಯೇಯಸಾಧನೆಯ ಸಂಕಲ್ಪವೇ ಇಲ್ಲದವನಿಗೆ, ಕೇವಲ ಚಂಚಲಚಿತ್ತನಿಗೆ–ಎಂದಿಗೂ ಅಧ್ಯಾತ್ಮವಿದ್ಯೆಯು ಸಿಗಲಾರದು. ಅದರ ರುಚಿಯೂ ತಿಳಿಯಲಾರದು.

ಈಗ ಸಂಕಲ್ಪವನ್ನು ಕುರಿತು ವಿಚಾರಮಾಡೋಣ. ವೈದಿಕಕರ್ಮಗಳನ್ನು ಮಾಡುವಾಗ ಪ್ರಾರಂಭದಲ್ಲಿ 'ಸಂಕಲ್ಪ' ಮಾಡಿಸಿ ಪುರೋಹಿತರು ಮುಂದುವರೆಯುವದು ಎಲ್ಲರಿಗೂ ಗೊತ್ತು. ಅವರು ಹೇಳುವ ವಾಕ್ಯಗಳು ಸಂಸ್ಕೃತಭಾಷೆಯಲ್ಲಿರುವದರಿಂದ ಕೇಳುವವರಿಗೆ ಕೈಮುಗಿದುಕೊಂಡೊ, ಅಥವಾ ಮೂಗುಹಿಡಿದುಕೊಂಡೊ, ಸ್ವಲ್ಪ ಹೊತ್ತು ಕುಳಿತುಕೊಳ್ಳುವದೇ 'ಸಂಕಲ್ಪ' ವೆಂದಾಗಿಬಿಟ್ಟಿದೆ. ವಿವಾಹಕಾಲದಲ್ಲಿಯಂತೂ ಗಡಿಬಿಡಿಯ ನಡುವೆ ಪುರೋಹಿತರು ಪಠಿಸುವ 'ಮಹಾಸಂಕಲ್ಪ'ವು ಒಂದು ಕಾಲಹರಣವೆಂದೇ ತಿಳಿದು ಆ ಸಮಯಕ್ಕೆ ಸೇರಿದ್ದವರೆಲ್ಲರೂ ಹರಟೆಯನ್ನು ಹೊಡೆಯುತ್ತಲೇ ಇರುತ್ತಾರೆ. ಇಂಥ ವಿರೋಧಾಭಾಸಕ್ಕೆ ಏನನ್ನಬೇಕು? ವಧೂವರರಿಗೆ ಕೂಡ ಇದು ಅರ್ಥವಾಗಿರುವದಿಲ್ಲ. ಕನ್ಯಾಪಿತೃವಂತೂ ಸಂಕಲ್ಪಿಸುವ ಪರಿಸ್ಥಿತಿಯಲ್ಲಿರುವದೇ ಇಲ್ಲ. ಹೀಗಾಗಿ 'ಸಂಕಲ್ಪ' ವೆಂಬುದನ್ನು ಬ್ರಹ್ಮವೆಂದು ಉಪಾಸನೆಮಾಡುವದಿರಲಿ, ಅದರ ಪ್ರವೇಶವೂ ಮನಸ್ಸಿನಲ್ಲಿ ಅಸಾಧ್ಯವಾಗಿರುತ್ತದೆ. ಇಂತಹ ಪರಿಸ್ಥಿತಿಯಿಂದ ಪಾರಾದರೆ ಮಾತ್ರವೇ ಯಾವಾಗಲಾದರೂ 'ಸಂಕಲ್ಪ'ದ ಮಹತ್ತ್ವವನ್ನು ಕಂಡು ಕೊಳ್ಳಬಹುದು. ಇನ್ನು ತೀರ್ಥಯಾತ್ರೆಗಳ ಸಂದರ್ಭದಲ್ಲಿಯೂ ಆಯಾ ಸ್ಥಳ ಪುರೋಹಿತರು (ಪಂಡಾಗಳು) ಪಠಿಸುವ ಸಂಕಲ್ಪಗಳು ಕರ್ತೃವಿನಿಂದ ದಕ್ಷಿಣೆಯನ್ನು ಸಂಗ್ರಹಿಸುವದರಲ್ಲೇ ಮುಕ್ತಾಯವಾಗಿಬಿಡುವವು. ಉಳಿದ ಕರ್ಮಗಳೆಲ್ಲ ಯಾಂತ್ರಿಕವಾಗಿ ನೆರವೇರಿದ್ದು ತೀರ್ಥಯಾತ್ರೆಯನ್ನು ಪೂರೈಸಿಬಂದಮೇಲೂ ಯಾವ

ಶುಭ ಸಂಕಲ್ಪಗಳಾಗಲಿ ಸಂಸ್ಕಾರಗಳಾಗಲಿ ಮನಸ್ಸಿನಲ್ಲಿ ಉಳಿದಿರುವದೇ ಇಲ್ಲ. ಇದರಿಂದ ತಿಳೀದುಬರುವದೇನೆಂದರೆ ಅಧ್ಯಾತ್ಮವಿದ್ಯೆಯ ವಿಷಯಕ್ಕೆ ನಾವು ಎಷ್ಟು ಹಿಂದುಳಿದಿರುವೆವೆಂಬುದು ಸ್ಪಷ್ಟವಾಗುವದು. ಆದ್ದರಿಂದ ಈಗಲಾದರೂ 'ಸಂಕಲ್ಪ'ದ ನಿಜವನ್ನು ಒಂದಿಷ್ಟು ಕಂಡುಕೊಳ್ಳಬೇಕು. ಉಪನಿಷತ್ತಿನಲ್ಲಿ ತಿಳಿಸಿರುವಂತೆ ಮನಸ್ಸಿಗಿಂತ ಸಂಕಲ್ಪವು ಒಂದು ರೀತಿಯಲ್ಲಿ ದೊಡ್ಡದು. ಏಕೆಂದರೆ ಮನಸ್ಸು ವಿಕಲ್ಪ ರೂಪವಾದದ್ದು. ಬರಿಯ ವಿಕಲ್ಪಗಳನ್ನೇ ಪ್ರಕಟಿಸುವವನಿಗಿಂತಲೂ ಸಂಕಲ್ಪವನ್ನು ಮುಂದಿಡುವವನನ್ನು ಜನರು ನಂಬುತ್ತಾರೆ; ಹಾಗೂ ಮೆಚ್ಚುತ್ತಾರೆ. ಹೇಗೆಂದರೆ ಸಭೆಗಳಲ್ಲಿ ಬರಿಯ ಒಣಮಾತುಗಳನ್ನಾಡುವವರಿಗಿಂತ ನಿರ್ಣಯಗಳನ್ನು ಮಂಡಿಸುವವರಿಗೇ ಹೆಚ್ಚು ಗೌರವವಿರುತ್ತದೆ. ಹಾಗೆಯೇ ಅದನ್ನು ಸಮರ್ಥಿಸಿಕೊಳ್ಳುವವರು ಇನ್ನೂ ಉತ್ತಮರೆನಿಸುವರು. ಆ ನಿರ್ಣಯವು ಹೆಚ್ಚು ಹೆಚ್ಚು ಜನೋಪಯೋಗಿಯಾಗಿದ್ದರಂತೂ ನಿರ್ಣಯವನ್ನು ಮಂಡಿಸುವವನನ್ನು ಎಲ್ಲರೂ ಬೆಂಬಲಿಸುವರು. ಇಂಥ ಸಂದರ್ಭದಲ್ಲಿ ಆಯಾ ವ್ಯಕ್ತಿಯು ತಾನು ತನ್ನ ಅಂತಃಕರಣದಲ್ಲಿ ಮೊದಲು ನಿರ್ಣಯಿಸಿಕೊಳ್ಳದೆ ಪ್ರಕಟಿಸಲಾಗುವದಿಲ್ಲ. ಅಂಥ ನಿರ್ಣಯವು ಅವನಿಗೆ ಹೊಳೆಯಬೇಕಾದರೆ ಅವನೊಬ್ಬ ಸಂಕಲ್ಪೋಪಾಸಕನಾಗಿಯೇ ಇರಬೇಕು. ಇದೇ ಸಂಕಲ್ಪದ ಮಹಿಮೆಯು. ದ್ಯುಲೋಕ–ಪೃಥಿವೀಲೋಕಗಳು, ಆಕಾಶ, ವಾಯು, ತೇಜಸ್ಸು ಮುಂತಾದ ಮಹಾಭೂತಗಳೆಲ್ಲವೂ ಭಗವಂತನ ಮಹಾಸಂಕಲ್ಪದಿಂದ ಹೊರ ಬಂದಿದ್ದು ಈಗಲೂ ಸಂಕಲ್ಪಮಾಡುತ್ತಿರುವಂತೆಯೇ ಕಾಣುತ್ತಿದೆ. ಏಕೆಂದರೆ ಅವುಗಳು ಸಂಕಲ್ಪದಂತೆ ಸ್ಥಿರವಾಗಿವೆ. ಭೂಮಿಯು ಸ್ಥಿರವಾಗಿರದಿದ್ದರೆ ತಳಹದಿಯನ್ನು ಹಾಕಿ ಮನೆಕಟ್ಟುವದು ಹೇಗಾದೀತು? ಎಲ್ಲ ಗೃಹನಿರ್ಮಾತೃಗಳೂ ಭೂಮಿಯನ್ನು ನಂಬಿಯೇ ಮನೆ–ಮಹಡಿಗಳನ್ನು ಕಟ್ಟುವರು. ಅವರಿಗೆ ಭೂಮಿಯು ತನ್ನ ಸ್ಥಿರಸಂಕಲ್ಪದಿಂದಲೇ ಅಚಲವಾಗಿ ನಿಂತಿದೆ–ಎಂಬ ಅಧ್ಯಾತ್ಮತತ್ತ್ವವನ್ನು ತಿಳಿಯದೆ ಇದ್ದರೂ ನಂಬಿಕೆಯು ಮಾತ್ರ ಭದ್ರವಾಗಿರುವದು ಕಂಡು ಬರುತ್ತದೆ. ಹೀಗೆ ವಿಚಾರಮಾಡುತ್ತಾಹೋದರೆ ಬ್ರಹ್ಮಾಂಡವೆಲ್ಲವೂ ಸಂಕಲ್ಪಮಯವಾಗಿದ್ದು ಅದರ ರಚನೆ, ಅದರ ಕರ್ತೃ, ಆ ಕರ್ತೃವಿನ ಸಂಕಲ್ಪ ಸಾಮರ್ಥ್ಯಗಳು–ಇವುಗಳನ್ನು ಅರ್ಥಮಾಡಿಕೊಂಡಂತೆಲ್ಲ ನಮ್ಮ ಮನಸ್ಸಿನಲ್ಲಿ 'ಶಿವಸಂಕಲ್ಪ'ಗಳನ್ನೇ ಮೂಡಿಸುವವು. ಹೀಗಿದೆ ಸಂಕಲ್ಪಮಹಿಮೆ! 'ಕಾಮವುಂಟಾಗುವದೇ ಸಂಕಲ್ಪದಿಂದ; ಆದ್ದರಿಂದ ಕಾಮವನ್ನು ಗೆಲ್ಲಲಿಚ್ಛಿಸುವವನು ಸಂಕಲ್ಪಮಾಡುವದನ್ನ ತಡೆಗಟ್ಟಬೇಕು' ಎಂದು ಮಹಾಭಾರತದಲ್ಲಿದೆ. ಆದರೆ ಸತ್ಸಂಕಲ್ಪಗಳನ್ನು ಮನಸ್ಸಿನಲ್ಲಿ ಅಳವಡಿಸಿಕೊಳ್ಳುವದು ಮಾತ್ರ ಸಾಧಕನಿಗೆ ಅವಶ್ಯವಾಗಿರುತ್ತದೆ. ಆದಬಂದಲೇ ಅವನು ಯಜ್ಞಾದಿಸಾಧನಗಳನ್ನು ಕೈಗೊಳ್ಳಬೇಕಾಗಿರುವದು. ಲೌಕಿಕಕಾರ್ಯಗಳಲ್ಲಿಯೂ ಸಂಕಲ್ಪವು ಬಹಳ ಪ್ರಧಾನವಾಗಿರುತ್ತದೆ.

ಉದಾಹರಣೆಯಾಗಿ ಕೀರ್ತಿ ಶೇಷರಾದ ದಿವಾನ್ ಸರ್. ಎಂ. ವಿಶ್ವೇಶ್ವರಯ್ಯನವರು ಕನ್ನಂಬಾಡಿ ಅಣೆಕಟ್ಟನ್ನು ಕಟ್ಟಲು ಸಂಕಲ್ಪಿಸದೆ ಹೋಗಿದ್ದರೆ ಈಗಿನ ಜನರಿಗೆ ಅದರ ಪ್ರಯೋಜನವು ಸಿಗುತ್ತಿತ್ತೆ? ಎಂಬಿದನ್ನು ಯೋಚಿಸಿರಿ. ಹೀಗೆಯೇ ಎಲ್ಲಾ ಸಂದರ್ಭ ಗಳಲ್ಲಿಯೂ ತಿಳಿಯಬೇಕು. ಮಹತ್ಸಂಕಲ್ಪಗಳನ್ನೇ ಕೈಗೊಂಡವರು ಮಹಾತ್ಮರೆನಿಸುವರು. ಕೆಲವು ವೇಳೆ ಅವರು ಹುತಾತ್ಮರಾಗಲೂ ಸಿದ್ಧರಾಗಿರಬೇಕಾಗುವದು. ಅಧ್ಯಾತ್ಮದೃಷ್ಟಿ ಯಿಂದಲಾದರೊ, ಪ್ರತಿಯೊಬ್ಬನೂ ತನ್ನ ಆತ್ಮಸಾಕ್ಷಾತ್ಕಾರ, ಸ್ವಾತಂತ್ರ್ಯ, ಜೀವನ್ಮುಕ್ತಿಗಳಿಗಾಗಿ ದೃಢಸಂಕಲ್ಪವನ್ನು ಈ ಕೂಡಲೇ ಕೈಗೊಳ್ಳಲೇಬೇಕಾಗಿರುವದು. ಇದಕ್ಕಾಗಿ ಸರ್ವತ್ಯಾಗವನ್ನೂ ಮಾಡಿದರೂ ಯುಕ್ತವೇ ಆಗಿರುವದು. ಇದೇ ಸಂಕಲ್ಪಬ್ರಹ್ಮೋಪಾಸನೆಯೆನಿಸಿರುವದು.

ಈಗ ಚಿತ್ತಬ್ರಹ್ಮೋಪಾಸನೆಯನ್ನು ವಿಚಾರಮಾಡೋಣ. ಚಿತ್ತವೆಂಬುದೂ ಅಂತಃಕರಣವೃತ್ತಿಯೇ ಆಗಿರುವದು. ಹಿಂದೆ ನಡೆದುಹೋದ ಘಟನೆಗಳನ್ನು ನಾವು ಆಗಾಗ್ಗೆ ಮನಸ್ಸಿಗೆ ತಂದುಕೊಳ್ಳುವೆವು. ಕೆಲವು ವೇಳೆ ನಾವು ಬೇಡವೆಂದರೂ ಅವು ಸಂದರ್ಭಾನುಸಾರ ನೆನಪಾಗುತ್ತಿರುವವು. ಇವುಗಳಲ್ಲಿ ಒಳ್ಳೆಯವನ್ನು ಸಹಿಸಿಕೊಳ್ಳಬಹುದಾದರು ಕೆಟ್ಟವುಗಳೂ ನೆನಪಾಗುತ್ತಿರುವದರಿಂದಲೇ ಮನುಷ್ಯನು ಬದ್ಧನೆನಿಸಿರುವನು. ಈ ಚಿತ್ತದ ಕ್ಷೇತ್ರವು ಜನ್ಮಾಂತರಲೋಕಾಂತರಗಳವರೆಗೂ ವ್ಯಾಪಿಸಿರುವದು. ಕೆಲವು ಘಟನೆಗಳ ನೆನಪುಗಳು ಕನಸಿನಲ್ಲಿ ಕೂಡ ನಮ್ಮನ್ನು ಹಿಂಬಾಲಿಸುವವು. ಈ ರೀತಿಯಾದ ಮನೋದೌರ್ಬಲ್ಯವು ಅನೇಕ ವೇಳೆ ನಾವು ವ್ಯವಹಾರದಲ್ಲಿಯೂ ಮೋಸಹೋಗಲು ಕಾರಣವಾಗುವವು. ಆದ್ದರಿಂದ ಇವುಗಳು ಬ್ರಹ್ಮವೆಂದು ಉಪಾಸಿಸಲು ಯೋಗ್ಯವಾದವುಗಳಲ್ಲ. ಮತ್ತೆ ಯಾವವೆಂದರೆ: ಗುರುಮುಖದಿಂದ ಉಪದೇಶಿಸಲ್ಪಟ್ಟ ಮಂತ್ರ, ನಾವೇ ಕಂಡಿರುವಂಥ ಮಂಗಲಕರವಾದ ಭಗವಂತನ ರೂಪಾಕಾರಗಳು, ನಾವು ಮಾಡಿರಬಹುದಾದ ಶುಭಕರ್ಮಗಳು– ಮುಂತಾದವು ಮತ್ತೆ ಮತ್ತೆ ನೆನಪಾಗುತ್ತಿದ್ದರೆ ಆಗ ಚಿತ್ತವೃತ್ತಿಯು ಸಾರ್ಥಕವಾಗುವದು. ಹೇಗೆ ಚೆನ್ನಾಗಿ ಓದಿರುವ ವಿದ್ಯಾರ್ಥಿಗೆ ಪರೀಕ್ಷಾಕೊಠಡಿಯಲ್ಲಿ ಆ ಸಮಯಕ್ಕೆ ಪ್ರಶ್ನೆಗೆ ತಕ್ಕಂತೆ ನೆನಪಾಗುವ ಉತ್ತರವು ಅವನ ಪುರೋಭಿವೃದ್ಧಿಗೆ ಕಾರಣವಾಗುವದೋ ಹಾಗೆ ನಮ್ಮ ಶ್ರೇಯಸ್ಸಿಗೆ ಕಾರಣವಾಗುವಂಥ ಚಿತ್ತವೃತ್ತಿಗಳು ನಮ್ಮ ಮನಸ್ಸಿನಲ್ಲಿ ಏಳುತ್ತಿರಬೇಕು. ಗೃಹಸ್ಥನಾಗಿದ್ದಾಗ ಮಾಡಿದ್ದ ಅಗ್ನಿಹೋತ್ರಾದಿಕರ್ಮಗಳೂ ದಾನವ್ರತಗಳೂ ಅದೇ ಕರ್ತೃವಿಗೇ ವಯೋಧರ್ಮದಿಂದ ಮುಂದೆ ಮಾಡಲಶಕ್ಯವಾದ ಕಾಲಕ್ಕೆ–ಹಿಂದೆ ಮಾಡಿದ್ದು ನೆನಪು ಬರುತ್ತಿದ್ದರೆ ಚಿತ್ತವು ಸಾರ್ಥಕವಾದಂತೆಯೇ ಸರಿ. ಇನ್ನು ಶರೀರಪಾತಕಾಲಕ್ಕೂ ತಾನು ಮಾಡಿದ್ದ ಜಪಧ್ಯಾನಾದಿಗಳು ಚಿತ್ತದಲ್ಲಿ ಸಂಸ್ಕಾರವನ್ನುಂಟುಮಾಡಿದ್ದರೆ–ಆಗ ಸ್ಮರಣೆಗೆ ಬಂದರೆ–ನಿಜವಾಗಿಯೂ ಅಂಥ

ಚಿತ್ತವನ್ನು ಬ್ರಹ್ಮವೆಂದೇ ಭಾವಿಸಬೇಕಾಗುವದು. ಹೀಗೆ ಸಂಕಲ್ಪ–ಕೃತಿ–ಅನುಸ್ಮರಣಗಳು ಒಂದನ್ನೊಂದು ಅವಲಂಬಿಸಿಕೊಂಡಿರುವವು. ಅನುಸ್ಮೃತಿ, ಧ್ರುವಸ್ಮೃತಿ–ಎಂದು ಮುಂತಾಗಿ ಶಾಸ್ತ್ರದಲ್ಲಿ ಹೇಳಿರುವದು ಇಂಥ ಶುಭವಾಸನೆಗಳನ್ನೇ–ಎಂದು ತಿಳಿಯಬೇಕು. ಹೀಗೆ ಚಿತ್ತವು ವಾಸನಾಮಯವಾಗಿರುವದರಿಂದ ಅದನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಶುಭವೃತ್ತಿಗಳ ಅನುಸ್ಮರಣೆಯೇ ಬರುವಂತೆ ಮಾಡಿಕೊಂಡರೆ ಚಿತ್ತಬ್ರಹ್ಮದ ಉಪಾಸನೆಯೆನಿಸುವದು.

ಇನ್ನು ಸಂಕಲ್ಪ–ಚಿತ್ತಗಳ ಪರಸ್ಪರಸಂಬಂಧವನ್ನೂ ವಿಚಾರಮಾಡೋಣ. ನಿಜವೇನೆಂದರೆ: ಸಂಕಲ್ಪವನ್ನು ಮತ್ತೆಮತ್ತೆ ನೆನಪಿಗೆ ತಂದುಕೊಟ್ಟು ಬಲಗೊಳಿಸುವದೇ ಚಿತ್ತವು. ಏಕೆಂದರೆ ದೃಢಸಂಕಲ್ಪವುಳ್ಳವರಿಗೆ ಚಿತ್ತದಲ್ಲಿ ಬೇರೆಯ ಚಿಂತೆಗಳು ಹೋಗುವದೇ ಇಲ್ಲ. ಉದಾಹರಣೆಗೆ ಅಶೋಕವನದಲ್ಲಿದ್ದ ಸೀತಾದೇವಿಗೆ ತಾನು ಮತ್ತೆ ರಾಮನನ್ನು ಸೇರಿಯೇ ಸೇರುವೆನು ಎಂಬ ಗಟ್ಟಿಯಾದ ನಿಶ್ಚಯವಿತ್ತು, ಆದ್ದರಿಂದಲೇ ಯಾವಾಗಲೂ ಆಕೆಗೆ ರಾಮನ ನೆನಪೇ ಆಗುತ್ತಿತ್ತು, ಹನುಮಂತನೊಡನೆ ಮಾತನಾಡುವಾಗ ಅವಳು ಈ ವಿಚಾರವನ್ನು ತಿಳಿಸಿಯೂ ಇದ್ದಾಳೆ. 'ಆಶಂಸೇಯಂ ಹರಿಶ್ರೇಷ್ಠ ಕ್ಷಿಪ್ರಂ ಮಾಂ ಪ್ರಾಪ್ಸ್ಯತೇ ಪತಿಃ । ಅಂತರಾತ್ಮಾ ಹಿ ಮೇ ಶುದ್ಧಃ' ಎಂಬ ದೇವಿಯ ವಾಕ್ಯದಲ್ಲಿ ಸಂಕಲ್ಪ–ಚಿತ್ತಗಳ ಶುದ್ಧಿಯು ಎದ್ದು ಕಾಣುತ್ತದೆ. ಇಂಥ ಚಿತ್ತವು ಬ್ರಹ್ಮವನ್ನು ಧ್ಯಾನಿಸುವದಕ್ಕೆ ಆಲಂಬನವಾಗುವದು ಸೂಕ್ತವೇ ಆಗಿದೆ. ನಾವುಗಳು ಬ್ರಹ್ಮಪ್ರಾಪ್ತಿಯನ್ನು ಖಚಿತವಾಗಿ ಬಯಸುವವರಾಗಿದ್ದರೆ–ಸಂಕಲ್ಪ, ಚಿತ್ತಗಳನ್ನು ಮೊದಲು ಬ್ರಹ್ಮಮಯವಾಗಿಸಿಕೊಳ್ಳಲು ಪ್ರಯತ್ನಮಾಡಬೇಕು.

---

# ಧ್ಯಾನ –ವಿಜ್ಞಾನಬ್ರಹ್ಮಗಳು

**ಓಮ್॥ ಧ್ಯಾನಂ ವಾವ ಚಿತ್ತಾದ್ ಭೂಯಃ ಧ್ಯಾಯತೀವ ಪೃಥಿವೀ........ ಧ್ಯಾನಮುಪಾಸ್ವ॥..........ವಿಜ್ಞಾನಂ ವಾವ ಧ್ಯಾನಾದ್ ಭೂಯಃ..........ವಿಜ್ಞಾನ ಮುಪಾಸ್ವ । 7–6,7.**

**ಭಾವಾರ್ಥಃ–** ಧ್ಯಾನವೇ ಚಿತ್ತಕ್ಕಿಂತ ಹೆಚ್ಚಿನದು; ಪೃಥಿವಿಯು ಧ್ಯಾನ ಮಾಡುವಂತಿದೆ; ಆದ್ದರಿಂದ ಧ್ಯಾನವನ್ನು (ಬ್ರಹ್ಮವೆಂದು) ಚಿಂತಿಸುವವನಾಗು. ವಿಜ್ಞಾನವೇ ಧ್ಯಾನಕ್ಕಿಂತ ಹೆಚ್ಚಿನದು. ಆದ್ದರಿಂದ ವಿಜ್ಞಾನವನ್ನು ಬ್ರಹ್ಮವೆಂದು ಚಿಂತಿಸು.

(ಧ್ಯಾನ–ವಿಜ್ಞಾನಗಳೆರಡೂ ಅಂತಃಕರಣವೃತ್ತಿಗಳು. ಇವು ಹೊರಗಿನ ವಸ್ತುಗಳ ವಿಷಯವಾಗಿದ್ದಲ್ಲಿ ಸಂಸಾರವೇ ಗತಿ. ಮಾನವನು ಈ ವೃತ್ತಿಗಳನ್ನು ಅಧ್ಯಾತ್ಮವಾಗಿ ಬ್ರಹ್ಮವಿಷಯವಾಗಿ ಮಾಡಿಕೊಳ್ಳುವದೇ ಮುಕ್ತಿಸಾಧನವು. ಸನತ್ಕುಮಾರರು ನಾರದನಿಗೆ ಈ ವೃತ್ತಿಗಳನ್ನು ಬ್ರಹ್ಮವಾಗಿ ಭಾವಿಸುವಂತೆ ಇಲ್ಲಿ ತಿಳಿಸಿದ್ದಾರೆ.)

## 53. ಧ್ಯಾನ–ವಿಜ್ಞಾನಗಳ ಚಿಂತನೆ

ಸನತ್ಕುಮಾರ–ನಾರದರ ಸಂವಾದವು ಮುಂದುವರೆದು ಈಗ ಚಿತ್ತಬ್ರಹ್ಮದಿಂದ ಧ್ಯಾನಬ್ರಹ್ಮಕ್ಕೆ ಏರಿರುತ್ತದೆ. ಚಿತ್ತವೇನೋ ಮನಸ್ಸಿಗಿಂತ ದೊಡ್ಡದು ನಿಜ. ಆದರೆ ಚಿತ್ತಕ್ಕಿಂತಲೂ ಹೆಚ್ಚಿನದು ಇದೆಯೆ? ಎಂದು ನಾರದನು ಕೇಳಿದಾಗ 'ಇದೆ, ಅದೇ ಧ್ಯಾನವು' ಎಂದು ಸನತ್ಕುಮಾರರು ಉತ್ತರಿಸಿದ್ದಾರೆ. ಆದ್ದರಿಂದ ಧ್ಯಾನವನ್ನು ಕುರಿತು ವಿಚಾರಿಸೋಣ.

'ಧ್ಯೈ ಚಿಂತಾಯಾಮ್' ಎಂಬ ಧಾತುವಿನಿಂದ ಧ್ಯಾನಶಬ್ದವು ನಿಷ್ಪನ್ನವಾಗಿ ಬಂದಿದೆ. ಧ್ಯಾನ ಅಥವಾ ಚಿಂತನೆಯು ಚಿತ್ತದ ವಿಕಾರವೇ ಆಗಿದೆ. 'ಏನಾದರೂ ಚಿಂತೆ ಜೀವಕ್ಕೆ' ಎಂದು ದಾಸವರ್ಯರೂ ನುಡಿದಿದ್ದಾರೆ. ಚಿಂತೆಯಿಲ್ಲದ ಮಾನವನು ಅಪರೂಪನೆಂದೇ ಹೇಳಬಹುದು. ಗಾಢನಿದ್ರೆಯ ಸಮಯ ಹೊರತು ಉಳಿದಾಗಲೆಲ್ಲ ನಮ್ಮ ಮನಸ್ಸು ಏನನ್ನಾದರೂ ಚಿಂತಿಸುತ್ತಲೇ ಇರುವದು. ಅದನ್ನು ಒಂದು ಚಿಂತೆಯಿಂದ ಹಿಂದಕ್ಕೆ ಸರಿಯಿಸಿದರೆ ಮತ್ತೊಂದು ಚಿಂತೆಯನ್ನು ಅಂಟಿಸಿಕೊಳ್ಳುತ್ತದೆ. ಇದೇ ಮಾನವನ ಸ್ವಭಾವವೊ–ಎಂದಂತಾಗಿದೆ. ಆದ್ದರಿಂದ ನಾವು ಚಿಂತೆಯಿಂದ ಪಾರಾಗಲು 'ಬೇಕು–ಬೇಡ'ಗಳನ್ನಾಶ್ರಯಿಸಿ ಬೇಡದ ಚಿಂತೆಯನ್ನು ದೂರಮಾಡುವದಕ್ಕೂ ಬೇಕಾದದ್ದನ್ನು ಹತ್ತಿಸಿಕೊಳ್ಳುವದಕ್ಕೂ ಪ್ರಯತ್ನಿಸುತ್ತೇವೆ. ಇದರಲ್ಲಿಯೂ ಒಂದು ಅಪಾಯವಿದೆ. ಏನೆಂದರೆ ಈ ಬೇಕುಬೇಡಗಳೂ ನಿಯತವಾಗಿರುವದಿಲ್ಲ. ಈಗ ಬೇಕಾದದ್ದು ಅನಂತರ ಬೇಡವಾಗುತ್ತದೆ. ಹಿಂದೆ ಬೇಕಾಗಿದ್ದದ್ದು ಈಗ ಬೇಡವಾಗುತ್ತದೆ. ಉದಾಹರಣೆಗೆ ಪ್ರಯಾಣಮಾಡುವಾಗ ಬೇಕಾಗಿದ್ದ ವಾಹನವು ಮುಗಿದ ಮೇಲೆ ಬೇಡವಾಗುತ್ತದೆ. ಕೆಲಸಮಾಡುವಾಗ ಬೇಡವಾಗಿದ್ದ ಹಾಸಿಗೆಯು ರಾತ್ರೆ ಬೇಕಾಗುತ್ತದೆ. ಹೀಗಿರುವಲ್ಲಿ ಬೇಕುಬೇಡಗಳ ಮಾಧ್ಯಮದಿಂದ ಚಿಂತೆಯನ್ನು ನಿಯಂತ್ರಿಸುವದು ಹೇಗಾದೀತು? ಅಲ್ಲದೆ ಎಲ್ಲ ಮಾನವರಿಗೂ ತಮಗೆ ಅಗತ್ಯವಾದ ಬೇಕುಬೇಡಗಳ ವಿಷಯಕ್ಕೆ ಸರಿಯಾದ ವಿವೇಕವೂ ಇರುವದಿಲ್ಲ. ಆದ್ದರಿಂದ ಚಿಂತೆಯೆಂಬುದು ಒಂದು ರೀತಿಯಿಂದ ಮಾನವನ ಶತ್ರುವೆನ್ನಬೇಕಾಗುವದು. ಚಿಂತೆಗೂ ಚಿತೆಗೂ ಒಂದು ಸೊನ್ನೆ

ಮಾತ್ರವೇ ವ್ಯತ್ಯಾಸವೆಂದೂ, ನಿರ್ಜೀವಿಯನ್ನು ಚಿತೆಯು ಸುಡುವದಾದರೆ ಚಿಂತೆಯು ಜೀವಂತವ್ಯಕ್ತಿಯನ್ನೇ ಸುಡುವದೆಂದೂ ನೀತಿಶಾಸ್ತ್ರವೂ ಹೇಳುವದು. ಹೀಗಿರುವಲ್ಲಿ ಚಿಂತೆಯು ಅಥವಾ ಧ್ಯಾನವು ಬ್ರಹ್ಮವೆಂದು ಉಪಾಸನೆ ಮಾಡಲು ಹೇಗೆ ಅರ್ಹವಾದೀತು? ಎಂಬೀ ಪ್ರಶ್ನೆಯು ನಮ್ಮ ಮುಂದೆ ಎದ್ದುಕೊಳ್ಳುತ್ತದೆ.

ಉಪನಿಷತ್ತಿನಲ್ಲಿ ಕೊಟ್ಟಿರುವ ದೃಷ್ಟಿಕೋನದಿಂದ ಚಿಂತೆ(ಧ್ಯಾನ)ಯನ್ನು ಈಗ ತಿಳಿಯೋಣ. ಋಷಿಮುನಿಗಳ ಪರಿಭಾಷೆಯಿಂದ ಹೇಳುವದಾದರೆ ಧ್ಯಾನವೆಂಬುದು ಅಂತಃಕರಣಪರಿಪಾಕದ ಫಲವು. ಇದು ವಿಷಯಾಭಿಧ್ಯಾನದಂತೆ ಮಾನವನನ್ನು ಸುಡುವದಿಲ್ಲ. ಈ ಧ್ಯಾನಕ್ಕೆ ಗುರಿಯು ನಿತ್ಯಶುದ್ಧಬುದ್ಧಮುಕ್ತವಾದ ಪ್ರಪಂಚೋಪಶಮವಾದ ಆತ್ಮನೇ ಆಗಿರುವದರಿಂದ ಆತ್ಮಧ್ಯಾನವು ಎಂದೆಂದಿಗೂ ಸುಖಶಾಂತಿಗಳ ಬೀಡಾಗಿರುವದು. ಹೇಗೆಂದರೆ ಸಾಮಾನ್ಯಮನುಷ್ಯನು ಕೂಡ ಕೆಲವು ಸಲ ವ್ಯಾವಹಾರಿಕ ಒತ್ತಡಗಳನ್ನು ತಡೆಯಲಾರದೆ ಹಾಯಾಗಿರಲು ಬಯಸುತ್ತಾನೆ. ಈ ಸ್ಥಿತಿಯು ಮಾನವನಿಗೆ ಎಲ್ಲಿ ದೊರಕುತ್ತದೆ? ಎಂದು ವಿಚಾರಿಸಿದಾಗ ಅದು ಅವನ ಸ್ವರೂಪದಲ್ಲಿ ಮಾತ್ರವೇ–ಎಂಬ ಉತ್ತರವು ಸಂಶಯಾತೀತವಾಗಿರುತ್ತದೆ. ಆ ಸ್ವರೂಪವನ್ನು ಅರಿತುಕೊಳ್ಳುವದೇ ವಿಜ್ಞಾನವು. ಅದನ್ನೇ ನೆನೆಯುವದೇ ಧ್ಯಾನವು–ಎಂದು ಶಾಸ್ತ್ರಗಳು ತಿಳಿಸುವವು. ಸ್ವರೂಪಸ್ಥಿತಿಯಲ್ಲಿ ವಿಕಾರಗಳಿಲ್ಲ; ಆಗುಹೋಗುಗಳಿಲ್ಲ; ಬೇಕುಬೇಡಗಳಿಲ್ಲ; ಸಂಶಯ, ಭಯ, ಬೇಸರಗಳಿಲ್ಲ; ಆದ್ದರಿಂದ ಅದು ಪರಮಶಾಂತಿಸ್ಥಾನವಾಗಿದೆ. ಸ್ವರೂಪವನ್ನು ಪಡೆದುಕೊಳ್ಳಲು ಮಾನವನು ಮಾಡಬೇಕಾಗಿರುವದಾದರೂ ಏನಿದ್ದೀತು? ಅದರ ಕಡೆಗೆ ಹಿಂದಿರುಗುವದೊಂದೆ ಅಲ್ಲವೆ? ಅದನ್ನೇ ಧ್ಯಾನವೆನ್ನುವರು. ಹೀಗೆ ಧ್ಯಾನವು ಅಧ್ಯಾತ್ಮಶಾಸ್ತ್ರಜ್ಞರ ಅನುಭವದಂತೆ ಅದೊಂದು 'ಚಿಂತೆ'ಯಾಗದೆ ಬಾಹ್ಯಚಿಂತೆಗಳಿಂದ ಬಿಡುಗಡೆಮಾಡುವ ಸಾಧನವಾಗಿರುತ್ತದೆ. ಅನಾತ್ಮ ವಸ್ತುಗಳ ಧ್ಯಾನವು ಹೀಗಿರುವದಿಲ್ಲ. ಅವು–ಬಾಯಾರಿದವನು ಉಪ್ಪುನೀರು ಕುಡಿದಂತೆಲ್ಲ ದಾಹವು ಹೆಚ್ಚಾಗುವಂತೆ ಚಿಂತೆಯನ್ನು ಬಲಪಡಿಸುವವು. ಆದ್ದರಿಂದಲೇ ಶಾಸ್ತ್ರವು ''ಆತ್ಮೇತ್ಯೇವೋಪಾಸೀತ'' (ಆತ್ಮನೆಂದೇ ಧ್ಯಾನಮಾಡಬೇಕು) ಎಂದು ತಿಳಿಸುತ್ತದೆ. ಈಗಲಾದರೂ ನಾವು ಪರೀಕ್ಷಾರ್ಥವಾಗಿಯಾದರೂ ಪ್ರತಿದಿನವೂ ಸ್ವಲ್ಪಕಾಲ ಅನಾತ್ಮಚಿಂತೆಯಿಂದ ಹಿಂದಿರುಗಿದವರಾಗಿ ಆತ್ಮಚಿಂತೆಯಲ್ಲಿಯೇ ಮುಳುಗಬೇಕು. ಆಗ ಧ್ಯಾನದ ರುಚಿಯು ತಿಳಿದೀತು.

ಧ್ಯಾನವು ಎರಡು ಬಗೆಯದಾಗಿರುವದು. ಆತ್ಮಧ್ಯಾನವು ಮೊದಲನೆಯದು. ಆತ್ಮನಿಗೆ ಆಕಾರ, ಗುಣ, ಉಪಾಧಿಗಳಿಲ್ಲವಾದ್ದರಿಂದ ಏನನ್ನೂ ಧ್ಯಾನಮಾಡದೆ, ಮನಸ್ಸನ್ನು ನಿದ್ರೆಗೂ ಹೋಗದಂತೆ ತಡೆದು, ಯಾವ ವೃತ್ತಿಗಳೂ ಏಳದಂತೆ ಇಟ್ಟುಕೊಳ್ಳುವದೇ ಈ

ಧ್ಯಾನವು. ಇದನ್ನು ನಿರ್ಗುಣಧ್ಯಾನವೆನ್ನುವರು. ಇದು ವಸ್ತುತಂತ್ರವಾಗಿರುವದು–ಎಂದರೆ ವಸ್ತುವಿಗೆ ಅಧೀನವಾಗಿರುವದು. ಇಲ್ಲಿ ಧ್ಯಾನಮಾಡುವವನು ತಾನೇ ಏನನ್ನೂ ಕಲ್ಪಿಸಿಕೊಳ್ಳುವಂತಿಲ್ಲ, ವಸ್ತು ಹೇಗಿದೆಯೋ ಹಾಗೆ ಅರಿತು ಅದನ್ನೇ ಮತ್ತೆ ಮತ್ತೆ ನೆನೆಯುತ್ತಿರುವದೇ ಕರ್ತವ್ಯವಾಗಿರುತ್ತದೆ. ಕಡೆಗೆ ನಿರ್ಗುಣವಾದ ವಸ್ತುವಿನ ಧ್ಯಾನದಿಂದ ಮನಸ್ಸುಕೂಡ ವೃತ್ತಿರಹಿತವಾಗಿ ತನ್ನನ್ನು ತಾನೇ ಸ್ವರೂಪದಲ್ಲಿ ಅಡಗಿಸಿಕೊಂಡು ಬಿಡುತ್ತದೆ. ಅನಂತರ ಅದು ಮನಸ್ಸೆನಿಸುವದೂ ಇಲ್ಲ, ಸಂಕಲ್ಪಾದಿಗಳನ್ನು ಮಾಡುವದೂ ಇಲ್ಲ, ಏಕೆಂದರೆ ಅದು ನದಿಯು ಸಮುದ್ರವನ್ನು ಹೊಕ್ಕು ಒಂದಾದಂತೆ ತಾನು ಆತ್ಮನೇ ಆಗಿ ನೆಲೆನಿಂತುಬಿಡುವದು. ಅನಂತರ ಪುನರಾವೃತ್ತಿಯೂ ಇಲ್ಲ, ಇಷ್ಟೇ ಅಲ್ಲ, ಸ್ವರೂಪಸ್ಥಿತಿಯು ಸಹಜವೇ ಆಗಿದೆ–ಎಂದು ತಿಳಿದಾಗ ಮನಸ್ಸಿತ್ತು, ಲಯವಾಯಿತು, ಈಗಿಲ್ಲ–ಎಂದದ್ದೆಲ್ಲವೂ ವಿಕಲ್ಪಗಳೇ ಎಂದಾಗಿ ಆತ್ಮಸತ್ಯಾನುಬೋಧವೊಂದೇ ಉಳಿಯುತ್ತದೆ. ಈ ಸ್ಥಿತಿಯನ್ನು ವೈದಿಕಸಮಾಧಿ–ಎನ್ನುವರು. ಸಮಾಧಿಶಬ್ದವು ಇಲ್ಲಿ ಆತ್ಮವಾಚಕವಾಗಿಯೇ ಬಳಸಲ್ಪಟ್ಟಿರುತ್ತದೆ. ಇದು ಯೋಗಶಾಸ್ತ್ರದವರು ತಿಳಿಸುವ ಚಿತ್ತವೃತ್ತಿನಿರೋಧರೂಪವಾದ ಸಮಾಧಿಯಲ್ಲ. ಅಂತೂ ಆತ್ಮನಾಗಿ ನೆಲೆನಿಲ್ಲುವ ಪರಿಸ್ಥಿತಿಯು ಧ್ಯಾನದ ಪರಾಕಾಷ್ಠೆಯು. ಇದನ್ನು ಶ್ರುತಿಯಲ್ಲಿ ಧ್ಯಾಯತೀವ–ಎಂಬಲ್ಲಿ ಇವಶಬ್ದದಿಂದ ಕ್ರಿಯಾಪದವಲ್ಲವೆಂದೂ ತಿಳಿಸಿದೆ. ''ಬೆಟ್ಟವು ನಿಂತಿದೆ ಧ್ಯಾನಮಾಡುವಂತಿದೆ''– ಎಂದರೆ ಹೇಗೋ ಹಾಗೆ ಇಲ್ಲಿಯೂ ತಿಳಿಯಬೇಕು. ಬೆಟ್ಟವು ಎಂದೂ ಓಡಾಡಿರಲಿಲ್ಲ, ಆದ್ದರಿಂದಲೇ ನಿಂತೂ ಇಲ್ಲ, ನಿಂತಿದೆ ಎಂದದ್ದು ಕೇವಲ ಸ್ವರೂಪ ನಿರ್ದೇಶವೇ ಹೊರತು ಪ್ರವೃತ್ತಿನಿವೃತ್ತಿವಾಚಕವಲ್ಲ, ಹಾಗೆಯೇ ಮನಸ್ಸು ಆತ್ಮನಲ್ಲಿ ನೆಲೆಗೊಂಡಾಗ ಸ್ಥಿತಪ್ರಜ್ಞನಾಗುವಿಕೆಯು ಸಮಾಧಿಯು. ಇಂಥ ಫಲವುಳ್ಳ ಧ್ಯಾನವು ಒಂದು ಬಗೆಯದು. ಇದು ಉತ್ತಮಾಧಿಕಾರಿಗಳನ್ನು ಬಿಟ್ಟರೆ ಉಳಿದವರಿಗೆ ಎಟುಕಲಾರದು.

ಎರಡನೆಯ ಬಗೆಯ ಧ್ಯಾನವು ಮಾನಸಿಕಕ್ರಿಯಾರೂಪವಾಗಿರುತ್ತದೆ. ಇದು ಸಾಧಕನ ಅಧೀನವಾಗಿರುತ್ತದೆ. ಆದ್ದರಿಂದ ಕರ್ತೃತಂತ್ರವೆನಿಸಿದೆ. ಈ ಪ್ರಕರಣದಲ್ಲಿ ಧ್ಯಾನವೆಂದರೆ ಇದೇ. ಇಲ್ಲಿ ಏಕಾಗ್ರತೆಯು ಬಹಳ ಮುಖ್ಯವು. ಶಾಸ್ತ್ರವು ಸೂಚಿಸಿದ ರೀತಿಯಲ್ಲಿ ವಸ್ತುವನ್ನು ಗುಣ, ರೂಪ, ಆಕಾರ, ವಿಶೇಷಗಳೊಡನೆ ಕಲ್ಪಿಸಿಕೊಂಡು ಮನಸ್ಸಿನಲ್ಲಿ ಅದೇ ವಸ್ತುವಿಷಯವಾದ ಪ್ರತ್ಯಯಗಳನ್ನು ಧಾರಾಕಾರವಾಗಿ ಚಿಂತಿಸುತ್ತಾ ಇತರ ಭಿನ್ನಜಾತೀಯಪ್ರತ್ಯಯಗಳಿಗೆ ಅವಕಾಶಕೊಡದೆ ಇರುವದೇ ಧ್ಯಾನವು. ಇಂಥ ಧ್ಯಾನಕ್ಕೆ ವಿಷಯವಾದ ವಸ್ತುವು ಎಷ್ಟೇ ಮಹತ್ತ್ವವುಳ್ಳದ್ದಾಗಿದ್ದರೂ ಸರ್ವಜ್ಞಸರ್ವ–ಶಕ್ತವೆಂದೆನಿಸಿದರೂ ಅನಾತ್ಮವಾಗಿರುವದು ಅನಿವಾರ್ಯವಾಗಿರುತ್ತದೆ. ಕಟ್ಟಕಡೆಗಾದರೂ ಈ ತತ್ತ್ವವನ್ನರಿತು ಉಪಾಸ್ಯದೇವತೆಯನ್ನು ಆತ್ಮನಾಗಿ ಚಿಂತಿಸಬೇಕಾದದ್ದು ಉಳಿದೇ

ಉಳಿಯುವದು. ಹೀಗಿದ್ದರೂ ಪ್ರಾಪಂಚಿಕರಿಗೆ ಈ ಧ್ಯಾನವೇ ಮೆಚ್ಚಾಗಿದ್ದು ಅನುಷ್ಠೇಯವೂ ಆಗಿರುವದು. ಇದನ್ನೇ ಗೀತೆಯಲ್ಲಿ ಭಗವಂತನು 'ತೇ ಮೇ ಯುಕ್ತತಮಾ ಮತಾಃ' ಎಂದು ತಿಳಿಸಿರುತ್ತಾನೆ. ನಿರ್ಗುಣಧ್ಯಾನವನ್ನಾದರೋ, 'ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ' ಎಂದು ಕಷ್ಟಸಾಧ್ಯವೆಂದು ತಿಳಿಸಿದ್ದಾನೆ. ಆದ್ದರಿಂದ ನಾರದನಿಗೆ ಸನತ್ಕುಮಾರರು ತಿಳಿಸುವಾಗ ಮಾನಸಪ್ರತ್ಯಯಸಂತಾನರೂಪವಾದ ಧ್ಯಾನವನ್ನೇ ಹೇಳಿ, ಅದು ಚಿತ್ತಕ್ಕಿಂತ ದೊಡ್ಡದು ಎಂದಿರುತ್ತಾರೆ. ಹೇಗೆಂದರೆ ಧ್ಯಾನಮಾಡುತ್ತಿರುವ ಯೋಗಿಯು ಏಕಾಗ್ರತೆಯು ಲಭಿಸಲಾಗಿ ಭೂಮಿ, ಅಂತರಿಕ್ಷ, ದ್ಯುಲೋಕಗಳು ನಿಶ್ಚಲವಾಗಿರುವಂತೆ ಅವನೂ ಆಗುವನು. ಮತ್ತು ಶಮಾದಿಗುಣಸಂಪನ್ನರಾದ ದೇವಸಮಾನರಾದ ಕೆಲವೇ ಮನುಷ್ಯರು ಕೂಡ ಇಂಥ ಧ್ಯಾನದಿಂದ ನಿಶ್ಚಲತೆಯನ್ನು ಪಡೆದಿರುತ್ತಾರಲ್ಲವೆ? ಅವರೆಲ್ಲರೂ ಧ್ಯಾನಫಲಲಾಭಯುಕ್ತರಾಗಿಯೇ ಇರುವರು–ಎಂದಭಿಪ್ರಾಯ. ಆದರೆ ಹೀಗೆ ಧ್ಯಾನನಿಷ್ಠರಲ್ಲದವರು ಅಲ್ಪರಾಗಿರುವರು. ಅವರ ಐಶ್ವರ್ಯವೂ ಅಲ್ಪವಾಗಿರುವದು. ಅಂಥವರಿಗೆ ಹೇಗೆ ತಾನೆ ಧ್ಯಾನಫಲವು ದಕ್ಕೀತು? ನಿಜವೇನೆಂದರೆ; ವಿದ್ಯಾ ಗುರುಗಳಾಗಿಯೊ, ರಾಜರಾಗಿಯೊ–ಬಾಳುವವರೆಲ್ಲರೂ ಮಹಾತ್ಮರಾಗಿರುತ್ತಾರೆ. ಆ ಮಹತ್ತ್ವವು ಧ್ಯಾನದಿಂದಲೇ ಅವರಿಗೆ ದಕ್ಕಿರುವದು. ಇದರಿಂದ ಧ್ಯಾನದ ಬೆಲೆಯೇ ನೆಂಬುದು ತಿಳಿದೀತು. ಹೀಗೆ ಚಿತ್ತಕ್ಕಿಂತ ಹೆಚ್ಚಿನದಾಗಿರುವ ಧ್ಯಾನವು ಕೈಗೂಡಿದವರಿಗೆ ಧ್ಯಾನದ ವ್ಯಾಪ್ತಿಯಿರುವೆಡೆಯಲ್ಲೆಲ್ಲ ಕಾಮಚಾರವಿರುವದು–ಎಂಬಿದು ಸನತ್ಕುಮಾರರ ಅಭಿಪ್ರಾಯವು. ಆಗ ನಾರದರು ಮತ್ತೊಮ್ಮೆ 'ಪೂಜ್ಯರೆ, ಧ್ಯಾನಕ್ಕಿಂತ ಹೆಚ್ಚಿನದೂ ಇದೆಯೆ? ಎಂದು ಕೇಳಿದರು. ಸನತ್ಕುಮಾರರು 'ಇದೆ; ಅದೇ ವಿಜ್ಞಾನವು' ಎಂದರು. ವಿಜ್ಞಾನವೆಂದರೇನು? ಅದು ಧ್ಯಾನಕ್ಕಿಂತ ದೊಡ್ಡದು ಹೇಗೆ? ಎಂಬಿದನ್ನೀಗ ನೋಡೋಣ.

ವಿಜ್ಞಾನವೆಂದರೆ ಶಾಸ್ತ್ರಾರ್ಥವಿಷಯಕವಾದ ತಿಳಿವಳಿಕೆ–ಎಂದು ಇಲ್ಲಿ ಆಚಾರ್ಯರು ಭಾಷ್ಯದಲ್ಲಿ ತಿಳಿಸಿದ್ದಾರೆ. ಗೀತಾಭಾಷ್ಯದಲ್ಲಿ ಒಂದು ಕಡೆ ಜ್ಞಾನವೆಂದರೆ ಶಾಸ್ತ್ರಜ್ಞಾನವೆಂದೂ ವಿಜ್ಞಾನವೆಂದರೆ ಅನುಭವವೆಂದೂ ಬರೆದಿರುತ್ತಾರೆ. ಆದ್ದರಿಂದ ಪ್ರಕರಣಾನುಗುಣವಾಗಿ ಈ ಶಬ್ದಕ್ಕೆ ಅರ್ಥವನ್ನು ಗ್ರಹಿಸಬೇಕು. ಇಲ್ಲಿ ವಿಜ್ಞಾನವೆಂದರೆ ಶಾಸ್ತ್ರೀಯವಾದ ತಿಳಿವಳಿಕೆಯನ್ನು ಪರಾಮರ್ಶಿಸಿದೆ. ಇದರ ವಿವರವೇನೆಂದರೆ: ನೀರನ್ನು ನಾವೆಲ್ಲರೂ ಬಳಸುತ್ತೇವೆ. ವ್ಯವಹಾರದಲ್ಲಿ ಎಲ್ಲರೂ ನೀರು ಎಂದೇ ಆ ವಸ್ತುವನ್ನು ತಿಳಿದಿರುತ್ತಾರೆ. ಹಾಗೆಯೇ ಹೆಸರಿಸುತ್ತಾರೆ. ಇದು ಲೌಕಿಕವಾದ ತಿಳಿವಳಿಕೆಯಾಯಿತು. ಆದರೆ ಇದನ್ನೇ ವಿಜ್ಞಾನಿಗಳು ಆಮ್ಲಜನಕ, ಜಲಜನಕಗಳೆಂಬ ಎರಡು ಅನಿಲಗಳೆಂದು ವಿಶ್ಲೇಷಿಸುತ್ತಾರೆ. ಇದು ಶಾಸ್ತ್ರೀಯವಾದ ತಿಳಿವಳಿಕೆಯೆನಿಸುವದು. ಈ ವಿಜ್ಞಾನವು ವ್ಯವಹಾರಕ್ಕೆ ಬೇಕಾಗದೆ ಇರಬಹುದಾದರೂ ವಸ್ತುವಿನ ನಿಜವನ್ನು ಕಂಡು ಹಿಡಿಯುವವರಿಗೆ ಈ ಶೋಧನೆಯು ಅಗತ್ಯವಾಗುವದು. ಇದೇ ರೀತಿಯಾಗಿ

ವಸ್ತುಶಾಸ್ತ್ರವನ್ನೆಲ್ಲ ವಿಜ್ಞಾನಶಾಸ್ತ್ರವೆನ್ನಬಹುದು. ವಸ್ತುಗಳು ಭೌತಿಕವಾಗಿದ್ದರೆ ಅವುಗಳ ತಿಳಿವಳಿಕೆಯ ಶಾಸ್ತ್ರವು ಭೌತಿಕವಿಜ್ಞಾನಶಾಸ್ತ್ರವೆನಿಸುವದು. ಈ ಶಾಸ್ತ್ರದ ತಿಳಿವಳಿಕೆಯ ಆತ್ಮವಸ್ತುಸಂಶೋಧನೆಗೆ ಬೇಕಾಗಲಾರದಾದ್ದರಿಂದ ನಮ್ಮ ಋಷಿಗಳು ಈ ಚಿಂತನಾಕ್ರಮವನ್ನು ಕೈಬಿಟ್ಟಿರುತ್ತಾರೆ. ಪಾಶ್ಚಾತ್ತ್ಯರು ಸ್ವೀಕರಿಸಿದ್ದಾರೆ. ಆದ್ದರಿಂದಲೇ ಫಲಿತಾಂಶದಲ್ಲಿಯೂ ಪೂರ್ವ–ಪಶ್ಚಿಮದಷ್ಟೇ ವ್ಯತ್ಯಾಸವಾಗಿದೆ. ನಮ್ಮಲ್ಲಿಯ ವಿಜ್ಞಾನದ ಅನ್ವೇಷಣೆ ಹೇಗೆಂದರೆ: 'ನೀರೆಂಬುದು ವ್ಯವಹಾರ ವಿಷಯವೆಂದು ಒಪ್ಪಿದ ಮೇಲೆ ಅದೇ ನೀರು ಶಂಖದಿಂದ ಸಾಲಿಗ್ರಾಮದ ಮೇಲೆ ಹಾಕಲ್ಪಟ್ಟು ತುಳಸಿಯ ಸಂಯೋಗವಾದರೆ 'ತೀರ್ಥ'ವೆನಿಸುವದು; ಅದು ಅಕಾಲಮೃತ್ಯುವನ್ನು ಪರಿಹರಿಸಿ ಎಲ್ಲಾ ವ್ಯಾಧಿಗಳನ್ನೂ ಪಾಪಗಳನ್ನೂ ನಾಶಗೊಳಿಸಬಲ್ಲದು'– ಎಂಬ ಭಾವನಾಪೂರ್ಣವಾದ ತಿಳಿವಳಿಕೆಯು. ಇದನ್ನು ಪಾಶ್ಚಾತ್ತ್ಯರು ವಿಜ್ಞಾನವೆಂದು ಒಪ್ಪದೆ ಇರಬಹುದು. ಏಕೆಂದರೆ ಅವರಿಗೆ ಒಳಗೆ ಇಂಥ ಭಾವನೆಯಿರುವದಿಲ್ಲ. ಹಿರಣ್ಯಕಶಿಪುವು ಕಂಭದಲ್ಲಿ ಕಲ್ಲಿನ ನಿಜವನ್ನು ಮಾತ್ರವೇ ಕಂಡುಕೊಂಡಿದ್ದನು. ಪ್ರಹ್ಲಾದನು ಅಲ್ಲಿಯೂ ವಿಷ್ಣುತತ್ತ್ವವನ್ನೂ ಕಂಡುಕೊಂಡಿದ್ದನು. ಹೀಗೆ ವ್ಯತ್ಯಾಸವಿದ್ದೇ ಇದೆ. ಪ್ರಕೃತ–ವಿಜ್ಞಾನವೆಂದರೆ ಧ್ಯಾನಕ್ಕೂ ಮೂಲವಾದ ಶಾಸ್ತ್ರೀಯವಾದ ತಿಳಿವಳಿಕೆ–ಎಂದಭಿಪ್ರಾಯ. ಧ್ಯಾನಮಾಡುವವನಿಗೆ ಆಲಂಬನವೂ ಏನೆಂದು ಧ್ಯಾನಿಸಬೇಕೆಂಬ ವಿಜ್ಞಾನವೂ ಬೇಕಾಗುವದು. ವಿಜ್ಞಾನದಿಂದೊಡಗೂಡಿ ಧ್ಯಾನಿಸಿದರೆ ಹೆಚ್ಚು ವೀರ್ಯವತ್ತಾಗುವದು. ಆದ್ದರಿಂದಲೇ ಧ್ಯಾನಕ್ಕಿಂತ ವಿಜ್ಞಾನವು ಹೆಚ್ಚಿನದೆಂದಿದೆ. ಧ್ಯಾನದಲ್ಲಿ ಅಭ್ಯಾಸವೊಂದೇ ಗುರಿಯಾಗಿರುತ್ತದೆ. ವಿಜ್ಞಾನದಲ್ಲಿ ವಸ್ತುವನ್ನು ಸಮೀಪಿಸುವ ತಿಳಿವಳಿಕೆಯು ಮುಖ್ಯವಾಗಿರುತ್ತದೆ. ಆದ್ದರಿಂದ ವಿಜ್ಞಾನವಿಲ್ಲದ ಅಭ್ಯಾಸಕ್ಕಿಂತ ವಿಜ್ಞಾನ ಸಮೇತವಾದ ಅಭ್ಯಾಸವು ಶ್ರೇಷ್ಠವೆಂದಭಿಪ್ರಾಯ. ಗೀತೆಯಲ್ಲಿಯೂ 'ಶ್ರೇಯೋ ಹಿ ಜ್ಞಾನಮಭ್ಯಾಸಾದ್' ಎಂದು ಜ್ಞಾನಶಬ್ದದಿಂದ ಇದೇ ವಿಜ್ಞಾನವನ್ನೇ ತಿಳಿಸಲಾಗಿದೆ.

ಇಂಥ ವಿಜ್ಞಾನದ ಬಲದಿಂದಲೇ ಮಾನವನು ವಿದ್ಯೆಗಳನ್ನೆಲ್ಲ ವಶಪಡಿಸಿಕೊಳ್ಳುವನು. ಅನಂತರ ಪ್ರಮಾಣಭೂತವಾಗಿ ವಸ್ತುಗಳನ್ನು ಅರಿತುಕೊಂಡು ಒಳಗಿನ ವಿದ್ಯಾವಿವೇಕವಿನಯಾದಿಗಳನ್ನು ಅಳವಡಿಸಿಕೊಳ್ಳುವನು. ಮುಂದವರೆದು ನಿತ್ಯವಾದದ್ದು ಯಾವದು? ಅನಿತ್ಯವಾದದ್ದು ಯಾವದು? ಒಳ್ಳೆಯದು, ಕೆಟ್ಟದ್ದು ಧರ್ಮ, ಅಧರ್ಮ, ಪಾಪ, ಪುಣ್ಯ, ಪರೋಪಕಾರ, ಪರಪೀಡನೆ, ಸತ್ಯ, ಅನೃತ, ನ್ಯಾಯ, ಅನ್ಯಾಯ, ಆತ್ಮ ಅನಾತ್ಮ–ಗಳೆಲ್ಲದರ ನಿಜವನ್ನೂ ಗೊತ್ತುಪಡಿಸಿಕೊಳ್ಳುತ್ತಾನೆ. ಹೀಗೆ ವಿಜ್ಞಾನವು ಮನುಷ್ಯನ ಶ್ರೇಯಸ್ಸಾಧನೆಗೆ ದಾರಿದೀಪವಾಗಿದೆ. ಭೌತಿಕವಿಜ್ಞಾನವೂ ಹೀಗೆಯೇ ಮಾನವಕಲ್ಯಾಣಕ್ಕೆ ದ್ವಾರವಾಗಿ ಇರುವದು ನಿಜ. ಆದರೆ ಅದಕ್ಕೆ ಹಿನ್ನಲೆಯ ತತ್ತ್ವಗಳಾದ ಮಾನವತ್ವ, ಆತ್ಮತ್ವ, ಸಚ್ಚಿದಾನಂದಸ್ವರೂಪತ್ವಗಳ ಅರಿವು ಮೂಡದಿರುವದು ಅದರ

ದುರುಪಯೋಗಕ್ಕೆ ಕಾರಣವಾಗಿದೆ. ಬಾಹ್ಯದೃಷ್ಟಿಯ ವಿಜ್ಞಾನದಲ್ಲಿ ಮೂಲಭೂತವಾದ 'ತಾನು' ಎಂಬುದರ ವಿಚಾರವು ಅಡಕವಾಗಿರುವದಿಲ್ಲ. ಆದ್ದರಿಂದಲೇ 'ತನ್ನದು' ಎಂದೇ ಎಲ್ಲವನ್ನೂ ಸ್ವೀಕರಿಸುವ ಪ್ರವೃತ್ತಿಯಾಗಿಬಿಡುವದು. ಇದನ್ನು ದಾಟಿ ಈಗಲಾದರೂ ವಿಜ್ಞಾನದ ಅಂತರ್ಮುಖತ್ವವನ್ನು ಪರಿಚಯಮಾಡಿಕೊಂಡು ಅದನ್ನು ಬ್ರಹ್ಮವೆಂದು ಉಪಾಸನೆ ಮಾಡಿದರೆ ಲೋಕಕಲ್ಯಾಣವು ಖಂಡಿತವಾಗಿ ಆದೀತು. ಅಂಥ ಬುದ್ಧಿಯನ್ನು ಭಗವಂತನು ದಯಪಾಲಿಸಲೆಂದು ಬೇಡಿಕೊಳ್ಳೋಣ.

---

## ಬಲ–ಅನ್ನ–ಜಲಬ್ರಹ್ಮಗಳ ಉಪಾಸನೆ

**ಓಮ್॥ ಬಲಂ ವಾವ ವಿಜ್ಞಾನಾದ್ ಭೂಯಃ........ಬಲಮುಪಾಸ್ಸ್ವ॥ 7–8–1**
**ಅನ್ನಂ ವಾವ ಬಲಾದ್ ಭೂಯಃ.........ಅನ್ನಮುಪಾಸ್ಸ್ವ॥ 7–9–1**
**ಆಪೋ ವಾವ ಅನ್ನಾತ್ ಭೂಯಃ.........ಆಪ ಉಪಾಸ್ಸ್ವ॥ 7–10–1**

**ಭಾವಾರ್ಥ:–** ಬಲವು ವಿಜ್ಞಾನಕ್ಕಿಂತ ಹೆಚ್ಚಿನದು. ಆದ್ದರಿಂದ ಬಲವನ್ನು (ಬ್ರಹ್ಮವೆಂದು) ಚಿಂತಿಸುವವನಾಗು. ಅನ್ನವು ಬಲಕ್ಕಿಂತಲೂ ಹೆಚ್ಚಿನದು. ಆದ್ದರಿಂದ ಅನ್ನವನ್ನು (ಬ್ರಹ್ಮವೆಂದು) ಉಪಾಸನೆಮಾಡು. ನೀರು ಅನ್ನಕ್ಕಿಂತಲೂ ಹೆಚ್ಚಿನದು. ಆದ್ದರಿಂದ ನೀರನ್ನು (ಬ್ರಹ್ಮವೆಂದು) ಚಿಂತಿಸುವವನಾಗು.

(ಸನತ್ಕುಮಾರರು ನಾರದರಿಗೆ ಹೆಚ್ಚುಹೆಚ್ಚಿನ ತತ್ತ್ವಗಳನ್ನು ಬ್ರಹ್ಮವೆಂದು ಚಿಂತಿಸುವಂತೆ ಹೇಳುವ ಸರಣಿಯಲ್ಲಿ ವಿಜ್ಞಾನಕ್ಕಿಂತ ಬಲವೂ ಅದಕ್ಕಿಂತ ಅನ್ನವೂ ಅದಕ್ಕಿಂತ ಜಲವೂ ಹೆಚ್ಚಿನದೆಂದೂ ತಿಳಿಸಿದ್ದಾರೆ. ಹೆಚ್ಚುಗಾರಿಕೆಯನ್ನು ಸಾಪೇಕ್ಷವಾಗಿ ಉಪಾಸನೆಗೆ ಅನುಕೂಲ ವಾಗುವಂತೆ ತಿಳಿಸಿದ್ದಾರೆ. ವಿವರಗಳನ್ನು ಮುಂದೆ ಕೊಡಲಾಗಿದೆ.)

# 54. ಅನ್ನಾದ್ಯುಪಾಸನೆಗಳು

ಭೂಮವಿದ್ಯೆಯನ್ನು ಅಂತಿಮವಾಗಿ ಉಪದೇಶಿಸುವ ಸಲುವಾಗಿ ಸನತ್ಕುಮಾರರು ಇನ್ನೂ ಕೆಲವು ಉಪಾಸನೆಗಳನ್ನು ಈಗ ನಾರದರಿಗೆ ತಿಳಿಸುತ್ತಿದ್ದಾರೆ. ಉಪಾಸನೆಗಳೆಲ್ಲವೂ ಶಾಸ್ತ್ರೀಯದೃಷ್ಟ್ಯಧ್ಯಾಸದಿಂದಲೇ ಸಿದ್ಧವಾಗುವವು; ಎಂದರೆ ಇಂಥ ವಸ್ತುವನ್ನೇ ಹೀಗೆಂದೇ ಚಿಂತಿಸಬೇಕು–ಎಂದು ಶಾಸ್ತ್ರದಲ್ಲಿ ವಿಧಾನಮಾಡಿರುತ್ತದೆ. ಅಂಥ ವಿಧಿಯು ಕಂಡುಬಾರದಿದ್ದರೆ ಉಪಾಸನೆಮಾಡಲಾಗುವದಿಲ್ಲ, ಜ್ಞಾನದಲ್ಲಾದರೊ, ವಸ್ತುತಂತ್ರ

ವಾಗಿರುವದರಿಂದ ವಿಧಿಯಿರುವದಿಲ್ಲ. ಅಂಥ ಭೂತವಸ್ತುವಿಷಯದಲ್ಲಿ ಶಾಸ್ತ್ರವು ಜ್ಞಾಪಕ ಮಾತ್ರವಾಗಿರುವದು. ಉಪಾಸನೆಗಳ ಪ್ರಕರಣದಲ್ಲಿ ಶಾಸ್ತ್ರವು ವಿಧಿಪರವೇ ಆಗಿರುವದು. ಪ್ರಕೃತ ಬ್ರಹ್ಮವು ಕಡೆಯಲ್ಲಿ ಜಿಜ್ಞಾಸುವಿನ ಆತ್ಮನಾಗಿ ಕಂಡುಕೊಳ್ಳತಕ್ಕ ಸಿದ್ಧವಸ್ತುವೇ ಆಗಿದ್ದರೂ ಅದರಲ್ಲಿ ಅಂತಃಕರಣಸಮಾಧಾನಾರ್ಥವಾಗಿ ಉಪಾಸನೆಗಳನ್ನು ಹೇಳಲಾಗಿದೆ. ಈ ಸರಣಿಯಲ್ಲಿ ಒಂದಕ್ಕಿಂತ ಮತ್ತೊಂದು ಉತ್ಕೃಷ್ಟವಾದ ಉಪಾಧಿಗಳನ್ನು ನಿರ್ದೇಶಿಸಿ ಮುಂದುವರೆದು ಪ್ರಾಣತತ್ತ್ವದವರೆಗೂ ಧ್ಯಾನವನ್ನು ತಿಳಿಸಿದೆ. ಈಗ ಹಿಂದೆ ಹೇಳಿದ ವಿಜ್ಞಾನಬ್ರಹ್ಮೋಪಾಸನೆಯನ್ನು ಮೀರಿ ವಿಜ್ಞಾನಕ್ಕಿಂತ ಬಲವೆಂಬ ತತ್ತ್ವವು ಹೆಚ್ಚಿನದೆಂದೂ ಅದನ್ನೇ ಬ್ರಹ್ಮವೆಂದು ಚಿಂತಿಸಬೇಕೆಂದೂ ತಿಳಿಸಹೊರಟಿದೆ.

'ಬಲ' ವೆಂಬುದು ಶಾರೀರಿಕವಾದ ಧರ್ಮವು. ಹಾಗೆಯೇ ಅದು ಆಧ್ಯಾತ್ಮಿಕವಾಗಿ ಮನೋಬಲ, ಬುದ್ಧಿಬಲ, ಸ್ಮೃತಿಬಲ, ಮೇಧಾಬಲ–ಇತ್ಯಾದಿಗಳಿಗೂ ಅನ್ವಯಿಸುತ್ತದೆ. ಬಲವಿಲ್ಲವಾದರೆ ಜಗತ್ತನ್ನು ಗೆಲ್ಲಲಾಗುವದಿಲ್ಲ. ಪ್ರಪಂಚವನ್ನೆಲ್ಲ ಗೆಲ್ಲುವದು ಈಗಿನ ಜನರಿಗೆ ಸಾಧ್ಯವಾಗದಿರಬಹುದು. ಆದರೆ ಯುಗಾಂತರಗಳಲ್ಲಿ ಹಿರಣ್ಯಕಶಿಪು, ರಾವಣಾದಿಗಳೂ, ಬಲಿರಾಜ, ಪೃಥು–ಮುಂತಾದವರೂ ತ್ರೈಲೋಕ್ಯವಿಜಯಿಗಳಾಗಿದ್ದರೆಂದು ಪುರಾಣಗಳಿಂದ ತಿಳಿದುಬರುತ್ತದೆ. 'ಕಾಮರಾಗವಿವರ್ಜಿತವಾದ ಬಲವು ನಾನೇ' ಎಂದು ಭಗವಂತನು ಗೀತೆಯಲ್ಲಿ ಬಲವನ್ನು ತನ್ನ ವಿಭೂತಿಯಾಗಿ ತಿಳಿಸಿರುವದರಿಂದ ದೈವಾಂಶಸಂಭೂತರಾದ ರಾಮ, ಕೃಷ್ಣ, ಪೃಥು, ಭರತಾದಿ–ಮಹಾಚಕ್ರವರ್ತಿಗಳು ಪಡೆದುಕೊಂಡಿದ್ದಂಥ ಕ್ಷಾತ್ರಬಲವನ್ನು ಬ್ರಹ್ಮವೆಂದು ಉಪಾಸನೆಮಾಡುವಂತೆ ತಿಳಿಸಲಾಗಿದೆ. ಬಲಕ್ಕೆ ಈಗಲೂ ಗೌರವವಿದೆ; ಆದರೆ ಶಸ್ತ್ರಾಸ್ತ್ರಗಳ ಹಾಗೂ ಸೇನಾದಿಗಳ ಬಲವು ಶಾಂತಿಗೆ ಕಾರಣವಾಗಲಾರದು. ವಿಜ್ಞಾನಯುಗವಾದ ಈ ಕಾಲದಲ್ಲಿ ಇಂಥ ಬಲವರ್ಧನೆಯಿಂದ ದೇಶಗಳಿಗೆ ಪರಸ್ಪರ ಅಪನಂಬಿಕೆಯೂ ಭಯವೂ ಹೆಚ್ಚುತ್ತಿದೆ. ಪ್ರಪಂಚದ ವಿನಾಶವಾದೀತೆಂದು ಎಲ್ಲರೂ ಗಾಬರಿಪಡುವಂತಾಗಿದೆ. ಇಂಥ ಬಲವು ಕಾಮರಾಗಗಳ ವಶವಾಗಿರುವದರಿಂದ ಉಪಾಸ್ಯವಲ್ಲ. ಇದು ತ್ಯಾಜ್ಯವೆಂಬುದರಲ್ಲಿ ಸಂಶಯವಿಲ್ಲ. ಬಲವನ್ನು ಆಧ್ಯಾತ್ಮಿಕಶಕ್ತಿಯಿಂದ ಅಳವಡಿಸಿಯೇ ಉಪಾಸನೆಮಾಡಬೇಕು. ಮನೋಬಲಕ್ಕೆ ಋಷಿವರ್ಗದವರನ್ನೂ ಬುದ್ಧಿಬಲಕ್ಕೆ ಬೃಹಸ್ಪತಿಯಂಥ ದೇವತಾವರ್ಗದವರನ್ನೂ ಪ್ರಜ್ಞಾಮೇಧಾಬಲಾದಿಗಳಿಗೆ ವ್ಯಾಸಾದಿಗಳನ್ನೂ ಉದಾಹರಣೆಯಾಗಿಟ್ಟುಕೊಳ್ಳಬೇಕು. ದೇವತೆಗಳಲ್ಲಿ ಬಲಾಭಿಮಾನಿಯನ್ನು 'ಇಂದ್ರ'ನೆಂದೇ ಕರೆದಿದೆ. ಒಟ್ಟಿನಲ್ಲಿ ಬಲವು ತನ್ನ ಹಾಗೂ ಉಳಿದ ಜಗತ್ತಿನ ತ್ರಾಣಕ್ಕೂ ಯೋಗಕ್ಷೇಮಗಳಿಗೂ ಉಪಯೋಗವಾಗುವಂಥದ್ದಾಗಿರಬೇಕು. ಪೀಡಾಕರವೂ ಉದ್ವೇಗಕರವೂ ಆಗಿರಬಾರದು. ಪರುಶುರಾಮ, ಅಶ್ವತ್ಥಾಮ, ಬಲರಾಮಾದಿಗಳೂ ಬಲದ ವಿಷಯದಲ್ಲಿ

ಆದರ್ಶರಾಗಿರಬಹುದು. ಆದರೆ ಅವರುಗಳಲ್ಲಿದ್ದ ಬಲಕ್ಕೆ ಹಿಂಸೆಯ ಪ್ರಚೋದನೆಯಿತ್ತು ಅದನ್ನು ಬಿಟ್ಟು ಪರಿಶುದ್ಧ–ಸಾತ್ತ್ವಿಕವಾದ ಬಲೋಪಾಸನೆಯು ಮಾತ್ರ ಭೂಮವಿದ್ಯೆಗೆ ಸಹಕಾರಿಯಾಗಬಲ್ಲದ್ದಾಗಿದೆ. ವೈಯುಕ್ತಿಕವಾಗಿಯೂ ಬಲವಿಲ್ಲದವನು ವಿಜ್ಞಾನವಿದ್ದರೂ ಏನೂ ಮಾಡಲಾರನು. ಹೇಗೆಂದರೆ ಉಪನ್ಯಾಸಮಾಡುವ ತಿಳಿವಳಿಕೆಯಿದ್ದರೂ ಗಂಟಲಲ್ಲಿ ಶಕ್ತಿಯಿಲ್ಲದ ಹಾಗೂ ದೈಹಿಕವಾಗಿ ನಿರ್ಬಲನಾದವನು ಪ್ರವಚನ ಮಾಡಲಾರನು. ಸಂಗೀತವನ್ನು ಹೇಳಲಾರನು. ಬಲವು ಕುಗ್ಗಿದಂತೆಲ್ಲ ವಿಸ್ಮೃತಿಯುಂಟಾಗಿ ವಿದ್ಯೆಯು ಕ್ಷೀಣವಾಗಿಬಿಡುವದು. ಆದ್ದರಿಂದ ವಿಜ್ಞಾನಕ್ಕಿಂತಲೂ ಬಲವು ಒಂದು ರೀತಿಯಲ್ಲಿ ಹೆಚ್ಚಿನದೆಂದು ಇಲ್ಲಿ ತಿಳಿಸಿದೆ. ಹೀಗೆ ಬಲವನ್ನು ಕುರಿತು ನಾವು ಉತ್ಕೃಷ್ಟರೀತಿಯಿಂದ ಚಿಂತಿಸಿದಂತೆಲ್ಲ ಅದರ ಹೆಚ್ಚುಗಾರಿಕೆಯು ಗೊತ್ತಾಗುವದು. ಹಾಗೆಯೇ ಮುಂದುವರೆದು ಅದನ್ನೇ ಬ್ರಹ್ಮವೆಂದು ಚಿಂತಿಸಿದರೆ ಬಲಬ್ರಹ್ಮದ ಉಪಾಸನೆಯಾಗುತ್ತದೆ.

ಈಗ ಅನ್ನಬ್ರಹ್ಮೋಪಾಸನೆಯನ್ನು ವಿಚಾರಮಾಡೋಣ. ಅನ್ನವು ಬಲಕ್ಕಿಂತ ಹೆಚ್ಚಿನದೆಂದು ಇಲ್ಲಿ ತಿಳಿಸಿದೆ. ಅನ್ನವೆಂದರೆ ಪ್ರಾಣಿಗಳು ತಿಂದು ಜೀವಿಸಲು ಆಧಾರವಾದ ವಸ್ತುವು. ಮನುಷ್ಯಾನ್ನ, ಪ್ರಾಣ್ಯನ್ನಗಳೆಲ್ಲವನ್ನೂ ಇಲ್ಲಿ ಗ್ರಹಿಸಬೇಕು. ಅನ್ನವೆಂದದ್ದರಿಂದಲೇ ಅತ್ತೃವೂ ಇರಲೇಬೇಕಾಗುವದು. ಒಂದು ದೃಷ್ಟಿಯಿಂದ ಬ್ರಹ್ಮಾಂಡವೆಲ್ಲ ಅನ್ನಾನ್ನಾದರೂಪವಾಗಿದೆ. ಅನ್ನಾದ ಅಥವಾ ಅತ್ತೃ (ತಿನ್ನುವವನು)ವು ಅನ್ನದಿಂದಲೇ ಬೆಳೆಯತಕ್ಕವನಾಗಿದ್ದಾನೆ. ಅನ್ನವಿರುವದೇ ಅತ್ತೃವಿಗಾಗಿ–ಎಂದರೂ ತಪ್ಪಾಗಲಾರದು. ಸೃಷ್ಟಿಯಲ್ಲಿ ಭಗವಂತನು ಅನ್ನವನ್ನುಂಟುಮಾಡಿಯೇ ಅನ್ನಾದನನ್ನೂ ಸೃಷ್ಟಿಸಿದ್ದಾನೆ. ಅನ್ನಾದನೇ ಬಲಿಷ್ಠನಾಗಿರಲು ಸಾಧ್ಯ. ಆದ್ದರಿಂದ ಬಲಕ್ಕೆ ಮೂಲವು ಅನ್ನವೇ ಎಂದಾಯಿತು. ಅನ್ನವಿಲ್ಲದವನು ಬಲಹೀನನೇ ಸರಿ. ಅನ್ನವಾದರೊ, ಬ್ರಹ್ಮವೆಂದೇ ಉಪಾಸನೆಮಾಡಲ್ಪಡಬೇಕು. ಅನ್ನವನ್ನು ನಿಂದಿಸಬಾರದು, ಚೆಲ್ಲಬಾರದು, ದೂಷಿಸ ಬಾರದು, ತಿರಸ್ಕರಿಸಬಾರದು–ಎಂದೆಲ್ಲ ಶಾಸ್ತ್ರದಲ್ಲಿ ತಿಳಿಸಿದೆ. ಅನ್ನವನ್ನು ಬಹುವಾಗಿ ಬೆಳೆಯಿಸಿ ದಾನಮಾಡಬೇಕೆಂದೂ ಅದನ್ನು ಬಚ್ಚಿಡಬಾರದೆಂದೂ ಬೇರೊಬ್ಬರ ಅನ್ನವನ್ನು ತಾನು ಅಪಹರಿಸಿಸಬಾರದೆಂದೂ ನಿಯಮವಿದೆ. ಅನ್ನವನ್ನು ಪ್ರತ್ಯಕ್ಷದೇವತೆಯೆಂದೂ 'ಅನ್ನಪೂರ್ಣೆ' ಯೆಂದೂ ನಮ್ಮಲ್ಲಿ ಗೌರವಿಸುತ್ತೇವೆ. ಅನ್ನದ ಮಹಿಮೆಯು ಅಪಾರವಾದುದು. ಯಜ್ಞಗಳಲ್ಲೆಲ್ಲ ಅನ್ನದಾನವು ಕಡ್ಡಾಯವೆಂದು ತಿಳಿಸಲಾಗಿದೆ. ಅನ್ನದಾನವಿಲ್ಲದ ಯಜ್ಞವು ತಾಮಸವೆಂದೇ ಗೀತೆಯಲ್ಲಿ ಹೇಳಿದೆ. ಯಾವದೇ ಶ್ರೌತಸ್ಮಾರ್ತ ಲೌಕಿಕಕರ್ಮಗಳಲ್ಲಿ ಕೂಡ ಈಗಲೂ ಅನ್ನದಾನವೇ ಪ್ರಾಶಸ್ತ್ಯವನ್ನು ಹೊಂದಿರುತ್ತದೆ. ಭೋಜನ ಕೂಟವಿಲ್ಲದ ಸಮ್ಮೇಳನ, ಸಮಾರಂಭಗಳಾಗಲಿ, ಜಾತ್ರೆ, ರಥೋತ್ಸವಾದಿ ಗಳಾಗಲಿ, ವಿವಾಹ–ಗೃಹಪ್ರವೇಶಾದಿಗಳಾಗಲಿ, ಧರ್ಮಕರ್ಮಗಳಾಗಲಿ ಅಪರೂಪವೇ ಸರಿ. ಏಕೆಂದರೆ ಪ್ರತಿಯೊಬ್ಬನಿಗೂ ಅನ್ನವು ಪೋಷಕವಾಗಿದೆ. ಅದೇ

ಜೀವನಾಧಾರವಾಗಿದೆ. ಇಷ್ಟೆಲ್ಲ ವ್ಯವಹಾರಪ್ರಸಿದ್ಧವೂ ಅತ್ಯವಶ್ಯವೂ ಭೋಜನಾದಿಗಳ ರೂಪದಲ್ಲಿ ಅನ್ನವು ಪ್ರತಿದಿನವೂ ಸ್ವೀಕಾರ್ಯವೂ ಆಗಿದ್ದರೂ ಅನೇಕರಿಗೆ ಅನ್ನವು ದೇವರೆಂಬ ಭಾವನೆಯಿರುವದಿಲ್ಲ. ಅದು ಬ್ರಹ್ಮವೆಂದು ಉಪಾಸಿಸಲ್ಪಡಬೇಕೆಂಬುದಂತೂ ಬೆರಳೆಣಿಸುವಷ್ಟು ಜನರಿಗೆ ಮಾತ್ರವೇ ಗೊತ್ತಿರುತ್ತದೆ. ಹೀಗೇಕೆ? ಎಂಬ ಪ್ರಶ್ನೆಗೂ ಸರಿಯಾದ ಉತ್ತರವು ಸಿಗುವಂತಿಲ್ಲ. ಮುಖ್ಯವಾಗಿ ಚಿಕ್ಕಮಕ್ಕಳಿಂದಲೂ ಈ ಅನ್ನಪೂರ್ಣೆಯ ಉಪಾಸನೆಯನ್ನು ಹೇಳಿಕೊಟ್ಟಿದ್ದರೆ ಮುಂದೆ ಜೀವನದಲ್ಲೂ ಅದು ಎದ್ದು ಕಂಡೀತು. ಈಗಿನ ವ್ಯವಹಾರಕ್ರಮದಲ್ಲಿ ಇಂಥ ಭಾವನೆಗಳಿಗೆ ಅವಕಾಶವೇ ಇಲ್ಲದಂತಾಗಿ ಭಗವಂತನ ಸ್ಮರಣೆಯಿಲ್ಲದೆ ತಿಂದ ಅನ್ನವು ದುರ್ಬುದ್ಧಿಯನ್ನೇ ಉಂಟುಮಾಡಿ ಸ್ವಪರಘಾತುಕವಾಗುವಂಥ ಸನ್ನಿವೇಶವು ಬಂದಿದೆ. ಇದರ ಮುಂದಿನ ಪರಿಣಾಮವೆಂದರೆ ಅನ್ನವೇ ಕಣ್ಮರೆಯಾಗಿ ಪಾಪಿಗಳೆಲ್ಲರೂ ಪರಿತಪಿಸುವಂಥ ಸ್ಥಿತಿಯಾಗಲೂಬಹುದು. ಈಗಲಾದರೂ ನಾವು ಅನ್ನಬ್ರಹ್ಮೋಪಾಸನೆಗೆ ಮನಸ್ಸನ್ನು ಅಣಿಗೊಳಿಸಿಕೊಳ್ಳಬೇಡವೆ?

ಅಭ್ಯುದಯದೃಷ್ಟಿಯಿಂದಲೇ ಅನ್ನೋಪಾಸನೆಯು ಅತ್ಯವಶ್ಯಕವೆನಿಸಿದೆಯೆಂದು ಮೇಲೆ ತಿಳಿಸಿದ್ದಾಯಿತು. ಆದರೆ ಈ ಪ್ರಕರಣದಲ್ಲಿ ನಾರದರು ನಿಃಶ್ರೇಯಸವನ್ನು ಬಯಸಿ ಪ್ರಶ್ನಿಸುತ್ತಿರುವದರಿಂದ ಅನ್ನಬ್ರಹ್ಮಚಿಂತನೆಯು ಕಡೆಯ ಆ ಗುರಿಯುಳ್ಳದ್ದಾಗಿಯೇ ಪ್ರಸ್ತಾಪಿಸಲ್ಪಟ್ಟಿದೆ. ಅನ್ನವನ್ನು ತಿನ್ನುವದಕ್ಕಾಗಿಯೇ ಬದುಕಿರಬೇಕಾಗಿಲ್ಲ, ಬದುಕಿರುವದಕ್ಕಾಗಿ ಅನ್ನವನ್ನು ತಿನ್ನಬೇಕು. ಬದುಕಿನ ಗುರಿಯಾದರೊ, ಆನಂದ, ಶಾಂತಿ, ಕ್ಷೇಮಗಳ ಪ್ರಾಪ್ತಿಯೆಂದು ಹೇಳಬಹುದು. ಅವುಗಳು ಆತ್ಯಂತಿಕವಾಗಿ ನಿತ್ಯವಾಗಿ ದೊರಕಿರುವ ಸ್ಥಿತಿಯನ್ನೇ ಮೋಕ್ಷವೆಂದೂ ಪರಮಪುರುಷಾರ್ಥವೆಂದೂ ಕರೆಯಲಾಗಿದೆ. ಆದ್ದರಿಂದ ಅನ್ನದಿಂದ ಆನಂದದ ಎಡೆಗೆ ಸಾಗುವ ಹಾದಿಯೇ ಅನ್ನೋಪಾಸನೆಯು. ಅನ್ನವನ್ನು ತಿಂದವನು ಒಳ್ಳೆಯ ಕೆಲಸವನ್ನು ಮಾಡಬೇಕು. ಒಳ್ಳೆಯ ಆಲೋಚನೆಯನ್ನೂ ಮಾಡಬೇಕು. ಅನಂತರ ಏಕಾಗ್ರತೆಯನ್ನು ಸಾಧಿಸಬೇಕು. ಅನಂತರ ಶ್ರದ್ಧಾ, ಮೇಧಾ, ಮನೀಷಾ, ಶಾಂತಿ, ಸ್ಮರಣೆ, ವಿಜ್ಞಾನ, ಆತ್ಮಪ್ರಾಪ್ತಿ ಆನಂದಗಳನ್ನೂ ಒಂದೊಂದಾಗಿ ಸಾಧಿಸಬೇಕು. ಹೀಗೆ ಅನ್ನದಾನಮಾಡಿದವನು ಉಳಿದೆಲ್ಲವನ್ನೂ ದಾನಮಾಡಿದವನಾಗುವನೆಂದು ತೈತ್ತಿರೀಯೋಪನಿಷತ್ತಿನಲ್ಲಿದೆ. ಅನ್ನವು ಈ ಅರ್ಥದಲ್ಲಿ ಬ್ರಹ್ಮವೆಂದು ಚಿಂತಿಸಲು ಸಂಪೂರ್ಣವಾಗಿ ತಕ್ಕದ್ದೆಂದೇ ಅಯಿತು.

ಈಗ ಅನ್ನಕ್ಕಿಂತ ಹೆಚ್ಚಿನ ತತ್ತ್ವವು ಇದೆಯೆ? ಎಂಬ ನಾರದರ ಪ್ರಶ್ನೆಗೆ ಉತ್ತರವಾಗಿ ಸನತ್ಕುಮಾರರು 'ಅಪ್ಪು ಅನ್ನಕ್ಕಿಂತ ದೊಡ್ಡದು' ಎಂದು ತಿಳಿಸಿ ಅದನ್ನು 'ಬ್ರಹ್ಮವೆಂದು ಉಪಾಸನೆಮಾಡು' ಎಂದಿರುತ್ತಾರೆ. ಅಪ್ ಎಂದರೆ ನೀರು. ಅನ್ನಕ್ಕಿಂತ

ನೀರು ಹೆಚ್ಚಿನದೆಂಬುದು ಸಾಮಾನ್ಯರಿಗೂ ತಿಳಿದಿದೆ. ಊಟವಿಲ್ಲದೆ ಕೆಲವು ದಿನಗಳು ಬದುಕಿರಬಹುದು. ಎಷ್ಟೋ ಜನ ರೋಗಿಗಳು ಇದಕ್ಕೆ ಉದಾಹರಣೆ. ಆದರೆ ನೀರಿಲ್ಲದೆ ಬದುಕುವದು ಸಾಧ್ಯವಾಗುವದಿಲ್ಲ. ನೀರು ಪ್ರಾಣಾಧಾರವಾಗಿದೆ. ಉಪವಾಸಸತ್ಯಾಗ್ರಹ ಮಾಡುವವರು ಕೂಡ ನೀರನ್ನು ಕುಡಿದುಕೊಂಡೇ ಜೀವಿಸಿರುತ್ತಾರೆ. ಸ್ಥಾವರ ಜಂಗಮಪ್ರಾಣಿಗಳೆಲ್ಲಕ್ಕೂ ನೀರೇ ಜೀವನಾಧಾರವು. ನೀರಿಲ್ಲದೆ ಅನ್ನವು ಬೆಳೆಯುವದಿಲ್ಲ. ಆದ್ದರಿಂದ ನೀರನ್ನು ಬ್ರಹ್ಮವೆಂದರೆ ತಪ್ಪಾಗಲಾರದು. ಶಾಸ್ತ್ರೀಯದೃಷ್ಟಿಯಿಂದಲೂ ನೀರನ್ನು ಗಂಗೆಯೆಂದು ಪೂಜಿಸುತ್ತೇವೆ. ಯಾವದೇ ದೇವತೆಯನ್ನು ಪೂಜಿಸುವಾಗಲೂ ಪಾತ್ರೆಯಲ್ಲಿ ನೀರನ್ನು ತುಂಬಿಟ್ಟು ಆ ಕಲಶವನ್ನು ಆಯಾ ದೇವತೆಗೆ ಪ್ರತಿನಿಧಿಯಾಗಿ ಭಾವಿಸಿ ಪೂಜಿಸುವೆವು. ವೇದದಲ್ಲಿ 'ವಿಶ್ವಾಭೂತಾನ್ಯಾಪಃ' (ಎಲ್ಲಾ ಪ್ರಾಣಿಗಳೂ ಜಲದ ಮೂಲವುಳ್ಳವರೇ) ಎಂದೂ 'ಸರ್ವಾ ದೇವತಾ ಆಪಃ' (ದೇವತೆಗಳೆಲ್ಲರೂ ಜಲರೂಪರೇ) ಎಂದು ನೀರನ್ನು ಸ್ತೋತ್ರಮಾಡಿದೆ. ದೇವರಿಗೆ ಅಭಿಷೇಕಮಾಡುವದಕ್ಕೂ ಪಿತೃಗಳಿಗೂ ಋಷಿಗಳಿಗೂ ತರ್ಪಣವನ್ನು ಕೊಡುವದಕ್ಕೂ ನೀರು ಬೇಕು. ಸ್ನಾನಪಾನಾದಿಗಳಿಗಂತೂ ನೀರಿರಲೇಬೇಕು. ದೇವತೋಪಚಾರಗಳ ಸಂದರ್ಭದಲ್ಲಿ ಯಾವದೇ ದ್ರವ್ಯವು ಕೊರತೆಯಾದರೆ ನೀರಿನಿಂದಲೇ ಪೂರೈಸುವದುಂಟು. ಹೀಗೆ ನೀರು ಬ್ರಹ್ಮವನ್ನು ಉಪಾಸನೆಮಾಡಲು ಉತ್ತಮವಾದ ಪ್ರತೀಕವಾಗಿದೆ.

ಲೌಕಿಕವಾಗಿಯೂ ನೀರಿನ ಉಪಯೋಗವು ಎಲ್ಲರಿಗೂ ತಿಳಿದಂತೆಯೇ ಬೇಸಾಯ, ಮನೆಗಳ ನಿರ್ಮಾಣ, ಕಾರ್ಖಾನೆಗಳ ಕೆಲಸಗಳು– ಮುಂತಾದವುಗಳಿಗೂ ವಿದ್ಯುಚ್ಛಕ್ತಿಯ ಉತ್ಪಾದನೆ ನೈರ್ಮಲ್ಯ, ಪೌರಜೀವನಕ್ಕೂ ಅತ್ಯವಶ್ಯಸಾಮಗ್ರಿಯಾಗಿದೆ. ಇತ್ತೀಚೆಗೆ ಮಳೆ ಬಾರದೆ ಜಲಮೂಲಗಳೆಲ್ಲ ಬತ್ತಿಹೋಗಿ ಜನರಿಗೂ ಪ್ರಾಣಿಗಳಿಗೂ ತೊಂದರೆಯಾಗಿದೆ. ನೀರನ್ನು ಧಾರಾಳವಾಗಿ ಬಳಸುತ್ತಿದ್ದಾಗ ಅದರ ವಿಷಯಕ್ಕೆ ಯಾರಿಗೂ ದೇವತಾಭಾವನೆಯೇ ಬಂದಿರಲಾರದು. ಈಗಲೂ ಜಲಾಭಾವಕ್ಕಾಗಿ ಯಾರು ಯಾರನ್ನೋ ದೂಷಿಸುವದು, ಆಕ್ಷೇಪಿಸುವದು– ನಡೆದಿದೆಯೇ ಹೊರತು ಜಲದೇವತೆಯ ಕೋಪವನ್ನು ಉಪಶಮನಗೊಳಿಸುವಂಥ ಭಕ್ತಿಶ್ರದ್ಧೆಗಳು ಇನ್ನೂ ಜನರಲ್ಲಿ ಉಂಟಾಗಿಲ್ಲ. ಹೀಗಾಗಲು ಕಾರಣವೇನೆಂದರೆ ಅಧ್ಯಾತ್ಮವಿದ್ಯೆಯಿಲ್ಲದಿರುವದು. ಕೆಲವರು ನಾಸ್ತಿಕರಂತೂ ಪರ್ಜನ್ಯಜಪ, ಜಲದೇವತಾಸ್ತೋತ್ರರೂಪವಾದ ವೇದಪಾರಾಯಣಾದಿಗಳ ವಿಷಯಕ್ಕೂ ಗೇಲಿ ಮಾಡುವದನ್ನು ಕಲಿತಿದ್ದಾರೆಯೇ ಹೊರತು ನೀರಿನ ಸಮಸ್ಯೆಯನ್ನೇನೂ ಪರಿಹರಿಸಲು ಶಕ್ತರಾಗಿಲ್ಲ. ಈಗಲಾದರೂ ನಾವು ಜಲಬ್ರಹ್ಮವನ್ನು ಧ್ಯಾನಿಸೋಣ.

––––––

# ತೇಜೋವಾಯುರಾಕಾಶಬ್ರಹ್ಮಗಳು

**ಓಮ್॥ ತೇಜೋ ವಾವ ಅದ್ಭ್ಯೋ ಭೂಯಃ......ತೇಜ ಉಪಾಸ್ಸ್ವ ॥7–11–1**
**ಆಕಾಶೋ ವಾವ ತೇಜಸೋ ಭೂಯಾನ್ ......ಆಕಾಶಮುಪಾಸ್ಸ್ವ ॥ 7–12–1**

**ಭಾವಾರ್ಥ:–** ತೇಜಸ್ಸು ನೀರಿಗಿಂತ ಹೆಚ್ಚಿನದು; ಆದ್ದರಿಂದ ತೇಜಸ್ಸನ್ನು ಬ್ರಹ್ಮವೆಂದು ಚಿಂತಿಸುವವನಾಗು; (ಇನ್ನು) ಆಕಾಶವು ತೇಜಸ್ಸಿಗಿಂತಲೂ ಹೆಚ್ಚಿನದು; ಆದ್ದರಿಂದ ಆಕಾಶವನ್ನು ಬ್ರಹ್ಮವೆಂದು ಉಪಾಸನೆಮಾಡು.

(ನಾರದರಿಗೆ ಭೂಮಬ್ರಹ್ಮವನ್ನು ಉಪದೇಶಿಸುವ ಸಂದರ್ಭದಲ್ಲಿ ವ್ಯವಹಾರದೃಷ್ಟಿಯಿಂದ ಒಂದಕ್ಕಿಂತ ಮತ್ತೊಂದು ದೊಡ್ಡದೆನಿಸಿರುವ ಪಂಚಮಹಾಭೂತಗಳ ವಿವರವನ್ನು ಕೊಟ್ಟು ಸನತ್ಕುಮಾರರು ಅವುಗಳನ್ನು ಹೆಚ್ಚುಹೆಚ್ಚಿನ ಮಹಿಮೆಯಿಂದ ಕಂಡುಕೊಂಡು ಬ್ರಹ್ಮವೆಂದು ಚಿಂತಿಸುವಂತೆ ತಿಳಿಸಿರುತ್ತಾರೆ.)

## 55. ತೇಜಆದಿ ಬ್ರಹ್ಮಗಳ ಉಪಾಸನೆ.

ಸನತ್ಕುಮಾರರು ನಾರದರಿಗೆ ಉಪದೇಶಿಸುತ್ತಿರುವ ಭೂಮವಿದ್ಯಾಪ್ರಕರಣದಲ್ಲಿ ಈಗ ತೇಜಸ್ಸು, ವಾಯು–ಆಕಾಶಗಳ ಉಪಾಸನೆಗಳನ್ನು ಪ್ರಸ್ತಾಪಿಸಲಾಗಿದೆ. ಇದರ ಹಿಂದೆ ನೀರನ್ನು ಬ್ರಹ್ಮವೆಂದು ಚಿಂತಿಸುವದನ್ನು ತಿಳಿಸಲಾಗಿತ್ತು. ಅನಂತರ ನಾರದರು 'ನೀರಿಗಿಂತ ಹೆಚ್ಚಿನದು ಇದೆಯೊ?' ಎಂದು ಕೇಳಿದ್ದರಿಂದ ಈಗ ತೇಜೋಬ್ರಹ್ಮವನ್ನು ಉಪದೇಶಿಸಲಾಗಿದೆ. ತೇಜಸ್ಸು ಎಂಬುದು ಉಷ್ಣ ಮತ್ತು ಪ್ರಕಾಶಗಳೆಂಬ ಗುಣಗಳುಳ್ಳ ಮಹಾಭೂತವು. ಇದು ಜಲಕ್ಕಿಂತ ದೊಡ್ಡದು. ಇದರಲ್ಲಿ ಗಂಧರಸಗಳಿಲ್ಲ. ಶಬ್ದಸ್ಪರ್ಶ ರೂಪಗಳು ಮಾತ್ರ ಇದ್ದುಕೊಂಡಿವೆ. ಆದ್ದರಿಂದ ಜಲಕ್ಕಿಂತ ಸೂಕ್ಷ್ಮವಾಗಿದೆ. ಇದರ ಉಪಾಸನೆಯನ್ನು ಕುರಿತು ಈಗ ವಿಚಾರ ಮಾಡೋಣ.

ಎಲ್ಲಕ್ಕಿಂತಲೂ ಮಿಗಿಲಾದುದು ಬ್ರಹ್ಮವೆಂದು ವೇದಾಂತಶಾಸ್ತ್ರದಲ್ಲಿ ಹೇಳಿರುವದರಿಂದ ಪ್ರತಿಯೊಂದು ಪರ್ಯಾಯದಲ್ಲಿಯೂ ನಾರದರು 'ಇದಕ್ಕಿಂತ ಹೆಚ್ಚಿನದು ಇದೆಯೆ?' ಎಂದು ಕೇಳುತ್ತಾಹೋಗಿರುತ್ತಾರೆ. ಆದ್ದರಿಂದ ಮುಂದು ಮುಂದಿನ ವಸ್ತುವು ಹಿಂದುಹಿಂದಿನದನ್ನು ಒಳಗೊಂಡು ಇನ್ನೂ ಇದೆ–ಎಂದಾಗುವಲ್ಲಿ ಮಹತ್ತರವೆನಿಸಲೇಬೇಕಾಗಿದೆ. ಪ್ರಕೃತದಲ್ಲಿ ತೇಜಸ್ಸು ನೀರಿಗಿಂತ ಮಿಗಿಲಾದುದು. ಹೇಗೆಂದರೆ ನೀರು ಹುಟ್ಟುವ ಮುಂಚೆಯೇ ತೇಜಸ್ಸು ಇದ್ದುಕೊಂಡಿರುತ್ತದೆ. ನೀರು

ಲಯವಾದಾಗಲೂ ತೇಜಸ್ಸಾಗಿಯೇ ಪರಿಣಾಮವಾಗುತ್ತದೆ. ಆದ್ದರಿಂದ ತೇಜಸ್ಸು ಕಾರಣವು, ನೀರು ಕಾರ್ಯವು–ಎಂದಭಿಪ್ರಾಯ. ಕಾರಣವು ಇದ್ದುಕೊಂಡಮೇಲೆಯೇ ಕಾರ್ಯವು ಹುಟ್ಟಬೇಕಾಗಿರುವದರಿಂದ ನೀರು ಮಳೆಯ ರೂಪದಿಂದ ಭೂಮಿಗೆ ಬೀಳುವ ಮುಂಚೆ ಸೆಕೆಯಾಗುತ್ತದೆ. ಏಕೆಂದರೆ ತೇಜಸ್ಸು ವಾಯುವನ್ನು ಆಕಾಶದಲ್ಲಿ ತಡೆದುತಡೆದು ತಾನು ವ್ಯಾಪಿಸುವದರಿಂದ ಭೂಮಿಯ ಮೇಲಿದ್ದವರಿಗೆ ಶಾಖವು ಅನುಭವವಾಗುತ್ತದೆ. ಇದು ಮಳೆಯು ಬರುವದರ ಸೂಚನೆಯಾಗಿದೆ. ಲೌಕಿಕರು ಕೂಡ ''ಈ ದಿನ ಬಹಳ ಸೆಕೆಯಾಗುತ್ತಿದೆ; ಮಳೆಯು ಬರಲಿದೆ'' ಎನ್ನುವರು. ಆದರೆ ಯಾವಾಗಲೂ ಸೆಕೆಯ ಹವೆಯಿಂದಲೇ ಕೂಡಿರುವ ಜಾಗಗಳನ್ನು ಕುರಿತು ಈ ರೀತಿ ಹೇಳಿರುವದಿಲ್ಲ. ಎಲ್ಲಿ ಹವೆಯು ಸಮಶೀತೋಷ್ಣವಾಗಿದ್ದು ಋತುಮಾನದಿಂದ ಸೆಕೆಯು ಅಧಿಕವಾಗಿ ಕಂಡು ಬರುವದೋ ಅಂಥ ಸ್ಥಳದಲ್ಲಿ ಮಳೆಬರಲಿದೆ ಎಂದು ಅನುಭವಿಗಳ ಹೇಳಿಕೆಯಿದೆ. ಇದರಿಂದ ತಿಳಿಯುವದೇನೆಂದರೆ–ತೇಜಸ್ಸೇ ಮೊದಲು ಕಾಣಿಸಿಕೊಂಡು ಅನಂತರ ನೀರನ್ನು ಸೃಷ್ಟಿಸುತ್ತದೆ. ನಮ್ಮ ದೇಹದಲ್ಲಿಯೂ ಸೆಕೆಯ ಪರಿಣಾಮವು ಹೆಚ್ಚಾದರೆ ಬೆವರು ಹರಿಯುವದು ಪ್ರಸಿದ್ಧವಾಗಿದೆ. ಈ ಕಾರಣದಿಂದ ತೇಜಸ್ಸು ಜಲಕ್ಕಿಂತ ದೊಡ್ಡದೆಂದೂ ಅದಕ್ಕೆ ಕಾರಣವೆಂದೂ ತಿಳಿಯಬೇಕು.

ತೇಜಸ್ಸನ್ನು ಬ್ರಹ್ಮವೆಂದು ಚಿಂತಿಸುವಾಗ ಅದರ ಮತ್ತೊಂದು ಗುಣವನ್ನೂ ವಿಚಾರಮಾಡಬಹುದಾಗಿದೆ. ಬೆಳಕು ಎಂಬಿದೇ ಆ ಗುಣವು. ತೇಜೋದ್ರವ್ಯಗಳಲ್ಲೆಲ್ಲ ಸೂರ್ಯನು ಪರಮಾವಧಿಯ ಉಷ್ಣಾಂಶವೂ ಬೆಳಕೂ ಉಳ್ಳವನಾಗಿರುವನು. ಇನ್ನುಳಿದ ಚಂದ್ರ, ಗ್ರಹತಾರಾದಿಗಳು, ವಿದ್ಯುತ್ತು, ಬೆಂಕಿ–ಮೊದಲಾದವು ತಮ್ಮ ತಮ್ಮ ಸ್ವರೂಪದಿಂದ ಸೂರ್ಯನಿಗಿಂತ ಕಡಿಮೆಯಾದ ಉಷ್ಣಾಂಶವೂ ಬೆಳಕೂ ಉಳ್ಳದ್ದಾಗಿರುವವು. ಉಷ್ಣವು ಎಲ್ಲಾ ಪ್ರಾಣಿಗಳ ದೇಹದಲ್ಲಿಯೂ ಇರುವದು. ಇದು ಇಲ್ಲವಾದರೆ ಜೀವನವೇ ಕೊನೆಗಾಣುವದು. ಹಾಗೆಯೇ ಅದು ಇರಬೇಕಾದ ಪ್ರಮಾಣಕ್ಕಿಂತ ಹೆಚ್ಚಾದರೂ ಪ್ರಾಣಿಗಳಿಗೆ ಹಿಂಸೆಯಾಗುವದು. ಉದಾಹರಣೆಗೆ ಮನುಷ್ಯನ ದೇಹದ ಉಷ್ಣಾಂಶವು ಸ್ವಾಭಾವಿಕ ಸ್ಥಿತಿಯನ್ನು ಮೀರಿದರೆ 'ಜ್ವರ'ವೆನ್ನುವರು. ಹೀಗೆ ತೇಜಸ್ಸಿನ ಮಹಿಮೆಯು ಅಪಾರವಾಗಿರುವದು. ಬೆಳಕಿಲ್ಲವಾದರೆ ಯಾವದೂ ಬೆಳೆಯಲಾರದು. ವ್ಯವಹಾರವೂ ಸಾಗುವದಿಲ್ಲ. ಬೆಳಕು ಹೊರಗಡೆಯ ವ್ಯವಹಾರಗಳಿಗೆ ಅವಶ್ಯವಾಗಿರುವಂತೆಯೇ ಜ್ಞಾನರೂಪದಿಂದ ಒಳಗೂ ಇದ್ದುಕೊಂಡು ಮಾನವನ ಉನ್ನತಿಗೆ ಕರಣವಾಗಿರುವದು. ಬೆಳಕಿನ ವೇಗವೂ ಅಪಾರವಾದುದು. ಭೌತಿಕಶಾಸ್ತ್ರಜ್ಞರು ಬೆಳಕಿನ ವಿಷಯವಾಗಿ ಅನೇಕ ಸಂಶೋಧನೆಗಳನ್ನು ಮಾಡಿ ಜನರಿಗೆ ಅನುಕೂಲಗಳನ್ನು ಕಲ್ಪಿಸಿಕೊಟ್ಟಿರುತ್ತಾರೆ. ಇನ್ನೂ ಅದರ ವಿಷಯಕ್ಕೆ ಸಂಶೋಧನೆಗಳು ನಡೆಯುತ್ತಲೇ ಇವೆ. ಅಂತೂ ಬೆಳಕಿನರೂಪದಿಂದಲೂ ಔಷ್ಣ್ಯರೂಪದಿಂದಲೂ ಜಗತ್ತನ್ನು

ಕಾಪಾಡುತ್ತಿರುವ ತೇಜೋದ್ರವ್ಯವನ್ನು ಬ್ರಹ್ಮವೆಂದು ಚಿಂತಿಸುವದರಲ್ಲಿ ಆಶ್ಚರ್ಯವೇನಿದ್ದೀತು? ಅದು ಆಧ್ಯಾತ್ಮಿಕದೃಷ್ಟಿಯಿಂದಲೂ ಪೂಜ್ಯವೇ ಆಗಿದೆ. ಬಹಿರಂಗವಾಗಿ ಜ್ಯೋತಿಯನ್ನು 'ದೇವತೆ'ಯೆಂದೇ ನಮ್ಮಲ್ಲಿ ಪೂಜಿಸಲಾಗುತ್ತದೆ. ಹಿಂದಿನ ಕಾಲದಲ್ಲಿ ಸಂಜೆಯ ವೇಳೆಗೆ ಮನೆಗಳಲ್ಲಿ ದೀಪಗಳನ್ನು ಬೆಳಗಿದ ಕೂಡಲೆ ಕೈಮುಗಿದು ನಮಸ್ಕರಿಸುತ್ತಿದ್ದರು. ''ದೀಪಂ ಜ್ಯೋತಿಃ ಪರಂ ಬ್ರಹ್ಮ'' ಎಂಬ ಪದ್ಯವನ್ನೂ ಹೇಳುತ್ತಿದ್ದರು. ಈಗ ವಿದ್ಯುದ್ದೀಪಗಳು ಬಳಕೆಗೆ ಬಂದಿರುವದು, ಹಗಲಿನಲ್ಲೂ ದೀಪಗಳ ಬೆಳಕಿನಲ್ಲಿ ಪಟ್ಟಣಗಳಲ್ಲಿ ವ್ಯವಹಾರಮಾಡುವದು, ಇತ್ಯಾದಿ ಕಾರಣಗಳಿಂದ ಈ ಬ್ರಹ್ಮಭಾವನೆಯೂ ಅನುಸಂಧಾನವೂ ಮರೆಯಾಗುತ್ತಿದೆ. ಆದರೂ ಮನೆಗಳಲ್ಲಿ ದೇವರ ಕೋಣೆಯಲ್ಲಿ ಹಾಗೂ ದೇವಾಲಯಗಳಲ್ಲಿ ಈಗಲೂ ಉಳಿದ ದೀಪಗಳಿದ್ದರೂ ಎಣ್ಣೆಯ ದೀಪಗಳನ್ನು ಬೆಳಗಿಸಿಯೇ ಪೂಜಾದಿಗಳನ್ನು ಪ್ರಾರಂಭಿಸುತ್ತಾರೆ. ಯಾವದಾದರೊಂದು ಉದ್ಯೋಗ, ಸಂಘಸಂಸ್ಥೆಗಳ ಹಾಗೂ ಸಮಾರಂಭಗಳ ಉದ್ಘಾಟನಾಸಮಯಕ್ಕೆ ದೀಪಜ್ಯೋತಿಯನ್ನು ಬೆಳಗಿಸಿಯೇ ಆರಂಭಿಸುತ್ತಾರೆ. ಆದ್ದರಿಂದ ತೇಜಸ್ಸನ್ನು ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ದೇವರೆಂದು ಭಾವಿಸಿರುವದಕ್ಕೆ ಅದನ್ನು ಬ್ರಹ್ಮವೆಂದು ಉಪಾಸಿಸಬೇಕೆಂದು ಉಪನಿಷತ್ತಿನಲ್ಲಿ ಹೇಳಿರುವದೇ ಮೂಲವಾಗಿದೆ.

ಈಗ ವಾಯುವನ್ನು ಬ್ರಹ್ಮವೆಂದು ಚಿಂತಿಸಬೇಕೆಂದು ಇಲ್ಲಿ ಹೇಳಿರುವದನ್ನು ನೋಡೋಣ. ಸನತ್ಕುಮಾರರು ಇಲ್ಲಿ ಉಪದೇಶಿಸುವಾಗ ವಾಯುಸಹಿತವಾದ ತೇಜಸ್ಸನ್ನೇ ಬ್ರಹ್ಮವೆಂದು ಚಿಂತಿಸುವಂತೆ ಕೂಡಿಸಿಯೇ ಹೇಳಿರುತ್ತಾರೆ. ಏಕೆಂದರೆ ವಾಯುಸಹಿತವಾದ ತೇಜಸ್ಸೇ ನೀರಿನ ಸೃಷ್ಟಿಗೆ ಕಾರಣವಾಗಿದೆ. ''ವಾಯುಭಾರ ಕುಸಿತ''ದಿಂದ (ಸೈಕ್ಲೋನ್) ಮಳೆಯು ಬರುವದು ಈಗ ಎಲ್ಲರಿಗೂ ಗೊತ್ತಿದೆಯಷ್ಟೆ! ಅಂತೂ ವಾಯುವು ತೇಜಸ್ಸನ್ನು ತನ್ನ ಅಧೀನದಲ್ಲಿಟ್ಟುಕೊಂಡು ಜಗತ್ತಿನ ಆಗುಹೋಗುಗಳಿಗೆ ಮೂಲವಾಗಿದೆ. ಒಂದು ರೀತಿಯಿಂದ ನೋಡಿದರೆ ತೇಜಸ್ಸಿಗಿಂತ ವಾಯುವು ಹೆಚ್ಚಿನದು. ಹಾಗೂ ಸೂಕ್ಷ್ಮವಾದುದು. ವಾಯುವಿನಲ್ಲಿ ಶಬ್ದಸ್ಪರ್ಶಗಳೆಂಬ ಗುಣದ್ವಯಗಳು ಮಾತ್ರವಿದ್ದು ಅಮೂರ್ತದ್ರವ್ಯವೆನಿಸಿರುವದು. ಆದ್ದರಿಂದಲೇ ಅದು ಕಣ್ಣಿಗೆ ಕಾಣಿಸುವದಿಲ್ಲ. ವಾಯುವು ಸೂರ್ಯಚಂದ್ರಾದಿಗಳ ಚಲನೆಗೂ ಜಗತ್ತಿನ ಬದುಕಿಗೂ ಮೂಲಭೂತವಾದ ಪದಾರ್ಥವಾಗಿದೆ. ಅಧ್ಯಾತ್ಮದೃಷ್ಟಿಯಿಂದ ದೇವತೆಯಾಗಿದ್ದು ''ಸಂವರ್ಗ''ವೆನಿಸಿದೆ. ಸಂವರ್ಜನಗುಣವು ಇದರ ಸ್ವಭಾವವು. ಪ್ರಲಯಕಾಲದಲ್ಲಿ ತನ್ನಲ್ಲಿ ಎಲ್ಲವನ್ನೂ ಇದು ಅಡಗಿಸಿಟ್ಟುಕೊಳ್ಳುವದು. ಆದ್ದರಿಂದ ಈ ಹೆಸರು ಬಂದಿರುತ್ತದೆ. ಪ್ರಾಣರೂಪದಿಂದ ಶರೀರವನ್ನು ಹೊಕ್ಕು ಉಸಿರಾಡುವ ಕ್ರಿಯೆಯ ಮೂಲಕ ಇದು ಪ್ರಾಣಿಗಳ ಆಯುಷ್ಯವೆನಿಸಿರುತ್ತದೆ. ಇಂಥ ದೇವತೆಯನ್ನು ಬ್ರಹ್ಮವೆಂದು ಚಿಂತಿಸುವದು ಯುಕ್ತವೇ ಆಗಿದೆ.

ಅಧ್ಯಾತ್ಮಸಾಧಕರು ''ವಾಯುಜಯ''ವನ್ನೇ ಗುರಿಯಾಗಿಟ್ಟುಕೊಂಡು ಮುಕ್ತಿಗಾಗಿ ಪ್ರಯತ್ನಿಸುತ್ತಾರೆ. ''ವಾಯುನಿರೋಧ''ವು ಯೋಗಶಾಸ್ತ್ರವೆಂಬ ಹೆಸರಿನಿಂದ ಈಗ ದೇಶ ವಿದೇಶಗಳಲ್ಲೆಲ್ಲ ಪ್ರಸಿದ್ಧವಾಗಿದೆ. ಇದರಿಂದ ಅನೇಕ ರೋಗಗಳು ಪರಿಹಾರ ವಾಗುತ್ತವೆಯೆಂದೂ ಯೋಗರಹಸ್ಯವನ್ನು ಬಲ್ಲವರು ಹೇಳುತ್ತಿದ್ದಾರೆ.

ವಾಯುವಿನ ಸಂಚಾರವನ್ನು ಕ್ರಮಪಡಿಸುವದರಿಂದ ಹಾಗೂ ಸ್ವಲ್ಪ ಕಾಲ ತಡೆಯುವದರಿಂದ ಇಂದ್ರಿಯಮನೋಬುದ್ಧಿಗಳನ್ನೆಲ್ಲ ಸ್ವಾಧೀನಪಡಿಸಿಕೊಳ್ಳಬಹುದಾಗಿದೆ. ಮುಂದೆ ಇದು ಚಿತ್ತಸಮಾಧಾನಕ್ಕೆ ಉಪಯೋಗವಾಗುವದು. ಋಷಿಮುನಿಗಳು ಈ ವಾಯುನಿರೋಧದ ಬಲದಿಂದಲೇ ಧೀರ್ಘಾಯುಷ್ಮಂತರಾಗಿ ಬಾಳುತ್ತಿದ್ದುದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಹೀಗೆ ಕ್ರಿಯಾಶಕ್ತಿಪ್ರಧಾನವಾದ ಈ ತತ್ತ್ವವು ಮಾನವನ ಉನ್ನತಿಗೆ ಸಾಧನವಾಗಿರುವದರಿಂದ ಜೀವಮಾನದಲ್ಲಿ ನಾವು ಪ್ರಪ್ರಥಮವಾಗಿ ವಾಯುವನ್ನು ಗೌರವಿಸಬೇಕು. ಆ ದೇವತೆಯನ್ನು ಆರಾಧಿಸಬೇಕು. ಆಧಿದೈವಿಕವಾಗಿ ವಾಯುವು ಅಗ್ನಿ, ಪರ್ಜನ್ಯ, ಪೃಥಿವೀ–ಮುಂತಾದ ದೇವತೆಗಳನ್ನೆಲ್ಲ ಮೀರಿದವನಾಗಿದ್ದು ಆ ಎಲ್ಲ ದೇವತೆಗಳಿಂದಲೂ ಪೂಜ್ಯನಾಗಿರುವನು. ಭೌತಿಕವಾಗಿಯೂ ಸದಾ ಚಲಿಸುವ ಸ್ವಭಾವದ ವಾಯುವು ವಿಶ್ರಾಂತಿಯಿಲ್ಲದ ಹಾಗೂ ಅಸ್ತಮಾನವಿಲ್ಲದ ದೇವತೆಯಾಗಿ ಕಂಡುಕೊಳ್ಳಲ್ಪಟ್ಟಿದೆ. ಇಂಥ ವಾಯುವನ್ನು ಬ್ರಹ್ಮವೆಂದು ಅನುಸಂಧಾನಮಾಡುವಂತೆ ಇಲ್ಲಿ ತಿಳಿಸಿದೆ.

ಈಗ ನಾರದರು ಮುಂದುವರೆದು 'ವಾಯುವಿಗಿಂತಲೂ ಹೆಚ್ಚಿನದು ಇದೆಯೊ?' ಎಂದು ಕೇಳಿದ್ದಕ್ಕೆ ಸನತ್ಕುಮಾರರು 'ಆಕಾಶವನ್ನು ಬ್ರಹ್ಮವೆಂದು ಉಪಾಸನೆಮಾಡು' ಎಂದು ತಿಳಿಸಿರುತ್ತಾರೆ. ಆದ್ದರಿಂದ ಆಕಾಶದ ಮಹಿಮೆಯನ್ನು ಈಗ ತಿಳಿಯೋಣ. ಕತ್ತೆತ್ತಿ ನೋಡಿದರೆ ಹಗಲಿನಲ್ಲಿ ಸೂರ್ಯನ ಬೆಳಕು, ಕಿರಣಗಳ ಪ್ರಸಾರ, ಹಕ್ಕಿಪಕ್ಷಿಗಳ ಓಡಾಟ, ಮೋಡಗಳ ಚಲನೆಗಳು ಆಕಾಶದಲ್ಲಿ ಕಂಡುಬರುವವು. ರಾತ್ರಿಯಲ್ಲಿ ನಕ್ಷತ್ರಗಳು, ಚಂದ್ರನ ಬೆಳದಿಂಗಳು, ತಂಪು–ಅನುಭವವಾಗುವದು. ಇದಕ್ಕಿಂತ ಒಳದೃಷ್ಟಿಯಿಂದ ನೋಡಿದಾಗ ಅಮೂರ್ತವಾದ ಆಕಾಶದಲ್ಲಿಯೇ ವಾಯು–ಮುಂತಾದ ಮಹಾಭೂತ ಗಳೂ ಸೃಷ್ಟಿಯೂ ಅಡಗಿರುವದು ಗೊತ್ತಾಗುವದು. ಹಾಗೆಯೇ ಆಕಾಶವು ತುದಿ ಮೊದಲಿಲ್ಲದ ಅನಂತವಾದ ತತ್ತ್ವವೆಂದೂ ಕಂಡುಬರುವದು. ಕೇವಲಾಕಾಶವನ್ನೇ ಚಿಂತಿಸುತ್ತಿದ್ದರೆ ಅದರ ಸ್ವಚ್ಛತೆ, ವ್ಯಾಪಕತೆ, ವೈಶಾಲ್ಯ, ಅದಕ್ಕೆ ಹೋಲಿಸಿದರೆ ನಮ್ಮ ಅಲ್ಪತ್ವ–ಇವು ವೇದ್ಯವಾಗುವವು. ಹಾಗೆಯೇ ಆಧ್ಯಾತ್ಮಿಕವಾಗಿ ಹೃದಯಾಕಾಶವನ್ನು ನೆನೆದರೆ ಅಲ್ಲಿ ಯಾವ ಕಾಮಕ್ರೋಧಭಯಾದಿಗಳಾಗಲಿ, ಹುಟ್ಟುಸಾವುಗಳಾಗಲಿ ಕಂಡು ಬರುವದಿಲ್ಲ. ಶಬ್ದಮಾತ್ರಗುಣವುಳ್ಳ ಆಕಾಶವು ನಿರ್ಗುಣವೆಂದೇ ತೋರುವದು. ಎಷ್ಟೋ

ಜನ ಮಹಾತ್ಮರಿಗೆ ಆಕಾಶಧ್ಯಾನದಿಂದ ಸಮಾಧಿಯೇ ಬರುವದುಂಟು. ಆಕಾಶವನ್ನು ತುಂಡುಮಾಡಲಾಗುವದಿಲ್ಲ. ಉಪಾಧಿಯ ಸಂಬಂಧದಿಂದ ಮಡಕೆಯೊಳಗಿನ ಆಕಾಶ, ಕೋಣೆಯೊಳಗಿನ ಆಕಾಶ, ಊರೊಳಗಿನ ಆಕಾಶ, ಕೆರೆಯ ಬಯಲಾಕಾಶ–ಎಂದೆಲ್ಲ ವ್ಯವಹರಿಸಿದರೂ ಅದೆಲ್ಲ ಜನರು ಆಕಾಶದಲ್ಲಿ ಮಾಡಿರುವ ಆರೋಪಗಳೇ ಹೊರತು ಆಕಾಶದ ಸ್ವರೂಪವಲ್ಲ. ಇನ್ನು ಕೆಲವರು ಆಕಾಶವು ನೀಲವಾಗಿದೆ, ಕಪ್ಪಾಗಿದೆ–ಎಂದೂ ಹೇಳುತ್ತಾರೆ. ಅದು ಕೂಡ ಭ್ರಾಂತಿವ್ಯವಹಾರವೇ ಎಂಬುದು ನಿಜವನ್ನು ಬಲ್ಲವರಿಗೆ ಗೊತ್ತಿರುತ್ತದೆ. ಇಂಥ ಅಂತರಿಕ್ಷವನ್ನೆಲ್ಲ ವಿಷ್ಣುವು ತನ್ನ ಪಾದದಿಂದ ಅಳೆದುಬಿಟ್ಟನೆಂದೂ ತಾನೇ ಆಕಾಶವನ್ನೆಲ್ಲ ವ್ಯಾಪಿಸಿ 'ವಿಷ್ಣು' ಎಂಬ ಅನ್ವರ್ಥನಾಮವನ್ನು ಧರಿಸಿರುವನೆಂದೂ ಪುರಾಣಗಳಲ್ಲಿ ತಿಳಿಸಿದೆ. ಹೀಗೆ ಆಕಾಶದ ಮಹಿಮೆಯು ಅಪಾರವಾಗಿದೆ. ಆಕಾಶವಿಲ್ಲದೆ ಸುಖವಿಲ್ಲ, ವಿಶ್ರಾಂತಿಯಿಲ್ಲ, ಭೋಗಗಳು ಇಲ್ಲ. ಪಟ್ಟಣಗಳಲ್ಲಿ ಜಾಗವು ಕಿರಿದಾಗಿರುವಲ್ಲಿ ಜನರು ಪಡುವ ಪಾಡುಗಳನ್ನು ನೋಡಿದರೆ ಆಕಾಶದ ಅವಶ್ಯಕತೆಯು ಮನಗಂಡೀತು. ಜಾಗವಿಲ್ಲವಾದರೆ ಏನು ತಾನೆ ಮಾಡಲಾದೀತು? ಇಂಥ ಆಕಾಶವನ್ನೇ ಪುರಾಣಗಳಲ್ಲಿ ಶಿವನೆಂದೂ ಆಕಾಶಲಿಂಗವು ಚಿದಂಬರದಲ್ಲಿದೆಯೆಂದೂ ವರ್ಣಿಸಿದೆ. ಹೀಗೆ ಪಂಚಮಹಾಭೂತಗಳಲ್ಲಿ ಅತ್ಯಂತ ವ್ಯಾಪಕವೂ ಪರಬ್ರಹ್ಮದ ಚಿಂತನೆಗೆ ತಕ್ಕ ಉಪಾಧಿಯೂ ಆಗಿರುವ ಆಕಾಶವನ್ನು ಬ್ರಹ್ಮವೆಂದು ಉಪಾಸನೆಮಾಡು–ಎಂದು ಸನತ್ಕುಮಾರರು ತಿಳಿಸಿದ್ದಾರೆ. ಆಕಾಶರೂಪದಿಂದ ನಮ್ಮ ಜೀವನವನ್ನು ನಿರ್ವಹಿಸುತ್ತಿರುವ ಬ್ರಹ್ಮಕ್ಕೆ ನಾವು ವಂದನೆಗಳನ್ನು ಸಲ್ಲಿಸಬೇಡವೆ? ಇದೇ ಆಕಾಶೋಪಾಸನೆಯು.

---

## ಪ್ರಾಣಬ್ರಹ್ಮ

**ಓಮ್ ॥ ಪ್ರಾಣೋ ವಾವ ಆಶಾಯಾ ಭೂಯಾನ್ ಯಥಾ ವಾ ಅರಾ ನಾಭೌ ಸಮರ್ಪಿತಾ ಏವಮಸ್ಮಿನ್ ಪ್ರಾಣೇ ಸರ್ವಗ್ಂ ಸಮರ್ಪಿತಂ .............. ಪ್ರಾಣೋ ಹ ಪಿತಾ ...............ಪ್ರಾಣೋ ಬ್ರಾಹ್ಮಣಃ ॥ 7–15–1**

**ಭಾವಾರ್ಥ**: –ಪ್ರಾಣನೇ ಆಶೆಗಿಂತ ಹೆಚ್ಚಿನವನು. ಹೇಗೆ ಹಾರೆಕೋಲುಗಳು ಗುಂಬದಲ್ಲಿ ಸೇರಿಕೊಂಡಿರುತ್ತವೆಯೋ ಹಾಗೆ ಈ ಪ್ರಾಣನಲ್ಲಿ ಎಲ್ಲವೂ ಸೇರಿಕೊಂಡಿರುತ್ತದೆ. ಪ್ರಾಣನೇ ತಂದೆಯು; ಪ್ರಾಣನೇ ಬ್ರಾಹ್ಮಣನು.

(ಸನತ್ಕುಮಾರರು ನಾರದರಿಗೆ ತಿಳಿಸುತ್ತಿರುವ ಉಪಾಸ್ಯಬ್ರಹ್ಮಗಳಲ್ಲಿ ನಾಮದಿಂದ ಆರಂಭಿಸಿ ಪ್ರಾಣದಿಂದ ಕೊನೆಗೊಳ್ಳುವವರೆಗಿನ ಉಪಾಸನೆಗಳ ವಿವರವನ್ನು ಕೊಟ್ಟಿರುತ್ತಾರೆ. ಈ ಮಂತ್ರದಲ್ಲಿ ಕಡೆಯದಾದ ಪ್ರಾಣನ ಉಪಾಸನೆಯ ರಹಸ್ಯವನ್ನು ಹೊರಗೆಡವಿರುತ್ತಾರೆ.)

# 56. ಪ್ರಾಣಬ್ರಹ್ಮೋಪಾಸನೆ

ಹಿಂದಿನ ವಿವರಣೆಯಲ್ಲಿ ಆಕಾಶೋಪಾಸನೆಯನ್ನು ತಿಳಿಸಿ ಸಮಾಪ್ತಿಗೊಳಿಸಲಾಗಿತ್ತು. ಅನಂತರ ನಾರದರು "ಆಕಾಶಕ್ಕಿಂತ ಹೆಚ್ಚಿನದು ಇದೆಯೆ?" ಎಂದು ಸನತ್ಕುಮಾರರನ್ನು ಕೇಳಿರುತ್ತಾರೆ. ಆಗ ಅವರು ಸ್ಮರ–ಹಾಗೂ ಆಶೆ–ಇವುಗಳನ್ನು ಕ್ರಮವಾಗಿ ನಿರ್ದೇಶಿಸಿ ಕಡೆಯಲ್ಲಿ ಪ್ರಾಣವೇ ಎಲ್ಲಕ್ಕಿಂತ ಹೆಚ್ಚಿನದು–ಎಂದು ತಿಳಿಸಿ ಪ್ರಾಣನನ್ನೇ ಬ್ರಹ್ಮವೆಂದು ಉಪಾಸನೆಮಾಡು–ಎಂದು ನಿರ್ದೇಶಿಸಿರುತ್ತಾರೆ. ಈಗ ಈ ಮೂರು ತತ್ತ್ವಗಳನ್ನು ಕುರಿತು ವಿಚಾರಮಾಡೋಣ.

ಆಕಾಶಕ್ಕಿಂತ ಸ್ಮರವು ಹೆಚ್ಚಿನದು–ಎಂಬ ಉಪದೇಶದಲ್ಲಿ ಸ್ಮರ ಎಂದರೆ ಸ್ಮರಣ–ಎಂಬರ್ಥವನ್ನು ಗ್ರಹಿಸಬೇಕು. ಮನುಷ್ಯನು ತನ್ನ ಮನಸ್ಸಿನಲ್ಲಿ ಕಳೆದುಹೋದ ಘಟನೆಗಳನ್ನು ಕುರಿತು ಮತ್ತೆ ನೆನಪುಮಾಡಿಕೊಳ್ಳುವದನ್ನು ಸ್ಮರಣ–ಎನ್ನುವರು. ಸ್ಮರಣವು ಎಲ್ಲರಿಗೂ ಬೇಕಾದದ್ದೇ. ಅದು ಇಲ್ಲವಾದರೆ ಯಾವ ವಿದ್ಯೆಯನ್ನೂ ಕಲಿಯಲಾಗುವದಿಲ್ಲ. ಕೇಳಿದ್ದೆಲ್ಲ ಮರೆತೇ ಹೋಗಿಬಿಟ್ಟರೆ ಮಾಡುವದಾದರೂ ಏನಿದ್ದೀತು? ಆದ್ದರಿಂದ ನೆನಪು ಎಂಬುದು ಮಾನವನ ಒಂದು ಬಂಡವಾಳವಾಗಿದೆ. ಅದು ಸಂದರ್ಭ ಬಂದಾಗಲೆಲ್ಲ ಮನಸ್ಸಿನಲ್ಲಿ ಮೂಡುತ್ತದೆ. ಸಮಯಕ್ಕೆ ಸರಿಯಾಗಿ ನೆನಪಾಗುವದೂ ಪುಣ್ಯವಿಶೇಷವೇ ಸರಿ. ಈ ನೆನಪು ಅನವಶ್ಯವಾದ ವಿಷಯಗಳಲ್ಲಿ ಹಾಗೂ ಬೇಡವಾದ ಸಮಯಗಳಲ್ಲಿ ಮಾತ್ರ ಬರಬಾರದು. ಉದಾಹರಣಗೆ ದೇವರ ಪೂಜೆಯನ್ನು ಮಾಡುತ್ತಿರುವಾಗ ಪಾದರಕ್ಷೆಯ ರಿಪೇರಿಯ ವಿಷಯವು ನೆನಪಾಗಬಾರದು. ಆದರೆ ನಾವು ನೋಡಿರುವ ಪುಣ್ಯಕ್ಷೇತ್ರಗಳು, ದೇವಾಲಯಗಳು, ಪೂಜಾವೈಭವಗಳು ನೆನಪಿಗೆ ಬರಬಹುದು. ಹೀಗೆ ಸ್ಮರಣೆಯನ್ನು ಅಭ್ಯಾಸದಿಂದ ಕ್ರಮಪಡಿಕೊಳ್ಳಬೇಕು. ಸಕಾಲದಲ್ಲಿ ಒದಗುವ ಸಮಯೋಚಿತವಾದ ಸ್ಮರಣೆಯು ಲೌಕಿಕಪರಮಾರ್ಥಿಕ ಜೀವನಗಳಲ್ಲಿ ಎರಡರಲ್ಲೂ ಪ್ರಯೋಜನಕಾರಿಯಾಗುವದು. ಒಳ್ಳೆಯ ಸ್ಮರಣೆಯನ್ನು ಮಾತ್ರ ನಾವು ಪ್ರಯತ್ನದಿಂದಲೇ ತಂದುಕೊಳ್ಳಬೇಕು. ಮರಣಕಾಲಕ್ಕೆ ಭೀಷ್ಮರು ಶ್ರೀಕೃಷ್ಣಭಗವಂತನ ಸ್ಮರಣೆಯನ್ನು ತಂದುಕೊಂಡು ಸ್ತೋತ್ರಮಾಡಿದ್ದು ಮಹಾಭಾರತದಲ್ಲಿ ಪ್ರಸಿದ್ಧವಾಗಿದೆ. ಹೀಗೆ ಸ್ಮರಣೆಯು ಬ್ರಹ್ಮವೆಂದು ಚಿಂತಿಸಲು ತಕ್ಕದ್ದೇ ಆಗಿದೆ. ಸ್ಮರಣೆಯಿಂದ ಆಕಾಶಾದಿಮಹಾಭೂತಗಳನ್ನೂ ಸ್ವರ್ಗಾದಿಲೋಕಗಳನ್ನೂ ದೇವತೆಗಳನ್ನೂ ವಶಪಡಿಸಿಕೊಳ್ಳಬಹುದು. ಆದ್ದರಿಂದ ಅದು ಆಕಾಶಾದಿಗಳಿಗಿಂತಲೂ ಹೆಚ್ಚಿನದೆಂದು ತಿಳಿಸಲಾಗಿದೆ. ಇಂಥ ಸ್ಮರಬ್ರಹ್ಮವನ್ನು ಉಪಾಸನೆಮಾಡಿ ಸ್ಮರತತ್ತ್ವದ ವ್ಯಾಪ್ತಿಯಿರುವೆಡೆಯಲ್ಲೆಲ್ಲ ಕಾಮಚಾರರಾಗಬಹುದೆಂದು ಉಪನಿಷತ್ತಿನಲ್ಲಿ ವರ್ಣಿಸಿದೆ.

ಅನಂತರ ಸ್ಮರಕ್ಕಿಂತಲೂ ಆಶೆಯು ಹೆಚ್ಚಿನದೆಂದು ತಿಳಿಸಲಾಗಿದೆ. ಆಶೆ ಎಂದರೆ ಪಡೆಯದೆ ಇರುವ ಪದಾರ್ಥಗಳನ್ನು ಪಡೆದುಕೊಳ್ಳುವ ಬಯಕೆಯು. ಇದನ್ನೇ

ಕಾಮವೆಂದೂ ತೃಷ್ಣೆಯೆಂದೂ ಕರೆಯುತ್ತಾರೆ. ವ್ಯವಹಾರಪ್ರಪಂಚದಲ್ಲಿ ಇದಕ್ಕೆ ಅಗ್ರಸ್ಥಾನವಿದೆ. ಏಕೆಂದರೆ ಆಸೆಯಿಲ್ಲವಾದರೆ ಯಾವನೂ ಕರ್ಮಗಳಲ್ಲಿ ತೊಡಗುವದೇ ಇಲ್ಲ. ದುರಾಶೆಯನ್ನು ಮಾತ್ರ ವ್ಯವಹಾರದಲ್ಲಿ ದೂಷಿಸುತ್ತಾರೆಯೇ ಹೊರತು ಧರ್ಮಕ್ಕೆ ಅವಿರುದ್ಧವಾದ ಆಶೆಯನ್ನು ಯಾರೂ ಬೈಯುವದಿಲ್ಲ. ಅಲ್ಲದೆ ಅದನ್ನು ಪುರುಷಾರ್ಥ ವೆಂದೇ ಗೌರವಿಸುತ್ತಾರೆ. ಇದು ಸ್ಮರಕ್ಕಿಂತ ಹೆಚ್ಚಿನದು. ಹೇಗೆಂದರೆ ಆಸೆಯುಳ್ಳವನೇ ವಿಷಯಗಳನ್ನು ಸ್ಮರಿಸಿಕೊಳ್ಳುತ್ತಾನೆ. ಆದ್ದರಿಂದ ಆಶೆಯು ಹೆಚ್ಚಿನದಾಯಿತು. ಹೀಗೆ ಆಶಾಪ್ರೇರಿತನಾಗಿ ಅದರಿಂದ ಬೆಳೆದುಕೊಂಡು ವಿದ್ಯೆಯನ್ನು ಕಲಿಯುತ್ತಾನೆ. ವಿದ್ಯೆಯಿಂದ ಧನವನ್ನು ಸಂಪಾದಿಸಿ ಅನಂತರ ಗೃಹಸ್ಥನಾಗಿ ಪುತ್ರಾದಿಗಳನ್ನೂ ಗೃಹ ಧನ ಧಾನ್ಯಗಳನ್ನೂ ಕೂಡಿಟ್ಟುಕೊಳ್ಳುತ್ತಾನೆ. ಮತ್ತೆ ಆಶೆಯಿಂದಲೇ ಮುಂದುವರೆದು ಲೋಕಾಂತರ-ಜನ್ಮಾಂತರಗಳಲ್ಲಿಯೂ ಸುಖಪ್ರಾಪ್ತಿಗಾಗಿ ಯಜ್ಞಯಾಗಾದಿಗಳನ್ನು ಮಾಡುತ್ತಾನೆ. ಈ ರೀತಿಯಾಗಿ ಆಶೆಯ ಬಂಧದಿಂದಲೇ ಕರ್ಮಚಕ್ರದಲ್ಲಿ ಪ್ರತಿಯೊಬ್ಬನೂ ಸುತ್ತುತ್ತಾನೆ. ಇಂಥ ಆಶೆಯನ್ನು ಬ್ರಹ್ಮವೆಂದು ಚಿಂತಿಸುವವನಾಗು ಎಂದು ಸನತ್ಕುಮಾರರು ತಿಳಿಸಿರುತ್ತಾರೆ.

ಪರಮಾರ್ಥದೃಷ್ಟಿಯಿಂದ ಆಸೆ ಅಥವಾ ಕಾಮವು ಮಾನವನಿಗೆ ವೈರಿ ಯೆಂಬುದೂ ನಿಜ. ಅದು ಮನುಷ್ಯನನ್ನು ಪರಮಪುರುಷಾರ್ಥಕ್ಕೆ ಭಾಗಿಯಾಗದಂತೆ ಅಡ್ಡಿಪಡಿಸುತ್ತದೆ. ಆದ್ದರಿಂದಲೇ ಅದನ್ನು ಗೆಲ್ಲಲೇಬೇಕೆಂದು ಜ್ಞಾನಿಗಳು ಹೇಳುತ್ತಾರೆ. ಸಾಮಾನ್ಯರಿಗೆ ಆಶೆಯನ್ನು ಗೆಲ್ಲುವದು ಸುಲಭವಲ್ಲ. ಉಪಾಯದಿಂದ ವಶಪಡಿಸಿ ಕೊಳ್ಳಬೇಕು. ಹೇಗೆಂದರೆ ಪೂರ್ತಿಯಾಗಿ ಕಾಮವನ್ನು ಗೆಲ್ಲಲಾಗದವರಿಗಾಗಿಯೇ ಗೃಹಸ್ಥನಾಗುವಂತೆ ಶಾಸ್ತ್ರದಲ್ಲಿ ಹೇಳಿದೆ. ಆ ಆಶ್ರಮದಲ್ಲಿದ್ದುಕೊಂಡು ಹಿತಮಿತವಾದ ವ್ಯವಹಾರಗಳಿಂದ ಸತ್ಕಾಮಗಳನ್ನೇ ಬೆಳೆಸಿಕೊಳ್ಳಬೇಕೆಂದೂ ಅನಂತರ ಆ ಕಾಮವನ್ನು ಭಗವಂತನಲ್ಲಿ ಅರ್ಪಿಸಿ ಆತ್ಮಕಾಮನಾಗಲು ಪ್ರಯತ್ನಿಸಬೇಕೆಂದೂ ಉಪಾಯಗಳನ್ನು ಶಾಸ್ತ್ರದಲ್ಲಿ ತಿಳಿಸಿರುತ್ತದೆ. ಹೀಗೆ ಜೀವನದಲ್ಲಿ ಕಾಮಕ್ಕೂ ಪ್ರಾರಂಭದಲ್ಲಿ ಸ್ಥಾನವನ್ನು ನೀಡಿ ಅನಂತರ ಕಾಮವನ್ನು ವಿಚಾರ-ವಿವೇಕ-ವೈರಾಗ್ಯಗಳಿಂದ ದಾಟುವದು ಜಾಣತನವಾಗಿರುತ್ತದೆ. ಇಲ್ಲವಾದರೆ ಅದು ಬಹಳಮಟ್ಟಿಗೆ ಸಾಧಕನನ್ನೇ ಸಮಯವನ್ನು ಸಾಧಿಸಿ ಸೋಲಿಸಿಬಿಡುವದು. ಕಾಮವನ್ನು ಶತ್ರುವೆಂದು ಭಾವಿಸದೆ ಭಗವದ್ವಿಭೂತಿಯಾಗಿ ಮಾರ್ಪಡಿಸಿಕೊಳ್ಳುವದೇ ಹೆಚ್ಚಿನ ಜಾಣತನವು ಎಂದು ಇದರಿಂದ ಸಿದ್ಧವಾಗುತ್ತದೆ.

ಈಗ ಉಪಾಸನಾಪ್ರಕರಣದಲ್ಲಿ ಕಡೆಯದಾಗಿ ಪ್ರಾಣತತ್ತ್ವವನ್ನು ಸನತ್ಕುಮಾರರು ನಿರ್ದೇಶಿಸುತ್ತಿದ್ದಾರೆ. ''ಪ್ರಾಣವು ಆಶೆಗಿಂತಲೂ ಹೆಚ್ಚಿನದು. ಅದನ್ನೇ ಬ್ರಹ್ಮವೆಂದು ಚಿಂತಿಸುವವನಾಗು''-ಎಂದು ತಿಳಿಸಿದ್ದಾರೆ. ಹೇಗೆಂದರೆ ಮನುಷ್ಯನು ಆಸೆಪಡುವದೇನೋ ಸ್ವಭಾವವಾದರೂ ಅದಕ್ಕಿಂತ ಮುಂಚೆ ಅವನು ಜೀವಿಸಿರಬೇಕು.

ಬದುಕಿರುವವನಿಗೆ ಮಾತ್ರವೇ ಆಶಾ–ಸ್ಮರಾದಿಗಳು ಸಂಭವಿಸಬಲ್ಲವು. ಆ ಬದುಕೆಂಬುದು ಪ್ರಾಣನ ಅಧೀನವು. ದೇಹದಲ್ಲಿ ಪ್ರಾಣನು ವಾಸವಾಗಿದ್ದರೆ ಮಾತ್ರ ಜೀವಿತವೆನಿಸುವದು. ಆದ್ದರಿಂದ ಈವರೆಗೆ ತಿಳಿಸಿರುವ ಎಲ್ಲಾ ತತ್ತ್ವಗಳಿಗಿಂತಲೂ ಮಿಗಿಲಾದದ್ದು ಪ್ರಾಣತತ್ತ್ವ, ಈ ಪ್ರಾಣನಲ್ಲಿಯೇ ನಾಮಾದಿ–ಆಶಾಂತವಾದುದೆಲ್ಲವೂ ಹಾಸುಹೊಕ್ಕಾಗಿ ಹೆಣೆದುಕೊಂಡಿರುವದು. ಪ್ರಾಣನ ಹೆಚ್ಚುಗಾರಿಕೆಯನ್ನು ಕುರಿತು ಉಪನಿಷತ್ತುಗಳಲ್ಲಿ ವಿಸ್ತಾರವಾಗಿ ತಿಳಿಸಿರುತ್ತದೆ. ಉಳಿದ ವಾಗಾದಿದೇವತೆಗಳು ತಾವು ತಾವೇ ಶ್ರೇಷ್ಠರೆಂದು ಹೆಮ್ಮೆಪಟ್ಟಾಗ ಪ್ರಾಣನು ಒಮ್ಮೆ ದೇಹದಿಂದ ಮೇಲಕ್ಕೇಳಲಾಗಿ ಈ ದೇವತೆಗಳೆಲ್ಲರೂ ಅವನನ್ನು ಬಿಟ್ಟಿರಲಾರದೆ ಹೊರಟವರಾದರು. ಆಗ ಪ್ರಾಣನೇ ಶ್ರೇಷ್ಠನೆಂಬ ಅರಿವುಂಟಾಗಿ ತಮ್ಮ ಹೆಮ್ಮೆಯನ್ನು ಕಳಚಿಕೊಂಡರು; ಮತ್ತು ಪ್ರಾಣನನ್ನು ಸರ್ವಶ್ರೇಷ್ಠನೆಂದು ಉಪಾಸಿಸತೊಡಗಿದರು. ಈ ರೀತಿಯಾಗಿ ಪ್ರಾಣನ ಮಹಿಮೆಯು ಸ್ತುತಿಸಲ್ಪಟ್ಟಿದೆ. ಮುಂದುವರೆದು ಪ್ರಾಣನ ಮಹಿಮೆಯನ್ನು ಮತ್ತೆ ಹೀಗೆ ವರ್ಣಿಸಲಾಗಿದೆ:– ಲೋಕದಲ್ಲಿ ಯಾವನೇ ಆಗಲಿ, ತಂದೆತಾಯಿಗಳನ್ನೊ, ಗುರುಹಿರಿಯರನ್ನೊ–ಧಿಕ್ಕರಿಸಿದಾಗ ಜನರು ಅವನನ್ನು ಮಾತೃಹಾ–ಪಿತೃಹಾ ಎಂದು ಹೀಯಾಳಿಸುವರು; ಎಂದರೆ ತಂದೆಯನ್ನು ಅಥವಾ ತಾಯಿಯನ್ನು ಕೊಂದವನು–ಅಥವಾ ಕೊಂದುಹಾಕುವ ಮಟ್ಟದಲ್ಲಿ ಪೀಡಿಸಿದನು–ಎನ್ನುವರು. ಆದರೆ ಅದೇ ತಂದೆತಾಯಿಗಳು ಪ್ರಾಣಾತ್ಮರಾಗಿ ದೇಹವನ್ನಗಲಿ ಲೋಕಾಂತರಕ್ಕೆ ಹೋದ ಅನಂತರ ಆ ಶರೀರಗಳನ್ನು ಬೈದರೂ ಸುಟ್ಟರೂ ತಿವಿದರೂ ಅಂಥವನನ್ನು ದೂರುವದಿಲ್ಲ. ಅದರಿಂದ ತಿಳಿಯುವದೇನೆಂದರೆ: ಪ್ರಾಣವಿದ್ದರೇ ಆಯಾ ದೇಹಗಳನ್ನು ತಂದೆಯೆಂದೂ ತಾಯಿಯೆಂದೂ ಗುರುವೆಂದೂ ವ್ಯವಹರಿಸುವರು. ಪ್ರಾಣವಿಯೋಗವಾದರೆ ಆ ದೇಹಗಳಿಗೆ ಬೆಲೆಯೇ ಇರುವದಿಲ್ಲ. ಈ ನ್ಯಾಯದಂತೆ ಪ್ರಾಣನೇ ತಂದೆಯು, ಪ್ರಾಣನೇ ತಾಯಿಯು; ಪ್ರಾಣನೇ ಗುರುವು– ಎಂದಾಗುವದು. ಹೀಗೆಂದು ತಿಳಿಸಿದ ಸನತ್ಕುಮಾರರು ಯಾವನು ಈ ಪ್ರಾಣತತ್ತ್ವವನ್ನು ಎಲ್ಲಕ್ಕೂ ಹೆಚ್ಚಿನದನ್ನಾಗಿ ಕಂಡುಕೊಂಡು ಉಪಾಸನೆಮಾಡುವನೋ ಅವನು ಅತಿವಾದಿ ಯಾಗುವನು–ಎಂದರು. ಅತಿವಾದಿಯೆಂದರೆ ಹಿಂದೆ ತಿಳಿಸಿದ ನಾಮಾದಿ–ಆಶಾಂತವಾದ ತತ್ತ್ವಗಳನ್ನೆಲ್ಲ ಮೀರಿ ಪ್ರಾಣನೇ ಹೆಚ್ಚಿನವನೆಂಬ ಅಂತಸ್ತಿನಲ್ಲಿ ನಿಂತವನಾಗುವನು ಎಂದಭಿಪ್ರಾಯ.

ಆಗ ನಾರದರು ಪ್ರಾಣನೇ ಸರ್ವಕ್ಕೂ ಮಿಗಿಲಾದವನೆಂದೂ ಸರ್ವಾತ್ಮನೆಂದೂ ಭಾವಿಸಿ ಇವನಿಗಿಂತ ಹೆಚ್ಚಿನದು ಇರಲಾರದು–ಎಂದುಕೊಂಡು ಸುಮ್ಮನಾಗಿ ಬಿಟ್ಟರು. ಹಿಂದೆ ಕೇಳಿದಂತೆ 'ಪ್ರಾಣನಿಗಿಂತ ಹೆಚ್ಚಿನದು ಇದೆಯೊ?' ಎಂದು ಪ್ರಶ್ನೆಮಾಡಲಿಲ್ಲ. ಆಗ ಸನತ್ಕುಮಾರರು ಹೀಗೆಯೇ ನಾರದನನ್ನು ಅಕೃತಾರ್ಥನನ್ನಾಗಿ ಕೈಬಿಡುವದು ಸರಿಯಲ್ಲ; ಇವನಿಗೆ ಪರಮಾರ್ಥವನ್ನು ಹೇಳಿಯೇ ಕೊಡಬೇಕು ವಿಕಾರವೂ ಅನೃತವೂ ಆದ

ಪ್ರಾಣತತ್ತ್ವದಲ್ಲೇ ನೆಲೆಗೊಳಿಸಬಾರದು. 'ಸತ್ಯವೂ ಭೂಮವೂ ಸುಖವೂ ಆದ ಬ್ರಹ್ಮವನ್ನು ತೋರಿಸಿಕೊಡಬೇಕು' –ಎಂದು ಭಾವಿಸಿ ಹೀಗೆಂದರು; ''ಎಲೈ ನಾರದನೆ, ಕೇಳು. ಪರಮಾರ್ಥಸತ್ಯವನ್ನವಲಂಬಿಸಿ ಅತಿವಾದ ಮಾಡುವವನೇ ನಿಜವಾದ ಅತಿವಾದಿಯು. ಪ್ರಾಣವಿದ್ಯೆಯನ್ನು ಬಲ್ಲವನೂ ಅತಿವಾದಿಯೆನಿಸಬಹುದಾದರೂ ಪೂರ್ಣಾರ್ಥದಲ್ಲಿ ಅವನು ಅತಿವಾದಿಯಲ್ಲ. ನಿಜವಾದ ಅತಿವಾದಿತನವು ಸತ್ಯದ ದರ್ಶನದಿಂದ ಲಭಿಸುವದು''– ಎಂದರು. ಆಗ ನಾರದರು ''ಪೂಜ್ಯರೆ, ಹಾಗಾದರೆ ನಾನು ಸತ್ಯವನ್ನೇ ವಿಚಾರಮಾಡುವೆನು. ಅದನ್ನೇ ತಿಳಿಸೋಣವಾಗಲಿ'' ಎಂದು ನುಡಿದರು. ಆಗ ಸನತ್ಕುಮಾರರು ''ಸರಿ; ಆದರೆ ಸತ್ಯವನ್ನೇ ನುಡಿದು ಅತಿವಾದಿಯೆನಿಸುವೆಯಾದರೆ ಸತ್ಯದ ವಿಜ್ಞಾನವು ನಿನಗೆ ಬೇಕಾಗುವದು. ಆದ್ದರಿಂದ ವಿಜ್ಞಾನವನ್ನು ಸಂಪಾದಿಸಿಕೊ'' ಎಂದರು. ಕೂಡಲೆ ನಾರದರು 'ಆಗಬಹುದು; ವಿಜ್ಞಾನದ ಸ್ವರೂಪವನ್ನು ತಾವೇ ತಿಳಿಸಿಕೊಡಿರಿ' ಎಂದರು. ಮತ್ತೆ ಸನತ್ಕುಮಾರರು ಹೀಗೆಂದರು; ''ಇಂಥ ಸತ್ಯದ ವಿಜ್ಞಾನವಾದರೊ, ಮನನದಿಂದಲೇ ದಕ್ಕತಕ್ಕದ್ದಾಗಿದೆ'' ಎಂದರು. ನಾರದರು 'ಹಾಗೂ ಆಗಲಿ; ಮನನವೆಂದರೇನು? ಆ ತತ್ತ್ವವನ್ನೇ ಉಪದೇಶಿಸಿರಿ' ಎಂದು ಕೇಳಿದರು. ಮತ್ತೆ ಸನತ್ಕುಮಾರರು ಹೀಗೆಂದರು: ''ಅಯ್ಯಾ ಕೇಳು. ಶ್ರದ್ಧೆಯು ಲಭಿಸಿದರೆ ಮನನವು ಸಿದ್ಧಿಯಾಗುವದು. ಆ ಶ್ರದ್ಧೆಯಾದರೋ ನಿಷ್ಠೆಯಿಂದ ದೊರಕುವದು. ಕೃತಿಯಿಂದ ನಿಷ್ಠೆಯ ಪ್ರಾಪ್ತಿಯಾಗುವದು. ಸುಖವೆಂದರೇನು? ಎಂಬಿದು ತಿಳಿದರೆ ಕೃತಿಯು ಸಾಧ್ಯವಾಗುವದು. ಏಕೆಂದರೆ ಸುಖದ ಪ್ರಾಪ್ತಿಗಾಗಿಯೇ ಕಾರ್ಯಗಳನ್ನು ಜನರು ಮಾಡುವರು. ಹೀಗೆ ಸರಪಳಿಯಂತೆ ಒಂದಕ್ಕೊಂದು ಹೊಂದಿಕೊಂಡಿರುವದರಿಂದ ಸುಖವೆಂದರೇನು? ಎಂಬಿದನ್ನು ನೀನು ಮೊದಲು ಅರಿತುಕೊಳ್ಳಬೇಕು; ಶ್ರದ್ಧೆ, ನಿಷ್ಠೆ, ಕೃತಿ, ಸುಖಗಳ ತತ್ತ್ವವನ್ನು ಬಲ್ಲವರು ಹೀಗೆನ್ನುತ್ತಾರೆ; ಇವುಗಳು ಮನಸ್ಸಿನ ವೃತ್ತಿಗಳೇ ಸರಿ ; ಆದರೆ ಪ್ರಯತ್ನಮಾಡದೆ ಇರುವವನಿಗೂ ಇವುಗಳು ಮನಸ್ಸಿನಲ್ಲಿ ತೋರಿ ದಾಗಲೂ ಗುರುತಿಸದೆ ಇರುವವನಿಗೂ ಇವು ತಿಳಿಯಲಾರವು. ಗುರು–ಶಾಸ್ತ್ರವಾಕ್ಯಗಳ ಶ್ರವಣದಲ್ಲಿಶ್ರದ್ಧೆಯನ್ನು ಉಂಟುಮಾಡಿಕೊಂಡು ಅದರಲ್ಲೇ ನಿರತನಾಗಿ ಅಂತರಂಗದಲ್ಲಿ ಏಕಾಗ್ರತೆಯೆಂಬ ಕೃತಿಯನ್ನು ಕೈಗೊಂಡರೆ ಮನಸ್ಸು ನೆಲೆಗೊಂಡಾಗ ಸುಖವು ಹೊರತೋರುವದು. ವಿಚಾರಮಾಡು''– ಎಂದರು. ಆಗ ನಾರದರು ''ಆಗಬಹುದು; ಪೂಜ್ಯರೆ, ಸುಖವೆಂದರೇನು? ಎಂಬಿದನ್ನೇ ಕುರಿತು ನನಗೆ ಉಪದೇಶಮಾಡಿರಿ'' ಎಂದು ಮತ್ತೆ ಕೇಳಿದರು. ಅದಕ್ಕೆ ಉತ್ತರವಾಗಿ ಸನತ್ಕುಮಾರರು ''ಅಲ್ಪದಲ್ಲಿ ಸುಖವಿಲ್ಲ, ಭೂಮವೇ ಸುಖವು'' ಎಂದರು. ಭೂಮವೆಂದರೇನು? ಎಂಬ ಪ್ರಶ್ನೆಗೆ ಮುಂದೆ ಉತ್ತರಿಸಲಾಗುವದು.

---

## ಭೂಮವೇ ಅಮೃತ

**ಓಮ್ ॥ ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ ವಿಜಾನಾತಿ ಸ ಭೂಮಾ.......ಯೋ ವೈ ಭೂಮಾ ತದಮೃತಮ್ .... ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ ಇತಿ ಸ್ವೇ ಮಹಿಮ್ನಿ ಯದಿ ವಾ ನ ಮಹಿಮ್ನೀತಿ ॥ 7–24–1**

ಭಾವಾರ್ಥ:– ಎಲ್ಲಿ ಮತ್ತೊಂದನ್ನು ಕಾಣದಿರುವನೋ ಮತ್ತೊಂದನ್ನು ಕೇಳದಿರುವನೋ ಮತ್ತೊಂದನ್ನು ಅರಿಯದಿರುವನೋ ಅದು ಭೂಮವು. ಯಾವದು ಭೂಮವೋ ಅದು ಅಮೃತವು. ಪೂಜ್ಯರೆ, ಆ (ಭೂಮವು) ಏತರಮೇಲೆ ನಿಂತುಕೊಂಡಿರುವದು? ತನ್ನ ಮಹಿಮೆಯ ಮೇಲೆ – ಅಥವಾ ಮಹಿಮೆಯ ಮೇಲೆಯೂ ಅಲ್ಲ–(ಎಂದು ತಿಳಿ)

(ಸನತ್ಕುಮಾರರು ಪರಬ್ರಹ್ಮತತ್ತ್ವವನ್ನು 'ಭೂಮ' ವೆಂಬ ಹೆಸರಿನಿಂದ ನಿರ್ದೇಶಿಸಿ ನಾರದರಿಗೆ ಉಪದೇಶಮಾಡುತ್ತಾ ಆ ಭೂಮವೇ ಅಮೃತವು –ಎಂದರೆ ಅನಂತವಾದ ಅವಿಕ್ರಿಯವಾದ ವಸ್ತುವು– ಅದಕ್ಕೆ ನಾಶವಿಲ್ಲ, ಅದು ಬೇರೇನನ್ನೂ ಅವಲಂಬಿಸದೆ ತಾನೇ ಸ್ವತಂತ್ರವಾಗಿ ತನ್ನಲ್ಲಿಯೇ ನೆಲೆಗೊಂಡಿರುವದು–ಎಂದು ತಿಳಿಸಿದ್ದಾರೆ.)

## 57. ಭೂಮಬ್ರಹ್ಮವಿದ್ಯೆ

ಭಗವಾನ್ ಸನತ್ಕುಮಾರರು ನಾರದರಿಗೆ ಈಗ ಭೂಮವಿದ್ಯೆಯನ್ನು ಕಡೆಯದಾಗಿ ಉಪದೇಶಿಸಿ ಅವರ ಶೋಕಮೋಹಗಳನ್ನು ಆತ್ಯಂತಿಕವಾಗಿ ನೀಗಲು ಉಪಕ್ರಮಿಸಿರುತ್ತಾರೆ. ಈವರೆಗಿನ ಉಪದೇಶಗಳಲ್ಲಿ ನಾಮಾದಿ–ಪ್ರಾಣಾಂತವಾದ ತತ್ತ್ವಗಳನ್ನು ಒಂದಕ್ಕಿಂತ ಮತ್ತೊಂದು ಹೆಚ್ಚಿನದೆಂದು ತಿಳಿಸುತ್ತಾ ಕಡೆಯಲ್ಲಿ ಪ್ರಾಣತತ್ತ್ವವನ್ನು ಕಂಡುಕೊಂಡವನು ಅತಿವಾದಿಯಾಗುವನು–ಎಂದು ತಿಳಿಸಿದರು. ಆಗ ನಾರದನು ಪ್ರಾಣಕ್ಕಿಂತ ಹೆಚ್ಚಿನದು ಇರಲಾರದೆಂದು ಭಾವಿಸಿ ಮತ್ತೆ ಪ್ರಶ್ನೆ ಮಾಡಲಿಲ್ಲ. ಇದರಿಂದ ಪ್ರಚೋದಿತರಾದ ಸನತ್ಕುಮಾರರು ಶಿಷ್ಯನನ್ನು ಉದ್ಧರಿಸಿ ಶೋಕಮೋಹಗಳನ್ನು ಕಳೆಯಲೇಬೇಕೆಂದು ಸಂಕಲ್ಪಿಸಿ 'ಸತ್ಯವನ್ನು ಅರಿತರೇ ಅತಿವಾದಿಯೆನಿಸುವನು' ಎಂದು ಮತ್ತೆ ಉಪದೇಶಿಸಲಾರಂಭಿಸಿದರು. ಆಗ ನಾರದನು 'ಸತ್ಯವನ್ನೇ ತಿಳಿಯಿಸಿಕೊಡಿರಿ' ಎನ್ನಲು ಸನತ್ಕುಮಾರರು ಕ್ರಮವಾಗಿ ಸತ್ಯ, ವಿಜ್ಞಾನ, ಮನನ, ಶ್ರದ್ಧೆ ನಿಷ್ಠೆ ಕೃತಿ, ಸುಖ–ಇವುಗಳ ಹೆಚ್ಚುಗಾರಿಕೆಯನ್ನೆಲ್ಲ ತಿಳಿಸಿ 'ಸುಖವು ಭೂಮ ರೂಪವಾಗಿದೆ, ಅಲ್ಪದಲ್ಲಿ ಸುಖವಿಲ್ಲ' – ಎಂದರು. ಆಗ ನಾರದನು ಭೂಮವೆಂದರೇನು? ಎಂದು ಕೇಳಲಾಗಿ ಈಗ ಭೂಮವಿದ್ಯೆಯನ್ನು ವಿವರಿಸಲು ಹೊರಟಿರುತ್ತಾರೆ.

ಭೂಮ–ಎಂಬ ಶಬ್ದವನ್ನು ಕನ್ನಡಭಾಷೆಯಲ್ಲಿಯೂ ಬಳಸುತ್ತಾರೆ. ಹಳೇ ಮೈಸೂರು ಪ್ರಾಂತದಲ್ಲಿ ಮದುವೆಯ ಸಮಯದಲ್ಲಿ ವಧೂವರರನ್ನು ಒಟ್ಟಿಗೆ ಕುಳ್ಳಿರಿಸಿ ಮಾಡಿಸುವ ಭೋಜನಕ್ಕೆ 'ಭೂಮದ ಊಟ' ಎಂದು ಕರೆಯುವರು. ಆ ಸಮಯದಲ್ಲಿ ತಿನ್ನುವದಕ್ಕಿಂತ ಹೆಚ್ಚಾಗಿ ಚೆಲ್ಲುವದೇ ಮುಖ್ಯವಾಗಿರುತ್ತದೆ. ಏಕೆಂದರೆ ಅಳತೆ ಮೀರಿಯೇ ಭಕ್ಷ್ಯಭೋಜ್ಯಗಳನ್ನು ಬಡಿಸಿರುತ್ತಾರೆ. ಈ ಸಂದರ್ಭದಲ್ಲಿಯೂ ಭೂಮವೆಂದರೆ ಬಹಳ ಎಂದೇ ಅರ್ಥ. ಇದು ಹಾಗಿರಲಿ; ಭೂಮವೆಂದರೆ ಅಪರಿಮಿತವೂ ಅನಂತವೂ ಎಲ್ಲಕ್ಕಿಂತ ಹೆಚ್ಚಿನದೂ ಆಗಿರುವ ವಸ್ತು ಎಂದು ಹೇಳಬಹುದು. ಸಂಸ್ಕೃತಭಾಷೆಯಲ್ಲಿ ಈ ಶಬ್ದವು ನಕಾರಾಂತಪುಲ್ಲಿಂಗವಾಗಿದ್ದು ಪ್ರಥಮೈಕವಚನದಲ್ಲಿ 'ಭೂಮಾ' ಎಂದಾಗುವದು. ಇದು ಬ್ರಹ್ಮವೆಂಬುದಕ್ಕೆ ಪರ್ಯಾಯಶಬ್ದವು. ಆದ್ದರಿಂದ ಭೂಮವಿದ್ಯೆಯೆಂದರೆ ಬ್ರಹ್ಮವಿದ್ಯೆ ಎಂದೇ ಅಭಿಪ್ರಾಯ. ಬ್ರಹ್ಮವು ಅಪರಿಮಿತವೂ ಅನಂತವೂ ಆಗಿ ತಾನೊಂದೇ ಇದ್ದುಕೊಂಡಿರುವದು. ಅದನ್ನು **ಶಾಸ್ತ್ರಾಚಾರ್ಯರ ಉಪದೇಶ–ಸಂಪ್ರದಾಯ ಕ್ರಮದಿಂದಲೇ ತಿಳಿಯಬೇಕು.** ಈ ಉಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಸತ್, ಪರಾ ದೇವತಾ, ಆತ್ಮಾ–ಎಂಬೀ ಶಬ್ದಗಳಿಂದ ಯಾವದನ್ನು ತಿಳಿಸಿತ್ತೋ ಅದನ್ನೇ ಇಲ್ಲಿ ಭೂಮವೆಂದು ಹೆಸರಿಸಿದೆ. ಸನತ್ಕುಮಾರರು ಈ ಭೂಮಬ್ರಹ್ಮವನ್ನು ಹೀಗೆ ವಿವರಿಸಿದ್ದಾರೆ.

''ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ ಮತ್ತೊಂದನ್ನು ಕೇಳುವದಿಲ್ಲವೋ ಮತ್ತೊಂದನ್ನು ಅರಿಯುವದಿಲ್ಲವೋ ಅದು ಭೂಮವು. ಅದೇ ಸುಖವು; ಅದೇ ಅಮೃತವು. ಹಾಗಿಲ್ಲದೆ ತನಗಿಂತ ಬೇರೆಯಾದದ್ದನ್ನು ಕಾಣುವದು, ಕೇಳುವದು, ಅರಿಯುವದೆಂಬುದು ಅಲ್ಪವು; ಅದೇ ಮರ್ತ್ಯವು, ಅದೇ ದುಃಖವು'' ಹೀಗೆಂಬುದು ಗುರುಗಳ ಸಂದೇಶವು. ಇದನ್ನು ನಾವು ಅನುಭವಾನುಗುಣವಾಗಿ ಅರ್ಥಮಾಡಿಕೊಳ್ಳಬೇಕು. ಅಕ್ಷರಾರ್ಥವನ್ನು ನೆಪವಾಗಿಟ್ಟುಕೊಳ್ಳಬೇಕು. ಆದ್ದರಿಂದ 'ಮತ್ತೊಂದು' ಎಂದು ಹೆಸರಿಸಿರುವ ದ್ವೈತವು ತಾನಲ್ಲ; ಅಥವಾ ತಾನು ಎಂಬಿದೇ ಎಲ್ಲವೂ ಎಂದು ತಿಳಿಯುವದೂ ಭೂಮವಿದ್ಯೆಯೇ ಆಗಿರುವದು. ಹೀಗೆ ದೇಶ ಕಾಲ ನಿಮಿತ್ತ ಕ್ರಿಯಾಕಾರಕಫಲರೂಪವಾಗಿ ತನಗಿಂತ ಬೇರೆಯಾಗಿ ವ್ಯವಹಾರದಲ್ಲಿ ಕಂಡುಬರುವ ಎಲ್ಲಾ ಐಂದ್ರಿಯಿಕ–ಯೌಗಿಕ–ಮಾನಸಿಕ–ಅನುಭವಗಳೂ ಅಲ್ಪವೇ, ಮರ್ತ್ಯವೇ ಎಂದಾಗುವದು. ಭೂಮವಾದರೋ, ತನಗಿಂತ ಅನನ್ಯವಾಗಿರುವದು. ಆದ್ದರಿಂದಲೇ ಭೂಮದಲ್ಲಿ ದ್ವೈತವಿಲ್ಲ; ವಿಭಾಗವಿಲ್ಲ; ವಿಕಾರವಿಲ್ಲ. ಅದು ಅಮೃತವೇ ಆಗಿದೆ. ಅದು ಯಾವದು? ಎಂದು ಕೇಳುವದೂ ಸರಿಯಲ್ಲ, ಏಕೆಂದರೆ ಕೇಳುವವನ ಸ್ವರೂಪವೇ ಅದಾಗಿರುವದು. ಯಾವ ಮಹನೀಯರಿಗೆ ಈ ಸಕಲ ದ್ವೈತವೂ–ನಾನು ಎಂದುಕೊಂಡಿರುವ ಅಹಂಕಾರವೂ ಸೇರಿದಂತೆ–ಒಂದೇ ಆಗಿ ಅನುಭವದಲ್ಲಿರುವದೋ ಅವರೇ ಭೂಮಬ್ರಹ್ಮವಿದರು. ಅವರು ಬ್ರಹ್ಮವಾಗಿದ್ದುಕೊಂಡೇ ಅನ್ಯತ್, ಇದಂ–ಎಂಬ

ಶಬ್ದಗೋಚರವಾದ ದ್ವೈತವನ್ನೆಲ್ಲ ವ್ಯಾಪಿಸಿಕೊಂಡಿರುತ್ತಾರೆ. ಇಂಥ ಅನುಭವವೂ ಇದೆಯೆ? ಎಂದು ಪ್ರಾಕೃತರಿಗೆ ಸಂಶಯವುಂಟಾಗಬಹುದು. ಆದರೆ ಈ ಭೂಮವನ್ನು ತಾನು ತನ್ನಲ್ಲಿ ಅನುಭವಿಸಬೇಕಾಗಿದೆಯಾದ್ದರಿಂದ ಯಾವ ಸಾಧಕನೇ ಆಗಲಿ–ಅಂತರ್ಮುಖನಾಗಿ ಶರೀರೇಂದ್ರಿಯ ಮನೋಬುದ್ಧಿಗಳ ವ್ಯಾಪಾರಗಳನ್ನೆಲ್ಲ ಉಪಸಂಹಾರಮಾಡಿಕೊಂಡು ನೆಲೆನಿಂತರೆ ಭೂಮಬ್ರಹ್ಮವು ಅದೊಂದೇ ಆಗಿರುವದು ಗೋಚರವಾಗುವದು. ಆಗ ಎಲ್ಲಿ ಏನನ್ನು ಕಂಡಾನು? ಕೇಳಿಯಾನು? ಆತ್ಮೈಕತ್ವದ ಸ್ಥಿತಿಯಲ್ಲಿ ಹೀಗಿರುವದೇ ಸ್ವಭಾವವಲ್ಲವೆ? ಎಂದು ಶ್ರುತಿಗಳು ತಿಳಿಸುತ್ತಿವೆ. ದ್ವಿತೀಯವು ಅನುಭವದಲ್ಲಿ ಕಂಡುಬರಬೇಕಾದರೆ ತಾನು ತಾನಾಗಿರುವ ಸ್ವಭಾವದಿಂದ ಜಾರಿದಂತೆ ಅವಿದ್ಯೆಯಿಂದ ಮೋಹಿತನಾಗಬೇಕು. ಅದು ಸಂಸಾರವೇ, ಅಲ್ಪವೇ, ಮರ್ತ್ಯವೇ–ಎಂದು ಸನತ್ಕುಮಾರರ ಅಭಿಪ್ರಾಯ.

ಈಗ ಈ ಅಭಿಪ್ರಾಯವನ್ನು ಇನ್ನಷ್ಟು ಮನನಮಾಡೋಣ. ನಮಗೆ ಅನುಭವ–ಎಂದರೆ ಜಾಗ್ರದವಸ್ಥೆಯಲ್ಲಿ ಪ್ರಮಾತೃಗಳಾಗಿದ್ದುಕೊಂಡು ಪ್ರಮಾಣ ಪ್ರಮೇಯ ವಿಭಾಗಗಳೊಡನೆ ಹೊಂದಾಣಿಕೆಮಾಡಿಕೊಂಡು ನಾನು–ನನ್ನದು ಎಂದು ಕಂಡುಕೊಳ್ಳುವದು ಮಾತ್ರವೇ ಅದು–ಎಂದು ಗಟ್ಟಿಯಾಗಿಬಿಟ್ಟಿರುವದು. ಈಜುಬಾರದವನು ನೀರಿನಲ್ಲಿಳಿದಾಗಲೂ ನೆಲವನ್ನೇ ಕಚ್ಚಿಕೊಂಡಿರುವಂತೆ ನಾವು 'ತ್ರಿಪುಟಿ' ಯನ್ನು ಕಚ್ಚಿಕೊಂಡೇ ಎಲ್ಲಾ ತತ್ತ್ವವಿಚಾರಗಳನ್ನೂ ನಡೆಯಿಸುತ್ತೇವೆ. ಇದನ್ನು ಲೌಕಿಕದೃಷ್ಟಿಯೆಂದು ಕರೆಯುತ್ತಾರೆ. ಆದರೆ ಈಜುವವನು ತಾನು ಅವಲಂಬಿಸಿರುವ ನೆಲವನ್ನು ಪೂರ್ತಿಯಾಗಿ ಬಿಟ್ಟಲ್ಲದೆ ಈಜಲಾಗುವದಿಲ್ಲ. ಹಾಗೆಯೇ ತ್ರಿಪುಟಿಜ್ಞಾನವನ್ನು ಕೈಬಿಟ್ಟು ಸಾಕ್ಷಿಯಾಗಿ ನಿಲ್ಲದೆ ಭೂಮವನ್ನು ಕಂಡುಕೊಳ್ಳಲಾಗುವದಿಲ್ಲ. ಭಗವದನುಗ್ರಹದಿಂದ ಪ್ರತಿಯೊಬ್ಬನಿಗೂ ಸಾರ್ವತ್ರಿಕವಾಗಿ ಈ ತ್ರಿಪುಟಿಜ್ಞಾನವನ್ನು ದಾಟಿ ತಾನೊಬ್ಬನೇ ಸಾಕ್ಷಿಯಾಗಿ ಇದ್ದುಕೊಂಡಿರುವ ಅನುಭವವೊಂದು ದೊರಕಿರುತ್ತದೆ. ಅದೇ ಸುಷುಪ್ತ್ಯನುಭವವು. ಇಲ್ಲಿಯೂ ಕೆಲವರು ಮಾಡುವ ತಪ್ಪೇನೆಂದರೆ: ಈ ಅದ್ವೈತಾನುಭವವನ್ನು ಅವಸ್ಥಾಬದ್ಧವಾಗಿಯೇ ಎಚ್ಚರದ ದೃಷ್ಟಿಯಿಂದ ವಿಶ್ಲೇಷಿಸಿ ಅಲ್ಲಿಯೂ ತನ್ನೊಡನೆ ಅವಿದ್ಯೆಯೂ ಇದೆಯೆಂದು ಭ್ರಾಂತರಾಗಿರುತ್ತಾರೆ. ಆದರೆ ಶಾಸ್ತ್ರದೃಷ್ಟಿಯಿಂದ ವಿಚಾರಮಾಡಿದಾಗ ಅವಸ್ಥೆಯು ದ್ವಾರಮಾತ್ರವಾಗಿದ್ದು ಅನುಭವವೇ ಪ್ರಧಾನವಾಗಿರುತ್ತದೆ. ಹೀಗೆ ಅವಸ್ಥೆಯನ್ನು ಉಪೇಕ್ಷಿಸಿ ಅಲ್ಲಿ ಕಂಡುಬರುವ ಅದ್ವಿತೀಯಾತ್ಮಾನುಭವವನ್ನು ಅನುಸಂಧಾನಮಾಡಿಕೊಂಡದ್ದೇ ಆದರೆ ಭೂಮವಿದ್ಯೆಯು ತಿಳಿಸುವಂತೆ ಏನೇನನ್ನೂ ಕಾಣದೆ, ಕೇಳದೆ, ನೋಡದೆ ಅದ್ವಿತೀಯನಾಗಿದ್ದು ಕೊಂಡಿರುವದೇ ತನ್ನ ಸ್ವರೂಪವೆಂದು ಗೊತ್ತಾಗಿಬಿಡುವದು. ಶಾಸ್ತ್ರಾಚಾರ್ಯರ

ಉಪದೇಶದಿಂದ ಹಾಗೂ ಸಾಧನಗಳ ಬಲದಿಂದ ಅವಸ್ಥೆಗಳ ಹಂಗಿಲ್ಲದೆ ಈ ಭೂಮಾನುಭವವು ಒಮ್ಮೆ ವಿದಿತವಾದದ್ದೇ ಆದರೆ ಮಾನವನು ಮುಕ್ತನೇ ಆಗಿ ಶೋಕ ಮೋಹಗಳನ್ನು ದಾಟಿಯೇ ಬಿಡುವನು. ಈ ವಿಜ್ಞಾನವೇ ಯಾವಾಗಲೂ ಎಲ್ಲಾ ಅವಸ್ಥೆಗಳಲ್ಲಿಯೂ ಇದ್ದುಕೊಂಡು ಅವಸ್ಥೆಗಳ ಹಂಗಿಲ್ಲದೆ ಸ್ವತಂತ್ರವಾಗಿದೆಯೆಂಬುದೂ ತಿಳಿಯಬರುವದು. ಇದನ್ನು ಸಾಧಕರೂ ಜಿಜ್ಞಾಸುಗಳೂ ಮನನದಿಂದ ಚೆನ್ನಾಗಿ ಅಳವಡಿಸಿ ಕೊಂಡು ನೆಲೆನಿಲ್ಲಬೇಕು.

ಪ್ರಕೃತವಿಚಾರಕ್ಕೆ ಬರೋಣ. ಭೂಮವು ಅದ್ವಿತೀಯವಾದ ಪರಬ್ರಹ್ಮವೇ ಎಂಬುದನ್ನು ಅನ್ಯದರ್ಶನವಿಲ್ಲದ ಸ್ವಾನುಭವದಿಂದ ಕಂಡುಕೊಂಡಮೇಲೆಯೂ ವ್ಯವಹಾರದಲ್ಲಿ ದ್ವೈತಾಭಾಸಗಳು ಕಾಣಬಹುದು. ಏಕೆಂದರೆ ಅದ್ವಿತೀಯಾತ್ಮಾನುಭ ವವೆಂಬುದು ಒಂದು ಅವಸ್ಥೆಯಲ್ಲ. ಅಥವಾ ತತ್ತ್ವಾಂತರಪರಿಣಾಮವೂ ಅಲ್ಲ. ಹಾಲು ಮೊಸರಾಗಿ ಪರಿಣಾಮವನ್ನು ಹೊಂದಿದಾಗ ಹಾಲು ಇಲ್ಲವಾಗುವಂತೆ ದ್ವೈತಜಗತ್ತು ಭೂಮದರ್ಶನದಿಂದ ಇಲ್ಲವಾದಾಗ ಭೂಮಬ್ರಹ್ಮವಿದನಿಗೆ ಪ್ರಪಂಚವಾಗಲಿ, ಶರೀರೇಂದ್ರಿಯಗಳಾಗಲಿ–ಇಲ್ಲವಾಗಿ ಬಿಡುವವು–ಎಂದು ಹೇಳಲಾಗದು. ಹಾಗಾಗುವದಾದರೆ ಯಾರೂ ಅಂಥ ಮೋಕ್ಷವನ್ನು ಬಯಸಲೇ ಆರರು. ಮತ್ತೇನೆಂದರೆ ಒಬ್ಬ ನಟನು ಸ್ತ್ರೀ ವೇಷವನ್ನು ಧರಿಸಿದಾಗ ಹೊರಗಿನವರಿಗೆ ಸ್ತ್ರೀಯಂತೆ ಕಾಣುತ್ತಿದ್ದರೂ ತಾನು ಆಗಲೂ ಹೇಗೆ ಪುರುಷನಾಗಿಯೇ ಇರುವನೋ ಸ್ತ್ರೀಯಾಗಿ ಬದಲಾವಣೆಯನ್ನು ಹೊಂದುವದಿಲ್ಲವೋ ಹಾಗೆಯೇ ಎಂದೆಂದೂ ಭೂಮಬ್ರಹ್ಮವೇ ಆಗಿದ್ದ ಜೀವನು ಶರೀರೇಂದ್ರಿಯೋಪಾಧಿಸಂಬಂಧಗಳಿಂದ ಸಂಸಾರಿಯಾಗಿದ್ದಂತೆ ಜಾಗ್ರತ್ಸ್ವಪ್ನಗಳಲ್ಲಿ ಕಂಡುಬಂದರೂ ಯಾವಾಗಲೂ ಅಸಂಸಾರಿಯಾಗಿಯೇ ಇದ್ದುಕೊಂಡಿರುವನು. ನಿಜವೇನೆಂದರೆ ಜೀವಪರಮಾತ್ಮರೆಂಬ ಭೇದವು ವ್ಯಾವಹಾರಿಕವೇ ಹೊರತು ಪರಮಾರ್ಥವಲ್ಲ. ಇದನ್ನೇ ಬೇರೊಂದು ಶ್ರುತಿಯಲ್ಲಿ 'ದ್ವೈತಮಿವ' (ದ್ವೈತವಿದ್ದಂತೆ) ಎಂದೂ 'ಆತ್ಮೈವ' (ಆತ್ಮನೇ) ಎಂದೂ ತಿಳಿಸಿರುತ್ತದೆ. ಇಲ್ಲಿ 'ನಾನ್ಯತ್ ಪಶ್ಯತಿ' (ಬೇರೊಂದನ್ನು ಕಾಣುವದಿಲ್ಲವೋ) ಎಂದು ವರ್ಣಿಸಿರುತ್ತದೆ. ಹೀಗೆ ಸನತ್ಕುಮಾರರು ಅನಂತವೂ ಅದ್ವಿತೀಯವೂ ಆದ ಬ್ರಹ್ಮವೇ ಭೂಮವು; ಅದೇ ಸುಖವು–ಎಂದು ನಾರದನಿಗೆ ತಿಳಿಸಿಕೊಟ್ಟಿರುತ್ತಾರೆ.

ಅನಂತರ ನಾರದನು 'ಪೂಜ್ಯರೆ, ಈ ಮಹಿಮಾನ್ವಿತವಾದ ಭೂಮವು ಎಲ್ಲಿ ಇದ್ದುಕೊಂಡಿರುವದು?' ಎಂದು ಕೇಳಿರುತ್ತಾನೆ. ಇದರ ಅಭಿಪ್ರಾಯವೇನೆಂದರೆ: ಭೂಮಕ್ಕಿಂತ ದೊಡ್ಡದು ಯಾವದಾದರೂ ಇದ್ದರೆ ತಿಳಿದುಕೊಳ್ಳಬೇಕಲ್ಲವೆ? ಇಲ್ಲವಾದರೆ ಸನತ್ಕುಮಾರರು ಇದೇ ಪರಾಕಾಷ್ಠೆಯೆಂದಾದರೂ ಹೇಳಬೇಕಲ್ಲವೆ? ಅದಕ್ಕಾಗಿ ಹೀಗೆ

ಕೇಳಿರುತ್ತಾನೆ. ಆಗ ಸನತ್ಕುಮಾರರು 'ಎಲೈ ನಾರದನೆ, ನಿನ್ನ ಪ್ರಶ್ನೆಯೇನೋ ಸರಿ; ಆದರೆ ಭೂಮಕ್ಕಿಂತ ಹೆಚ್ಚಿನದು ಇಲ್ಲವಾದ್ದರಿಂದ ಅದು ತಾನು ತನ್ನಲ್ಲಿಯೇ ಇದ್ದುಕೊಂಡಿರುವದು. ಅಥವಾ ಅದು ಎಲ್ಲಿಯೂ ಏನನ್ನೂ ಆಶ್ರಯಿಸಿಕೊಂಡಿರುವದಿಲ್ಲ' ಎಂದು ತಿಳಿಸಿದರು. ಸೂರ್ಯನು ಎಲ್ಲವನ್ನೂ ಬೆಳಗುವನಷ್ಟೆ! ಅವನನ್ನು ಬೆಳಗುವವರಾರು? ಎಂದರೆ ಸೂರ್ಯನು ಸ್ವಯಂಪ್ರಕಾಶನಾದ್ದರಿಂದ ಅವನಿಗೆ ಪ್ರಕಾಶಾಂತರಗಳ ಅಪೇಕ್ಷೆಯಿರುವದಿಲ್ಲ, ತಾನೇ ತನ್ನನ್ನು ಬೆಳಗಿಕೊಳ್ಳುತ್ತಾನೆ. ಎಂಬುದು ಒಂದು ಉತ್ತರವು. ಭೂಲೋಕದಲ್ಲಿ ಬೆಳಕೆಂಬುದು ಕತ್ತಲೆಯನ್ನು ಹೋಗಲಾಡಿಸಿ ವಸ್ತುವನ್ನು ಬೆಳಗುತ್ತದೆ. ಆದರೆ ಸೂರ್ಯಲೋಕದಲ್ಲಿಯೇ ವಾಸವಾಗಿರುವವರಿಗೆ ಕತ್ತಲೆಯ ಸಂಭವವೇ ಇರುವದಿಲ್ಲವಾಗಿ ಸೂರ್ಯನು ಏನನ್ನೂ ಬೆಳಗುವದಿಲ್ಲ-ಎಂದೂ ಉತ್ತರವನ್ನು ಹೇಳಬಹುದಲ್ಲವೆ? ಹಾಗೆಯೇ ಭೂಮಬ್ರಹ್ಮವೂ ಎಲ್ಲವೂ ತಾನೇ ಆಗಿರುವದರಿಂದ ಆಧಾರಾಧೇಯಭಾವವೆಂಬ ವ್ಯವಹಾರವೇ ಅದರಲ್ಲಿ ಸಂಭವಿಸುವಂತಿಲ್ಲ; ಅದು ಎಲ್ಲರಿಗೂ ಆತ್ಮನೇ-ಎಂದಭಿಪ್ರಾಯ. ಹೀಗೆ ಸರ್ವಾತ್ಮನಾಗಿರುವ ಭೂಮವು ಸ್ವಮಹಿಮೆಯಿಂದ ತಾನೇ ಎಲ್ಲವೂ ಆಗಿ ತೋರಿಕೊಂಡಿದೆ. ಯಾರು ಅಂತರ್ಮುಖರಾಗಿ ತಮ್ಮಲ್ಲಿಯೇ ತಾವಾಗಿಯೇ ಈ ಭೂಮವನ್ನು ಕಂಡುಕೊಳ್ಳುವರೋ ಅವರಿಗೆ ಭೂಮಕ್ಕಿಂತ ಮತ್ತೇನೂ ತಿಳಿಯಬೇಕಾದದ್ದು ಉಳಿದಿರುವದಿಲ್ಲವಾಗಿ ವ್ಯವಹಾರಾತೀತವಾದ ಬ್ರಹ್ಮವನ್ನು ಬಲ್ಲವರಾಗುವರು. ಇದೇ ಭೂಮವಿದ್ಯೆಯು.

---

## ಭೂಮಾತ್ಮನಿರ್ದೇಶ

**ಓಮ್ ॥ ಆತ್ಮೈವೇದಗ್ಂ ಸರ್ವಮಿತಿ ಸ ವಾ ಏಷ ಏವಂ ಪಶ್ಯನ್ ಏವಂ ಮನ್ವಾನೋ ಏವಂ ವಿಜಾನನ್ ಆತ್ಮರತಿಃ ಆತ್ಮಕ್ರೀಡಃ ಆತ್ಮಮಿಥುನಃ ಆತ್ಮಾನಂದಃ ಸ ಸ್ವರಾಡ್ ಭವತಿ ॥ 7-25-2**

**ಭಾವಾರ್ಥ:-** ಆತ್ಮನೇ ಇದೆಲ್ಲವೂ; ಹೀಗೆಂದು ಕಂಡುಕೊಂಡವನಾಗಿ, ಹೀಗೆ ಮನನಮಾಡಿ, ಹೀಗೆ ಅರಿತುಕೊಂಡ, ಅವನೇ ಆತ್ಮರತಿಯು, ಆತ್ಮಕ್ರೀಡನು. ಆತ್ಮಮಿಥುನನು, ಆತ್ಮಾನಂದನು. ಅವನು ಸ್ವರಾಜನಾಗುತ್ತಾನೆ.

(ಭೂಮವೆಂಬುದು ಆತ್ಮನೇ ಆಗಿರುವದು. ಆತ್ಮನೆಂದರೆ ತಾನೇ ಆಗಿರುವದು. ಹೀಗೆ ಎಲ್ಲವೂ ತಾನೇ ಆಗಿರುವಲ್ಲಿ ರತಿ, ಕ್ರೀಡೆ, ಮಿಥುನಗಳೆಂಬಿವೂ ಆತ್ಮನಲ್ಲೇ ಸೇರಿಹೋಗಿರುವದ ರಿಂದ ಭೂಮವಿದ್ಯಾಸಂಪನ್ನನು ಆನಂದಪರಬ್ರಹ್ಮವೇ ಆಗಿ ನೆಲೆನಿಲ್ಲುವನು. ಅವನಿಗಿಂತ ದೊಡ್ಡವರು ಯಾರೂ ಇಲ್ಲ. ಆದ್ದರಿಂದ ಸ್ವಯಂ ರಾಜನಾಗುವನು- ಎಂದಭಿಪ್ರಾಯ.)

# 58. ಭೂಮಾತ್ಮಜ್ಞಾನದ ಫಲ

ಹಿಂದಿನ ವಿವರಣೆಯಲ್ಲಿ 'ಭೂಮ'ವೆಂಬ ಹೆಸರಿನಿಂದ ಬ್ರಹ್ಮವನ್ನು ತಿಳಿಸಿಕೊಟ್ಟು ಅದು ತಾನೇ ಸ್ವತಂತ್ರವಾಗಿದ್ದು ಎಲ್ಲಕ್ಕೂ ಆಶ್ರಯವಾಗಿದೆ; ಅದಕ್ಕೆ ಮತ್ತೊಂದು ಆಶ್ರಯವೆಂಬುದಿಲ್ಲ–ಎಂದು ತಿಳಿಸಲಾಗಿತ್ತು. ಈ ಉಪದೇಶದಲ್ಲಿ ಭೂಮಬ್ರಹ್ಮವು ಎಲ್ಲವೂ ಆಗಿದೆಯೆಂಬುದು ತಿಳಿದುಬರುತ್ತದೆಯಾದರೂ ತಿಳಿಯುವವನ ಆತ್ಮವೂ ಅದೇ–ಎಂಬಿದು ಸ್ಪಷ್ಟವಾಗಿಲ್ಲ. ಇದರಿಂದ ತಿಳಿಯುವವನು ತನ್ನನ್ನು ಬಿಟ್ಟು ಉಳಿದುದೆಲ್ಲವೂ ಭೂಮಬ್ರಹ್ಮವೇ–ಎಂದು ತಪ್ಪಾಗಿ ಅರ್ಥಮಾಡಿಕೊಳ್ಳುವ ಸಂಭವವಿದೆ. ವಾಕ್ಯೋಪದೇಶಗಳಿಂದ ಆಗುವ ಪರೋಕ್ಷಜ್ಞಾನವು ಯಾವಾಗಲೂ ಹೀಗೆಯೇ ಅಪೂರ್ಣವಾಗಿರುತ್ತದೆ. ಇದು ಭೂಮಬ್ರಹ್ಮದ ಕಡೆಯಿಂದ ಆಗಿರುವ ತಪ್ಪಲ್ಲ, ತಿಳಿದುಕೊಳ್ಳಬೇಕಾದವನು ಮಾಡಿಕೊಂಡಿರುವ ತಪ್ಪಿನ ಫಲವಾಗಿದೆ. ಇಂಥ ದೋಷವನ್ನು ಪರಿಹರಿಸಲು ಮತ್ತೊಮ್ಮೆ ಶಬ್ದಾಂತರಗಳಿಂದ ಅದೇ ಭೂಮವನ್ನು ಸನತ್ಕುಮಾರರು ಉಪದೇಶಿಸಲು ಹೊರಟಿರುತ್ತಾರೆ. ಈ ಬಾರಿಗೆ ಭೂಮಬ್ರಹ್ಮವನ್ನು 'ಅಹಮಾದೇಶ'ದಿಂದಲೂ 'ಆತ್ಮಾದೇಶ'ದಿಂದಲೂ ವಿವರಿಸುತ್ತಿದ್ದಾರೆ. ಇದನ್ನು ವಿಚಾರಿಸೋಣ.

ಭೂಮವು ಅಪ್ರತಿಷ್ಠಿತ–ಅಥವಾ ಸುಪ್ರತಿಷ್ಠಿತಿ ಎಂದು ಹೇಳಲಾಗಿತ್ತು. ಅಭಿಪ್ರಾಯವು ಒಂದೇ ಆಗಿದೆ. ಹೇಗೆಂದರೆ "ಈ ವಸ್ತುವಿನ ಬೆಲೆಯು ಅಮೂಲ್ಯವಾಗಿದೆ ಎಂದರೆ "ಬೆಲೆಯನ್ನು ಕಟ್ಟಲಾರದಷ್ಟು ಮೇಲಿದೆ"–ಎಂದರ್ಥವೇ ಹೊರತು "ಬೆಲೆಯೇ ಇಲ್ಲದ್ದು" – ಎಂದು ಹೇಗೆ ಅರ್ಥವಲ್ಲವೋ ಹಾಗೆಯೇ ಅಪ್ರತಿಷ್ಠಿತವೆಂದರೆ ಅದು ಯಾವದನ್ನೂ ಆಶ್ರಯಿಸಿ ಯಾವದರ ಮಹಿಮೆಯಿಂದಲೂ ಇದ್ದುಕೊಂಡಿರುವದಿಲ್ಲ; ತನ್ನ ಮಹಿಮೆಯಿಂದಲೇ ತಾನಿದೆ–ಎಂದಭಿಪ್ರಾಯ. ಲೋಕದಲ್ಲಿ ಕೆಲವು ಜನರು ಬೇರೊಂದು ವಸ್ತುಗಳ ಇರವಿನಿಂದಲೇ ಮಹಿಮಾವಂತರಾಗಿರುವರು. ಉದಾಹರಣೆಗೆ ಭೂಮಿ, ಧನ, ಆಳುಕಾಳು, ಅಧಿಕಾರ ಇವುಗಳಿದ್ದಾಗ ಅಂಥವನನ್ನು ಪ್ರಸಿದ್ಧ ಪುರುಷನೆಂದು ಜನರು ಹಾಡಿಹೊಗಳುವರು. ಅವುಗಳನ್ನು ಕಳೆದುಕೊಂಡಾಗ ಅದೇ ಮನುಷ್ಯನೇ ಏತಕ್ಕೂ ಬೇಡದವನಾಗಿ ಬಿಡುವನು. ಹೀಗೆ ಮಹಿಮೆಯು ಹೊರಗಿನ ಪದಾರ್ಥಗಳಿಂದ ಬರುವದೂ ವಿಯೋಗವಾಗುವದೂ ಪ್ರಸಿದ್ಧವಾಗಿದೆ. ಪಾರ್ಟಿಯಿದ್ದರೆ ನಾಯಕತ್ವವೂ ಸರ್ಕಾರವೂ ನಡೆಯುವದು. ಇಲ್ಲವಾದರೆ ಅಂಥವನು ಮೂಲೆಗುಂಪಾಗುವನು–ಈಗಿನ ರಾಜಕೀಯವೆಲ್ಲ ಇದೇ ಪರಿಸ್ಥಿತಿಯಲ್ಲಿದೆ. ಹಾಗೆ ಭೂಮಬ್ರಹ್ಮವಿಲ್ಲ–ಎಂದರ್ಥ. ಅದರ ಮಹಿಮೆಯು ಅದಲ್ಲದ (ಅನಾತ್ಮ) ವಸ್ತುಗಳಿಂದ

ಬಂದದ್ದಲ್ಲ. ಬೆಂಕಿಯ ಬಿಸಿಯು ಹೇಗೆ ಅದರದ್ದೇ ಸ್ವಭಾವವೋ ಹಾಗೆ ಮಹಿಮೆಗಳೆಲ್ಲವೂ ಭೂಮಬ್ರಹ್ಮದ ಸ್ವಭಾವವೇ ಆಗಿವೆ–ಎಂದಭಿಪ್ರಾಯ.

ಇಲ್ಲಿ ಒಂದು ಸಂಶಯವು ಎದ್ದುಕೊಳ್ಳುತ್ತದೆ. ಭೂಮವು ಸರ್ವವೂ ಆಗಿರುವದು ನಿಜವಾದರೂ ಅದರ ಮಹಿಮೆಯಿಂದ ನಮಗೆ ಬಂದದ್ದೇನು? ಯಾವನಾದರೊಬ್ಬನು ಕೋಟ್ಯಾಧೀಶ್ವರನಾಗಿರಬಹುದು. ಅವನನ್ನು ಶ್ರೀಮಂತನೆಂದು ನಾವು ತಿಳಿದುಕೊಳ್ಳಲೂ ಬಹುದು. ಹಾಗೆ ತಿಳಿದುಕೊಂಡದ್ದರಿಂದ ನಮಗೇನು ಫಲವಾದೀತು? ಎಂದು ಯಾರಾದರೂ ಕೇಳಬಹುದಾಗಿದೆ. ಅದಕ್ಕೆ ಉತ್ತರವನ್ನು ಈಗ ತಿಳಿಸಲಾಗುವದು. ಭೂಮವು ತಿಳಿಯುವವನಿಗಿಂತ ಬೇರೆಯಾಗಿದ್ದು ಅನಾತ್ಮವಾಗಿದ್ದರೆ ತಿಳಿದವನಿಗೆ ಏನೂ ಫಲವಾಗುವದಿಲ್ಲವೆಂಬುದು ನಿಜ. ಆದರೆ ಇಲ್ಲಿ ಹಾಗಿಲ್ಲ. ಅದು ತಿಳಿಯುವವನ ಆತ್ಮವೇ–ಎಂದರೆ ಅವನೇ ಆಗಿರುತ್ತದೆ. ಆದ್ದರಿಂದ ಮಹಿಮೆಯೆಲ್ಲವೂ ತಾನೇ–ಎಂದೇ ಆಗಲಿದೆ. ಶ್ರೀಮಂತನ ದೃಷ್ಟಾಂತದಲ್ಲಿ ಮುಂದುವರೆದು ''ಅಂಥ ಶ್ರೀಮಂತನು ಬೇರೆ ಯಾರೂ ಅಲ್ಲ, ನಿಮ್ಮಪ್ಪನೇ'' ಎಂದು ಯಾರಾದರೂ ಹೇಳಿದರೆ ಹೇಗೆ ಕೇಳಿದವನಿಗೆ ಆ ಐಶ್ವರ್ಯವೆಲ್ಲಕ್ಕೂ ತಾನೇ ಒಡೆಯನೆಂದು ತಿಳಿದುಬಂದು ಸಂತೋಷವಾಗುವದೋ ಅದಕ್ಕಿಂತ ಹೆಚ್ಚಿನ ಆನಂದವೂ ಭೂಮವನ್ನು ತಾನೆಂದು ಕಂಡುಕೊಂಡವನಿಗೆ ಉಂಟಾಗಿ ಬಿಡುವದು. ಏಕೆಂದರೆ ಆ ತಿಳಿವಳಿಕೆಯಿಂದ ತಾನೇ ಎಲ್ಲವೂ ಆಗಿರುವದು ಅನುಭವಕ್ಕೆ ಬಂದು ಆಪ್ತಕಾಮನಾಗಿಬಿಡುವನು. ಆ ದೃಷ್ಟಿಯಿಂದ ಎಲ್ಲೆಲ್ಲೂ ನಾನೇ, ಎಲ್ಲವೂ ನಾನೇ–ಎಂಬ ಉದ್ಗಾರವೂ ಸಹಜವಾಗಿಬಿಡುವದು. ಇದನ್ನೇ ಶ್ರುತಿಯಲ್ಲಿ 'ನಾನೇ ಕೆಳಗೆ, ಮೇಲೆ, ಹಿಂದೆ, ಮುಂದೆ–ಇದ್ದುಕೊಂಡು ನಾನೇ ಎಲ್ಲವೂ ಆಗಿಬಿಟ್ಟಿರುವೆನು'– ಎಂಬ ವಾಕ್ಯಗಳಿಂದ ತಿಳಿಸಿರುತ್ತದೆ. ತೈತ್ತಿರೀಯೋಪನಿಷತ್ತಿನಲ್ಲಿಯೂ ಈ ಬಗೆಯ ಜ್ಞಾನಿಯ ಉದ್ಗಾರವು ಪ್ರಕಟವಾಗಿದೆ.

ಹೀಗೆ ಸರ್ವವೂ ಬ್ರಹ್ಮವೆ, ಬ್ರಹ್ಮವು ನಾನೇ–ಎಂದು ತಿಳಿದಮೇಲೂ 'ನಾನು' ಎಂಬ ಪ್ರತ್ಯಯದಲ್ಲಿ ಅವಿವೇಕಿಗಳ ದೃಷ್ಟಿಯಿಂದ ದೇಹಾದ್ಯುಪಾಧಿಗಳೂ ಗೃಹೀತವಾಗಿ ಬಿಡುವದರಿಂದ ಜ್ಞಾನವು ಮಲಿನವಾಗಿಬಿಡುವ ಸಂಭವವಿದೆ. ಈಗಲೂ ಅದ್ವೈತಿಗಳನ್ನು ಖಂಡನೆಮಾಡುವವರು ಇದೇ ರೀತಿಯ ತಪ್ಪುಗ್ರಹಿಕೆಗಳಿಂದ ತರ್ಕಮಾಡುತ್ತಾರೆ. ಅದ್ವೈತಸಿದ್ಧಾಂತವೂ ನಾನು ಬ್ರಹ್ಮವಾಗಿರುವೆನು–ಎಂಬ ತಿಳಿವಳಿಕೆಯೂ ಆಸುರೀ ಸಂಪತ್ತೆಂದೇ ಘೋಷಿಸುತ್ತಾ ಕೂಪಮಂಡೂಕಬುದ್ಧಿಯಿಂದ ಪ್ರವರ್ತಿಸುವವರೂ ಇದ್ದಾರೆ. ಸಾಮಾನ್ಯಜನರಿಗಂತೂ 'ನಾನು ಬ್ರಹ್ಮವು' ಎಂದು ಹೇಳಿದ ಕೂಡಲೆ 'ಇದೇನೋ ಮೋಸದ ಮಾತು' –ಎಂದೇ ಅನಿಸುತ್ತದೆ. 'ನಾನು ದೇವರು' ಎಂದು ಹೇಳಿ ಕೊಳ್ಳುವವರನ್ನಂತೂ ಜನರು ನಂಬುವದೇ ಇಲ್ಲ. ಹೀಗಿರುವಲ್ಲಿ ಅಹಮಾದೇಶವು

ಸರಿಯೆ? ಉಪನಿಷತ್ತಿನಲ್ಲಿ ಹೀಗೇಕೆ ಹೇಳಲಾಗಿದೆ? ಎಂದು ಜಿಜ್ಞಾಸುಗಳಿಗೆ ಸಂಶಯವುಂಟಾಗಬಹುದಾಗಿದೆ. ಇದನ್ನು ಪರಿಹರಿಸಲು ಸನತ್ಕುಮಾರರು ಮುಂದುವರೆದು 'ಆತ್ಮಾದೇಶ'ವನ್ನು ತಿಳಿಸಿರುತ್ತಾರೆ.

ನಿಜವೇನೆಂದರೆ: ನಾನು ಬ್ರಹ್ಮವು–ಎಂಬೀ ವಾಕ್ಯದಲ್ಲಿಯೂ 'ನಾನು' ಎಂಬಿದು ಅನುವಾದವು. ಬ್ರಹ್ಮವು ಪ್ರತಿಪಾದ್ಯವು. ''ಸರ್ವಂ ವಾಕ್ಯಂ ಸಾವಧಾರಣಮ್'' ಎಂಬ ನ್ಯಾಯದಂತೆ 'ಬ್ರಹ್ಮವು' – ಎಂಬುದರಲ್ಲಿ ಅವಧಾರಣೆಯೇ ಹೊರತು 'ನಾನು' ಎಂಬುದರಲ್ಲಲ್ಲ. ಲೋಕಸಿದ್ಧವಾಗಿರುವ ವಿಷಯವನ್ನೇ ಶಾಸ್ತ್ರವೂ ಹೇಳಹೊರಟರೆ ಅದು ಅನುವಾದವೆನಿಸಿ ಅಪ್ರಮಾಣವಾಗುತ್ತದೆ. ಹೇಗೆಂದರೆ ಎಲ್ಲಾ ಜೀವರಿಗೂ 'ನಾನು' ಎಂಬ ಅನುಭವವು ಇದ್ದೇ ಇದೆ. 'ನಾನು ಯಾರು?' ಎಂದು ವಿಚಾರಿಸುವಾಗ 'ನೀನು ಜೀವನು' ಎಂದು ಶಾಸ್ತ್ರವು ಒಂದು ವೇಳೆ ಹೇಳಿದರೆ 'ಇದೇನು ಮಹಾವಿಚಾರ? ನಾನು ಜೀವನೆಂಬುದು ನನಗೇ ತಿಳಿದಿದೆ. ಇದಕ್ಕೆ ಶಾಸ್ತ್ರವು ಏಕೆ ಬೇಕು?' ಎಂದು ವಿಚಾರಕನು ಉತ್ತರಕೊಡಬಹುದಾಗಿದೆ. ಆದರ ಬದಲು 'ನೀನು ಬ್ರಹ್ಮವು' ಎಂದು ಶಾಸ್ತ್ರವು ಹೇಳಿದರೆ ಅದು ಅಪೂರ್ವವಿಷಯವಾಗಿರುತ್ತದೆ. ಯಾವ ಜೀವನಿಗೂ ವಿಚಾರ ಮಾಡುವ ಮುಂಚೆ ತಾನು ಬ್ರಹ್ಮವೆಂದು ತಿಳಿದಿರುವದಿಲ್ಲ. ಆದ್ದರಿಂದ ಆ ವಾಕ್ಯವನ್ನು ಕೇಳಿದ ಜಿಜ್ಞಾಸುವು 'ನಾನು ಹೇಗೆ ಬ್ರಹ್ಮವಾದೇನು?' ಎಂದು ವಿಚಾರವನ್ನು ಮುಂದುವರಿಸಿದಾಗ ಶಾಸ್ತ್ರವು ಅವನಿಗೆ ಆತ್ಮವಿಷಯದಲ್ಲಿ ಇದ್ದುಕೊಂಡಿರುವ ಸ್ವಾಭಾವಿಕ (ಅವಿದ್ಯಕ)ವಾದ ತಪ್ಪುಗ್ರಹಿಕೆಗಳನ್ನು ದೂರಮಾಡಿ ನೀನು ಬ್ರಹ್ಮವೇ–ಎಂದು ತಿಳಿಸಿ ಉಪಕಾರಮಾಡುತ್ತದೆ. ಮತ್ತು 'ಬ್ರಹ್ಮವೆಂದರೆ ನೀನಲ್ಲದ ಅನಾತ್ಮವಸ್ತುವಲ್ಲ ; ಆತ್ಮನೇ; ಆತ್ಮನೆಂದರೆ ನೀನು, ನಾನು, ಅದು–ಎಲ್ಲವೂ ಆಗಿರುವದು. ಆದ್ದರಿಂದ ಆತ್ಮನೊಂದೇ ಎಲ್ಲವೂ ಆಗಿರುವದು'–ಎಂದೂ ತಿಳಿಸಿಕೊಡುತ್ತದೆ. ಇಂಥ ಆತ್ಮಜ್ಞಾನವು ಮುಕ್ತಸಾಧನವೇ ಹೊರತು 'ನಾನು' ಎಂಬ ಅಹಂಕಾರಜ್ಞಾನವು ಮುಕ್ತಿಸಾಧನವಲ್ಲ. ಹೀಗೆ ಅವಿವೇಕಿಗಳು ಅಹಮಾದೇಶವನ್ನು ತಪ್ಪಾಗಿ ತಿಳಿದಾರೆಂದು ಭಾವಿಸಿಯೇ ಉಪನಿಷತ್ತಿನಲ್ಲಿ ಅಹಮಾದೇಶದ ಅನಂತರ ಆತ್ಮಾದೇಶವನ್ನು ಮಾಡಲಾಗಿದೆ–ಎಂದು ತಿಳಿಯಬೇಕು. ಸಿದ್ಧಾಂತವು ಏಕಮೇವಾದ್ವಿತೀಯವಾದ ಆತ್ಮನೊಂದೇ ಎಂಬುದು ನಿಜವಾದರೂ ಅದನ್ನು ಅನುಭವಾರೂಢವಾಗಿ ಅರಿತುಕೊಳ್ಳುವವರೆಗೆ ಬೇರೆಬೇರೆಯ ರೀತಿಯ ಉಪದೇಶ ಕ್ರಮಗಳು ಬೇಕಾಗುವವು. ಅವುಗಳನ್ನೇ ಇಲ್ಲಿ ವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ.

ಈಗ ಆತ್ಮಾದೇಶವನ್ನು ಇನ್ನೂ ವಿವರವಾಗಿ ನೋಡೋಣ. ಆತ್ಮಶಬ್ದಕ್ಕೆ 'ಆಪ್ನೋತೀತ್ಯಾತ್ಮಾ' ಎಂಬ ವ್ಯುತ್ಪತ್ತಿಯಂತೆ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ವಸ್ತುವೇ ಆತ್ಮನೆಂದಾಗುವದು. ಎಲ್ಲವೂ ಎಂಬುದರಲ್ಲಿ ನಾನು, ನೀನು, ಅದು–ಎಂಬಿದೆಲ್ಲವೂ

ಸೇರಿ ಹೋಗಿದೆ ಎಂಬಿದನ್ನು ಮರೆಯಬಾರದು. ಹೀಗೆ ಆತ್ಮನು ಕಡಿವಡೆಯದೆ ಅಖಂಡವಾಗಿ ಎಲ್ಲೆಲ್ಲಿಯೂ ದೇಶಕಾಲನಿಮಿತ್ತಕ್ರಿಯಾಕಾರಕಫಲರೂಪವಾಗಿ ಹೊರಹೊಮ್ಮಿರುವ ದ್ವೈತಸಾಮಾನ್ಯವನ್ನೆಲ್ಲ ವ್ಯಾಪಿಸಿಕೊಂಡು ಅವಸ್ಥಾತ್ರಯಗಳನ್ನೂ ಹಾಸುಹೊಕ್ಕು ಅವುಗಳಿಗೂ ಸಾಕ್ಷಿಯಾಗಿ ಅವಿಕ್ರಿಯನಾಗಿರುವ ಸ್ವರೂಪನೆಂದು ಆ ಶಬ್ದಮಹಿಮೆಯಿಂದಲೇ ತಿಳಿಯಬರುತ್ತದೆ. ಬ್ರಹ್ಮಶಬ್ದವೂ ಹಾಗೆಯೇ ನಿತ್ಯಶುದ್ಧಬುದ್ಧಮುಕ್ತವೂ ಸರ್ವಜ್ಞವೂ ಸರ್ವಶಕ್ತಿಸಮನ್ವಿತವೂ ಆದ ವಸ್ತುವನ್ನೇ ಹೇಳುವದು. ಉಪನಿಷತ್ತುಗಳಲ್ಲಿ 'ಅಯಮಾತ್ಮಾ ಬ್ರಹ್ಮ' ಎಂದು ಆತ್ಮನೇ ಬ್ರಹ್ಮವೆಂದೂ ತಿಳಿಸಿದೆ. ಆದ್ದರಿಂದ ಅಹಮಾದೇಶದಲ್ಲಿ ಅಹಂಶಬ್ದದಿಂದಲೂ ಆತ್ಮಾದೇಶದಲ್ಲಿ ಆತ್ಮಶಬ್ದದಿಂದಲೂ ಹೇಳಿರುವ ವಸ್ತುವು ಒಂದೇ ಎಂದಾಗಿ 'ಅಹಂ ಬ್ರಹ್ಮಾಸ್ಮಿ' ಎಂಬ ತಾತ್ಪರ್ಯದಲ್ಲಿ ಕೊನೆಗಾಣುವದು. ಅನುಭವದ ಪ್ರಕಾರವೂ ನಾನು ಎಂಬುದರ ಬೆಳಕಿನಿಂದಲೇ ನೀನು, ಅದು–ಎಂಬ ಅನಾತ್ಮಗಳು ಬೆಳಗುತ್ತಿರುವವು. ನಾನಿಲ್ಲದ ಪ್ರಪಂಚವಾಗಲಿ ದ್ವೈತವಾಗಲಿ ಎಲ್ಲಿಯೂ ಸಿದ್ಧವಾಗಿಲ್ಲ. ಹೀಗೆ ಅನಾತ್ಮಗಳಿಗೆ ಆಧಾರವಾಗಿರುವ ಅಹಂ ಅಥವಾ ಆತ್ಮಾ ಎಂಬುದು ಬ್ರಹ್ಮವಲ್ಲದೆ ಬೇರೊಂದಾಗಿರಲು ಸಾಧ್ಯವಿಲ್ಲ. ಏಕೆಂದರೆ ಆತ್ಮನೊಬ್ಬನೇ ಕಂಡುಬರುವ ಏಕತ್ವಾನುಭವದಲ್ಲಿ 'ಅಹಂ' ಎಂಬ ವೃತ್ತಿಯು ಕೂಡ ಇರುವದಿಲ್ಲ. ಆದ್ದರಿಂದ ಅಹಮಾದೇಶಶೋಧನೆಗಾಗಿಯೇ ಆತ್ಮಾದೇಶವು ಹೊರಟಿದೆ. ಆತ್ಮನು ಬ್ರಹ್ಮವೆ ಎಂಬುದು ಸಿದ್ಧವಾಗಿಯೇ ಇದೆ. ಹೀಗಿರುವಲ್ಲಿ ಅಹಂ ಎಂಬುದನ್ನು ನಾವು ಚೆನ್ನಾಗಿ ಪರೀಕ್ಷಿಸಿ ಅದರಲ್ಲಿರುವ ಅನಾತ್ಮಾಂಶವಾದ ದೇಹೇಂದ್ರಿಯಾದ್ಯುಪಾಧಿಗಳನ್ನು ಕೈಬಿಟ್ಟು ಕೇವಲ ಚೈತನ್ಯಾಂಶವನ್ನೇ ಗ್ರಹಿಸಿದರೆ ಆ ಅಹಂ ಎಂಬುದೂ ಬ್ರಹ್ಮ ಎಂಬುದೂ ಒಂದೇ ಆಗಿರುವದು ತಿಳಿದುಬರುತ್ತದೆ. ಅದನ್ನೇ ಭೂಮವೆಂದು ಇಲ್ಲಿ ವರ್ಣಿಸಲಾಗಿದೆ.

ಇಂಥ ಭೂಮಬ್ರಹ್ಮವನ್ನು ಅರಿತುಕೊಂಡವನಿಗೆ ದೊರಕುವ ಫಲವನ್ನು ಈಗ ತಿಳಿಸಲಾಗುವದು. ನಿಜವಾಗಿ ಬ್ರಹ್ಮವೂ ಬ್ರಹ್ಮವಿದ್ಯೆಯೂ ಸ್ವಾರಾಜ್ಯವೆಂಬ ಫಲವೂ ಶಬ್ದಮಾತ್ರಗಳೇ ಹೊರತು ಬ್ರಹ್ಮವನ್ನು ಬಿಟ್ಟು ಮತ್ತೇನೂ ಇರುವದೇ ಇಲ್ಲ. ಆದರೂ ಉಳಿದ ಕರ್ಮೋಪಾಸನಾಫಲಗಳ ದೃಷ್ಟಿಯಿಂದ ಭೂಮವಿದ್ಯೆಗೂ ಫಲಸಂಕೀರ್ತನೆಯನ್ನು ಕಲ್ಪಿಸಿ ತಿಳಿಸಲಾಗಿದೆ. ಇಂಥ ಭೂಮವಿದ್ಯೆಯನ್ನು ತಿಳಿದವನು ಸ್ವರಾಜನಾಗುತ್ತಾನೆ. ಸ್ವರಾಜನೆಂದರೆ ಇವನನ್ನು ಆಳುವ ಮತ್ತೊಬ್ಬ ಪ್ರಭುವಿರುವದಿಲ್ಲ, ಇವನೇ ಪ್ರಭುಗಳೆಲ್ಲರಿಗೂ ಪ್ರಭುವಾಗಿರುವನು. ಸಕಲಕಾಮಗಳೂ ಇವನಲ್ಲಿ ಒಂದಾಗಿ ಬಿಡುವವು. ಹೀಗೆ ಇವನಿಗಿಂತ ಅನ್ಯವಾದ ಕಾಮಗಳಿಲ್ಲವಾಗಲು ಆತ್ಮಕಾಮನಾಗುವನು. ಆದ್ದರಿಂದಲೇ ಆತ್ಮಕ್ರೀಡನೂ ಆಗುವನು. ಇವನಿಗೆ ಆನಂದಾನುಭವಕ್ಕಾಗಿ ಬಾಹ್ಯವಾದ

ಕ್ರೀಡೆಗಳ ಮತ್ತು ಮಿಥುನಗಳ ಅವಶ್ಯಕತೆಯಿರುವದಿಲ್ಲ. ಹೊರಗೂ ಒಳಗೂ ಎಲ್ಲವೂ ಆತ್ಮನೇ ಆಗಿರುವಲ್ಲಿ ಮತ್ತೊಂದೆಂಬುದೇ ಇಲ್ಲವಾಗಿರುವಾಗ ಅಪೇಕ್ಷೆಯೇನಿದ್ದೀತು? ಇಂಥ ಸರ್ವಾತ್ಮಭಾವವೇ ಭೂಮವಿದ್ಯೆಯಿಂದ ದೊರಕುವ ಫಲವಾಗಿದೆ–ಎಂದು ಸನತ್ಕುಮಾರರು ತಿಳಿಸಿರುತ್ತಾರೆ.

---

## ಜ್ಞಾನಕ್ಕೆ ಸಾಧನ

**ಓಮ್ ॥ ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ ಸ್ಮೃತಿ ಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ ತಸ್ಮೈ ಮೃದಿತಕಷಾಯಾಯ ತಮಸಸ್ಪಾರಂ ದರ್ಶಯತಿ ಭಗವಾನ್ ಸನತ್ಕುಮಾರಃ ॥ 7–26–2**

ಭಾವಾರ್ಥಃ– ಆಹಾರಶುದ್ಧಿಯಾಗಲು ಅಂತಃಕರಣಶುದ್ಧಿಯು; ಅಂತಃಕರಣ ಶುದ್ಧಿಯಾಗಲು ನಿತ್ಯವಾದ ಸ್ಮೃತಿ ; ಸ್ಮೃತಿಲಂಭವಾದರೆ ಎಲ್ಲಾ ಅವಿದ್ಯಾಗ್ರಂಥಿಗಳಿಂದ ಬಿಡುಗಡೆಯು; ಆ ಮೃದಿತಕಷಾಯನಾದ (ನಾರದನಿಗೆ) ಕತ್ತಲೆಯ ಆಚೆಯ ದಡವನ್ನು ಪೂಜ್ಯನಾದ ಸನತ್ಕುಮಾರನು ತೋರಿಸುತ್ತಾನೆ.

(ಅಂತಃಕರಣಶುದ್ಧಿಯನ್ನು ಹೊಂದಿ ನಿರಂತರವಾದ ಬ್ರಹ್ಮಾನುಚಿಂತನದಿಂದ ದೋಷಗಳನ್ನೆಲ್ಲ ಪರಿಹರಿಸಿಕೊಂಡ ನಾರದರಿಗೆ ಗುರುವಾದ ಸನತ್ಕುಮಾರರು ಜ್ಞಾನೋಪದೇಶವನ್ನು ಮಾಡಿ ಮೋಕ್ಷದರ್ಶನವನ್ನು ಮಾಡಿಸಿದನು–ಎಂದಭಿಪ್ರಾಯ)

## 59. ಭೂಮವಿದ್ಯೆಗೆ ಸಾಧನಗಳು

ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯವು ಪೂರೈಸಲಿದೆ. ಈ ಅಧ್ಯಾಯದ ಕೊನೆಯ ಮಂತ್ರವನ್ನು ಈಗ ಅನುಸಂಧಾನಮಾಡಬೇಕಾಗಿದೆ. ನಾರದಸನತ್ಕುಮಾರಸಂವಾದರೂಪದಿಂದ ಭೂಮವಿದ್ಯೆಯನ್ನು ಈವರೆಗೆ ವರ್ಣಿಸಿದ ಶ್ರುತಿಯು ಕಡೆಯಲ್ಲಿ ಸಾಧನಗಳನ್ನೂ ಕುರಿತು ಪ್ರಸ್ತಾಪಿಸಿದೆ. ಸಾಧನಗಳಿಲ್ಲದೆ ಬ್ರಹ್ಮವಿದ್ಯೆಯು ವಶವಾಗುವದಿಲ್ಲ. ಅಷ್ಟೇ ಅಲ್ಲ. ಸಾಧನವಂತನಾದ ಯೋಗ್ಯನಾದ ಅಧಿ ಕಾರಿಗೆ ಮಾತ್ರವೇ ಆಚಾರ್ಯರೂ ಬ್ರಹ್ಮವಿದ್ಯೋಪದೇಶವನ್ನು ಮಾಡುತ್ತಾರೆ. ಗುರುಗಳು ದೊರಕಿದ್ದರೂ ಅಂತಃಕರಣಶುದ್ಧಿಯೇ ಮುಂತಾದ ಸೌಕರ್ಯಗಳಿಲ್ಲದವನಿಗೆ ಉಪದೇಶಗಳು ಫಲಿಸಲಾರವು. ಈಗಿನ ಕಾಲದಲ್ಲಿ ವೇದಾಂತೋಪದೇಶಗಳನ್ನು

ಹೇಳುವವರೂ ಕೇಳುವವರೂ ದೊರಕುತ್ತಾರಾದರೂ ನಾರದರಂಥ ಮೃದಿತ ಕಷಾಯರಾದ ಜಿಜ್ಞಾಸುಗಳೂ ಸನತ್ಕುಮಾರರಂಥ ಬ್ರಹ್ಮನಿಷ್ಠರಾದ ಆಚಾರ್ಯರೂ ವಿರಳರೇ ಸರಿ–ಎನ್ನಬೇಕಾಗಿದೆ. ಆದ್ದರಿಂದ ಭೂಮಾತ್ಮಜ್ಞಾನಕ್ಕೆ ಸಾಧನಗಳಾವುವು? ಎಂಬಿದನ್ನು ನಾವು ತಿಳಿದುಕೊಂಡು ಮೊದಲು ಅವುಗಳನ್ನು ಅನುಷ್ಠಾನ ಮಾಡಬೇಕು. ಸಾಧನಗಳು ವಶವಾದರೆ ಸಿದ್ಧಾಂತವು ಮನಸ್ಸಿನಲ್ಲಿ ಚೆನ್ನಾಗಿಯೇ ನೆಲೆಗೊಂಡು ಫಲದಲ್ಲಿ ಮುಕ್ತಾಯವಾಗುವದು. ಆಗ ನಾವು ನಿಜವಾದ ಬ್ರಹ್ಮವಿದರಾಗುವೆವು. ಪ್ರಕೃತ ಇಲ್ಲಿ ಹೇಳಿರುವ ಅಧ್ಯಾತ್ಮಸಾಧನಗಳನ್ನು ಕುರಿತು ಈಗ ವಿಚಾರಮಾಡೋಣ.

**ಆಹಾರಶುದ್ಧಿ:** ಎಂಬುದು ಮೊದಲನೆಯ ಸಾಧನವು. ಇದಕ್ಕೆ ಬಹಳ ವ್ಯಾಪಕವಾದ ಅರ್ಥವಿದೆ. ಸಾಮಾನ್ಯಾರ್ಥದಂತೆ ಆಹಾರವೆಂದರೆ ಹಸಿವಿನ ಪರಿಹಾರ ಕ್ಕಾಗಿ ತೆಗೆದುಕೊಳ್ಳುವ–ಬಾಯಿಂದ ತಿನ್ನುವಂಥ ಪದಾರ್ಥಗಳೆಲ್ಲವೂ– ಎಂದಭಿಪ್ರಾಯ ವಾಗುತ್ತದೆ. ಇದು ಸರಿ. ನಾವು ತಿನ್ನಬೇಕಾದ ಆಹಾರವು ಸಾತ್ತ್ವಿಕವಾಗಿರಬೇಕು. ಆಯುಷ್ಯ, ಬಲ, ಆರೋಗ್ಯಾದಿಗಳನ್ನು ಉಂಟುಮಾಡುವಂಥದ್ದಾಗಿರಬೇಕು. ರುಚಿಯಾಗಿಯೂ, ಜಿಡ್ಡಾಗಿಯೂ ಕೆಲವು ಕಾಲವಾದರೂ ಹಸಿವಿನ ಬಾಧೆಯಾಗದಂತೆ ಇರುವದಾಗಿಯೂ ಮನಸ್ಸಿಗೆ ಪೋಷಕವಾಗಿಯೂ ಇರಬೇಕೆಂದು ಶಾಸ್ತ್ರವು ತಿಳಿಸುತ್ತದೆ. ಈ ಕಾರಣದಿಂದಲೇ ಭಕ್ಷ್ಯ–ಅಭಕ್ಷ್ಯ–ವಿವೇಕವನ್ನೂ ಸ್ಮೃತ್ಯಾದಿಗಳಲ್ಲಿ ತಿಳಿಸಿದೆ. ಅಂತಃಕರಣ ಶುದ್ಧಿಗೆ ಇಂಥ ಆಹಾರವು ಅಗತ್ಯವೇ ಸರಿ. ಆದರೆ ಇಷ್ಟು ಮಾತ್ರದಿಂದ ಆಹಾರಶುದ್ಧಿಯಾಯಿತೆಂದು ತಿಳಿಯಬಾರದು. ಏಕೆಂದರೆ ಶ್ರೀಶಂಕರಾಚಾರ್ಯರು 'ಆಹ್ರಿಯತೇ ಇತ್ಯಾಹಾರಃ' ಎಂದು ವ್ಯಾಖ್ಯಾನಮಾಡುತ್ತಾ–ಕೇವಲ ಬಾಯಿಂದ ತೆಗೆದುಕೊಳ್ಳುವ ಆಹಾರವಲ್ಲದೆ ಕಣ್ಣು, ಕಿವಿ, ಮೂಗು, ಸ್ಪರ್ಶೇಂದ್ರಿಯಗಳಿಂದ ಸೇವಿಸುವಂಥ ಎಲ್ಲಾ ವಿಷಯಗಳೂ ಆಹಾರವೇ–ಎಂದಿರುತ್ತಾರೆ. ಈ ಅಭಿಪ್ರಾಯದಂತೆ ಒಳ್ಳೆಯವುಗಳನ್ನೇ ನೋಡುವದು, ಕೇಳುವದು, ಮುಟ್ಟುವದು–ಇತ್ಯಾದಿಗಳು ಮಾತ್ರ ಆಹಾರವೆಂದಾಯಿತು. ಹೀಗೆ ಕಾರ್ಯಾಕಾರ್ಯಗಳನ್ನು ಶಾಸ್ತ್ರಪ್ರಮಾಣದಿಂದ ಅರಿತುಕೊಂಡು ವಿಷಯಗಳನ್ನು ರಾಗದ್ವೇಷಗಳಿಲ್ಲದೆ ಶಾಸ್ತ್ರವಿರೋಧವಿಲ್ಲದಂತೆ ಸೇವಿಸುವವನು ಆಹಾರಶುದ್ಧಿಯನ್ನು ಸಂಪಾದಿಸಿಕೊಳ್ಳುತ್ತಾನೆ–ಎಂದಾಗುವದು. ಈಗಿನ ವಾತಾವರಣದಲ್ಲಿ ನಮ್ಮ ಕಣ್ಣಿಗೆ ಬೀಳುವ ದೃಶ್ಯಗಳೂ ಕಿವಿಗೆ ಕೇಳಿಸುವ ಶಬ್ದಗಳೂ ಓದಲು ದೊರಕುವ ಪತ್ರಿಕೆ ಹಾಗೂ ಗ್ರಂಥಗಳೂ ಬಹಳಮಟ್ಟಿಗೆ ಅಂತಃಕರಣಕ್ಕೆ ಕ್ಷೋಭೆಯನ್ನುಂಟುಮಾಡುವಂಥವೇ ಆಗಿರುತ್ತವೆ. ವಿದ್ಯಾರ್ಥಿಗಳಿಗೆ ಕೂಡ ಯೋಗ್ಯವಾದ ಸನ್ನಿವೇಶಗಳು ದುರ್ಲಭವಾಗಿರುವಾಗ ಸಾಧಕರಿಗಂತೂ ಬಹಳ ಕಷ್ಟವೇ ಬಂದೊದಗಿದೆ–ಎನ್ನದೆ ವಿಧಿಯಿಲ್ಲ. ಇಂಥ ವಿಷಮಸನ್ನಿವೇಶದಲ್ಲಿಯೂ ಯಾರು ಇಂದ್ರಿಯಗಳನ್ನು ಸ್ವಾಧೀನದಲ್ಲಿರಿಸಿಕೊಂಡು ಭಗವಂತನಲ್ಲಿಯೇ ವಿಶ್ವಾಸವಿಟ್ಟು

ಪ್ರಾಪಂಚಿಕಸುಖ, ಕಾಮನೆ, ಲೋಲುಪತೆಗಳಿಗೆ ವಶರಾಗದೆ ಆಹಾರಶುದ್ಧಿಯಿಂದ ಜೀವಿಸುವರೋ ಅಂಥವರಿಗೆ ಮುಂದುಮುಂದಿನ ಮೆಟ್ಟಿಲುಗಳನ್ನೇರಲು ಸಾಧ್ಯವಾಗುವದು. ಆಹಾರ ಶುದ್ಧಿಯ ಮೂಲಕ ಅಂತಃಕರಣಶುದ್ಧಿಯೂ ಅವರಿಗೆ ದೊರಕುವದು.

ಹೀಗೆ ಅಂತಃಕರಣಶುದ್ಧಿಯೂ ದೊರಕಿತೆಂದರೆ ಬ್ರಹ್ಮಚಿಂತನೆಯ ನಿರಂತರವಾದ ಪ್ರವಾಹವು ಇಂಥವರಿಗೆ ದಕ್ಕುವದು. ಇದನ್ನೇ 'ಧ್ರುವಾ ಸ್ಮೃತಿಃ' ಎನ್ನುವರು. ಅಂತಃಕರಣವು ಒಂದು ಕನ್ನಡಿಯಂತೆ-ಎಂದು ತಿಳಿಯಬೇಕು. ಹಿಂದಿನ ಕಾಲದಲ್ಲಿ ಕಂಚಿನಿಂದ ಕನ್ನಡಿಯನ್ನು ಸಿದ್ಧಗೊಳಿಸುತ್ತಿದ್ದರು. ಅದಕ್ಕೆ ಧೂಳುಕಸಗಳು ತುಂಬಿಕೊಂಡಿರುವಾಗ ಪ್ರತಿಬಿಂಬವು ಬೀಳುತ್ತಿರಲಿಲ್ಲ. ಆಗ ಅದನ್ನು ಚೆನ್ನಾಗಿ ಉಜ್ಜಿ ಉಜ್ಜಿ ಥಳಥಳನೆ ಹೊಳೆಯುವಂತೆ ಮಾಡಬೇಕಾಗಿತ್ತು. ಅದು ಸ್ವಚ್ಛವಾದಂತೆಲ್ಲ ಪ್ರತಿಬಿಂಬವು ಹೆಚ್ಚುಹೆಚ್ಚು ಸ್ಪಷ್ಟವಾಗಿ ತೋರುತ್ತಿತ್ತು. ಇದರಂತೆಯೇ ರಾಗದ್ವೇಷ ಮೋಹಾದಿರೂಪವಾದ ಕಲ್ಮಷಗಳಿಂದ ಕನ್ನಡಿಯಂತಿರುವ ನಮ್ಮ ಮನಸ್ಸು ಬಗ್ಗಡವಾದಾಗ ಅದರಲ್ಲಿ ಆತ್ಮಸ್ಮೃತಿಯುಂಟಾಗಲಾರದು. ಆಗ ಅದನ್ನು ನಾವು ಸ್ವಚ್ಛಮಾಡಬೇಕು. ಇದನ್ನೇ ಸಾಧನೆಯೆನ್ನುವರು. ಅಂತಃಕರಣಕ್ಕೆ ನೇರಾಗಿ ಅನ್ವಯಿಸುವಂಥ ಅಂತರಂಗಸಾಧನಗಳಾದ ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ, ಸಮಾಧಾನ, ಅನಸೂಯಾ, ಅದ್ರೋಹ, ಅನಹಂಕಾರ, ಭೂತದಯೆ, ಪಶ್ಚಾತ್ತಾಪಾದಿ ಗುಣಗಳನ್ನು ಅಭ್ಯಾಸಮಾಡಿದಂತೆಲ್ಲ ಅಂತಃಕರಣವು ಶುದ್ಧವಾಗುವದು. ಈ ಗುಣಗಳ ಅಭ್ಯಾಸವು ಸುಲಭವೇನಲ್ಲ. ಆದರೂ ಸ್ವಲ್ಪ ಸ್ವಲ್ಪವಾಗಿ ಅಳವಡಿಸಿಕೊಳ್ಳುತ್ತಾ ಬರಬೇಕು. ಕ್ರಮೇಣ ಈ ಗುಣಗಳೇ ಅಂತಃಕರಣಕ್ಕೆ ಸ್ವಭಾವವೆನಿಸಿದಾಗ ಚಿತ್ತಶುದ್ಧಿಯಾಗಿದೆ-ಎಂದು ತಿಳಿಯಬಹುದು.

ಅಧ್ಯಾತ್ಮವಿದ್ಯೆಯು ಅಂತಃಕರಣದಲ್ಲಿ ಮೂಡಬೇಕಾದರೆ ಚಿತ್ತಶುದ್ಧಿಯಾಗಿರಬೇಕು. ಅನಂತರ ಗುರೂಪದೇಶವು ಮನಸ್ಸಿಗೆ ಚೆನ್ನಾಗಿ ನಾಟುವದು. ಶ್ರವಣದ ಮೂಲಕ ಅಂತಃಕರಣವನ್ನು ಪ್ರವೇಶಿಸಿದ ವಿದ್ಯೆಯು ಮೊದಲು ಅಲ್ಲಿ ಸ್ಫುರಿಸುವದು. ಆಗ ಸಾಧಕನು ಅದನ್ನು ಅಲ್ಲಿಯೇ ಚೆನ್ನಾಗಿ ನೆಲಸುವಂತೆ ಪ್ರಯತ್ನಮಾಡಬೇಕು. ಇದನ್ನು ಮನನ, ನಿದಿಧ್ಯಾಸನಗಳೆನ್ನುವರು. ಅಥವಾ ತತ್ತ್ವವು ಸ್ಥೂಲವಾಗಿ ಗೊತ್ತಾದ ಮೇಲೆ ಅದು ಮತ್ತಷ್ಟು ಸ್ಫುಟವಾಗಿ ತೋರುವಂತೆ ಮಾಡಲು ಪ್ರಯತ್ನಮಾಡುವದನ್ನೇ ಸ್ಮೃತಿಯೆನ್ನುವರು. ಇದು ವಸ್ತುತಂತ್ರವಾಗಿರುವದು. ಹೇಗೆ ಆಕಾಶದಲ್ಲಿ ದೂರದಲ್ಲಿರುವ ವಸ್ತುವು ಕಣ್ಣಿಗೆ ಗೋಚರವಾದಾಗ ಯಾವದೋ ಒಂದು ವಸ್ತುವೆಂದು ನಿಶ್ಚಯವಾದದ್ದು ಹತ್ತಿರಕ್ಕೆ ಬಂದಂತೆಲ್ಲ ಮನುಷ್ಯನೆಂದೂ ಗಂಡಸೆಂದೂ ಒಬ್ಬ ಋಷಿಯೆಂದೂ ಕೊನೆಗೆ ನಾರದ ಮಹಾಮುನಿಗಳೇ-ಎಂದೂ ಒಮ್ಮೆ ಶ್ರೀಕೃಷ್ಣನು ಕಂಡುಕೊಂಡನೋ-ಈ

ಸಂದರ್ಭದಲ್ಲಿ ಅದನ್ನೇ ಮತ್ತೆ ಮತ್ತೆ ನೋಡುತ್ತಾ ಚಿಂತಿಸುತ್ತಾ ಇದ್ದು ಕಡೆಗೆ ನಿಶ್ಚಯಿಸಿದನೋ ಹಾಗೆ– ಸಾಧಕನೂ ಬ್ರಹ್ಮವನ್ನು ತನ್ನ ಸಾಧನಗಳಿಂದ ಕಂಡುಕೊಳ್ಳಬೇಕಾಗಿರುತ್ತದೆ. ಈ ಪ್ರಯತ್ನವು ಮನಸ್ಸಿನಲ್ಲಿಯೇ ನಡೆಯಬೇಕಾಗಿದೆ. ಮನಸ್ಸಿಗೆ ಇಂಥ ವಸ್ತುತಂತ್ರವಾದ ಚಿಂತನೆಯು ದೃಢವಾಗಿ ಅಂಟಿಕೊಂಡಲ್ಲಿ ಧ್ರುವಾ–ಸ್ಮೃತಿಃ ಎಂಬ ಫಲವಾಗುತ್ತದೆ. ಬ್ರಹ್ಮವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಮಾತ್ರ ಇನ್ನೂ ಒಂದು ವಿಶೇಷವುಂಟು. ಏನೆಂದರೆ ಮೊದಲು–ಕಂಡುಕೊಳ್ಳಬೇಕಾದದ್ದು ಬ್ರಹ್ಮವೆಂದೂ ಕಂಡುಕೊಳ್ಳುವವನಿಗಿಂತ ಅದು ಬೇರೆಯೆಂದೂ ಸಾಧನಸ್ಥಿತಿಯಲ್ಲಿದ್ದುಕೊಂಡಿದ್ದರೂ ತಿಳಿದ ಮೇಲೆ ಅದೇ ತಾನೆಂದು ಗೊತ್ತಾಗುವದರಿಂದ ಅದರ ಪ್ರಮೇಯತ್ವವೂ ಆತ್ಮನಾದ ತನ್ನ ಪ್ರಮಾತೃತ್ವವೂ ಮುಳುಗಿಹೋಗಿ ಅದ್ವೈತವೇ ಅನುಭವವಾಗಿಬಿಡುತ್ತದೆ. ಆಗ ಸ್ಮೃತಿ, ಸ್ಮರ್ತವ್ಯ, ಸ್ಮರಣಕರ್ತೃ–ಎಲ್ಲವೂ ತಾನೊಂದೇ ಆಗಿಬಿಡುವದರಿಂದ ಆ ಸ್ಥಿತಿಯು ಧ್ರುವಾ ಎಂದರೆ ನಿತ್ಯವಾಗಿ ಸ್ವರೂಪವೇ ಆಗಿಬಿಡುವದು. ಇದಕ್ಕಿಂತ ಇನ್ನು ಮುಂದೆ ಮಾಡಬೇಕಾದದ್ದಾಗಲಿ, ಕಂಡುಕೊಳ್ಳಬೇಕಾದದ್ದಾಗಲಿ ಏನೂ ಉಳಿದಿರುವದೇ ಇಲ್ಲ.

ಹೀಗೆ ಸ್ಮೃತಿಲಂಭವಾದರೆ ಎಂದರೆ ಭೂಮಬ್ರಹ್ಮದಲ್ಲಿ ನೆಲೆನಿಂತರೆ ಸರ್ವಗ್ರಂಥಿಗಳ ವಿಪ್ರಮೋಕ್ಷವಾಗುವದು–ಎಂದು ಶ್ರುತಿಯು ತಿಳಿಸುತ್ತದೆ. ಇಲ್ಲಿ ಮೋಕ್ಷವೆಂದರೇ ಸಾಕಾಗಿತ್ತು, ಆದರೂ ಅದನ್ನು ವಿ ಮತ್ತು ಪ್ರ– ಎಂಬ ನಿಪಾತಗಳೊಡನೆ ಸೇರಿಸಿ ಹೇಳಿದೆ. ಪ್ರಮೋಕ್ಷವೆಂದರೆ ಚೆನ್ನಾಗಿ ಬಿಡುಗಡೆಯಾಗುವದು ಎಂದರ್ಥ. ವಿಪ್ರಮೋಕ್ಷವೆಂದರೆ ಪುನರಾವೃತ್ತಿಯಿಲ್ಲದಂತೆ ಎಂದೆಂದೂ ಬಿಡುಗಡೆಯಾಗಿಬಿಡುವದೆಂದು ಅರ್ಥಮಾಡಬಹುದು. ಆದರೆ ಶ್ರುತಿಯ ಅಭಿಪ್ರಾಯದಲ್ಲಿ ಒಮ್ಮೆ ಬಂಧವಾಗಿದ್ದು ಜ್ಞಾನವು ಉಂಟಾದ ಮೇಲೆ ಬಿಡುಗಡೆಯಾಗುವದು ಎಂಬರ್ಥವಿಲ್ಲವಾದ್ದರಿಂದ ಮೋಕ್ಷವೆಂದರೆ ಅಜ್ಞಾನದಿಂದ ಬದ್ಧನಾಗಿದ್ದಂತೆ ಕಂಡುಬಂದಿದ್ದ ಸಾಧಕನಿಗೆ ಜ್ಞಾನವುಂಟಾದಾಗ ತನಗೆ ಯಾವಾಗಲೂ ಬಂಧವಾಗಲಿ ಸಂಸಾರವಾಗಲಿ ಇರಲೇ ಇಲ್ಲವೆಂದೂ ತಾನು ಎಂದೆಂದೂ ನಿತ್ಯಶುದ್ಧಬುದ್ಧಮುಕ್ತನೇ ಆಗಿದ್ದೆನು; ಈಗಲೂ ಮುಂದೆಯೂ ಆಗಿರುವೆನು–ಎಂದು ಕಂಡುಕೊಂಡು ನೆಲೆಗೊಳ್ಳುವದೇ ಮೋಕ್ಷವೆಂದೂ ತಾತ್ಪರ್ಯವಿರುತ್ತದೆ. ಇಂಥ ಅನುಭವದಲ್ಲಿ ಎಲ್ಲಾ ಅವಿದ್ಯಾಗ್ರಂಥಿಗಳೂ ಬಿಚ್ಚಿಹೋಗಿದ್ದು ಯಾವದೇ ಅಡೆತಡೆಗಳಿರುವದಿಲ್ಲ. ಎಲ್ಲೆಲ್ಲೂ ಭೂಮವೇ ಇದ್ದುಕೊಂಡಿರುವದನ್ನು ಸಾಧಕನು ಭೂಮವಾಗಿಯೇ ಅನುಭವಿಸುತ್ತಿರುವನು. ಇದೇ ಅವನ ಸ್ವರೂಪವಾಗಿಬಿಟ್ಟಿರುವದು.

ಇಂಥ ಭೂಮವಿದ್ಯೆಯನ್ನು ಉತ್ತಮಾಧಿಕಾರಿಯಾದ ನಾರನದನಂಥವರಿಗೆ ಮಾತ್ರ ಉಪದೇಶಿಸಲು ಸಾಧ್ಯವಾಗುವದು. ಏಕೆಂದರೆ ಅದು ಚೆನ್ನಾಗಿ ಮನದಟ್ಟಾಗಬೇಕಾದರೆ

ಸಾಧಕನು ಮೃದಿತಕಷಾಯನಾಗಿರಲೇಬೇಕು. ಉಳಿದ ಮಂದಮಧ್ಯಮಾಧಿಕಾರಿಗಳಿಗೆ ಭೂಮವಿದ್ಯೆಯು ದಕ್ಕಲಾರದು. ಅಂಥವರು ತಮ್ಮ ಅರ್ಹತೆಯನ್ನು ಸಾಧನಗಳಿಂದ ಹೆಚ್ಚಿಸಿಕೊಳ್ಳುತ್ತಾ ಬರಬೇಕು. ತಪಸ್ಸು, ಇಂದ್ರಿಯನಿಗ್ರಹ, ಧ್ಯಾನಾದಿಗಳನ್ನೂ ಶ್ರವಣಾದಿಗಳನ್ನೂ ಕೈಗೊಳ್ಳಬೇಕು. ಅವುಗಳನ್ನೂ ಅನುಷ್ಠಿಸಲು ಅನೇಕರಿಗೆ ಸಾಧ್ಯವಾಗುವದಿಲ್ಲ. ಅಂಥವರು ಬಹಿರಂಗಸಾಧನಗಳಾದ ಸ್ವಾಧ್ಯಾಯ, ಯಜ್ಞ, ದಾನ, ಜಪಾದಿಗಳನ್ನು ಮಾಡಿ ಅಂತಃಕರಣಶುದ್ಧಿಯನ್ನು ಮಾಡಿಕೊಳ್ಳಬೇಕು. ಈಗಿನ ಕಾಲಕ್ಕೆ ವೈದಿಕ ಸಾಧನಗಳ ಅನುಷ್ಠಾನವು ಕೂಡ ಕಡುಕಷ್ಟವಾಗಿರುವದು. ಕರ್ಮಗಳಿಗೆ ಅಗತ್ಯವಾದ ಜಲ, ಇಂಧನ, ಸ್ಥಳಾವಕಾಶಗಳು–ಕೂಡ ಪಟ್ಟಣಗಳಲ್ಲಿ ದೊರಕುವಂತಿಲ್ಲ. ಆದ್ದರಿಂದ ಪೌರಾಣಿಕವಾದ ನಾಮಜಪ, ಕೀರ್ತನ, ಸದ್ಗ್ರಂಥಗಳ ಪಠನ, ಶ್ರವಣ, ಯೋಗ್ಯರಾದವರಿಗೆ ಯಥಾಶಕ್ತಿ ದಾನ–ಮುಂತಾದ ಸಾಧನಗಳಿಂದ ಚಿತ್ತಶುದ್ಧಿಗೆ ಪ್ರಯತ್ನಿಸಬೇಕು. ಅಂತೂ ಭೂಮವಿದ್ಯೆಯು ಯಾವ ಅಂತಸ್ತಿನಲ್ಲಿದೆಯೋ ಅದು ಹಾಗೇ ಇರುತ್ತದೆ. ಅದನ್ನು ಕೆಳಗಿಳಿಸಲಾಗುವದಿಲ್ಲ. ನಾವೇ ಮೆಲ್ಲಮೆಲ್ಲನೆ ಅದರ ಮಟ್ಟಕ್ಕೆ ಏರುತ್ತಾ ಹೋಗಬೇಕು. ಅದನ್ನು ಸಾಧಿಸುವ ಛಲವುಳ್ಳವನು ಕಡೆಗೆ ಅದಕ್ಕಾಗಿ ಎಲ್ಲವನ್ನೂ ತ್ಯಾಗಮಾಡಿಯಾದರೂ ಸಾಧಿಸಿಕೊಳ್ಳಬೇಕಾಗುವದು.

ಹೀಗೆ ಶ್ರುತಿಯು ಈವರೆಗೂ ನಾರದಸನತ್ಕುಮಾರಸಂವಾದರೂಪವಾಗಿ ಭೂಮವಿದ್ಯೆಯನ್ನು ನಿರ್ದೇಶಿಸಿ ಸಮಾಪ್ತವಾಗಿರುತ್ತದೆ. ಗುರುಗಳಾದ ಸನತ್ಕುಮಾರರನ್ನು 'ಸ್ಕಂದ'ನೆಂದು ಸ್ತೋತ್ರಮಾಡಿದೆ. ಸ್ಕಂದನು ಪರಮೇಶ್ವರನ ಪ್ರಿಯಪುತ್ರನು. ಮಹಾಜ್ಞಾನಿಯು. ಅವನನ್ನು ಕುಮಾರನೆಂದೂ ಷಣ್ಮುಖನೆಂದೂ ಸುಬ್ರಹ್ಮಣ್ಯನೆಂದೂ ಪುರಾಣಗಳಲ್ಲಿ ಕರೆದಿದೆ. ನಾವು ಸ್ಕಂದಭಕ್ತರಾಗಿರುವದು ಸರಿ. ಆದರೆ ಆತನು ಭೂಮವಿದ್ಯಾಸಂಪ್ರದಾಯಪ್ರವರ್ತಕನೆಂದು ಅನೇಕರಿಗೆ ತಿಳಿದಿರಲಾರದು. ಈಗಲಾದರೂ ಆತನ ಮಹಿಮೆಯನ್ನರಿತು ಆರಾಧಿಸಿ ನಾರದರಂತೆ ಕೃತಾರ್ಥರಾಗೋಣ.

****

# ಎಂಟನೆಯ ಅಧ್ಯಾಯ

## (ದಹರವಿದ್ಯೆ–ಅವಸ್ಥಾತ್ರಯ ನಿರೂಪಣ)

## ದಹರವಿದ್ಯೆ

**ಓಮ್ ॥ ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ ಅಂತರಾಕಾಶಸ್ತಸ್ಮಿನ್ ಯದನ್ತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್ ॥ 8–1–1**

ಭಾವಾರ್ಥಃ– ಇನ್ನು ಈ ಬ್ರಹ್ಮಪುರದಲ್ಲಿ ದಹರವಾದ ಪುಂಡರೀಕವೆಂಬ ಮನೆಯಿದೆಯಲ್ಲ, ಅದರೊಳಗೆ ಅಲ್ಪವಾದ ಆಕಾಶವಿದೆಯಲ್ಲ, ಅದರಲ್ಲಿ ಒಳಗೆ ಯಾವದಿದೆಯೋ ಅದನ್ನು ಹುಡುಕಬೇಕು. ಅದನ್ನೇ ವಿಚಾರಮಾಡಬೇಕು.

(ಪರಬ್ರಹ್ಮವನ್ನು ಅರಿತುಕೊಳ್ಳಬೇಕೆನ್ನುವವನು ಮೊದಲು ಅದನ್ನು ತನ್ನ ಹೃದಯಾಕಾಶದಲ್ಲಿ ಕಂಡುಕೊಳ್ಳಬೇಕಾಗಿರುವದರಿಂದ ಪುಂಡರೀಕವೆಂಬ ತನ್ನ ಹೃದಯದಲ್ಲಿ ಬ್ರಹ್ಮವನ್ನು ಅದರ ಮಹಿಮೆ, ವಿಭೂತ್ಯಾದಿಗಳೊಡನೆ ಶಾಸ್ತ್ರಾಚಾರ್ಯರ ಉಪದೇಶಗಳ ಮೂಲಕ ಅರಿತು ಉಪಾಸನೆಮಾಡಬೇಕು –ಎಂದಭಿಪ್ರಾಯ.)

## 60. ದಹರೋಪಾಸನಾವಿಧಿ

ಛಾಂದೋಗ್ಯೋಪನಿಷತ್ತಿನ ಎಂಟನೆಯ ಅಧ್ಯಾಯವು ಈಗ ಪ್ರಾರಂಭವಾಗಿದೆ. ಹಿಂದಿನ ಅಧ್ಯಾಯದಲ್ಲಿ 'ಭೂಮವಿದ್ಯೆ'ಯನ್ನು ವಿವರಿಸಲಾಗಿತ್ತು, ಅದರ ಹಿಂದಿನ ಅಧ್ಯಾಯದಲ್ಲಿ 'ಸದ್ವಿದ್ಯೆ'ಯನ್ನು ತಿಳಿಸಲಾಗಿತ್ತು, ಇವುಗಳಲ್ಲಿ ನಿರ್ವಿಶೇಷವಾದ ಪರತತ್ತ್ವವನ್ನೇ ತಾತ್ಪರ್ಯದಿಂದ ವರ್ಣಿಸಲಾಗಿತ್ತು. ನಿರ್ವಿಶೇಷವೆಂದರೆ ಆಕಾರ, ರೂಪ, ಸ್ಥಾನ, ಕಾಲ, ಲೋಕ, ಜಾತಿ, ಗುಣ, ಕ್ರಿಯೆ–ಮುಂತಾದ ಯಾವ ಉಪಾಧಿಗಳೂ ಇಲ್ಲದ, ಆತ್ಮ ಬ್ರಹ್ಮ ಆಕಾಶ–ಮುಂತಾದ ಶಬ್ದಗಳಿಗೂ ಕೇವಲ ಲಕ್ಷ್ಯಾರ್ಥವಾಗಿರುವ 'ನೇತಿ, ನೇತಿ' ಎಂದಿಷ್ಟೇ ನಿರ್ದೇಶಿಸಬಹುದಾದ ಪರಮಾರ್ಥಸ್ವರೂಪವು. ಈ ತತ್ತ್ವದ ಉಪದೇಶವು ಒಮ್ಮೆಗೇ ಸಾಮಾನ್ಯಬುದ್ಧಿಯವರಿಗೆ ಎಟುಕಲಾರದೆಂದು ಭಾವಿಸಿ ಶ್ರುತಿಯು ಅದೇ ತತ್ತ್ವವನ್ನೇ ಉಪಾಸನೆಗಾಗಿ ಸ್ಥಾನಾದಿಗುಣಗಳಿಂದ ವಿಶಿಷ್ಟವಾಗಿ ತಿಳಿಸಲು ಈಗ ಹೊರಟಿರುತ್ತದೆ. ಇದರ ಪ್ರಯೋಜನವೇನೆಂದರೆ: ಮಂದಮಧ್ಯಮಾಧಿಕಾರಿಗಳಿಗೆ ಗುಣ,

ಆಕಾರ, ಶಕ್ತಿ–ಇವುಗಳಿಂದ ಕೂಡಿದಂತೆ ಬ್ರಹ್ಮೋಪದೇಶವನ್ನು ಮಾಡಿದರೆ ಇಷ್ಟವಾಗುತ್ತದೆ. ಮತ್ತು ಚಿಂತನೆಗೂ ಸುಲಭವಾಗುತ್ತದೆ. ಅಲ್ಲದೆ ಇಂಥ ಸಗುಣಬ್ರಹ್ಮವನ್ನು ಕೂಡ ಸಾಧಕರು ಬ್ರಹ್ಮಚರ್ಯೆ, ಶಮ, ದಮಾದಿಸಾಧನಗಳಿಲ್ಲದೆ ಚಿಂತಿಸಲಾಗುವದಿಲ್ಲ. ಆದ್ದರಿಂದ ಅಂಥ ಸಾಧನಗಳನ್ನೂ ಈಗ ತಿಳಿಸಲು ಅವಕಾಶವು ದೊರೆತಂತಾಗುವದು. ಇನ್ನು ಉಪಾಸಕರಿಗೆ ತಾವು ದೇಹಪಾತವಾದ ಮೇಲೆ ಹೋಗಿ ಬ್ರಹ್ಮವನ್ನು ಸೇರಬೇಕು–ಎಂಬ ಭಾವನೆಯೇ ಬಲವಾಗಿರುವದು. ಅಂಥವರ ದೃಷ್ಟಿಯಿಂದ ಸೇರುವವನು, ಸೇರಲ್ಪಡುವ ಸ್ಥಳ, ಸೇರಬೇಕಾದ ಗುರಿ–ಇವುಗಳನ್ನು ಬಿಡಿಯಾಗಿ ತಿಳಿಸಬೇಕಾಗುವದು. ಹೀಗೆಲ್ಲ ಇನ್ನೂ ತಿಳಿಸಬೇಕಾದ ವಿಷಯಗಳಿರುವದರಿಂದಲೂ, ಸಾಧಕರು ಮೊದಲು ಬ್ರಹ್ಮದ ಕಡೆಗೆ ತಿರುಗಲಿ, ಅನಂತರ ಉಪಾಯದಿಂದ ಮುಂದೆ ಅವರನ್ನು ಸವಿಶೇಷದಿಂದ ನಿರ್ವಿಶೇಷಕ್ಕೆ ಕೊಂಡೊಯ್ಯೋಣ–ಎಂಬ ಕೃಪಾದೃಷ್ಟಿ ಯಿಂದ ಶ್ರುತಿಯು ಈಗ ದಹರಬ್ರಹ್ಮೋಪಾಸನಾ ವಿದ್ಯೆಯನ್ನು ಆರಂಭಿಸಿರುತ್ತದೆ. ಇದು ಕೂಡ ಪ್ರಾಕೃತರಿಗೆ ಹೆಚ್ಚಿನದೇ ಸರಿ. ಅಧಿಕಾರಿಗಳಾದವರ ಉಪಯೋಗಕ್ಕಾಗಿ ಶ್ರುತಿಯು ಇದನ್ನು ಈಗ ವಿವರಿಸಿ ಹೇಳಲಿದೆ.

ದಹರವೆಂದರೇನು? ಈ ಶಬ್ದಕ್ಕೆ 'ಅಲ್ಪ' ಎಂದರ್ಥ. ದಹರಾಕಾಶ ಎಂದರೆ ಈ ನಮ್ಮ ದೇಹದ ನಡುವೆ ಇರುವ ಹೃದಯವೆಂಬ ಸ್ಥಾನದ ಒಳಗೆ ಇರುವ ಪುಟ್ಟ ಜಾಗ–ಎಂದರ್ಥ. ಬ್ರಹ್ಮತತ್ತ್ವವನ್ನು ಧ್ಯಾನಿಸುವವರು ಈ ದಹರಾಕಾಶವನ್ನು ಮೊದಲು ಚಿಂತಿಸಬೇಕು. ಶರೀರರಚನೆಯ ಪ್ರಕಾರ ಹೃದಯದ ವಿವರವು ಹೇಗಾದರೂ ಇರಲಿ, ಶಾಸ್ತ್ರೀಯ ಭಾವನೆಯಂತೆ ಹೃದಯವನ್ನು ಚಿಂತಿಸುವ ಕ್ರಮವನ್ನು ಮೊದಲು ತಿಳಿಯಬೇಕು. ಶಾಸ್ತ್ರಪ್ರಸಿದ್ಧಿಯಂತೆ ಹೃದಯವು ಕಮಲದ ಮೊಗ್ಗಿನ ಆಕಾರದಲ್ಲಿದ್ದು ಅಧೋಮುಖವಾಗಿದೆ. ಇಡಿಯ ದೇಹಕ್ಕೆ ಅದು ಮುಖ್ಯಸ್ಥಾನವಾಗಿದೆ. ಆದ್ದರಿಂದ ದೇಹವನ್ನು 'ಪುರ' (ಊರು) ಎಂದಿಟ್ಟುಕೊಂಡಲ್ಲಿ ಹೃದಯವು 'ಅರಮನೆ' ಯೆನಿಸುವದು. ಈ ಶರೀರವನ್ನು ಭೌತಿಕದೃಷ್ಟಿಯಿಂದ ನಾವು ರಕ್ತಮಾಂಸಕಶ್ಮಲಾದಿಗಳ ಗೂಡು ಎಂದು ತಿಳಿದಿದ್ದೇವೆ. ಆದರೆ ಶಾಸ್ತ್ರವು ಈ ಸ್ಥೂಲದೃಷ್ಟಿಯಿಂದ ಮೇಲೇರಿ ಇದು 'ಬ್ರಹ್ಮಪುರ'ವೆಂದೂ ನವದ್ವಾರಗಳೂ ದ್ವಾರಪಾಲಾದಿಪರಿವಾರವೂ ಉಳ್ಳದ್ದೆಂದೂ 'ದೇವಾಲಯ'ವೆಂದೂ ಭಾವಿಸುವಂತೆ ತಿಳಿಸುತ್ತದೆ. ಹೀಗೆ ಶರೀರದಲ್ಲಿ ಪವಿತ್ರ ಭಾವನೆಯುಂಟಾದಾಗ ಪುಂಡರೀಕವೇಶ್ಮದ ಮಹತ್ತ್ವವು ನಮಗೆ ಅರಿವಾಗುತ್ತದೆ. ಗರುಡಪುರಾಣದ ಸಾರೋದ್ಧಾರದ ಹದಿನೈದನೆಯ ಅಧ್ಯಾಯದಲ್ಲಿ ಶ್ರೀ ಮಹಾವಿಷ್ಣುವು ಗರುಡನಿಗೆ ಉಪದೇಶಿಸುವಾಗ ಮಾನುಷದೇಹವನ್ನು ಸ್ಥೂಲ, ಪಾರಮಾರ್ಥಿಕ–ಎಂದು ವಿಂಗಡಿಸಿ ಪಾರಮಾರ್ಥಿಕಶರೀರದ ವರ್ಣನೆಯನ್ನು ಮಾಡಿರುವದನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬಹುದು. ಇದರಿಂದ ದಹರೋಪಾಸನೆಗೆ ಸಹಾಯವಾಗಲಿದೆ.

ಶ್ರುತಿಯು ಈಗ ದಹರಪುಂಡರೀಕವೆಂಬ (ಅಲ್ಪವಾದ ಕಮಲದ ಮನೆ) ಸ್ಥಾನವು ಬ್ರಹ್ಮಪುರದಲ್ಲಿದೆ–ಎಂದು ತಿಳಿಸುತ್ತಾ ಅದರೊಳಗೆ ಯಾವ ದಹರಾಕಾಶವುಂಟೋ ಅದರೊಳಗೆ ಏನಿದೆಯೋ ಅದನ್ನು ಚಿಂತಿಸಬೇಕು–ಎಂದು ಮುಂದುವರೆದು ವಿವರಿಸುತ್ತದೆ. ಆದ್ದರಿಂದ ಈಗ ದಹರಾಕಾಶವನ್ನು ನಾವು ಅನುಸಂಧಾನ ಮಾಡೋಣ.

ಈ ಉಪಾಸನೆಯು ನಮಗೆ ಅನುಭವಾರೂಢವಾಗುವದಕ್ಕಾಗಿ ನಮ್ಮ ಅಧ್ಯಾತ್ಮ ಶರೀರವನ್ನು ನೆನೆಯೋಣ. ನಮ್ಮೊಳಗೇ ಅಂತಃಕರಣವಿರುವದು ಪ್ರಸಿದ್ಧವು. ಅದರಿಂದಲೇ ನಮಗೆ ಜ್ಞಾನಪ್ರಪಂಚವು ಅಧೀನವಾಗಿರುವದು. ಸ್ಥೂಲದೃಷ್ಟಿಯಿಂದ ನೋಡಿದರೆ ಪ್ರಪಂಚದ ಒಂದು ಭಾಗದಲ್ಲಿ ನಾವಿದ್ದುಕೊಂಡು ಒಂದು ಶರೀರವನ್ನು ಧರಿಸಿ ಅದರ ಅಭಿಮಾನಿಗಳಾಗಿ ನಾವು ಜೀವನವನ್ನು ಸಾಗಿಸುತ್ತಿರುವೆವಷ್ಟೆ? ಮತ್ತು ನಮ್ಮ ಹೊರಗಡೆ ಆಕಾಶಾದಿಮಹಾಭೂತಗಳೂ ಅದ್ಭುತವಾದ ಸೃಷ್ಟಿಯೂ ಹರಡಿಕೊಂಡಿರುವದು. ಆ ಸೃಷ್ಟಿಯಲ್ಲಿ 'ನಾನು' ಎಂಬುದು ಒಂದು ಕ್ಷುದ್ರಪದಾರ್ಥ ವೆಂದೇ ನಮ್ಮ ಅನಿಸಿಕೆಯಾಗಿದೆ. ಆದರೆ ಈ ಮಹಾಸೃಷ್ಟಿಯು ನಿಜವಾಗಿ ನಮಗೆ ಎಲ್ಲಿ ಕಾಣುತ್ತಿದೆ? ಏನಿದ್ದರೆ ಕಾಣುತ್ತದೆ? ಯಾವದು ಇಲ್ಲದಿದ್ದರೆ ಕಾಣಲಾರದು? ಎಂಬುದನ್ನು ಯೋಚಿಸಿರಿ. ಉತ್ತರವೇನೆಂದರೆ: ಅಂತಃಕರಣ (ಚಿತ್ತ)ವಿದ್ದರೆ ಅದು ಕಾಣುತ್ತದೆ. ಇಲ್ಲವಾದರೆ ಇಲ್ಲ. ಇದು ಅನುಭವವು. ಹಾಗಾದರೆ ಅಂತಃಕರಣದ ಅಧೀನವಾಗಿ ಕಂಡುಬರುವದು ಅದಕ್ಕಿಂತಲೂ ಅಲ್ಪವಾಗಿರಬೇಕಲ್ಲವೆ? ಅಥವಾ ಕಾಣಬರುವ ಪ್ರಪಂಚವು ಎಷ್ಟೇ ವಿಶಾಲವಾಗಿದ್ದರು ಅದು ಯಾವ ಆಧಾರದಲ್ಲಿ ಕಂಡುಬರುವದೋ ಆ ವಸ್ತುವು ಆ ಪ್ರಪಂಚಕ್ಕಿಂತ ದೊಡ್ಡದಾಗಿಯೇ ಇರಬೇಕಲ್ಲವೆ? ಈ ಹಿನ್ನೆಲೆಯಲ್ಲಿ ಒಂದು ಸಿದ್ಧಾಂತವು ಏರ್ಪಡುತ್ತದೆ. ಏನೆಂದರೆ: ಭೂತಾಕಾಶಾದಿಗಳಿಗಿಂತಲೂ ಚಿತ್ತಾಕಾಶವು ದೊಡ್ಡದಾಗಿರುವದು. ಚಿತ್ತವೇ ದೃಶ್ಯಗಳಿಗೆಲ್ಲ ಆಶ್ರಯವು. ಅದೇ ಪ್ರಭುವು. ಆದ್ದರಿಂದ ಚಿತ್ತಾಕಾಶವನ್ನು ಕುರಿತು ವಿಚಾರಮಾಡಬೇಕು. ಈ ತತ್ತ್ವವನ್ನವಲಂಬಿಸಿಯೇ ದಹರೋಪಾಸನೆಯು ಹೊರಟಿದೆ. ದಹರಾಕಾಶವು ಹೆಸರಿಗೆ ದಹರ (ಅಲ್ಪ)ವೆಂದಾದರೂ ನಿಜವಾಗಿಯೂ ಅದೇ ಬೃಹತ್ತು–ಮಹತ್ತೂ ಆಗಿದೆ. ಈ ವಿಚಾರವು ನಮಗೆ ಶಾಸ್ತ್ರದೃಷ್ಟಿಯಿಂದಲೇ ತಿಳಿಯಬೇಕಾಗಿದೆ. ಏಕೆಂದರೆ ಲೌಕಿಕದೃಷ್ಟಿಯಂತೆ ಭೂತಾಕಾಶಾದಿಗಳೇ ದೊಡ್ಡದೆಂದು ನಮ್ಮ ಭಾವನೆಯಿರುತ್ತದೆ. ಆದ್ದರಿಂದ ಚಿತ್ತಾಕಾಶವನ್ನು ದಹರ–ಅಲ್ಪವು, ಅದರಲ್ಲೇನಿದೆ? ಎಂದುಕೊಳ್ಳದೆ ಅದಕ್ಕೂ ಅಂತರವಾಗಿ ಏನಿದೆ? ಎಂಬುದನ್ನು ವಿಚಾರಮಾಡಬೇಕು. ಇದು ದಹರೋಪಾಸನೆಯೆನಿಸುವದು.

ಇಲ್ಲಿ ವಿಚಾರಮಾಡತಕ್ಕ ಮತ್ತೊಂದು ವಿಷಯವಿದೆ. ಲೋಕದಲ್ಲಿಯೂ ಜನರು ದೇವರನ್ನು ಸರ್ವಶಕ್ತನೆಂದೂ ಸರ್ವವ್ಯಾಪಕನೆಂದೂ ಸರ್ವಕ್ಕೂ ದೊಡ್ಡವನೆಂದೂ

ಭಾವಿಸಿಯೇ ಪ್ರತಿಮಾದಿಗಳಲ್ಲಿ ಪೂಜಿಸುವರು. ದೇವರಿಗೆ ರಥೋತ್ಸವವಾದರೆ–ದೇವರಿಗಿಂತ ರಥವು ಹೆಚ್ಚು ದೊಡ್ಡ ಪದಾರ್ಥವಾದರೂ–ಭಾವನೆಯಿಂದ ದೇವರೇ ದೊಡ್ಡವನೆಂದು ಎಲ್ಲರೂ ತಿಳಿದಿರುತ್ತಾರೆ. ಹಾಗೆಯೇ ಚಿತ್ತವು ವ್ಯವಹಾರಪ್ರಪಂಚದಲ್ಲಿ ಅಲ್ಪವಾಗಿ ದೇಹಾಂತರ್ಗತವಾಗಿ ಕಂಡುಬಂದರೂ ಮಹಿಮೆಯಲ್ಲಿ ಅದು ದೊಡ್ಡದೇ ಆಗಿರುವದು. ಉದಾಹರಣೆಯಲ್ಲಿ ಪ್ರತಿಮೆಯನ್ನು ದೇವರೆಂದು ಭಾವಿಸಲಾಗಿತ್ತು, ಇಲ್ಲಿ ಹಾಗಲ್ಲ. ಚಿತ್ತವನ್ನು ಹೆಚ್ಚಿನದೆಂದು ಭಾವಿಸುವ ಪ್ರಶ್ನೆಯೇ ಇರುವದಿಲ್ಲ. ಅದು ಅಲ್ಪವೆಂದು ತಿಳಿದಿರುವದೆ ನಮ್ಮ ತಪ್ಪಾಗಿದೆ. ನಿಜವಾಗಿ ಅದು ಎಂದೆಂದೂ ದೊಡ್ಡದೇ ಆಗಿದೆ. ಇಷ್ಟು ವಿಚಾರಮಾಡಿದ ಅನಂತರ ಚಿತ್ತಕ್ಕೆ ಆ ದೊಡ್ಡತನವು ಎಲ್ಲಿಂದ ಬಂತು? ಚಿತ್ತವೆಂದರೇನು? ಅದರ ಗುಟ್ಟೇನು? ಅದುಕೂಡ ಯಾವದು ಇರುವದರಿಂದ ತಾನು ಇದೆ–ಎನಿಸಿಕೊಂಡಿದೆ? ಅದು ಲಯವಾಗುವದಿಲ್ಲವೆ? ಅದು ಆಗ ಎಲ್ಲಿ ಅಡಗಿಕೊಳ್ಳುತ್ತದೆ? ಹೊರಬರುವಾಗ ಎಲ್ಲಿಂದ ಬರುತ್ತದೆ? ಅದು ಇಲ್ಲವಾದಾಗ ಉಳಿದದ್ದೇನು? ಈ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಕಂಡುಕೊಳ್ಳಬೇಕು. ಈ ಚಿಂತನೆಯೇ ಒಂದರ್ಥದಲ್ಲಿ ದಹರೋಪಾಸನೆಯೆನಿಸಿರುವದು. ನಿಜವೇನೆಂದರೆ ಚಿತ್ತಕ್ಕೂ 'ಚಿತ್' ಎಂಬಿದೇ ಆಧಾರವು. ಅದು ಸ್ವಯಂಪ್ರಕಾಶವು. ಅದಕ್ಕೆ ಹುಟ್ಟುಸಾವುಗಳಿಲ್ಲ, ಉದಯಾಸ್ತಮಾನಗಳಿಲ್ಲ. ನಾಮರೂಪಜಾತಿಗುಣಕ್ರಿಯಾದಿಗಳ ಉಪಾಧಿಗಳಾಗಲಿ, ವಿಶೇಷಗಳಾಗಲಿ ಅದರಲ್ಲಿಲ್ಲ. ಅದು ಅಖಂಡ, ಏಕಮೇವಾದ್ವಿತೀಯವೂ ಅಜರಾಮರವೂ ಆಗಿರುವ ಪರಮಾರ್ಥತತ್ತ್ವವು. ಅದೇ ಬ್ರಹ್ಮವು. ಅದನ್ನು ಸರಿಯಾಗಿ ಕಂಡುಕೊಳ್ಳುವದೇ ಪರಮಪುರುಷಾರ್ಥವು. ಅದು ಉಪಾಸಕನ ಆತ್ಮನೇ ಎಂಬಿದು ಕೊನೆಯ ಮಜಲಾಗಿರುತ್ತದೆ. ದಹರಾಕಾಶದೊಳಗೆ ಹುಡುಕಬೇಕಾಗಿರುವ ವಸ್ತುವು ಅದೇ–ಎಂದು ಶ್ರುತಿಯು ತಿಳಿಸಿರುತ್ತದೆ.

ಈಗ ಶ್ರುತಿಯು ಶಿಷ್ಯಾಚಾರ್ಯರ ಪ್ರಶ್ನ ಪ್ರತಿವಚನರೂಪದಿಂದ ಮುಂದುವರೆದು ಹೀಗೆ ತಿಳಿಸುತ್ತಿದೆ; ದಹರೋಪಾಸನೆಯನ್ನು ಕುರಿತು ಪ್ರಸ್ತಾಪಿಸಿದ ಆಚಾರ್ಯನನ್ನು ಕುರಿತು ಶಿಷ್ಯರು 'ಪೂಜ್ಯರೆ, ತಾವು ಶರೀರದಲ್ಲಿರುವ ಹೃದಯಾಕಾಶದಲ್ಲಿರುವದನ್ನು ಹುಡುಕಬೇಕು, ವಿಚಾರಮಾಡಬೇಕು–ಎಂದು ಹೇಳಿದಿರಲ್ಲ, ಅಲ್ಪವಾದ ಅದರಲ್ಲೇನಿದೆ?' ಎಂದು ಕೇಳಿದರೆ ಆಚಾರ್ಯನು ಹೀಗೆನ್ನಬೇಕು: ''ಕೇಳಿರಿ, ನಾನು ಆಕಾಶವನ್ನು ಪರಿಚ್ಛಿನ್ನವೆಂದು ಹೇಳಲಿಲ್ಲ; ಆದರೆ ಅದು ಹೃದಯವೆಂಬ ಉಪಾಧಿಯನ್ನು ಅನುಸರಿಸಿಕೊಂಡಿರುವದರಿಂದ ಅಲ್ಪವಾಗಿದೆ–ಎಂದೆನು. ಯಾರು ಇಂದ್ರಿಯಗಳನ್ನೆಲ್ಲ ಉಪಸಂಹಾರಮಾಡಿಕೊಂಡು ಒಳಮುಖವಾಗಿ ಅದರಲ್ಲಿಯೇ ನೋಡುವರೋ ಅಂಥ ಯೋಗಿಗಳಿಗೆ ಸ್ವಚ್ಛವಾದ ವಿಜ್ಞಾನಜ್ಯೋತಿಯಾದ ಬ್ರಹ್ಮವೇ ಅಲ್ಲಿ ಕಂಡುಬರುವದು. ಅದು ಎಲ್ಲವೂ ಆಗಿ ಎಲ್ಲವನ್ನೂ ವ್ಯಾಪಿಸಿಕೊಂಡಿದೆ'' ಎಂದು ಹೇಳಬೇಕು. ಹೀಗೆ ಶ್ರುತಿಯು

ವಿಚಾರಮಾಡುತ್ತಾ ಹೃದಯದಲ್ಲಿರುವ ಪರಬ್ರಹ್ಮದ ಉಪಾಸನೆಯನ್ನೇ ದಹರೋಪಾಸನೆಯೆಂದು ಸ್ಪಷ್ಟಪಡಿಸಿರುತ್ತದೆ.

ಈಗ ನಾವು ಸರ್ವಹೃದಯಾಂತರ್ವರ್ತಿಯಾದ ಪರಬ್ರಹ್ಮವನ್ನು ಮೊದಲು ಉಪಾಸನೆಗಾಗಿ ನಮ್ಮ ಹೃದಯಕ್ಕೆ ತಂದುಕೊಳ್ಳಬೇಕು. ನಾವು ಉಪಾಸಕರಾಗಿದ್ದೇವೆಂದು ಭಾವಿಸಿಕೊಂಡು ಬ್ರಹ್ಮದ ಗುಣಗಳನ್ನು ಚಿಂತಿಸಬೇಕು. ಯಾವನು ಏನನ್ನು ಚಿಂತಿಸುವನೋ ಅವನು ಅದೇ ಆಗಿಬಿಡುವನೆಂಬ ನ್ಯಾಯದಂತೆ ಬ್ರಹ್ಮೋಪಾಸಕನೂ ಕಡೆಯಲ್ಲಿ ಬ್ರಹ್ಮವಾಗುವದು ನಿಶ್ಚಯವೇ. ಆದರೆ ಜ್ಞಾನದೃಷ್ಟಿಯಿಂದ ಎಂದೆಂದೂ ಬ್ರಹ್ಮವೇ ಆಗಿರುವನಲ್ಲವೆ? ಉಪಾಸನೆಯಾದರೂ ಏತಕ್ಕೆ? ಎಂದು ಈ ಸಂದರ್ಭದಲ್ಲಿ ಅತಿಪ್ರಶ್ನೆಯನ್ನು ಮಾಡಬಾರದು. ಇದು ಉಪಾಸನಾಪ್ರಕರಣವಾದ್ದರಿಂದ ಇಲ್ಲಿ ಮಾಡಿ ಪಡೆಯತಕ್ಕದ್ದೆಂಬ ವ್ಯವಹಾರವಿರುತ್ತದೆ. ಪರತತ್ತ್ವವಾದರೋ, ವ್ಯವಹಾರಾತೀತವಾಗಿರುವದು. ಆದ್ದರಿಂದ ಜ್ಞಾನದಿಂದ ತತ್ತ್ವನಿಷ್ಠರಾಗುವ ಕ್ರಮಕ್ಕೂ ಉಪಾಸನೆಯಿಂದ ಬ್ರಹ್ಮವನ್ನು ಮುಟ್ಟುವ ಕ್ರಮಕ್ಕೂ ವ್ಯತ್ಯಾಸವಿದೆ. ದಾರಿಗಳು ಬೇರೆಬೇರೆಯಾಗಿರುವದರಿಂದ ಒಂದರ ಅನುಷ್ಠಾನಕಾಲಕ್ಕೆ ಇನ್ನೊಂದನ್ನು ಬೆರಕೆಮಾಡಬಾರದು. ಇಲ್ಲಿ ಬ್ರಹ್ಮಚಿಂತನೆಯನ್ನೇ ಪ್ರಸ್ತಾಪಿಸಿರುವದರಿಂದ ಚಿಂತನೀಯವಾದ ಬ್ರಹ್ಮದ ಸಕಲ ಗುಣಾದಿವಿಶೇಷಗಳನ್ನೂ ಮಹಿಮೆಯನ್ನೂ ಸಾಧಕನು ಅರಿತುಕೊಳ್ಳಬೇಕು. ಅನಂತರ ಚಿಂತಿಸಲೂ ಬೇಕು. ಕಟ್ಟಕಡೆಗೆ ಆ ಬ್ರಹ್ಮವು ಆತ್ಮನೇ–ಎಂದರೆ ತನ್ನ ಸ್ವರೂಪವೇ ಎಂದು ಮನದಂದುಕೊಳ್ಳಬೇಕು. ಉಪಾಸನೆಯು ಸಾಧಕನ ಸಾಧನೆಗೆ ತಕ್ಕಂತೆ ಜ್ಞಾನದಲ್ಲಿ ಒಂದಾಗಬಹುದು. ಆಗದೆಯೂ ಇರಬಹುದು. ಆಗದೆ ಇದ್ದಾಗ ಸಗುಣಬ್ರಹ್ಮಪ್ರಾಪ್ತಿಯಾಗಿ ಕ್ರಮಮುಕ್ತಿಯಾಗುತ್ತದೆ. ಅದನ್ನೇ ವಿವರಿಸಲು ಈಗ ಶ್ರುತಿಯು ಹೊರಟಿದೆ. ಹೆಚ್ಚಿನ ವಿಷಯಗಳನ್ನು ಶ್ರುತಿಯ ಮೂಲಕವೇ ಮತ್ತೆ ವಿಚಾರಮಾಡೋಣ.

---

## ದಹರಾತ್ಮನ ಲಕ್ಷಣ

**ಓಮ್ ॥ ಏಷ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪೋ ಯಥಾ ಹ್ಯೇವೇಹ ಪ್ರಜಾ ಅನ್ವಾವಿಶಂತಿ ॥ 8–1–5**

**ಭಾವಾರ್ಥ:–** ಈ ಆತ್ಮನು ಅಪಹತಪಾಪ್ಮನೂ ಮುಪ್ಪಿಲ್ಲದವನೂ ಸಾವಿಲ್ಲದವನೂ ಶೋಕವಿಲ್ಲದವನೂ ಹಸಿವಿಲ್ಲದವನೂ ಬಾಯಾರಿಕೆಯಿಲ್ಲದವನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವನು. ಹೇಗೆಂದರೆ ಪ್ರಜೆಗಳು (ತನ್ನ ಒಡೆಯನು

ಗೊತ್ತುಪಡಿಸಿದಷ್ಟನ್ನು ಭೋಗಿಸುವಂತೆ ಆತ್ಮನನ್ನು ಅರಿಯದವರು) ಅಸ್ವತಂತ್ರರಾಗಿದ್ದು ಕೊಂಡಿರುವರು.

(ಹೃದಯಾಕಾಶದಲ್ಲಿರುವ ಆತ್ಮನು ಪರಬ್ರಹ್ಮವೇ ಆಗಿದ್ದು ಸತ್ಯಕಾಮಾದಿಗುಣಗಳುಳ್ಳವನಾಗಿದ್ದರೂ ಅವನನ್ನು ಅರಿತುಕೊಳ್ಳದವರು ಪರಾಧೀನರಾದ ಪ್ರಜೆಗಳಂತೆ ಮಿತವಾದ ಭೋಗಗಳನ್ನು ಅನುಭವಿಸುತ್ತಾ ಅತೃಪ್ತರೂ ಅಸುಖಿಗಳೂ ಆಗಿರುವರು– ಎಂದಭಿಪ್ರಾಯ.)

# 61. ದಹರಬ್ರಹ್ಮೋಪಾಸನೆ

ಉಪನಿಷತ್ಸಂದೇಶಗಳು ಯಾವಾಗಲೂ ನೂತನವಾಗಿಯೇ ಇರುವವು. ಅವುಗಳನ್ನು ಮನನಮಾಡಿದಂತೆಲ್ಲ ನಾವು ಬ್ರಹ್ಮಾನುಭವಕ್ಕೆ ಹತ್ತಿರವಾಗುತ್ತಾ ಹೋಗುವೆವು. ನಮ್ಮ ಆತ್ಮನು ಪರಬ್ರಹ್ಮವೇ–ಎಂಬುದು ಅವುಗಳ ಒಕ್ಕೊರಲಿನ ಉಪದೇಶವಾಗಿದೆ. ಈಗಾಗಲೇ ಈ ವಿಷಯವನ್ನು ಸವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ. ಈಗ ಬ್ರಹ್ಮವನ್ನು ಪ್ರತಿಯೊಬ್ಬನೂ ತನ್ನ ಹೃದಯಾಕಾಶದಲ್ಲಿ ಚಿಂತಿಸಬೇಕಾದ ಕ್ರಮವನ್ನು ತಿಳಿಸುವದಕ್ಕಾಗಿ ದಹರೋಪಾಸನಾ ಪ್ರಕರಣವನ್ನು ಆರಂಭಿಸಲಾಗಿದೆ. ಶಿಷ್ಯಾಚಾರ್ಯರ ಸಂವಾದರೂಪವಾಗಿ ಉಪಕ್ರಮವಾಗಿರುವ ಈ ಪ್ರಕರಣದಲ್ಲಿ ಆಚಾರ್ಯನು ದಹರ (ಅಲ್ಪ)ವಾದ ಹೃದಯಾಕಾಶದಲ್ಲಿ ಒಳಗೆ ಅಡಗಿರುವ ತತ್ತ್ವವನ್ನು ಹುಡುಕಬೇಕೆಂದೂ ಅದನ್ನೇ ವಿಚಾರಮಾಡಬೇಕೆಂದೂ ತಿಳಿಸಿರುತ್ತಾನೆ. ಆದರೆ ಈ ವಿಷಯದಲ್ಲಿ ಶಿಷ್ಯರಿಗೆ ಇನ್ನೂ ಕೆಲವು ಸಂಶಯಗಳು ನಿವಾರಣೆಯಾಗಿಲ್ಲ. ಅವುಗಳನ್ನು ಈಗ ಪ್ರಸ್ತಾಪಿಸಲಾಗುವದು.

ಮೊದಲನೆಯದಾಗಿ 'ಅಲ್ಪವಾದ ಹೃದಯಾಕಾಶದಲ್ಲಿ ಏನಿದ್ದೀತು?' ಎಂದು ಶಿಷ್ಯರು ಕೇಳಿದ್ದರು. ಆಚಾರ್ಯನು 'ಹೃದಯವೆಂಬ ಉಪಾಧಿಯು ಅಲ್ಪವಾಗಿರುವದು ನಿಜ. ಆದರೆ ಅದರಲ್ಲಿರುವ ಬ್ರಹ್ಮವು ಅಲ್ಪವಲ್ಲ; ಅದು ಇಡಿಯ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದೆ' ಎಂದು ತಿಳಿಸಿದ್ದನು. ಈಗ ಶಿಷ್ಯರು ಕೇಳುವದೇನೆಂದರೆ: ''ಪೂಜ್ಯರೆ, ಹೃದಯವು ಶರೀರದಲ್ಲಿದೆ; ಶರೀರವಾದರೋ ಪರಿಣಾಮವನ್ನು ಹೊಂದುತ್ತಲೇ ಇರುವದು. ಕಡೆಗೆ ಒಂದು ದಿನ ಮಣ್ಣುಪಾಲಾಗುವದು; ಅಥವಾ ಬೆಂಕಿಯ ಪಾಲಾಗುವದು. ಆಗ ಹೃದಯವೂ ತದಂತರ್ಗತವಸ್ತುವೂ ನಾಶವಾಗುವದಲ್ಲವೆ? ಆಗ ಉಳಿಯುವದಾದರೂ ಏನು? ನಾವು ಏನನ್ನು ಚಿಂತಿಸಬೇಕೋ ಅದು ಅನಿತ್ಯವೇ ಆದರೆ ಚಿಂತಿಸಿ ಫಲವೇನು?'' ಎಂಬುದು ಅಂತೇವಾಸಿಗಳ ಪ್ರಶ್ನೆಯಾಗಿರುತ್ತದೆ. ಇದು ನಿಜವಾಗಿಯೂ ನಾವೆಲ್ಲರೂ ಕೇಳುವ ಪ್ರಶ್ನೆಯೇ ಆಗಿದೆ. ವ್ಯವಹಾರದೃಷ್ಟಿಯಿಂದ 'ನಾನು' ಎಂದರೆ ದೇಹವನ್ನೇ ಎಲ್ಲರೂ ಗ್ರಹಿಸುತ್ತಾರೆ. ದೇಹವನ್ನು ಒಂದು ಮನೆಯಂತೆ ಎಂದು

ಭಾವಿಸಿದಾಗಲೂ ಮನೆಗೆ ನಾಶವುಂಟಾದರೆ ಮನೆಯಲ್ಲಿರುವದೆಲ್ಲವೂ ನಾಶವಾಗಲೇಬೇಕಲ್ಲವೆ? ಆಗ ದಹರಾಕಾಶವಾದರೂ ಉಳಿದೀತೇ? ಎಂಬಿದು ಪ್ರಶ್ನೆಯ ಸಾರವು. ಇದನ್ನೇ ಅರ್ಜುನನೂ ಗೀತೆಯಲ್ಲಿ ಪ್ರಸ್ತಾಪಿಸಿರುತ್ತಾನೆ. ಭೀಷ್ಮಾದಿಗಳನ್ನು ಸಂಹರಿಸಿಬಿಟ್ಟರೆ ಅವರು ನಿತ್ಯರೆಂಬುದು ಹೇಗಾದೀತು? ಎಂಬಂತೆಯೇ ಇಲ್ಲಿಯೂ ಪ್ರಶ್ನೆಯ ಅಭಿಪ್ರಾಯವನ್ನು ತಿಳಿಯಬೇಕು.

ಈಗ ಆಚಾರ್ಯನು ಉತ್ತರಕೊಡುತ್ತಿದ್ದಾನೆ. ಏನೆಂದರೆ "ಶಿಷ್ಯರೆ, ಹಾಗೆ ತಿಳಿಯಬೇಡಿರಿ. ಜರಾಮರಣಾದಿಗಳು ಕೇವಲ ದೇಹಧರ್ಮಗಳೇ ಹೊರತು ಆತ್ಮನ ಧರ್ಮವಲ್ಲ. ಉದಾಹರಣೆಗೆ ನಾಟಕದಲ್ಲಿ ಒಬ್ಬ ಗಂಡಸು ಹೆಂಗಸಿನ ವೇಷವನ್ನು ಧರಿಸಿದ್ದಾಗ ಅವನು ತೊಟ್ಟಿರುವ ಉಡುಪುಗಳು ಉಪಾಧಿಮಾತ್ರವೇ ಹೊರತು ಅವನ ಸ್ವರೂಪಕ್ಕೆ ಸೇರಿರುವದಿಲ್ಲ. ಆಗ್ಗೆ ಅವನೇನೂ ಹೆಂಗಸೇ ಆಗಿಬಿಡುವದಿಲ್ಲ. ಅಥವಾ ಕನಸಿನಲ್ಲಿ ಅವನು ಹೆಂಗಸಾಗಿ ವ್ಯವಹರಿಸಿ ಎಚ್ಚರವನ್ನು ಹೊಂದಿದರೆ ಕನಸಿನ ಇಡಿಯ ದೇಹವೇ ಅವನಲ್ಲ. ಆ ಕನಸಿನಲಿದ್ದ ದೇಹವು ಈಗ ಅವನನ್ನು ಬಿಟ್ಟಗಲಿದರೂ ಅವನಿಗೇನೂ ಕೊರತೆಯು ಕಂಡುಬರುವದಿಲ್ಲ. ಏಕೆಂದರೆ ಆ ತೋರಿಕೆಯ ದೇಹವು ಎಂದೂ ಅವನಾಗಿರಲೇ ಇಲ್ಲ. ಕನಸಿನಲ್ಲಿ ಅದು ತಾನೆಂಬ ಅಭಿಮಾನವಿದ್ದುದು ಹೊರತು ನಿಜವು ಹಾಗಿರಲೇ ಇಲ್ಲ. ಅದರಂತೆಯೇ ಈ ದೇಹಗಳು ದೇಹಿಯಾದ ಆತ್ಮನಿಗೆ ಉಪಾಧಿಗಳು ಮಾತ್ರವೇ ಸರಿ. ಈ ದೇಹವು ಸವೆದರೆ ಆತ್ಮನು ಸವೆಯುವದಿಲ್ಲ. ಈ ದೇಹವು ತುಂಡುಮಾಡಲ್ಪಟ್ಟರೆ ಆತ್ಮನೇ ತುಂಡರಿಸಲ್ಪಡುವದಿಲ್ಲ. ಒಂದು ಮನೆಯನ್ನು ಕೆಡವಿದಾಗ ಹೇಗೆ ಅದರಲ್ಲಿ ಅಡಗಿದ್ದ ಆಕಾಶಕ್ಕೆ ಏನೂ ಧಕ್ಕೆಯಾಗುವದಿಲ್ಲವೋ ಹಾಗೆಯೇ ದೇಹವು ಬಿದ್ದುಹೋದಾಗ ಆಕಾಶಕ್ಕಿಂತಲೂ ಸೂಕ್ಷ್ಮನಾದ ಆತ್ಮನಿಗೆ ಯಾವ ವಿನಾಶವೂ ಸಂಭವಿಸುವದಿಲ್ಲ. ಆದ್ದರಿಂದ ನೀವು ಬ್ರಹ್ಮಪುರವೆಂಬುದನ್ನು ಬ್ರಹ್ಮವು ವಾಸವಾಗಿರುವ ಪುರವು ಎಂದರ್ಥಮಾಡಿಕೊಳ್ಳಬೇಡಿರಿ. ಬ್ರಹ್ಮವೇ ಪುರವು ಎಂದರೆ ಪುರದಂತಿರುವ ದೇಹದಲ್ಲಿ ಕಂಡುಬರುವ ಬ್ರಹ್ಮವು ಅಥವಾ ಆತ್ಮನು ಯಾವಾಗಲೂ ನಿತ್ಯನೂ ಅವಿನಾಶಿಯೂ ಆಗಿರುವನೆಂದು ತಿಳಿಯಿರಿ. ಆ ಆತ್ಮನೇ ನಿಜವಾದ ನಿಮ್ಮ ಸ್ವರೂಪವು ಎಂದರ್ಥ. ಹೀಗೆ ಉಪದೇಶಿಸಿದ ಬಳಿಕ ಆತ್ಮಸ್ವರೂಪವನ್ನು ಮತ್ತೊಮ್ಮೆ ಕೆಲವು ಲಕ್ಷಣಗಳಿಂದ ಆಚಾರ್ಯನು ವಿವರಿಸಲಿದ್ದಾನೆ. ಅದನ್ನೂ ನೋಡೋಣ.

ಆತ್ಮ ಅಥವಾ ಬ್ರಹ್ಮವು ಅಪಹತಪಾಪ್ಮವು. ಇಲ್ಲಿ ಬ್ರಹ್ಮೋಪದೇಶಕ್ಕಿಂತ ಆತ್ಮೋಪದೇಶವೇ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಏಕೆಂದರೆ ಜರಾಮರಣಾದಿದೋಷಗಳ ವಿಷಯದಲ್ಲಿ ನಮಗೆ ಹೆದರಿಕೆಯುಂಟಾಗಿರುವದು ನಮ್ಮ ಆತ್ಮನ ವಿಷಯಕ್ಕೆ ಆದ್ದರಿಂದ ಶ್ರುತಿಯು ನಮ್ಮ ಭ್ರಾಂತಿಯನ್ನು ಕಳೆಯುವದಕ್ಕಾಗಿ ಆತ್ಮನನ್ನು ಪಾಪಾದಿ ದೋಷಗಳಿಲ್ಲದವನೆಂದೇ ನಿರ್ದೇಶಿಸುತ್ತಿದೆ. ವ್ಯವಹಾರದಲ್ಲಿ ನಾವು

'ಪಾಪೋಽಹಂ ಪಾಪಕರ್ಮಾಽಹಂ' ಎಂದು ಹೇಳಿಕೊಳ್ಳುವದುಂಟು. ಶ್ರುತಿಯ ದೃಷ್ಟಿಯಲ್ಲಿ ಇದು ಸರಿಯಲ್ಲ. ಆದರೆ ನಮಗೆ ಶ್ರುತಿಯ ದೃಷ್ಟಿಯ ಉಪದೇಶವು ಅನುಭವಕ್ಕೆ ಬರುವಂತಿಲ್ಲ. ಇರಲಿ ನಿಜವು ಮರೆಯಾಗಿದ್ದ ಮಾತ್ರಕ್ಕೆ ನಿಜವಲ್ಲದೆ ಹೋದೀತೆ? ಸೂತಪುತ್ರನೆಂದು ಕರೆದ ಮಾತ್ರಕ್ಕೆ ಅವನು ಕುಂತೀಪುತ್ರನಲ್ಲದೆಹೋದಾನೆ? ಹಾಗೆಯೇ ನಾವು ನಿಜವಾಗಿಯೂ ಅಪಹತಪಾಪ್ಮರೇ ಆಗಿರುವೆವು. ನಮ್ಮ ಆತ್ಮನು ಪಾಪಪುಣ್ಯಗಳನ್ನು ದಾಟಿರುವವನೇ ಸರಿ. ಹಾಗೆಯೇ ಮುಪ್ಪಿಲ್ಲದವನು. ಏಕೆಂದರೆ ಮುಪ್ಪು ದೇಹಧರ್ಮವು. 'ನಾನು' ಎಂಬುದಕ್ಕೆ ಮೂಲಭೂತವಾಗಿ ಮುಪ್ಪಿರುವದಿಲ್ಲ. 'ನಾನು ದೇಹವು ಎಂದುಕೊಂಡರೆ ಮಾತ್ರ ಮುಪ್ಪು ನಮಗೆ ಅಂಟಿಕೊಳ್ಳುತ್ತದೆ. ಇದರಂತೆಯೇ ಉಳಿದ ಸಂಸಾರಧರ್ಮಗಳನ್ನೂ ತಿಳಿಯಬಹುದಾಗಿದೆ. ಸಾವು ಎಂಬುದು ಒಂದು ಸಂಸಾರಧರ್ಮವು. ಸಾವು ಆತ್ಮನಿಗೆ ಸಂಭವಿಸುವದೇ ಇಲ್ಲ. ತಾನು ಸತ್ತದ್ದನ್ನು ತಾನೇ ನೋಡಲಾಗುವದಿಲ್ಲ. ಏಕೆಂದರೆ ನೋಡುತ್ತಿರುವವನು ಸಾವಿಗೆ ವಶನಾಗಿರುವದಿಲ್ಲ. ಅದಕ್ಕೆ ಬದಲಾಗಿ ಸಾವಿಗೆ ಸಾಕ್ಷಿಯಾಗಿರುತ್ತಾನೆ. ಹೀಗಿರುವಲ್ಲಿ ತಾನು ಎಂಬ ಸ್ವರೂಪಕ್ಕೆ ಸಾವಾದರೂ ಹೇಗೆ ಸಂಭವಿಸೀತು? ಆದರೂ ದೇಹ ಧರ್ಮಾಧ್ಯಾರೋಪದಿಂದ ತಾನು ಸಾಯುತ್ತೇನೆ–ಎಂದು ಅಜ್ಞಾನಿಯು ಭಾವಿಸುತ್ತಾನೆ. ಶ್ರುತಿಯು ಈ ತಪ್ಪುತಿಳಿವಳಿಕೆಯನ್ನು ಕಿತ್ತೊಗೆದು ಆತ್ಮನು ವಿಮೃತ್ಯುವು ಎಂದು ತಿಳಿಸುತ್ತಿದೆ. ಹಾಗೆಯೇ ಮುಂದುವರೆದು ಆತ್ಮನು ಶೋಕವಿಲ್ಲದವನು ಎಂದು ತಿಳಿಸುತ್ತಿದೆ. ಶೋಕವು ಮನೋಧರ್ಮವು. ಮನಸ್ಸಿಗೂ ಒಳಗಿರುವ ಆತ್ಮನು ಮನಸ್ಸಿನ ಆಗುಹೋಗುಗಳನ್ನು ನೋಡುವ ದ್ರಷ್ಟೃವಾದ್ದರಿಂದ ಶೋಕಾತೀತನಾಗಿರುವನು. ಹಾಗೆಯೇ ಆತ್ಮನು ಹಸಿವಿಲ್ಲದವನು. ಬಾಯಾರಿಕೆಯಿಲ್ಲದವನು. ಇವೆರಡು ಧರ್ಮಗಳೂ ಪ್ರಾಣನ ಸಂಬಂಧವಾದವುಗಳು. ಬದುಕಿರುವವನು ತಾನು ಪ್ರಾಣಾತ್ಮನೆಂದು ಭಾವಿಸಿ ಹಸಿವು ನೀರಡಿಕೆಗಳು ತನಗೆ ಉಂಟಾಗುತ್ತಿವೆ–ಎನ್ನುತ್ತಾನೆ. ಆದರೆ ಇವು ಆತ್ಮನ ಧರ್ಮಗಳಲ್ಲವೆಂಬುದಕ್ಕೆ ನಮ್ಮ ಅನುಭವವೇ ಸಾಕ್ಷಿಯಾಗಿದೆ. ಹೇಗೆಂದರೆ ಎಚ್ಚರದಲ್ಲಿ ಊಟಮಾಡಿ ತೃಪ್ತನಾಗಿ ಮಲಗಿದ್ದವನಿಗೆ ಹಸಿವಾದಂತೆ ಕನಸಾಗುತ್ತದೆ. ಪುನಃ ಎಚ್ಚೆತ್ತಾಗ ಹಸಿವು ಇಲ್ಲವಾಗುತ್ತದೆ. ಆದ್ದರಿಂದ ನಮ್ಮೊಡನೆ ಅನುಗತವಾಗಿ ಬರದಿರುವ ಯಾವ ಧರ್ಮಗಳೂ ನಮಗೆ ಸೇರಿದ್ದಲ್ಲವೆಂದೇ ತೀರ್ಮಾನಿಸಬೇಕಾಗುತ್ತದೆ. ಹೀಗೆ ಆತ್ಮನು ಮುಪ್ಪು, ಮರಣ, ಶೋಕ, ಮೋಹ, ಹಸಿವು, ಬಾಯಾರಿಕೆಗಳೆಂಬ ದೇಹ, ಮನಃಪ್ರಾಣ ಧರ್ಮಗಳನ್ನು ಮೀರಿದವನಾಗಿದ್ದಾನೆಂದು ಚಿಂತಿಸುವದೇ ದಹರೋಪಾಸನೆಯ ಮುಖ್ಯ ತತ್ತ್ವವಾಗಿರುತ್ತದೆ.

ಈಗ ಆತ್ಮನ ಧರ್ಮಗಳಾವುವೆಂಬುದನ್ನು ಉಪಾಸನಾದೃಷ್ಟಿಯಿಂದ ಹೇಳಲಾಗುವದು. ನಿರ್ಧರ್ಮಕನಾದ ಆತ್ಮನನ್ನು ಉಪಾಸನೆಮಾಡಲಾಗುವದಿಲ್ಲವಾದ್ದ

ರಿಂದ ಅಧ್ಯಾರೋಪದೃಷ್ಟಿಯನ್ನವಲಂಬಿಸಿ ಈ ಧರ್ಮಗಳ ಉಪದೇಶವನ್ನು ಸಮನ್ವಯಮಾಡಿಕೊಳ್ಳಬೇಕು. ಆತ್ಮನ ಲಕ್ಷಣವನ್ನು ಅರಿಯಲು ಶ್ರುತಿಯೇ ಕಲ್ಪಿಸಿರುವ ಧರ್ಮಗಳಾವುವೆಂದರೆ: ಸತ್ಯಕಾಮನು, ಸತ್ಯಸಂಕಲ್ಪನು- ಎಂಬಿವುಗಳು. ಸತ್ಯಕಾಮನೆಂದರೆ ಸುಳ್ಳಾಗದ ಕಾಮಗಳುಳ್ಳವನು. ಸಂಸಾರಿಗಳಿಗಾದರೊ, ಕಾಮಗಳು ಮನಸ್ಸಿನಲ್ಲಿ ಹುಟ್ಟಿ ಹಾಗೇ ಮೈಗರೆದುಬಿಡುವವು. ಕಾರ್ಯರೂಪಕ್ಕೆ ಬರುವದಿಲ್ಲ. ಆತ್ಮನು ಬ್ರಹ್ಮವಾದ್ದರಿಂದ ಅವನ ಕಾಮಗಳು ಅಂಥವಲ್ಲ. ಬೆಂಕಿಯ ಬಿಸಿಯಂತೆ ಅವನ ಸ್ವರೂಪನೇ ಆಗಿರುವವು. ಆದ್ದರಿಂದಲೇ ಅವು ಸಂಸಾರಿಗಳ ಕಾಮಗಳಂತೆ ಅಲ್ಲ. ಸಂಸಾರಿಗಳಿಗಾದರೊ, ಕಾಮಗಳು ಅನಾತ್ಮಭೂತವಾಗಿದ್ದು ಅವರನ್ನು ಪ್ರಚೋದಿಸಿ ಕರ್ಮಗಳಲ್ಲಿ ತೊಡಗಿಸಿ ಫಲವನ್ನುಂಟುಮಾಡುವವು. ಹೀಗೆ ಸಂಸಾರಿಗಳು ಕಾಮಗಳಿಗೆ ದಾಸರಾಗಿರುತ್ತಾರೆ. ಆತ್ಮನಲ್ಲಿರುವ ಕಾಮಗಳೂ ಹೀಗೆ ಪ್ರವರ್ತಕಗಳಲ್ಲ. ಅವು ಆತ್ಮನಿಗೆ ಅಧೀನವಾಗಿದ್ದುಕೊಂಡಿರುವವು. ಆತ್ಮನು ತನ್ನ ಸತ್ಯವಾದ ಕಾಮಗಳೆಂಬ ವಿಭೂತಿಯಿಂದ ಜಗತ್ತನ್ನೆಲ್ಲ ಅನುಗ್ರಹಿಸುತ್ತಿರುವನು. ಮತ್ತು ಸತ್ಯಸಂಕಲ್ಪನೂ ಆಗಿರುವನು. ಅವನು ಬಯಸಿದ್ದು ಕೂಡಲೇ ಸಿದ್ಧವಾಗಿಬಿಡುವದು. ಹುಸಿಯಾದ ಸಂಕಲ್ಪಗಳು ಅವನಲ್ಲಿರುವದೇ ಇಲ್ಲ. ಅವನು ಒಬ್ಬನೇ ನೂರಾಗಬಲ್ಲನು, ಸಾವಿರಾಗಬಲ್ಲನು-ಇತ್ಯಾದಿ ರೀತಿಯಿಂದ ವಿಶ್ವವೆಲ್ಲವೂ ತಾನೇ ಆಗಿಬಿಡಬಲ್ಲನು. ಸಹಸ್ರಶೀರ್ಷನೂ ಸಹಸ್ರಾಕ್ಷನೂ ಸಹಸ್ರಪಾದನೂ ಆಗಬಲ್ಲನು. ಇದು ಅವನ ಸತ್ಯಸಂಕಲ್ಪದ ಮಹಿಮೆಯು. ಇಂಥ ಅಮೃತಾತ್ಮನೇ ಹೃದಯಾಕಾಶದ ದಹರಗುಹೆಯಲ್ಲಿರುವನು. ಇವನ ಜ್ಞಾನಶಕ್ತಿಬಲೈಶ್ವರ್ಯ ವೀರ್ಯತೇಜಸ್ಸುಗಳನ್ನು ಒಂದೊಂದಾಗಿ ಶಾಸ್ತ್ರೋಪದೇಶಕ್ಕೆ ಅನುಗುಣವಾಗಿ ಅನುಸಂಧಾನಮಾಡಿಕೊಂಡು ಚಿಂತಿಸಿದಲ್ಲಿ ದಹರೋಪಾಸನೆಯ ಫಲವು ದಕ್ಕುವದು- ಎಂದು ಶ್ರುತಿಯು ಸ್ಪಷ್ಟಪಡಿಸುತ್ತದೆ.

ಇಂಥ ಬ್ರಹ್ಮಾತ್ಮನ ವಿಜ್ಞಾನವು ಸಂಸಾರಿಗಳಿಗೆ ಇರುವದಿಲ್ಲ. ಇಲ್ಲವಾದರೇನು ದೋಷವು? ನಷ್ಟವೇನು? ಎಂದರೆ ಶ್ರುತಿಯು ಹೀಗೆ ತಿಳಿಸುತ್ತದೆ. ಲೋಕದಲ್ಲಿ ಜನರು ಒಂದು ಕಟ್ಟುಪಾಡಿಗೆ ಒಳಪಟ್ಟು ತಮ್ಮ ನಾಗರೀಕಜೀವನವನ್ನು ನಡೆಸುವರು. ಆದರೆ ಅವರಿಗೆ ಅದೇ ಸ್ವಭಾವವೆನಿಸಿರುವದು. ಹೇಗೆಂದರೆ ಒಬ್ಬ ತಹಸೀಲ್ದಾರನು ಒಂದು ತಾಲ್ಲೂಕಿಗೆ ಯಜಮಾನನಾಗಿರುವನು. ಆ ತಾಲ್ಲೂಕಿನ ಪ್ರಜೆಗಳೆಲ್ಲರೂ ಅವನ ಶಾಸನವನ್ನು ಮಾನ್ಯಮಾಡುವರು. ಇದು ಸರಿ. ಆದರೆ ಅದೇ ಪುರುಷನ ಅಪ್ಪಣೆಯನ್ನು ಪಕ್ಕದ ತಾಲ್ಲೂಕಿನವನು ಮಾನ್ಯಮಾಡಲಾರನು. ಏಕೆಂದರೆ ಅವನ ಯಜಮಾನಿಕೆಯು ಅವನನ್ನು ಗೊತ್ತುಮಾಡಿರುವ ಸರ್ಕಾರದ ಅಧೀನವಾಗಿದ್ದು ಇಂತಿಷ್ಟು ಭಾಗಕ್ಕೆ ಮಾತ್ರವೇ ನೀನು ಅಧಿಕಾರಿಯು- ಎಂದು ಸಂಕೋಚಮಾಡಲ್ಪಟ್ಟಿರುವದು. ಹಾಗೆಯೇ ಸರ್ವಾತ್ಮನಾದ ಪರಪುರುಷನನ್ನು ಅರಿಯದ ಪ್ರಜೆಗಳ ಅಧಿಕಾರವೂ ಸೀಮಿತವಾಗಿದ್ದು ಅಸ್ವತಂತ್ರವಾಗಿರುವದು. ಒಂದು ವೇಳೆ ಯಾವನಾದರೊಬ್ಬ ಸಾರ್ವಭೌಮನು ಇಡಿಯ

ಭೂಮಂಡಲವನ್ನೇ ಆಳಿಯಾನು. ಆದರೇನು? ಅಗ್ನಿ, ವಾಯು, ಪರ್ಜನ್ಯ, ಆದಿತ್ಯಾದಿ ದೇವತೆಗಳಿಗೇನೂ ಅವನು ಒಡೆಯನಾಗಲಾರನು. ಆದ್ದರಿಂದ ಹೃದಯಾಂತರ್ಗತನಾದರೂ ಸರ್ವಗತನೂ ಸತ್ಯಕಾಮಸತ್ಯಸಂಕಲ್ಪನೂ ಸರ್ವಸ್ವತಂತ್ರನೂ ಆದ ಆತ್ಮನನ್ನು ನಿಮ್ಮಲ್ಲಿಯೇ ಹುಡುಕಿ ಕಂಡುಕೊಂಡು ಸ್ವಾರಾಜ್ಯಪದವಿಯನ್ನು ಸಂಪಾದಿಸಿಕೊಳ್ಳಿರಿ; ಸಂಸಾರದಿಂದ ಪಾರಾಗಿರಿ–ಎಂದು ಶ್ರುತ್ಯಾಚಾರ್ಯರುಗಳು ಉಪದೇಶಿಸುತ್ತಿದ್ದಾರೆ. ಆ ಕಡೆಗೆ ನಾವು ಕಿವಿಗೊಡೋಣ.

## ಪುಣ್ಯಲೋಕಗಳು ಅನಿತ್ಯವಾದವುಗಳು

**ಓಮ್ ॥ ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತೇ ಏವಮೇವಾಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ ತದ್ಯ ಇಹಾತ್ಮಾನಮನನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್ ತೇಷಾಂ ಸರ್ವೇಷು ಲೋಕೇಷ್ವಕಾಮ–ಚಾರೋ ಭವತಿ ॥ 8–1–6**

ಭಾವಾರ್ಥಃ– ಹೇಗೆ ಇಲ್ಲಿ ಕರ್ಮಜಿತವಾದ ಲೋಕವು ಕ್ಷಯವಾಗುತ್ತದೆಯೋ ಹಾಗೆಯೇ ಇಲ್ಲಿ ಪುಣ್ಯಜಿತವಾದ ಲೋಕವು ಕ್ಷಯವಾಗುತ್ತದೆ. ಅವರೊಳಗೆ ಯಾರು ಇಲ್ಲಿ ಆತ್ಮನನ್ನೂ ಈ ಸತ್ಯವಾದ ಕಾಮುಗಳನ್ನೂ ಅರಿತುಕೊಳ್ಳದೆ ಹೊರಟು ಹೋಗುತ್ತಾರೋ ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಅಕಾಮಚಾರವಿರುತ್ತದೆ.

(ಆತ್ಮಜ್ಞಾನವಿಲ್ಲದವರು ಪುಣ್ಯಕರ್ಮಗಳ ಬಲದಿಂದಲೇ ನಿತ್ಯಸುಖವನ್ನು ಪಡೆಯಲು ಯತ್ನಿಸುವರಾದರೂ ಅವರ ಲೋಕಗಳು ಕ್ಷಯವಾಗಿಬಿಡುವದರಿಂದ ಮತ್ತೆ ಸಂಸಾರಕ್ಕೇ ಹಿಂತಿರುಗುತ್ತಾರೆ. ಆದ್ದರಿಂದ ಅವರು ಅಸ್ವತಂತ್ರರೇ–ಎಂದಭಿಪ್ರಾಯ.)

## 62. ಪುಣ್ಯಲೋಕಗಳ ಪರಿಮಿತಿ

ಛಾಂದೋಗ್ಯೋಪನಿಷತ್ತಿನಲ್ಲಿ ಈಗ ವಿಚಾರಮಾಡುತ್ತಿರುವ ದಹರೋಪಾಸನಾ ಪ್ರಕರಣದಲ್ಲಿ ಹೃದಯಾಂತರ್ಗತನಾದ ಸತ್ಯಕಾಮಾದಿಗುಣಗಳಿಂದ ಕೂಡಿದ ಆತ್ಮನನ್ನು ಅರಿತುಕೊಂಡು ಉದ್ಧಾರವಾಗಬೇಕೆಂದು ತಿಳಿಸುತ್ತಾ ಬಂದಿದೆ. ಈ ಆತ್ಮನನ್ನು ಅರಿತುಕೊಳ್ಳದೆ ಉಪಾಯಾಂತರಗಳಿಂದ ಮೋಕ್ಷವನ್ನು ಸಾಧಿಸಲಾಗುವದಿಲ್ಲವೆ? ಏಕೆ ಆಗುವದಿಲ್ಲ? ಎಂಬುದನ್ನೀಗ ವಿಚಾರಮಾಡಲಾಗುವದು. ಏಕೆಂದರೆ ವೇದಶಾಸ್ತ್ರಗಳಲ್ಲಿ ಮಾನವನಿಗೆ ಪುರುಷಾರ್ಥಸಿದ್ಧಿಗಾಗಿ ಕರ್ಮ, ಉಪಾಸನೆ, ಜ್ಞಾನಗಳೆಂಬ

ಸಾಧನತ್ರಯಗಳನ್ನೂ ಹೇಳಿದೆ. ಪರಮಪುರುಷಾರ್ಥವೆನಿಸಿರುವ ಮೋಕ್ಷಕ್ಕೆ ಮಾತ್ರ ಆತ್ಮಜ್ಞಾನವೊಂದೇ ಉಪಾಯವೆಂದೂ ತಿಳಿಸಿದೆ. ಕೆಲವರಿಗೆ ಜ್ಞಾನದಂತೆಯೇ ಕರ್ಮೋಪಾಸನೆಗಳೂ ಮುಕ್ತಿಗೆ ಏಕೆ ಉಪಾಯವಾಗಿರಬಾರದು? ಜ್ಞಾನದ್ದೇನು ಹೆಚ್ಚುಗಾರಿಕೆ? ಸಾಧನಗಳೆಲ್ಲ ವೇದೋಕ್ತಗಳೇ ಆಗಿರುವಾಗ ಜ್ಞಾನವೊಂದೇ ಮುಕ್ತಿಗೆ ಸಾಧನವೆಂದೇಕೆ ಹೇಳಬೇಕು? ಎಂಬ ಸಂಶಯವು ಬರಬಹುದು. ಆದ್ದರಿಂದ ಇಲ್ಲಿ ಜ್ಞಾನಕ್ಕೂ ಕರ್ಮೋಪಾಸನೆಗಳಿಗೂ ಇರುವ ವೈಲಕ್ಷಣ್ಯವನ್ನು ತಿಳಿಸುವ ಮೂಲಕ ಆಯಾ ಸಾಧನಗಳ ಪರಿಮಿತಿಯನ್ನೂ ಅವುಗಳಿಂದ ಸಿಗುವ ಫಲಗಳ ತಾರತಮ್ಯವನ್ನೂ ಕುರಿತು ವಿಚಾರಿಸಲಾಗುವದು.

ಆತ್ಮನೆಂಬವನು ಸರ್ವರ ಹೃದಯದೇಶದಲ್ಲಿಯೂ ಇದ್ದುಕೊಂಡಿರುವನೆಂಬುದು ನಿಜ. ಗೀತೆಯಲ್ಲಿಯೂ 'ಎಲೈ ಅರ್ಜುನನೆ, ಈಶ್ವರನು ಸರ್ವಭೂತಗಳ ಹೃದಯದಲ್ಲಿಯೂ ಇದ್ದಾನೆ' ಎಂದೇ ತಿಳಿಸಿದೆ. ಆದರೂ ಆತ್ಮನನ್ನು ತಪ್ಪಾಗಿ ತಿಳಿದುಕೊಂಡಿರುವದೇ ನಮ್ಮಗಳ ಸ್ವಭಾವವಾಗಿದೆ. ವಿಚಾರಮಾಡಿ ಸರಿಯಾಗಿ ತಿಳಿದರೆ ಎಲ್ಲರೂ ಜೀವನ್ಮುಕ್ತಿಯನ್ನೇ ಹೊಂದಬಹುದು. ಆದರೆ ಜನರಿಗೆ ಆತ್ಮವಿಚಾರಕ್ಕಿಂತಲೂ ಅನಾತ್ಮವಿಚಾರಗಳಲ್ಲಿಯೇ ಹೆಚ್ಚು ಆಸಕ್ತಿಯಿರುತ್ತದೆ. ಹಾಗೆಯೇ ಅನಾತ್ಮವಸ್ತುಗಳಲ್ಲಿಯೇ ಪ್ರೀತಿಯೂ ಬೆಳೆದುಬಿಟ್ಟಿರುತ್ತದೆ. ನಿಜವೇನೆಂದರೆ ಅಜ್ಞರ ದೃಷ್ಟಿಯಲ್ಲಿ ಅನಾತ್ಮಗಳೂ ಆತ್ಮನೆಂದೇ ಭಾವಿಸಲ್ಪಟ್ಟಿರುತ್ತವೆ. ಆದ್ದರಿಂದ ತಮಗಿಂತ ಬೇರೆಯೆಂದು ಗೊತ್ತಿರುವ ಪದಾರ್ಥಗಳನ್ನು ಕೂಡ ತನಗಾಗಿ ಬೇಕು–ಎಂದು ಬಯಸುವದು ಸ್ವಭಾವವಾಗಿರುತ್ತದೆ. ಹೀಗೆ ಬಯಕೆಯಿರುವದರಿಂದ ಅದರ ಪ್ರಾಪ್ತಿಗಾಗಿ ಕರ್ಮವನ್ನು ಮಾಡುತ್ತಾರೆ. ಕಡೆಗೆ ಅವರಿಗೆ ಕರ್ಮದಿಂದ ಎಲ್ಲವನ್ನೂ ಪಡೆದುಕೊಳ್ಳಬಹುದು–ಎಂದು ಭಾವನೆಯುಂಟಾಗಿ ನಮ್ಮ ಸ್ವರೂಪವೇ ಆಗಿರುವ ಮುಕ್ತಿಯು ಕೂಡ ಪಡೆದುಕೊಳ್ಳತಕ್ಕದ್ದೆಂದೂ ಅದಕ್ಕಾಗಿ ಕರ್ಮಗಳನ್ನು ಮಾಡಬೇಕೆಂದೂ ನಿಶ್ಚಿತವಾಗಿಬಿಟ್ಟಿರುತ್ತದೆ. ಇಂಥವರನ್ನು ಇಲ್ಲಿ ಅಜ್ಞರೆಂದು ಕರೆದಿದೆ. ಇವರಿಗೆ ಜ್ಞಾನದ ಮಹಿಮೆಯಾಗಲಿ ಮುಕ್ತಿಯ ಸ್ವಭಾವವಾಗಲಿ ತಿಳಿದಿರುವದಿಲ್ಲ. ಬೃಹದಾರಣ್ಯಕೋಪನಿಷತ್ತಿನಲ್ಲಿ ಒಂದು ಕಡೆ ಹೀಗೆಂದಿದೆ: 'ಈ ಪುರುಷನು ತನ್ನನ್ನು ನಿತ್ಯಶುದ್ಧಬುದ್ಧಮುಕ್ತನಾದ ಆತ್ಮನೆಂದು ಅರಿತುಕೊಂಡವನಾದರೆ ಏನನ್ನು ಬಯಸಿ ಏತಕ್ಕಾಗಿ ಈ ಶರೀರವನ್ನು ದಂಡಿಸಿಯಾನು?' ಇದರಿಂದ ತಿಳಿದುಬರುವದೇನೆಂದರೆ: ಆತ್ಮನ ವಿಷಯದಲ್ಲಿರುವ ಅಜ್ಞಾನವೇ ಕರ್ಮಪ್ರವೃತ್ತಿಗೆ ಕಾರಣವೆಂದು ಮತ್ತೆ ಹೇಳಬೇಕಾಗಿಲ್ಲ. ಕರ್ಮಿಗಳ ಭಾವನೆಯಂತೆ ಮಾಡಿ ಪಡೆಯತಕ್ಕದ್ದೇ ಸುಖವು; ಅದೇ ಸ್ವರ್ಗವು; ಅದೇ ಆನಂದವು; ಮೋಕ್ಷವೆಂಬುದೂ ಪರಮಸುಖಸ್ವರೂಪವಾದ್ದರಿಂದ ಅದೂ ಮಾಡಿ ಪಡೆಯತಕ್ಕದ್ದೇ–ಎಂಬುದು ಅವರ ತೀರ್ಮಾನವಾಗಿರುತ್ತದೆ.

ಈಗ ಶ್ರುತಿಯು ಇಂಥ ಭಾವನೆಯುಳ್ಳವರನ್ನು ಕುರಿತು ಹೀಗೆ ಹೇಳುತ್ತಿದೆ; 'ಕರ್ಮದಿಂದ ಗೆದ್ದುಕೊಂಡ ಲೋಕವು ಕ್ಷಯವಾಗುವಂತೆಯೇ ಪುಣ್ಯದಿಂದ ಸಂಪಾದಿಸಿದ ಲೋಕವೂ ಕ್ಷಯವಾಗುತ್ತದೆ''. ಇದರ ಅಭಿಪ್ರಾಯವೇನೆಂದರೆಃ ಶಾಸ್ತ್ರದಲ್ಲಿಯೇ ಸ್ವರ್ಗಕಾಮನಾದವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕೆಂದು ಹೇಳಿರುವದರಿಂದ ಜ್ಯೋತಿಷ್ಟೋಮವೆಂಬ ಕರ್ಮದಿಂದ ಸ್ವರ್ಗಸುಖವು ಗೆಲ್ಲಲ್ಪಡತಕ್ಕದ್ದಾಯಿತು. ಇದನ್ನು 'ಕರ್ಮಜಿತ'ವೆನ್ನುವರು. ಇದು ಸರಿ. ಆದರೆ ಹೀಗೆ ಗೆದ್ದುಕೊಂಡ ಸುಖವು ನಿತ್ಯವೆ? ಶಾಶ್ವತವೆ? ಎಂಬಿದನ್ನೂ ವಿಚಾರಮಾಡಬೇಕು. ಕರ್ಮಿಗಳಿಗೆ ಈ ಕಡೆಗೆ ದೃಷ್ಟಿಯಿರುವದಿಲ್ಲ. ಪ್ರಯಾಣಿಕನಾದವನು ಹೇಗೆ ವಾಹನದಲ್ಲಿ ತನಗಾಗಿ ಸೀಟನ್ನು ಕಾದಿರಿಸಿ ಹಣದಿಂದ ತನ್ನದಾಗಿಮಾಡಿಕೊಳ್ಳುವನೋ—ಆದರೆ ತಾನು ಪ್ರಯಾಣಿಕನಾದ್ದರಿಂದ ಪ್ರಯಾಣವು ಮುಗಿದ ಮೇಲೆ ಆ ಸೀಟನ್ನು ಬಿಟ್ಟಳಿಯಲೇಬೇಕಾಗುವದೆಂಬುದನ್ನು ಆಗ್ಗೆಮರೆತಿರುವನೋ ಹಾಗೆ—ಕರ್ಮಿಯು ತಾನು ಸಂಪಾದಿಸಿರುವ ಪುಣ್ಯವು ಸುಖಕ್ಕೆ ಸಾಧನವೆಂದು ತಿಳಿದಿರುವ ಕಾಲಕ್ಕೆ ಆ ಸುಖವು ಕ್ಷಯವಾಗತಕ್ಕದ್ದೆಂಬುದನ್ನು ಮರೆತಿರುತ್ತಾನೆ. ಶ್ರುತಿಯು ಇದನ್ನು ನೆನಪಿಗೆ ತಂದುಕೊಡುತ್ತಿದೆ. ಪುಣ್ಯದಿಂದ ಸಂಪಾದಿಸಿರಬಹುದಾದರೂ ಆ ಪದಾರ್ಥದ ಅನಿತ್ಯತ್ವವನ್ನು ಅಲ್ಲಗಳೆಯಲಾದೀತೆ? ಅದು ಎಂದಾದರೊಮ್ಮೆ ನಮ್ಮನ್ನು ಬಿಟ್ಟು ಹೋಗದೇ ಇದ್ದೀತೆ? ಆದ್ದರಿಂದಲೇ ಕರ್ಮವಾಗಲಿ, ಕರ್ಮಫಲವಾದ ಪುಣ್ಯ ಲೋಕಗಳಾಗಲಿ, ನಮ್ಮ ಸ್ವರೂಪಭೂತವಾದ ಮುಕ್ತಿಗೆ ಸಮನಲ್ಲ. ನಮ್ಮ ಆತ್ಮಸ್ವರೂಪವನ್ನು ನಾವು ಹೊಸದಾಗಿ ಸಂಪಾದಿಸಿಕೊಳ್ಳಬೇಕಾದದ್ದೇ ಇಲ್ಲ. ಇರುವದನ್ನು ಸರಿಯಾಗಿ ತಿಳಿದರೆ ಸಾಕು. ಇದು ಜ್ಞಾನವೆನಿಸುವದು. ಜ್ಞಾನದ ಫಲವಾದ ಮುಕ್ತಿಯಾದರೋ ಅನಾತ್ಮಲೋಕದಂತೆ ಅಲ್ಲ. ಹೀಗೆ ಮುಕ್ತಿಗೂ ಲೋಕಾಂತರ ಪ್ರಾಪ್ಯವಾದ ಸುಖಕ್ಕೂ ತಾರತಮ್ಯವಿರುತ್ತದೆ.

ಈಗ ಸಾಧಕನ ಅಧಿಕಾರವನ್ನು ವಿಚಾರಮಾಡೋಣ. ಯಾವನಿಗೆ ಕಾಮಗಳು ಸಾಕಷ್ಟು ದೊರಕಿದಮೇಲೂ ಅವುಗಳನ್ನು ಅನುಭವಿಸಿದ ಮೇಲೂ ತೃಪ್ತಿಯಾಗಲಿ ವೈರಾಗ್ಯವಾಗಲಿ ಉಂಟಾಗುವದಿಲ್ಲವೋ ಅಂಥವನು ಮತ್ತೆ ಮತ್ತೆ ಕರ್ಮೋಪಾಸನೆಗಳನ್ನೇ ಕೈಗೊಳ್ಳಬೇಕಾಗುವದು. ಆದರೆ ಪುಣ್ಯವಿಶೇಷದಿಂದ ಯಾವನ ಮನಸ್ಸು ಪರಿಶುದ್ಧವಾಗಿ ನಿತ್ಯಾನಿತ್ಯವಿವೇಕವು ಮೂಡಿರುವದೋ ಅಂಥವನು ಕರ್ಮಸಂನ್ಯಾಸಮಾಡಿ ಶಮದಮಾದಿಗಳಿಂದ ಕೂಡಿ ಆತ್ಮಜಿಜ್ಞಾಸೆಯನ್ನು ಮಾಡಬೇಕಾಗುವದು. ಈ ವಿಷಯದಲ್ಲಿ ತನ್ನ ಮಾರ್ಗವು ಯಾವದೆಂಬುದನ್ನು ಆಯಾ ಸಾಧಕನೇ ಗೊತ್ತುಪಡಿಸಿಕೊಳ್ಳಬೇಕು. ಪ್ರತಿಯೊಬ್ಬ ಸಾಧಕನೂ ಒಂದಲ್ಲ—ಒಂದು ದಿನ,

ಕರ್ಮಫಲಗಳ ಅನಿತ್ಯತ್ವಕ್ಕೆ ಬೇಸತ್ತು ನಿತ್ಯವಾದ ಶಾಶ್ವತವಾದ ಸುಖ ಪ್ರಾಪ್ತಿಗೆ ಹಾದಿಯು ಯಾವೆಂಬುದನ್ನು ಹುಡುಕುತ್ತಾ ಜ್ಞಾನಮಾರ್ಗಕ್ಕೆ ಬರಲೇಬೇಕಾಗುವದು. ಹಾಗೆ ಬಂದವನಿಗೆ ಶ್ರುತಿಯು ಈ ಕರ್ಮಜ್ಞಾನಿಗಳ ಫಲವೈಲಕ್ಷಣ್ಯವನ್ನು ತಿಳಿಸಿಕೊಟ್ಟು ಆತ್ಮಜ್ಞಾನಕ್ಕೆ ಕೊಂಡೊಯ್ಯುತ್ತದೆ. ಜ್ಞಾನಫಲವಾದ ಮುಕ್ತಿಯೆಂದರೂ ಬ್ರಹ್ಮವೆಂದರೂ ಒಂದೇ. 'ಬ್ರಹ್ಮವನ್ನೇ ಮುಕ್ತಿಯೆನ್ನುವರು' ಎಂದು ಶ್ರೀಶಂಕರಾಚಾರ್ಯರು ತಿಳಿಸಿರುತ್ತಾರೆ. ಆದ್ದರಿಂದ ಹುಟ್ಟಿರುವ ವ್ಯಕ್ತಿಯು ಒಮ್ಮೆ ಆತ್ಮನನ್ನು ಕಂಡುಕೊಳ್ಳಲೇಬೇಕು. ಇಲ್ಲವಾದರೆ ಹುಟ್ಟುಸಾವುಗಳಿಂದಾಗಲಿ ಕರ್ಮಫಲೋಪಭೋಗಕ್ಷಯಗಳಿಂದಾಗಲಿ ಬಿಡುಗಡೆಯಾಗುವಂತೆಯೇ ಇಲ್ಲ.

ಈಗ ಶ್ರುತಿಯು ಆತ್ಮಜ್ಞಾನವಿಲ್ಲದೆ ಈ ಲೋಕವನ್ನು ಬಿಟ್ಟುಹೊರಡುವವರ ಪಾಡನ್ನು ವಿವರಿಸುತ್ತದೆ. ಯಾರು ಆತ್ಮನನ್ನರಿಯದೆ ಹಾಗೂ ಆತ್ಮನಲ್ಲಿಯೇ ಎಲ್ಲಾ ಕಾಮಗಳೂ ಅಡಕವಾಗಿವೆಯೆಂಬ ನಿಜವನ್ನೂ ಅರ್ಥಮಾಡಿಕೊಳ್ಳದೆ ದೇಹವನ್ನು ಬಿಟ್ಟು ತೆರಳುವರೋ ಅವರಿಗೆ ಯಾವ ಪುಣ್ಯಲೋಕಗಳಲ್ಲಿಯೂ ಸ್ವಾತಂತ್ರ್ಯವಿರುವದಿಲ್ಲ, ಕಾಮಚಾರವೂ ಇರುವದಿಲ್ಲ. ಕಾಮಚಾರವೆಂದರೆ ತನ್ನ ಇಚ್ಛಾನುಸಾರವಾಗಿ ನಡೆದುಕೊಳ್ಳುವದು. ಅದು ಸಾಧ್ಯವಾಗುವದಿಲ್ಲ. ಹೇಗೆ ನಮಗೆ ರಾಜಕೀಯಸ್ವಾತಂತ್ರ್ಯವು ಬಂದಿದ್ದರೂ ಮತದಾನ ಮಾಡಬಹುದೇ ಹೊರತು ಮಂತ್ರಿಗಳ ಆಸನದಲ್ಲಿ ಕೂಡಲಾಗುವದಿಲ್ಲವೋ ಸರಕಾರದ ಕಾನೂನುಗಳಿಗೆ ಒಳಪಟ್ಟೇ ನಡೆಯಬೇಕಾಗಿರುವದೋ ಹಾಗೆಯೇ ಅಜ್ಞರು ಇಂದ್ರಾದಿದೇವತೆಗಳ ಲೋಕಕ್ಕೆ ತಮ್ಮ ಪುಣ್ಯಾನುಗುಣವಾಗಿ ಹೋದರೂ ಅಲ್ಲಿ ದೇವರಾಜನ ಅಧೀನರಾಗಿಯೇ ತಮ್ಮ ಪುಣ್ಯದ ಫಲಕ್ಕೆ ತಕ್ಕಷ್ಟೇ ಸುಖಸಾಧನಗಳಿಂದ ಬಾಳಬೇಕಾಗುವದು. ಅಂಥ ಪುಣ್ಯ ಲೋಕಗಳಲ್ಲಿಯೂ ಅಸೂಯೆ, ಭಯ, ದ್ವೇಷ–ಮುಂತಾದ ಸಂಸಾರದೋಷಗಳಿದ್ದೇ ಇರುವವು. ಕರ್ಮೋಪಾಸನೆಗಳು ಇದಕ್ಕಿಂತ ಹೆಚ್ಚಿನ ಫಲವನ್ನೆಂದಿಗೂ ಉಂಟುಮಾಡಲಾರವು.

ಆದರೆ ಆತ್ಮನನ್ನರಿತುಕೊಂಡು ಈ ಲೋಕವನ್ನು ಬಿಡುವವರಿಗೆ ಮಾತ್ರ ಸ್ವಾತಂತ್ರ್ಯವೂ ಕಾಮಚಾರವೂ ಎಲ್ಲಾ ಲೋಕಗಳಲ್ಲಿಯೂ ಇರುತ್ತದೆ–ಎಂಬಿದನ್ನು ಈಗ ಶ್ರುತಿಯು ತಿಳಿಸುತ್ತಿದೆ. ಕಸ್ತೂರಿಮೃಗವೆಂಬ ಒಂದು ಪ್ರಾಣಿಯುಂಟು. ಒಂದು ಸಮಯದಲ್ಲಿ ಅದರ ಹೊಟ್ಟೆಯಲ್ಲೇ ಕಸ್ತೂರಿಯು ಉತ್ಪತ್ತಿಯಾಗಿ ಸುವಾಸನೆಯು ಹೊರಡುತ್ತದೆಯಂತೆ. ಆ ಪ್ರಾಣಿಗೆ ಇದು ತಿಳಿಯದು. ಸುವಾಸನೆಯು ಮಾತ್ರ ಗೊತ್ತಾಗುವದರಿಂದ 'ಅದು ಎಲ್ಲಿಂದಲೋ ಬರುತ್ತಿದೆ. ಆ ಪದಾರ್ಥವೇನಿರಬಹುದು? ಅದನ್ನು ನಾನು ಪಡೆಯುವದು ಹೇಗೆ?' ಎಂದುಕೊಂಡು ದಿಕ್ಕುದಿಕ್ಕಿಗೂ ಓಡುತ್ತದೆಯಂತೆ. ನಿಜವೇನು? ಅದರ ಹೊಟ್ಟೆಯಲ್ಲೇ ಪರಿಮಳವು ಅಡಗಿದೆಯಲ್ಲವೆ? ಹಾಗೆಯೇ ನಮ್ಮ ಆತ್ಮನಲ್ಲಿಯೇ ಎಲ್ಲಾ

ಕಾಮಗಳೂ ಅಡಗಿರುತ್ತವೆ. ಅವನೇ ಕಸ್ತೂರಿಯಿದ್ದಂತೆ. ಅವನು ನಮ್ಮ ಹೃದಯಪುಂಡರೀಕದಲ್ಲಿರುವ ದಹರಾಕಾಶದಲ್ಲಿಯೇ ಇರುತ್ತಾನೆ. ಆದರೂ ಮೃಗಬುದ್ಧಿಯ ನಾವುಗಳು ಅವನನ್ನರಿಯೆವು. ಆದ್ದರಿಂದ ಮೃಗವು ಪರಿಮಳವನ್ನು ಅರಸಿಕೊಂಡು ಹೋಗುವಂತೆ ನಾವು ಕರ್ಮಗಳನ್ನು ಮಾಡಿ ಸುಖಕ್ಕಾಗಿ ಲೋಕಾಂತರಗಳನ್ನೆಲ್ಲ ಸಂಚರಿಸುವೆವು. ಕೊನೆಗೆ ನಿರಾಶೆಯೇ, ಬಂಧನವೇ, ಅಸ್ವಾತಂತ್ರ್ಯವೇಫಲವಾಗಿರುವದು. ಇದು ನಮ್ಮ ದಡ್ಡತನದ ಪರಮಾವಧಿಯಲ್ಲದೆ ಮತ್ತೇನು? ಹಾಗಾಗದಂತೆ ನಾವು ಶಾಸ್ತ್ರಾಚಾರ್ಯೋಪದೇಶಗಳಿಂದ ಈಗಲೇ ಇಲ್ಲಿಯೇ ನಮ್ಮ ಆತ್ಮನನ್ನು ಕಂಡುಕೊಳ್ಳಬೇಕು. ಅವನು ಸತ್ಯಕಾಮ, ಸತ್ಯಸಂಕಲ್ಪನೆಂಬುದನ್ನೂ ವಿಜರನೂ ವಿಮೃತ್ಯುವೂ ವಿಶೋಕನೂ ಆಗಿರುವನೆಂಬುದನ್ನೂ ದೃಢಪಡಿಸಿಕೊಳ್ಳಬೇಕು. ಆಗ ನಾವು ದೇಹಧಾರಿಗಳಾಗಿರಲಿ, ದೇಹವನ್ನು ತ್ಯಜಿಸಿ ಲೋಕಾಂತರಗಳಿಗೇ ತೆರಳಲಿ–ಎಲ್ಲೆಲ್ಲಿಯೂ ಸ್ವಾತಂತ್ರ್ಯವೂ ಕಾಮಚಾರವೂ ಇದ್ದುಕೊಂಡಿರುವದು–ಎಂದು ಶ್ರುತಿಯು ತಿಳಿಸುತ್ತಿದೆ.

ಈಗ ಕಾಮಚಾರ–ಸ್ವಾತಂತ್ರ್ಯವೆಂದರೇನೆಂಬುದನ್ನು ಶ್ರುತಿಯು ವಿವರಿಸುತ್ತದೆ. ಆತ್ಮಜ್ಞನು ಪಿತೃಲೋಕಕ್ಕೆ ಹೋಗಬೇಕೆಂದು ಬಯಸಿದನಾದರೆ ಅವನ ಸಂಕಲ್ಪಮಾತ್ರದಿಂದಲೇ ಪಿತೃಗಳು ಎದುರಿಗೇ ಬಂದು ದರ್ಶನವನ್ನು ನೀಡುವರು. ಹೀಗೆಯೇ ಯಾವ ಬಂಧುಗಳಾಗಲಿ, ಸ್ನೇಹಿತರಾಗಿರಲಿ ನೆನೆಸಿಕೊಂಡ ಮಾತ್ರದಿಂದ ಪ್ರತ್ಯಕ್ಷರಾಗಿಬಿಡುವರು. ಮತ್ತು ಆತ್ಮಜ್ಞನು ಬಯಸಬಹುದಾದ ದೇಶ, ಕಾಮಗಳು, ಭೋಗಗಳು, ಸುಖಸಾಮಗ್ರಿಗಳು–ಎಲ್ಲವೂ ಸಂಕಲ್ಪಮಾತ್ರದಿಂದಲೇ ಒದಗಿಬಿಡುವವು. ಭರದ್ವಾಜರು ಹೇಗೆ ಭರತನಿಗೂ ಅವನ ಸೈನ್ಯಕ್ಕೂ ಆತಿಥ್ಯಮಾಡಲು ಇಚ್ಛಿಸಿ ಸಂಕಲ್ಪಮಾತ್ರದಿಂದ ಗಂಧರ್ವಾಪ್ಸರಾದಿಗಳನ್ನೂ ಭಕ್ಷ್ಯಭೋಜ್ಯ ನಿವಾಸ ವಿಹಾರಾದಿಗಳನ್ನೂ ಬರಮಾಡಿಕೊಂಡರೂ ಅವೆಲ್ಲವೂ ಹೇಗೆ ಅವರ ಆತ್ಮಜ್ಞಾನದ ಮಹಿಮೆಯಾಗಿತ್ತೋ ಹಾಗೆಯೇ ಪ್ರತಿಯೊಬ್ಬನಿಗೂ ಅವನವನ ಹೃದಯಾಕಾಶದಲ್ಲಿ ಆತ್ಮದರ್ಶನವಾದರೆ ಸರ್ವಕಾಮಗಳೂ ಸ್ವಾತಂತ್ರ್ಯವೂ ಲಭಿಸುವವು. ಆತ್ಮೋಪಾಸನೆ–ಅಥವಾ ದಹರೋಪಾಸನೆಯು ಉಳಿದ ದೇವತೋಪಾಸನೆಗಳಂತೆ ಅಲ್ಲ. ಏಕೆಂದರೆ ದೇವತೋಪಾಸನೆಯಲ್ಲಿ ಭೇದಬುದ್ಧಿಯು ಉಳಿದೇ ಇರುತ್ತದೆ. ಆದ್ದರಿಂದ ಅದಕ್ಕೆ ಸಂಸಾರಗೋಚರವಾದ ಅನಿತ್ಯಫಲವೇ ಗತಿ. ಆತ್ಮೋಪಾಸನೆಯು ಸರ್ವಾತ್ಮಭಾವಕ್ಕೆ ಕೊಂಡೊಯ್ಯುವದರಿಂದ ಇದು ನಿತ್ಯವು–ಎಂದಭಿಪ್ರಾಯ.

---

## ಹೃದಯಾಕಾಶದಲ್ಲಿಯೇ ಕಾಮಗಳಿರುತ್ತವೆ

ಓಮ್ ॥ ತದ್ಯಥಾಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರನ್ತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ ಅನೃತೇನ ಹಿ ಪ್ರತ್ಯೂಢಾಃ ॥ 8–3–2

ಭಾವಾರ್ಥ:– ಅಲ್ಲಿ ಹೇಗೆ ನಿಹಿತವಾಗಿರುವ ಹಿರಣ್ಯನಿಧಿಯನ್ನು ಅಕ್ಷೇತ್ರಜ್ಞರು ಮೇಲೆ ಮೇಲೆ ಸಂಚರಿಸುತ್ತಾ ಪಡೆಯದೆ ಇರುತ್ತಾರೋ ಹಾಗೆಯೇ ಈ ಸರ್ವಪ್ರಜೆಗಳೂ ದಿನದಿನವೂ ಈ ಬ್ರಹ್ಮಲೋಕವನ್ನು ಸೇರುತ್ತಿದ್ದರೂ ಪಡೆದುಕೊಳ್ಳದೆ ಇರುವರು. ಅನೃತದಿಂದಲ್ಲವೆ, ಸೆಳೆಯಲ್ಪಟ್ಟಿರುವರು?

(ನೆಲದಲ್ಲಿ ಹೂತಿಟ್ಟ ನಿಧಿಯ ವಿಚಾರವು ತಿಳಿಯದವರು ಆ ನಿಧಿಯ ಮೇಲೆಯೇ ಓಡಾಡುತ್ತಿದ್ದರೂ ಅದನ್ನು ಪಡೆದುಕೊಳ್ಳಲಾರರೋ ಹಾಗೆಯೇ ಹೃದಯಾಕಾಶದಲ್ಲಿಯೇ ಇರುವ ಬ್ರಹ್ಮವನ್ನು ಪ್ರತಿದಿನವೂ ಸುಷುಪ್ತಿಯಲ್ಲಿ ಜೀವರು ಸೇರುತ್ತಿದ್ದರೂ ಅರಿತುಕೊಳ್ಳಲಾರದೆ ಇರುವರು–ಎಂದಭಿಪ್ರಾಯ.)

## 63. ಎಲ್ಲವನ್ನೂ ಹೃದಯಾಕಾಶದಲ್ಲಿ ಪಡೆದುಕೊಳ್ಳಬಹುದು.

ಈವರೆಗೆ ದಹರೋಪಾಸನೆಯ ಅವಾಂತರಫಲಗಳನ್ನು ತಿಳಿಸಿಕೊಟ್ಟು ಅದರ ಮಹತ್ತ್ವವನ್ನು ವರ್ಣಿಸಲಾಗಿತ್ತು. ಬೇರೆಬೇರೆಯ ದೇವತೆಗಳ ಉಪಾಸನೆಗಳು ಆಯಾ ಗೊತ್ತಾದ ಫಲಗಳನ್ನು ಕೊಡುವವಾದರೂ ಹೃದಯಾಕಾಶದಲ್ಲಿ ಬ್ರಹ್ಮವನ್ನು ಕಂಡುಕೊಂಡು ಮಾಡುವ ಚಿಂತನೆಗೆ ಅವು ಸರಿಸಮಾನವಾಗಲಾರವು. ಏಕೆಂದರೆ ಉಳಿದ ಉಪಾಸನೆಗಳೆಲ್ಲವೂ ಪರಿಚ್ಛಿನ್ನಫಲವುಳ್ಳವಾಗಿರುವವು. ದಹರಬ್ರಹ್ಮೋಪಾಸನೆಯಾದರೊ, ಸಕಲಕಾಮಾವಾಪ್ತಿಗೆ ಕಾರಣವಾಗಿರುವದು. ಆದ್ದರಿಂದ ಸಾಧಕನು ತನ್ನ ಬಹಿರ್ದೃಷ್ಟಿಯನ್ನು ಅಂತರ್ದೃಷ್ಟಿಯಾಗಿ ಪರಿವರ್ತಿಸಿಕೊಂಡು ಹೃದಯಾಂತರ್ಗತನೂ ಸರ್ವಕಾಮಪ್ರದನೂ ಆದ ತನ್ನ ಸ್ವರೂಪವೇ ಆದ ಆತ್ಮನನ್ನು ಬ್ರಹ್ಮವೆಂದು ಚಿಂತಿಸಬೇಕೆಂಬುದೇ ಉಪನಿಷತ್ತಿನ ತಾತ್ಪರ್ಯವಾಗಿರುತ್ತದೆ.

ಹೀಗೆ ಬ್ರಹ್ಮವು ಸಕಲರ ಹೃದಯದಲ್ಲಿಯೂ ಅಂತರ್ಯಾಮಿಯಾಗಿದ್ದು ಕೊಂಡಿದ್ದರೂ ಜೀವರುಗಳೇಕೆ ಶೋಕಮೋಹಗಳಲ್ಲಿ ಮುಳುಗಿರುತ್ತಾರೆ? ಒಂದು ದೃಷ್ಟಿಯಿಂದ ನೋಡಿದರೆ ಬ್ರಹ್ಮವೇ ಜೀವರೂಪದಿಂದ ಆಯಾ ಶರೀರಗಳನ್ನು ಪ್ರವೇಶಿಸಿದೆಯಲ್ಲವೆ? ಬ್ರಹ್ಮ, ಜೀವ–ಎಂಬ ಎರಡು ಬೇರೆಬೇರೆಯ ವಸ್ತುಗಳಿಲ್ಲವಲ್ಲ?

ಏಕೆಂದರೆ ಪ್ರತಿಯೊಬ್ಬನಿಗೂ 'ನಾನು' ಎಂದು ಅನುಭವವಾಗುವಾಗ ಅದರೊಡನೆ ಮತ್ತೊಂದು ವಸ್ತುವಿದೆಯೆಂದೇನೂ ಕಂಡುಬರುವದಿಲ್ಲವಲ್ಲ? ನಾನು ಎಂಬುದೊಂದೇ– ಎಂಬುದು ಎಲ್ಲರಿಗೂ ಒಪ್ಪಿಗೆಯಾಗುವ ಮಾತು. ಎರಡು 'ನಾನು'ಗಳು ಇರುವದು ಸಾಧ್ಯವಿಲ್ಲ. ಆದ್ದರಿಂದ 'ನಾನೆಂಬುದು ಬ್ರಹ್ಮವೇ' ಎಂಬ ಉಪದೇಶವು ಸರಿಯಾಗಿಯೇ ಇರಬೇಕು. ಇದು ನಿಜವಾದರೆ ಪ್ರತಿಯೊಬ್ಬನೂ ಬ್ರಹ್ಮವಾಗಿ– ಬ್ರಹ್ಮವನ್ನೇ ಹೃದಯದಲ್ಲಿ ಧರಿಸಿರುವದರಿಂದ ಸಕಲಕಾಮಪ್ರಾಪ್ತಿಯೂ ಅವನ ಜನ್ಮಸಿದ್ಧವಾದ ಹಕ್ಕೆಂದೇ ಆಯಿತು. ಇಂಥ ಸನ್ನಿವೇಶದಲ್ಲಿ ಜೀವಭಾವವೂ ಅಲ್ಪತ್ವವೂ ಸಂಸಾರದ ಕೋಟಲೆಗಳೂ ಬಂಧಮೋಕ್ಷಗಳೂ ನಮಗೇಕೆ ಸಂಭವಿಸಬೇಕು? ಹೊಸದಾಗಿ ನಾವು ಹಾರ್ದ ಬ್ರಹ್ಮೋಪಾಸನೆಯನ್ನು ಕೈಗೊಂಡು ಪಡೆಯಬೇಕಾದದ್ದೇನಿದೆ? ಎಂದು ಸಂಶಯ ಉಂಟಾಗಬಹುದಾಗಿದೆ. ಇದಕ್ಕೆ ಉತ್ತರವೇನೆಂದರೆ: ಆಕ್ಷೇಪಕನ ಅಭಿಪ್ರಾಯವು ಸರಿ. ಬ್ರಹ್ಮವೆಂದರೂ– ಆತ್ಮನೆಂದರೂ– ನಾನು ಎಂದರೂ ಎಲ್ಲವೂ ಒಂದೇ. ನಿಜವಾಗಿ ನೋಡಿದರೆ ದೇವತೆಗಳೆಂಬವರು ಬೇರೆಯಾಗಿಲ್ಲ. 'ಆತ್ಮನೇ ಎಲ್ಲಾ ದೇವತೆಗಳೂ ಆಗಿರುವನು' ಎಂದು ಮನುಸ್ಮೃತಿಕಾರರೂ ತಿಳಿಸಿರುತ್ತಾರೆ. ಆದ್ದರಿಂದ ತಾನೇ ಬ್ರಹ್ಮವಾಗಿದ್ದುಕೊಂಡು ಯಾರನ್ನು ತಾನೆ ಬೇಡಿಕೊಂಡು ಪಡೆಯಬೇಕಾದದ್ದಾದರೂ ಏನಿದೆ? ಹೀಗೆ ಪ್ರಶ್ನೆಯಲ್ಲೇ ಉತ್ತರವೂ ಅಡಕವಾಗಿರುತ್ತದೆ.

ಹೀಗಿದ್ದರೂ ಮಂದಮಧ್ಯಮಾಧಿಕಾರಿಗಳ ಅನುಗ್ರಹಾರ್ಥವಾಗಿ ಉಪನಿಷತ್ತು ಈಗ ದೃಷ್ಟಾಂತಪೂರ್ವಕವಾಗಿ ಬ್ರಹ್ಮಪ್ರಾಪ್ತಿಯ ವಿಷಯದಲ್ಲಿ ಆಗಿರುವ ಅಡ್ಡಿಯನ್ನು ತಿಳಿಸಿಕೊಟ್ಟು ಅದನ್ನು ಪರಿಹರಿಸಿಕೊಳ್ಳಲು ಸೂಚಿಸುತ್ತದೆ. ದೃಷ್ಟಾಂತವನ್ನು ನಾವು ಮೊದಲು ತಿಳಿದುಕೊಳ್ಳೋಣ. ಹಿಂದಿನ ಕಾಲಕ್ಕೆ ಹಿರಿಯರು ಮಕ್ಕಳು, ಮೊಮ್ಮಕ್ಕಳಿಗೂ ದಾರಿದ್ರ್ಯವು ಬಾರದಿರಲಿ– ಎಂದು ಗೋಪ್ಯವಾಗಿ ಚಿನ್ನದ ನಗ– ನಾಣ್ಯಗಳನ್ನು ನೆಲದಲ್ಲಿ ಹೂತಿಡುತ್ತಿದ್ದರು. ಏಕೆಂದರೆ ಈಗಿನ ಕಾಲದಂತೆ ಆಗ ಬ್ಯಾಂಕುಗಳಲ್ಲಿ ಠೇವಣಿಗಳ ವ್ಯವಸ್ಥೆಯಿರಲಿಲ್ಲ. ಹಾಗೆ ಹೂತಿಟ್ಟ ಯಜಮಾನನು ತನಗೆ ಅಂತ್ಯಕಾಲವು ಸಮೀಪಿಸಿದಾಗ ಕುಟುಂಬದಲ್ಲಿ ಯಾವನಾದರೂ ತನ್ನ ವಿಶ್ವಾಸಪಾತ್ರನಾದವನಿಗೆ ನಿಧಿಯ ವಿಚಾರವನ್ನು ತಿಳಿಸಿಬಿಡುತ್ತಿದ್ದನು. ಆದರೆ ಕೆಲವು ಸಂದರ್ಭಗಳಲ್ಲಿ ಯಜಮಾನನ ಸಾವು ಅನಿರೀಕ್ಷಿತವಾಗಿ ಸಂಭವಿಸಿದಲ್ಲಿ ನಿಧಿಯ ವಿಚಾರವು ಯಾರಿಗೂ ತಿಳಿಯುವ ಸಂಭವವೇ ಇರಲಿಲ್ಲ. ಇದರಿಂದ ಅಂಥವನ ವಂಶೀಕರು ಅದೇ ಮನೆಯಲ್ಲೇ ವಾಸವಿದ್ದು ಅಲ್ಲಿಯೇ ನಿಧಿಯ ಮೇಲೆಯೇ ಓಡಾಡುತ್ತಿದ್ದರೂ ನಿಧಿಯ ಅರಿವಿಲ್ಲದ್ದರ ಪ್ರಯುಕ್ತ ದರಿದ್ರರಾಗಿ ಬಾಳಬೇಕಾಗುತ್ತಿತ್ತು. ಈ ಉದಾಹರಣೆಯನ್ನು ಶ್ರುತಿಯು ಇಲ್ಲಿ ಕೊಟ್ಟಿರುತ್ತದೆ. ಇದರಂತೆಯೇ ಸಕಲಕಾಮಗಳ ಗನಿಯಾದ ಬ್ರಹ್ಮವೆಂಬ ನಿಧಿಯು ನಮ್ಮ ಆತ್ಮನೇ ಎಂದರೆ ಸ್ವರೂಪವೇ ಆಗಿದೆ. ಅದು ನಮ್ಮನ್ನು ಬಿಟ್ಟು ಎಲ್ಲಿಯೂ ಹೋಗಿಲ್ಲ. ಎಲ್ಲಿಂದಲೂ

ಹೊಸದಾಗಿ ಪಡೆದುಕೊಳ್ಳಬೇಕಾಗಿಲ್ಲ. ಹೀಗಿದ್ದರೂ ಅದರ ತಿಳಿವಳಿಕೆಯಿಲ್ಲದ ಮೂಢರಾದ ಜೀವರು ಅದನ್ನು ಕಳೆದುಕೊಂಡವರಂತಾಗಿ ಸಂಸಾರದುಃಖಭಾಗಿಗಳಾಗಿರುವರು. ಇದೆಂಥ ವಿಪರ್ಯಾಸವು? ಎಂದು ಇಲ್ಲಿ ತಿಳಿಸಿದೆ.

ದೃಷ್ಟಾಂತದಲ್ಲಿ ನಿಧಿಯ ಯಜಮಾನನು ಬೇರೆಯಾಗಿದ್ದು ಅನುಭವಿಸುವವರೂ ಬೇರೆಯಾಗಿರುವದರಿಂದ ಅಂಥ ಸಂದರ್ಭವು ಒದಗಬಹುದು. ಆದರೆ ಪ್ರತಿಯೊಬ್ಬ ಜೀವನ ಆತ್ಮನೇ ಆಗಿರುವ ಪರಬ್ರಹ್ಮದ ವಿಷಯದಲ್ಲಿ ಅಪ್ರಾಪ್ತಿ ಎಂದರೇನು? ಎಂದು ಸಂಶಯವುಂಟಾಗಬಹುದು. ಇದಕ್ಕೆ ಸಮಾಧಾನವೇನೆಂದರೆ: ಉದಾಹರಣೆಯಲ್ಲಿ ವಿವಕ್ಷಿತಾಂಶವನ್ನು ಮಾತ್ರ ತೆಗೆದುಕೊಂಡಲ್ಲಿ ಸರಿಹೋಗುತ್ತದೆ. ಅದು ಯಾವವೆಂದರೆ, ವಸ್ತುವು ಇದ್ದುಕೊಂಡಿದ್ದರೂ 'ಅದು ಇದೆ' ಎಂಬ ಜ್ಞಾನವಿಲ್ಲದಿರುವದು ಹೇಗೆ ದುಃಖಕಾರಣವಾಗಿದೆಯೋ ಹಾಗೆಯೇ ಬ್ರಹ್ಮದ ವಿಷಯದಲ್ಲಿ ನಮಗೆ ತಿಳಿವಳಿಕೆಯಿಲ್ಲದಿರುವದೇ ಸಂಸಾರಬಂಧನಕ್ಕೆ ಕಾರಣವಾಗಿರುತ್ತದೆ–ಎಂದು ಅಭಿಪ್ರಾಯ. ಪದಾರ್ಥವು ಇದ್ದಮಾತ್ರಕ್ಕೆ ಪುರುಷಾರ್ಥಸಾಧನವಾಗಲಾರದು. ಅಥವಾ ಸಂತೋಷಸಾಧನವಾಗಲಾರದು. ಉದಾಹರಣೆಗೆ ಒಬ್ಬನ ಮನೆಯಲ್ಲಿ ಒಂದು ವೀಣೆಯಿದ್ದರೆ ಸಾಲದು. ಅದನ್ನು ನುಡಿಸುವ ಕೌಶಲವೂ ವಿದ್ಯೆಯೂ ಇದ್ದರಲ್ಲವೆ–ಆನಂದವಾದೀತು? ಹಾಗೆಯೇ ಬ್ರಹ್ಮವಿದ್ದರೂ ಅದರ ಅರಿವು ಇಲ್ಲವಾದರೆ ಹೇಗೆ ಸುಖಪ್ರಾಪ್ತಿಯಾದೀತು?

ಈಗ ಶ್ರುತಿಯು ಪ್ರತಿಯೊಬ್ಬ ಜೀವನಿಗೂ ಪ್ರತಿದಿನವೂ ಕಡ್ಡಾಯವಾಗಿ ಬ್ರಹ್ಮಪ್ರಾಪ್ತಿಯಾಗುತ್ತಿದ್ದರೂ ಅದರ ಅರಿವಿಲ್ಲವಾದ್ದರಿಂದ ಹೇಗೆ ಸಂಸಾರವೇ ಸ್ವಭಾವವೋ ಎಂಬಂತಾಗಿದೆ–ಎಂಬುದನ್ನು ತಿಳಿಸಲು ಹೊರಟಿದೆ. ಬ್ರಹ್ಮವು ಆತ್ಮನೇ ಎಂಬ ಉಪದೇಶವು ಕೇವಲ ಹೊಗಳಿಕೆಯ ಮಾತಲ್ಲ. ಅಥವಾ ಅದು ಮುಂದೆಂದೂ ಜನ್ಮಾಂತರಲೋಕಾಂತರಗಳಲ್ಲಿ ಆಗಬಹುದಾದ ಭವಿಷ್ಯಕಾಲಕ್ಕೆ ಸೇರಿದ ಫಲವೆಂದೋ ತಿಳಿಯಬಾರದು. ಅದು ಈಗಲೇ ಇಲ್ಲಿಯೇ ಎಲ್ಲಾ ಜೀವರುಗಳಿಗೂ ಅನುಭವವಾಗುತ್ತಿದೆ–ಎಂಬುದನ್ನು ತಿಳಿಸಲಾಗುವದು. ಹೇಗೆಂದರೆ: ಪ್ರತಿಯೊಬ್ಬ ಜೀವನೂ ತನ್ನ ಜಾಗತಿಕವ್ಯಾಪಾರಗಳೆಲ್ಲವೂ ಪೂರೈಸಿದ ಅನಂತರ ವಿಶ್ರಾಂತಿಯನ್ನು ಹೊಂದುವನು. ಆಗ್ಗೆ ಅವನು ತನ್ನ ಕರಣಗಳನ್ನೆಲ್ಲ ಒಳಸೆಳೆದುಕೊಂಡು, ಮನೋವ್ಯಾಪಾರಗಳಿಂದಲೂ ನಿವೃತ್ತನಾಗಿರುವನು. ಇಂಥ ಜೀವನು ಆಗ ಎಲ್ಲಿರುವನು? ವಿಶ್ರಾಂತಿಯನ್ನು ಹೇಗೆ ಅನುಭವಿಸುವನು? ಎಂಬುದೀಗ ವಿಚಾರಣೀಯವಾಗಿದೆ. ಲೌಕಿಕರನ್ನು ಕೇಳಿದರೆ ನಿದ್ರೆಯೆಂಬುದೇ ಆ ವಿಶ್ರಾಂತಿ ಸ್ಥಾನವು–ಎನ್ನುವರು. ಶಾಸ್ತ್ರವಾದರೊ, ನಿದ್ರೆಯೆಂದರೇನು? ಆಗ ಜೀವನು ಏನಾಗಿರುವನು? ಅವನ ಸ್ವರೂಪವು ಹೇಗಿರುವದು? ಎಂಬಿದನ್ನು ವಿಚಾರಿಸಿ 'ನಿದ್ರೆಯಲ್ಲಿ ಜೀವನು ತನ್ನ ಸ್ವಭಾವವಾದ ಬ್ರಹ್ಮಸ್ವರೂಪದಲ್ಲಿಯೇ

ಒಂದಾಗಿರುವನು; ಅದೇ ಬ್ರಹ್ಮಲೋಕವು' –ಎಂದು ತಿಳಿಸುತ್ತದೆ. ಇದು ಸರಿ. ಏಕೆಂದರೆ ಬ್ರಹ್ಮವೆಂದರೆ ಏಕಮೇವಾದ್ವಿತೀಯವಾದದ್ದು. ನಿದ್ರೆಯಲ್ಲಿ ಇಂಥ ಏಕತ್ವಾನುಭವವಿರುತ್ತದೆ. ಇದು ಸಾರ್ವತ್ರಿಕವೂ ಆಗಿದೆ. ಯಾರಿಗೂ ನಿದ್ರೆಯಲ್ಲಿ ಎರಡನೆಯ ವಸ್ತುವಿನ ಅನುಭವವಾಗಿರುವದು ಕಂಡುಬಂದಿಲ್ಲ. ಹಾಗೆ ಕಂಡುಬಂದಿದ್ದರೆ ಅದು ನಿದ್ರೆಯೇ ಅಲ್ಲ–ಅಲ್ಲವೆ? ಆದ್ದರಿಂದ ಪ್ರತಿಯೊಬ್ಬ ಜೀವನೂ ತನಿನಿದ್ರೆಯಲ್ಲಿ ಬ್ರಹ್ಮವನ್ನು ಸೇರಿ ಅದರಲ್ಲಿ ಒಂದಾಗಿರುವನು. ಆ ಕಾಲಕ್ಕೆ ಬ್ರಹ್ಮಸ್ವರೂಪಾನಂದವನ್ನು ಅನುಭವಿಸುತ್ತಿರುವನು. ಅಲ್ಲಿಂದಲೇ ಎದ್ದು ಎಚ್ಚರಕ್ಕೆ ಬರುವನು. ಹೀಗಿದ್ದರೂ ಅವನಿಗೆ ತಾನು ಜೀವನೆಂಬ ಅಭಿಮಾನವು ಈಗ ಹೋಗದೇ ಇದ್ದು ಸುಷುಪ್ತಿಯಲ್ಲಾದ ಬ್ರಹ್ಮಪ್ರಾಪ್ತಿಯನ್ನು ಅರಿತುಕೊಳ್ಳದೆ ಇರುವನು. ಈ ಪರಿಸ್ಥಿತಿಯಿಂದ ಪಾರಾಗಬೇಕಾದರೆ ಅವನು ಎಚ್ಚರದಲ್ಲಿಯೇ ಶಾಸ್ತ್ರಾಚಾರ್ಯರನ್ನು ಬಳಿಸಾರಿ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು. ಶ್ರವಣಮನನನಿದಿಧ್ಯಾಸನಗಳಿಂದ ತನ್ನ ಆತ್ಮನು ಸಂಸಾರಿಯಲ್ಲವೆಂದೂ ನಿತ್ಯಶುದ್ಧಬುದ್ಧ ಮುಕ್ತವಾದ ಬ್ರಹ್ಮವೇ ತಾನೆಂದೂ ಗಟ್ಟಿಗೊಳಿಸಿಕೊಳ್ಳಬೇಕು. ಸಂಶಯನಿವಾರಣೆಗಾಗಿ ಸುಷುಪ್ತಿಯಲ್ಲಾಗುವ ಬ್ರಹ್ಮಾನುಭವವನ್ನು ಅನುಸಂಧಾನಮಾಡಿಕೊಳ್ಳಬೇಕು. ಆಗ ಅವನು ಯಾವಾಗಲೂ ಬ್ರಹ್ಮಲೋಕದಲ್ಲಿಯೇ ಇದ್ದುಕೊಂಡುಬಿಡುವನು. ಉಳಿದ ಜೀವರುಗಳಾದರೋ ಪ್ರತಿದಿನವೂ ಬ್ರಹ್ಮಲೋಕವನ್ನು ಪಡೆಯುತ್ತಿದ್ದರೂ ತಮ್ಮ ಅಜ್ಞಾನದ ನಿಮಿತ್ತವಾಗಿ ಪಡೆಯದೆ ಇರುವರು– ಎಂದು ಶ್ರುತಿಯು ತಿಳಿಸುತ್ತಿದೆ.

ಈಗ ಶ್ರುತಿಯು ಹೃದಯಾಕಾಶದಲ್ಲಿಯೇ ಸರ್ವಕಾಮಗಳನ್ನೂ ಹೇಗೆ ಪಡೆದುಕೊಳ್ಳಬಹುದೆಂಬುದನ್ನು ಹೃದಯಶಬ್ದನಿರ್ವಚನದಿಂದ ತಿಳಿಸುತ್ತದೆ. ಹೃದಯವೆಂದರೆ ಲೌಕಿಕವಾದ ವ್ಯವಹಾರದಲ್ಲಿ ಪ್ರಾಣಗಳಿಗೆ ಆಶ್ರಯವಾದ ಒಂದು ಮಾಂಸಪಿಂಡವೆಂದರ್ಥ. ಇಂಥ ಹೃದಯವನ್ನು ತೆಗೆದು ಬೇರೊಬ್ಬರಿಗೆ ಜೋಡಣೆ ಮಾಡುವದನ್ನು ಕೂಡ ವಿಜ್ಞಾನಿಗಳು ಕಲಿತಿರುತ್ತಾರೆ. ಆದರೆ ಹೃದಿ–ಅಯಮ್ ಎಂಬ ವ್ಯುತ್ಪತ್ತಿಯಂತೆ ಹೃದಾಕಾಶದಲ್ಲಿರುವ ಈ ಆತ್ಮನನ್ನೇನೂ ಅವರು ಕಂಡುಕೊಂಡಿರುವದಿಲ್ಲ. ಹೃದಯಶಬ್ದವು ಇಂಥ ಆತ್ಮನನ್ನು ತನ್ನಲ್ಲಿ ಧರಿಸಿರುವದರಿಂದಲೇ ಅನ್ವರ್ಥವಾಗಿದೆ. ಯಾರೇ ಆಗಲಿ ಆತ್ಮನನ್ನು ಹೃದಯಸ್ಥಾನದಲ್ಲಿಯೇ ಕಂಡುಕೊಳ್ಳಬೇಕಾಗಿದೆ. ಇದಕ್ಕೆ ಆಧಾರನಾಗಿರುವ ಆತ್ಮನು ಪರಬ್ರಹ್ಮವೇ ಆಗಿರುವನು. ಮತ್ತು ಹೃದಯವು ಒಂದು ಉಪಾಧಿಮಾತ್ರವೇ ಹೊರತು ಅದೇ ಆತ್ಮನಲ್ಲ, ಆತ್ಮನನ್ನು ಅರಿಯಲು ಅದು ದ್ವಾರವಾಗಿರುತ್ತದೆ. ಇರಲಿ. ಪ್ರಕೃತದಲ್ಲಿ ಶ್ರುತಿಯು ಹೇಳುವದೇನೆಂದರೆ ಹೃದಯಶಬ್ದವನ್ನು ಆತ್ಮಶಬ್ದಕ್ಕೆ ಪರ್ಯಾಯವೆಂದೇ ಉಪಾಸಕನು ತಿಳಿಯಬೇಕು. ಹೃದಯದಲ್ಲಿರುವ ಆತ್ಮನು–ಎಂದರೆ ಬೋನಿನಲ್ಲಿರುವ ಸಿಂಹವು–ಎಂದಂತೆ ಮೇಲು ನೋಟದ ಅರ್ಥವಾದರೂ 'ಬೊಂಬೆಯ ಶರೀರ' ಎಂಬಂತೆ ಅಭೇದದಿಂದಲೆ

ಅನುಸಂಧಾನ ಮಾಡಬೇಕು. ಆಗ ಆತ್ಮನ ಸಾಕ್ಷಾತ್ಕಾರವಾಗಿ ಉಪಾಸಕನು ಬ್ರಹ್ಮದಲ್ಲಿ ಒಂದಾಗಿಬಿಡುವನು. ಇದು ಜ್ಞಾನದಿಂದ ಆಗುವ ಫಲವು. ಹೀಗೆ ಬ್ರಹ್ಮವೇ ತಾನಾದಾಗ ಎಲ್ಲಾ ಕಾಮಗಳ ಪ್ರಾಪ್ತಿಯೂ ಆಗಿಬಿಡುವದು. 'ಎಲ್ಲಾ ಕಾಮಗಳನ್ನೂ ಬ್ರಹ್ಮದೊಡನೆ ಒಂದಾಗಿ ಜ್ಞಾನಿಯು ಅನುಭವಿಸುವನು' ಎಂದು ತೈತ್ತಿರೀಯ ಶ್ರುತಿಯಲ್ಲಿಯೂ ಇದೆ.

ಆದರೆ ಬ್ರಹ್ಮವನ್ನರಿಯಲಿ, ಅರಿತುಕೊಳ್ಳದೆ ಇರಲಿ, ಪ್ರತಿಯೊಬ್ಬ ಜೀವನೂ ಸುಷುಪ್ತಿಯಲ್ಲಿ ಹಾರ್ದಾಕಾಶದಲ್ಲಿರುವ ಬ್ರಹ್ಮವನ್ನು ಸೇರಿಯೇ ಸೇರುತ್ತಾನಲ್ಲವೆ? ಜ್ಞಾನದಿಂದಾಗುವ ವಿಶೇಷವೇನು? ಎಂದು ಯಾರಾದರೂ ಕೇಳಬಹುದು. ವಿಶೇಷವೇನೋ ಇದ್ದೇ ಇದೆ. ಅದನ್ನು ಶ್ರುತಿಯು ಹೀಗೆ ತಿಳಿಸುತ್ತಿದೆ. ಈಗ ಯಾವನು ತನ್ನ ಜೀವನಕಾಲದಲ್ಲಿ ಬ್ರಹ್ಮಜಿಜ್ಞಾಸೆಯನ್ನು ಮಾಡಿ ಹಾರ್ದಬ್ರಹ್ಮವನ್ನರಿತವನಾಗಿ ಪ್ರತಿದಿನವೂ ಸುಷುಪ್ತಿಯಲ್ಲಿ ಬ್ರಹ್ಮವನ್ನು ಸೇರುವನೋ –ಹಾಗೆ ಸೇರುವೆನೆಂಬ ಅರಿವುಳ್ಳವನಾಗಿರುವನೋ– ಅಂಥವನು ದೇಹಪಾತವಾದಮೇಲೂ ಅದೇ ತಿಳಿವಳಿಕೆಯ ಬಂಡವಾಳದಿಂದ ಬ್ರಹ್ಮವನ್ನೇ ಹೊಂದಿ ಸಂಸಾರದಿಂದಲೇ ಒಮ್ಮೆಗೇ ಬಿಡುಗಡೆಯಾಗಿಬಿಡುವನು. ಇಲ್ಲವಾದರೆ ಮರಳಿ ಸಂಸಾರಕ್ಕೇ ಹಿಂತಿರುಗುವನು. ಅಜ್ಞನಿಗೆ ಸುಷುಪ್ತಿಯಾಗಲಿ, ದೇಹಪಾತವಾಗಲಿ, ಪ್ರಲಯವೇ ಆಗಲಿ–ಸಂಸಾರವೇ ಬೆನ್ನಂಟಿರುವದು. ಜ್ಞಾನಿಗೆ ಮಾತ್ರ ಎಲ್ಲಾ ಸ್ಥಿತಿಯಲ್ಲಿಯೂ ಬ್ರಹ್ಮವೇ ಸ್ವರೂಪವಾಗಿ ಕಂಡಿರುವದು, ಇದೇ ಮುಕ್ತಿಯೆನಿಸಿರುವದು– ಎಂದಭಿಪ್ರಾಯ.

---

## ಆತ್ಮನ ಸ್ತುತಿ

**ಓಮ್ ॥ ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾ-ಮಸಂಭೇದಾಯ ನೈತಗ್ಂ ಸೇತುಮಹೋರಾತ್ರೇ ತರತೋ ನ ಜರಾ ನ ಮೃತ್ಯುಃ........... ಅಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ ॥ 8–4–1**

**ಭಾವಾರ್ಥ:–** ಇನ್ನು ಈ ಆತ್ಮನಿದಾನಲ್ಲ, ಇವನು ಈ ಲೋಕಗಳ ಅಸಂಭೇದಕ್ಕೆ ಸೇತುವು, ವಿಧೃತಿಯು. ಈ ಸೇತುವನ್ನು ಅಹೋರಾತ್ರಗಳು ದಾಟವು; ಮುಪ್ಪು, ಸಾವುಗಳೂ (ದಾಟವು); ಈ ಬ್ರಹ್ಮಲೋಕವು ಅಪಹತಪಾಪ್ಮವಲ್ಲವೆ?

(ದಹರೋಪಾಸಕನು ಪಡೆಯುವ ಬ್ರಹ್ಮವು ಜಗತ್ತಿನಲ್ಲಿರುವ ಎಲ್ಲಾ ಲೋಕಗಳಿಗೂ ಆಶ್ರಯವು. ಅದೇ ಸರ್ವಾಧಾರವು. ಲೋಕಗಳು ನಾಶವಾಗದಂತೆ ಅದು ಎತ್ತಿಹಿಡಿದಿರುವದು. ಅದಕ್ಕೆ ಹಗಲುರಾತ್ರಿಗಳೆಂಬ ಕಾಲಕೃತವಾದ ವಿಕಾರಗಳಿಲ್ಲ, ಮುಪ್ಪುಸಾವುಗಳಿಲ್ಲ, ಪಾಪಪುಣ್ಯಗಳಿಲ್ಲ, ಅದು ಅಪಹತಪಾಪ್ಮವೆನಿಸಿರುವದು; ಅದು ಆತ್ಮನೇ–ಎಂದಭಿಪ್ರಾಯ)

# 64. ಉಪಾಸಕನು ಪಡೆಯುವ ಆತ್ಮನ ಸ್ವರೂಪ

ಈ ಉಪನಿಷತ್ತಿನಲ್ಲಿ ಈವರೆಗೆ ವರ್ಣಿಸಿರುವ ದಹರೋಪಾಸನೆಯ ವಿಚಾರವಾಗಿ ಇನ್ನೂ ಕೆಲವು ವಿಷಯಗಳನ್ನು ಈಗ ಪ್ರಸ್ತಾಪಿಸಲಾಗುವದು. ಬ್ರಹ್ಮವಿದ್ಯೆಯನ್ನೇ ಇಲ್ಲಿ ಉಪಾಸನೆ–ಎಂಬ ಶಬ್ದದಿಂದ ಕರೆಯಲಾಗಿದೆ. ಉಪನಿಷತ್ತುಗಳಲ್ಲಿ ಕರ್ತೃತಂತ್ರವಾದ ಉಪಾಸನೆಯನ್ನೂ ವಸ್ತುತಂತ್ರವಾದ ಜ್ಞಾನವನ್ನೂ ಎರಡನ್ನೂ ವಿದ್ಯೆ–ಎಂದೇ ಕರೆಯಲಾಗುತ್ತದೆ. 'ಯ ಏವಂ ವೇದ' ಎಂದು ಮತ್ತೆ ಮತ್ತೆ ವೇದಸಾಹಿತ್ಯದಲ್ಲಿ ಬರುವದನ್ನು ನೀವು ಕೇಳಿರಬಹುದು. ಅಂಥ ಸಂದರ್ಭಗಳಲ್ಲಿ ಪ್ರಕರಣಾನುಗುಣವಾಗಿಯೇ ಉಪಾಸನೆಯೆಂದೊ, ಜ್ಞಾನವೆಂದೊ ವಿದ್ಯಾಶಬ್ದಾರ್ಥವನ್ನು ನಿರ್ಣಯಿಸಬೇಕಾಗುವದು. ಇಲ್ಲಿ ದಹರೋಪಾಸನೆ ಎಂದು ಪ್ರಸ್ತಾಪಿಸಿದ್ದರೂ ಇದು ಒಂದು ರೀತಿಯಿಂದ ಜ್ಞಾನವನ್ನೇ ತಿಳಿಸುತ್ತದೆ. ಬ್ರಹ್ಮೋಪಾಸನೆಗೆ ಮುಂಚಿತವಾಗಿ ಸಾಧಕನಿಗೆ ಬ್ರಹ್ಮಸ್ವರೂಪನಿಶ್ಚಯವು ಬೇಕಾಗುವದು. ಈ ಸ್ವರೂಪನಿಶ್ಚಯವು ಶಾಸ್ತ್ರದಿಂದಲೇ ಆಗಬೇಕು. ಏಕೆಂದರೆ ಬ್ರಹ್ಮವು ಲೌಕಿಕವಸ್ತುವಲ್ಲ; ಇಂದ್ರಿಯ ಮನೋಗೋಚರವೂ ಅಲ್ಲ. ಆದ್ದರಿಂದ ಆಗಮದಿಂದಲೇ ಇದರ ಅರಿವುಂಟಾಗಬೇಕು. ಆಗಮವಾದರೊ, ಗುರುವಿನಿಂದ ಶಿಷ್ಯನಿಗೆ ಪ್ರಾಪ್ತಿಯಾಗತಕ್ಕದ್ದಾಗಿದೆ. ಹೀಗೆ ಗುರುಶಿಷ್ಯರ ಸಂವಾದ ರೂಪವಾಗಿಯೇ ಆರಂಭವಾಗಿರುವ ಈ ದಹರವಿದ್ಯೆಯು ಸೂಕ್ಷ್ಮವಾಗಿ ವಿಚಾರ ಮಾಡಿದಂತೆಲ್ಲ ಜ್ಞಾನದಲ್ಲಿ ಪರ್ಯವಸಾನವಾಗುತ್ತದೆ. ಪ್ರಕೃತ ಉಪಾಸಕರಿಗೂ ಅಲ್ಲದವರಿಗೂ ಇರುವ ತಾರತಮ್ಯವನ್ನು ಹಿಂದೆ ತಿಳಿಸಲಾಗಿತ್ತು. ಸುಷುಪ್ತಿಯಲ್ಲಿ ಬ್ರಹ್ಮವನ್ನು ಎಲ್ಲಾ ಜೀವರುಗಳೂ ಪಡೆದರೂ ತಿಳಿದವರು ಮಾತ್ರವೇ ಮುಕ್ತರಾಗುವರೆಂದೂ ಉಳಿದವರು ವಂಚಿತರಾಗುವರೆಂದೂ ಹೇಳಲಾಗಿದೆ. ಈಗ ಈ ಬ್ರಹ್ಮವು ಉಪಾಸಕರ ಆತ್ಮನೇ ಆಗಿದೆ–ಎಂದು ವರ್ಣಿಸಲಾಗುವದು.

ಬ್ರಹ್ಮಕ್ಕೆ ಹೃದಯ, ಆತ್ಮ, ಸತ್ಯ–ಎಂಬ ಮೂರು ಹೆಸರುಗಳನ್ನು ಇಲ್ಲಿ ನಿರ್ದೇಶಮಾಡಿ ಒಂದೊಂದರ ಮಹಿಮೆಯನ್ನೂ ತಿಳಿಸಲಾಗುವದು. ಹೃದಯ ಎಂಬ ಹೆಸರು ಬ್ರಹ್ಮನನ್ನೇ ಹೇಳುತ್ತದೆಯೆಂಬುದು ಹೇಗೆ? ಎಂದರೆ ಹೃದಿ–ಅಯಮ್ ಎಂದು ಬಿಡಿಸಿದಾಗ ಅಯಮ್ ಎಂಬಿದು ಇವನು–ಎಂಬರ್ಥವನ್ನು ತಿಳಿಸುತ್ತದೆ. ಇದು ಸರ್ವನಾಮಶಬ್ದವಾಗಿದೆ. ಬಹಳ ಮಟ್ಟಿಗೆ ಉಪನಿಷತ್ತುಗಳಲ್ಲಿ ಪ್ರಯುಕ್ತವಾಗಿರುವ ಸರ್ವನಾಮಗಳು ಸರ್ವವೂ ಆಗಿರುವ ಬ್ರಹ್ಮವನ್ನೇ ಹೇಳುವವು. 'ಅಯಮಾತ್ಮಾ ಬ್ರಹ್ಮ' ಎಂದು ಬೇರೊಂದು ಶ್ರುತಿಯಲ್ಲಿಯೂ ಇದೆ. ಆದ್ದರಿಂದ 'ಇದಂ' ಶಬ್ದವಾಚ್ಯವಾದ ಬ್ರಹ್ಮವೇ ಎಲ್ಲರ ಹೃದಯದಲ್ಲಿಯೂ ಇರುವದರಿಂದ ಅದನ್ನು 'ಅಯಂ' ಎಂದಾಗಲಿ

'ಹೃದಯಮ್' ಎಂದಾಗಲಿ ಹೇಗಾದರೂ ನಿರ್ದೇಶಿಸಬಹುದು. ಹೀಗೆ ಹೃದಯಶಬ್ದವು ಬ್ರಹ್ಮವಾಚಕವಾಗಿದೆ.

ಇನ್ನು ಆತ್ಮಶಬ್ದವನ್ನು ವಿಚಾರಮಾಡೋಣ. ಇದು ಯಾವಾಗಲೂ ಪ್ರತ್ಯಗಾತ್ಮವಾಚಿಯೇ ಆಗಿರುತ್ತದೆ-ಎಂದು ಶ್ರೀ ಶಂಕರಾಚಾರ್ಯರು ತಿಳಿಸುತ್ತಾರೆ. ಆದರೆ ಲೌಕಿಕರು ದೇಹಪರ್ಯಂತವಾದ ಉಪಾಧಿಗಳನ್ನೆಲ್ಲ ಕೂಡಿಸಿಕೊಂಡೇ ಆತ್ಮನನ್ನು ವ್ಯವಹಾರಮಾಡುತ್ತಾರೆ. ಆಗ್ಗೆ ಆತ್ಮನು ಯಾರು? ಎಂಬಿದನ್ನು ಉಪಾಧಿಗಳಿಂದ ಬಿಡಿಸಿ ಸವಿಶೇಷಣವಾಗಿ ಹೇಳಬೇಕಾಗುವದು. ಈ ಆತ್ಮನು ಅಮೃತನು, ಅಭಯನು, ಅಪಹತ ಪಾಪ್ಮನು-ಇತ್ಯಾದಿ ವಿವರಗಳಿಂದ ನಿರ್ದೇಶಿಸಬೇಕಾಗುವದು. ಉಪನಿಷತ್ತಿನಲ್ಲಿ ಉಪಾಸ್ಯನಾಗಿ ಹೇಳಿರುವ ಆತ್ಮನು ಜೀವಾತ್ಮನಲ್ಲ, ಪರಮಾತ್ಮನನ್ನು ಮಾತ್ರವೇ ಅಲ್ಲಿ ಉಪಾಸ್ಯನೆಂದೂ ಜ್ಞೇಯನೆಂದೂ ಎರಡು ಬಗೆಯಾಗಿ ವರ್ಣಿಸಿರುತ್ತದೆ. ಆದ್ದರಿಂದ ಆತ್ಮನೆಂದರೆ ಪರಮಾತ್ಮನೆಂದೇ ಇಲ್ಲಿ ಪ್ರಕರಣಾನುಗುಣವಾಗಿ ತಿಳಿಯಬೇಕು. ಈ ಪರಮಾತ್ಮನೇ ಬ್ರಹ್ಮನೆಂದೂ ಕರೆಯಲ್ಪಡುವನು. ಆದ್ದರಿಂದ ಆತ್ಮನು ಬ್ರಹ್ಮವೇ-ಬ್ರಹ್ಮವೆಂದರೆ ಆತ್ಮನೇ ಎಂದು ಸಿದ್ಧವಾಗುತ್ತದೆ. ಈ ನಿಶ್ಚಯವು ದೃಢವಾಗುವವರೆಗೂ ಮತ್ತೆ ಮತ್ತೆ ಬ್ರಹ್ಮದ ಗುಣಗಳನ್ನೂ ಆ ಬ್ರಹ್ಮವು ಆತ್ಮನೇ ಎಂಬಿದನ್ನೂ ಅನುಸಂಧಾನಮಾಡುತ್ತಿರಬೇಕು. ಇಲ್ಲಿ ಅಮೃತಾಭಯಬ್ರಹ್ಮವೇ ಉಪಾಸಕನ ಆತ್ಮನೆಂದು ತಿಳಿಸಿ ಅದು ಹೃದಯಶಬ್ದವಾಚ್ಯವೂ ಆಗಿದೆ-ಎಂದು ವರ್ಣಿಸಿದೆ. ಹೀಗೆ ಬಲ್ಲವನು ಪ್ರತಿದಿನವೂ ತನ್ನ ಹೃದಯಾಂತರ್ಗತವಾದ ಬ್ರಹ್ಮವನ್ನು ಸೇರುತ್ತಾನೆ. ಅದೇ ಬ್ರಹ್ಮಲೋಕವು; ಹೃದಯನಾಮಾರ್ಥವನ್ನು ಬಲ್ಲವನಿಗೆ ಇಂಥ ಮಹತ್ಫಲವಾಗುವದು-ಎಂದು ತಿಳಿಸಲಾಗಿದೆ.

ಈಗ ಬ್ರಹ್ಮದ 'ಸತ್ಯ'ವೆಂಬ ಹೆಸರಿನ ಮಹಿಮೆಯನ್ನು ವಿಚಾರಮಾಡೋಣ. ಈ ಶಬ್ದದಲ್ಲಿ ಮೂರು ಅಕ್ಷರಗಳಿವೆ. ಸಕಾರ, ತಕಾರ, ಯಮ್-ಎಂಬಿವೇ ಆ ಮೂರಾಗಿರುತ್ತವೆ. ಸ ಎಂಬುದು ಸಮೃತವೆಂಬ ಗುಣವನ್ನು ಸೂಚಿಸುವದು. ತಕಾರವು ಮರ್ತ್ಯವೆಂಬ ಗುಣವನ್ನು ಸೂಚಿಸುವದು. ಯಮ್ ಎಂಬಿದು ಈ ಮರ್ತ್ಯಾಮೃತಗಳೆರಡನ್ನೂ ಯಮನ-ಎಂದರೆ ನಿಯಮನ ಮಾಡುತ್ತದೆ. ಹೀಗೆ ಸತ್ಯವೆಂಬ ಬ್ರಹ್ಮದ ನಾಮಕ್ಕೆ ಇಂಥ ಮಹತ್ತ್ವವಿದೆ-ಎಂದು ತಿಳಿದುಬರುತ್ತದೆ. ಬ್ರಹ್ಮದಲ್ಲಿ ಸತ್ಯವೆಂದೂ ಅನೃತವೆಂದೂ ಧರ್ಮದ್ವಯಗಳೂ ಅಧ್ಯಾರೋಪಿತವಾಗಿವೆ. 'ಸತ್ಯಂ ಚಾನೃತಂ ಚ ಸತ್ಯಮಭವತ್' ಎಂದು ಬೇರೊಂದು ಶ್ರುತಿಯಲ್ಲಿದೆ. ವ್ಯವಹಾರದೃಷ್ಟಿಯಿಂದ ಬಳಸುವ ಸತ್ಯಾನೃತಗಳನ್ನು ಇಲ್ಲಿ ಗ್ರಹಿಸಬೇಕು. ಹೇಗೆಂದರೆ ನೀರನ್ನು ಸತ್ಯವೆಂದು ಇಟ್ಟುಕೊಂಡರೆ ಬಿಸಿಲುಕುದುರೆಯ ನೀರನ್ನು ಅನೃತವೆಂದು ವ್ಯವಹರಿಸುತ್ತೇವೆ.

ಪರಬ್ರಹ್ಮವಾದರೊ, ಈ ಸತ್ಯಾನೃತಗಳೆರಡಕ್ಕಿಂತಲೂ ಮೀರಿದ ಪರಮಾರ್ಥಸತ್ಯವಾಗಿದೆ. ಆದ್ದರಿಂದ ಬ್ರಹ್ಮವೇ ಈ ಸತ್ಯಾನೃತಗಳನ್ನು ನಿಯಮನ ಮಾಡುತ್ತದೆಯೆಂದಾಗುವದರಿಂದ ಈ ಅರ್ಥದಲ್ಲಿ ಸತ್ಯವೆಂದು ಬ್ರಹ್ಮವನ್ನು ಹೆಸರಿಸಲಾಗಿದೆ. ಬ್ರಹ್ಮದ ಹೆಸರಾದ ಸತ್ಯವೆಂಬ ಶಬ್ದಕ್ಕೇ ಇಂಥ ಮಹಿಮೆಯಿರುವಲ್ಲಿ ಇನ್ನು ಬ್ರಹ್ಮದ ಮಹಿಮೆಯು ಎಷ್ಟಿರಬಹುದು? ಎಂಥದ್ದಿರಬಹುದು? ಎಂದು ಸ್ತುತಿಸಲಾಗಿದೆ. ಹೀಗೆ ಬ್ರಹ್ಮವು ತನ್ನ ನಾಮಗಳಿಂದಲೇ ಮಹಿಮಾನ್ವಿತವಾಗಿದೆ–ಎಂದು ತಿಳಿದವನು ಪ್ರತಿ ದಿನವೂ ಸುಷುಪ್ತಿ ಕಾಲಕ್ಕೆ ಬ್ರಹ್ಮಲೋಕವನ್ನೇ ಪಡೆಯುತ್ತಾನೆ–ಎಂದು ಬ್ರಹ್ಮವಿಜ್ಞಾನವನ್ನು ಹೊಗಳಿರುತ್ತದೆ. ಈ ಬ್ರಹ್ಮವು ಉಪಾಸಕನ ಆತ್ಮನೇ–ಎಂಬಿದನ್ನು ಮರೆಯಬಾರದು.

ಈಗ ಆತ್ಮನ ಸ್ವರೂಪವನ್ನೂ ಮಹಿಮೆಯನ್ನೂ ತಿಳಿಸಲಾಗುವದು. ಬ್ರಹ್ಮಶಬ್ದದಿಂದ ಹೆಸರಿಸಲ್ಪಟ್ಟ ವಸ್ತುವೇ ಆತ್ಮಶಬ್ದದಿಂದಲೂ ಸ್ತುತಿಸಲ್ಪಡುತ್ತದೆ. ಆಪ್ನೋತೀತ್ಯಾತ್ಮಾ–ಎಂಬ ವ್ಯುತ್ಪತ್ತಿಯಂತೆ ಸಕಲವನ್ನೂ ವ್ಯಾಪಿಸಿಕೊಂಡಿರುವ ವಸ್ತುವೇ ಆತ್ಮನೆನಿಸಿರುವದು. ಅದರಲ್ಲಿ ಜ್ಞಾತೃಜ್ಞಾನಜ್ಞೇಯಗಳೆಂಬ ಭೇದಗಳೂ ಉಪಾಸ್ಯ, ಉಪಾಸನಾ, ಉಪಾಸಕನೆಂಬ ಭೇದವೂ ಅಡಕವಾಗಿರುವದು. ಆದ್ದರಿಂದ ಅದು ಸರ್ವಾಧಾರವಾಗಿದ್ದು 'ಸೇತು'ವೆಂದೂ 'ವಿಧೃತಿ'ಯೆಂದೂ ಇಲ್ಲಿ ಹೊಗಳಲ್ಪಟ್ಟಿದೆ. ಸೇತುವಿನಂತಿರುವದರಿಂದ ಸೇತುವೆಯೆಂದು ಕರೆಯಲಾಗಿದೆ. ಬೇಸಾಯಗಾರರು ಜಮೀನುಗಳಲ್ಲಿ ನೀರನ್ನು ನಿಲ್ಲಿಸಲು ಆಯಾ ಕ್ಷೇತ್ರವಿಸ್ತಾರಕ್ಕೆ ತಕ್ಕಂತೆ ಒಡ್ಡುಗಳನ್ನು ನಿರ್ಮಿಸಿರುತ್ತಾರೆ. ಇವು ನೀರನ್ನು ತಡೆದಿರುವವು. ಇಂಥ ಒಡ್ಡುಗಳನ್ನು 'ಸೇತು' ಎಂದು ಕರೆಯುವರು. ಇವು ಹೇಗೆ ನೀರು ಪೋಲಾಗದಂತೆ ಹಾಗೂ ಆಚೀಚೆಗೆ ಹರಿಯದಂತೆ ನಿಯಂತ್ರಿಸುವವೋ ಹಾಗೆಯೇ ಆತ್ಮನು ಲೋಕಗಳನ್ನೆಲ್ಲ ಧರ್ಮದ ಹೆಸರಿನಿಂದ ನಿಯಂತ್ರಿಸಿರುತ್ತಾನೆ. ಇಲ್ಲವಾದರೆ ಪ್ರಬಲರು ದುರ್ಬಲರನ್ನು ನುಂಗುವದು, ಸ್ವಾರ್ಥಿಗಳು ಅಹಂಕಾರಪರವಶರಾಗಿ ಜಗತ್ತನ್ನು ಹಾಳುಮಾಡುವದೇ ಮುಂತಾದ ರೀತಿಯಿಂದ ಸ್ಥಿತಿಕಾಲದಲ್ಲಿಯೇ ಜಗತ್ತು ಪ್ರಲಯವಾಗಿಬಿಡುತ್ತಿತ್ತು, ಹಾಗಾಗದಂತೆಯೂ ಸೂರ್ಯಾಗ್ನಿವಾಯು–ಮುಂತಾದ ದೇವತೆಗಳು ಕೂಡ ತಮ್ಮ ತಮ್ಮ ಕರ್ತವ್ಯದಲ್ಲಿ ನಿತ್ಯವೂ ತೊಡಗುವಂತೆಯೂ ನಿಯಮನ ಮಾಡಿರುವ ಹಾಗೂ ಮಾಡುತ್ತಿರುವ ಸೇತುವಿನಂತಿರುವ ಆತ್ಮನೇ ಬ್ರಹ್ಮವು. ಅವನು ವಿಧೃತಿಯೂ ಆಗಿರುವನು. ವರ್ಣಾಶ್ರಮವ್ಯವಸ್ಥೆಗೆ ತಕ್ಕಂತೆ ಆಯಾ ಜೀವರುಗಳು ಕೈಗೊಳ್ಳುವ ಕರ್ಮಗಳಿಗೆಲ್ಲ ಫಲವನ್ನುಂಟುಮಾಡುವ ನಿಯಾಮಕನೂ ಆಗಿರುವನು. ಪಾಪಿಗಳಿಗೆ ಪಾಪಫಲವುಂಟಾಗುವಂತೆಯೂ ಗೊತ್ತುಮಾಡಿರುವನು. ಇದರಿಂದಲೇ ಲೋಕಗಳು ಒಂದನ್ನೊಂದು ನುಂಗದೆ ಉದ್ವೃತ್ತವಾಗದೆ ಇವೆ. ರಾಜ್ಯವನ್ನಾಳುವವರು ಪ್ರಜೆಗಳನ್ನು

ಕಾನೂನಿನಿಂದ ನಿಯಂತ್ರಿಸುವಂತೆ ಬ್ರಹ್ಮವು ತನ್ನ ಮಹಿಮಾರೂಪವಾದ ಧರ್ಮಜ್ಞಾನಗಳಿಂದ ಜಗತ್ತನ್ನು ನಿಯಂತ್ರಿಸುತ್ತಾ ವಿಧೃತಿಯೆನಿಸಿರುವದು.

ಈ ಬ್ರಹ್ಮಾತ್ಮನ ಮಹಿಮೆಯನ್ನು ಮತ್ತೆ ಕೇಳಿರಿ. ಈ ಸೇತುವೆನಿಸಿದ ಬ್ರಹ್ಮವನ್ನು ಹಗಲುರಾತ್ರೆಗಳು ದಾಟಲಾರವು–ಎಂದು ವರ್ಣಿಸಿದೆ. ಕಾಲವೆಂಬುದು ಹಗಲು ರಾತ್ರಿಗಳ ರೂಪದಿಂದಲೂ ಪಕ್ಷ, ಮಾಸ, ಸಂವತ್ಸರಾದಿರೂಪದಿಂದಲೂ ಗಣಿತಮಾಡಲ್ಪಟ್ಟು ಜಗತ್ತನ್ನೆಲ್ಲ ಆವರಿಸಿದೆ. ಪ್ರಪಂಚದಲ್ಲಿರುವ ವಸ್ತುಗಳೆಲ್ಲವೂ ಕಾಲವಶವಾಗಿರುವವು. 'ಕಾಲವು ಜಗದ್ಭಕ್ಷಕನು' ಎಂಬ ಸೂಕ್ತಿಯನ್ನು ಕೇಳಿರುವಿರಷ್ಟೆ ! ಚತುರ್ಮುಖಬ್ರಹ್ಮನು ಕೂಡ ಕಾಲಾಧೀನನಾಗಿರುವಾಗ ಉಳಿದವರ ಬಗ್ಗೆ ಹೇಳುವದೇನಿದೆ? ಯಾರಾದರೂ ಮೃತರಾದರೆ 'ಕಾಲವಾದರು' ಎಂದು ಹೇಳುವ ವಾಡಿಕೆಯಿದೆ. ಆದರೆ ಬ್ರಹ್ಮವೊ, ಕಾಲಾಧೀನವಲ್ಲ. ಅದು ಕಾಲಕ್ಕೂ ಕಾಲವು. ಮೃತ್ಯುವಿಗೂ ಮೃತ್ಯುವು. 'ಬ್ರಹ್ಮವು ಇರಲಿಲ್ಲ, ಅಥವಾ ಮುಂದೆ ಇರಲಾರದು'–ಎಂದು ಹೇಳುವಂತಿಲ್ಲ, ಏಕೆಂದರೆ ಇಲ್ಲವೆಂಬುದಕ್ಕೂ ಅದೇ ಸಾಕ್ಷಿಯಾಗಿರುತ್ತದೆ. ಆದ್ದರಿಂದ ಈ ಬ್ರಹ್ಮವನ್ನು ಹಗಲುರಾತ್ರೆಗಳು ಮುಟ್ಟಲಾರವು ಎಂದರ್ಥ. ಹಾಗೆಯೇ ಇದಕ್ಕೆ ಜರಾ, ಮೃತ್ಯು, ಶೋಕ, ಮೋಹ, ಪಾಪ, ಪುಣ್ಯಗಳೆಂಬ ಧರ್ಮಗಳೂ ಇರುವದಿಲ್ಲ, ಮುಪ್ಪುಸಾವುಗಳು ಶರೀರದ ಧರ್ಮವಾಗಿರುವವು. ಶೋಕಮೋಹಾದಿಗಳು ಮನೋಧರ್ಮಗಳಾಗಿವೆ. ಬ್ರಹ್ಮವು ಶರೀರಮನೋಬುದ್ಧ್ಯಾದಿಗಳನ್ನೂ ಮೀರಿ ಪ್ರತ್ಯಗಾತ್ಮನಾಗಿದೆ. ಆದ್ದರಿಂದ ಈ ಸಂಸಾರಧರ್ಮಗಳಾವವೂ ಬ್ರಹ್ಮವನ್ನು ಮುಟ್ಟಲಾರವು. ಇನ್ನು ಪಾಪಪುಣ್ಯಗಳ ವಿಚಾರ. ಇವು ಕೂಡ ಆತ್ಮನ ಧರ್ಮಗಳಲ್ಲ, ಏಕೆಂದರೆ ಆತ್ಮನೊಬ್ಬನೇ ಇರುವಾಗ ಇವುಗಳ ಸುಳಿವೂ ಇರುವದಿಲ್ಲ, ಉದಾಹರಣೆಗೆ ಸುಷುಪ್ತಿಯಲ್ಲಿ ಆತ್ಮನಿರುತ್ತಾನೆ. ಆದರೆ ಅಲ್ಲಿ ಪಾಪಪುಣ್ಯಗಳಾಗಲಿ, ಆಸೆ, ಆಕಾಂಕ್ಷೆಗಳಾಗಲಿ–ಏನೂ ಇರುವದಿಲ್ಲ, ಆತ್ಮನಿಗೆ ಪಾಪಪುಣ್ಯಗಳ ಸಂಬಂಧವಿಲ್ಲವೆಂಬುದಕ್ಕೆ ಇದೇ ಗುರುತಾಗಿದೆ. ಆದ್ದರಿಂದಲೇ ಶ್ರುತಿಯಲ್ಲಿ ಹೀಗೆಂದಿದೆ: ''ಎಚ್ಚರಕನಸುಗಳಲ್ಲಿ ಆತ್ಮನು ದೇಹೇಂದ್ರಿಯಾದ್ಯುಪಾಧಿಗಳೊಡನೆ ಬೆರೆತುಹೋಗಿರುವದರಿಂದ ಪಾಪಪುಣ್ಯಗಳನ್ನು ನೋಡುವವನಾಗಿರುತ್ತಾನೆ. ಆದರೆ ಎಂದಿಗೂ ಅವುಗಳ ಕರ್ತೃವಲ್ಲ'' ಎಂದು ತಿಳಿಸಿದೆ. ಈ ರೀತಿಯಾಗಿ ಆತ್ಮನು ಸರ್ವಸಂಸಾರಧರ್ಮಗಳನ್ನೂ ದಾಟಿರುವನೆಂಬುದೂ ಅವನು ಬ್ರಹ್ಮವೇ ಎಂಬಿದೂ ಉಪನಿಷತ್ತುಗಳ ಉಪದೇಶವಾಗಿರುತ್ತದೆ.

ಯಾವನು ಇಂಥ ಆತ್ಮನನ್ನು ಅರಿತವನಾಗಿ ಬ್ರಹ್ಮವೆಂದು ಚಿಂತಿಸುವನೋ ಅವನಿಗೆ ಯಾವ ದೇಹೇಂದ್ರಿಯಧರ್ಮಗಳ ಸೋಂಕಾಗಲಿ ನ್ಯೂನತೆಯಾಗಲಿ ಇರುವದಿಲ್ಲ. ಈ ಉಪಾಸನೆಯು ಬ್ರಹ್ಮಚರ್ಯದ ಬಲದಿಂದ ದೊರಕತಕ್ಕದ್ದಾಗಿದೆ. ಇಂಥ

ಬ್ರಹ್ಮಚಾರಿಗಳು ಎಂದರೆ ಬ್ರಹ್ಮನಿಷ್ಠರು ಬ್ರಹ್ಮಲೋಕವನ್ನೇ– ಎಂದರೆ ಬ್ರಹ್ಮಪ್ರಾಪ್ತಿಯನ್ನೇ ಹೊಂದುವರು. ಮತ್ತು ಅಂಥವರಿಗೆ ಕಮಲಾಸನಬ್ರಹ್ಮಲೋಕದಿಂದಾರಂಭಿಸಿ ಎಲ್ಲಾ ಲೋಕಗಳಲ್ಲಿಯೂ ಕಾಮಚಾರ ಎಂದರೆ ಸ್ವತಂತ್ರವಾದ ಸಂಚಾರವಿರುವದು. ದಹರಬ್ರಹ್ಮದ ಉಪಾಸನೆಯು ಇಂಥ ಮಹಾಫಲವುಳ್ಳದ್ದು– ಎಂದು ತಿಳಿಯಬೇಕು.

---

## ಬ್ರಹ್ಮಚರ್ಯಸ್ತುತಿ

**ಓಮ್ ॥ ಅಥ ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ ಬ್ರಹ್ಮಚರ್ಯೇಣ ಹ್ಯೇವ ಯೋ ಜ್ಞಾತಾ ತಂ ವಿಂದತೇಽಥ ಯದಿಷ್ಟಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ ಬ್ರಹ್ಮಚರ್ಯೇಣ ಹ್ಯೇವೇಷ್ಟ್ವಾಽಽತ್ಮಾನ ಮನುವಿಂದತೇ ॥ 8–5–1**

ಭಾವಾರ್ಥಃ– ಇನ್ನು ಯಾವದನ್ನು ಯಜ್ಞವೆನ್ನುವರೋ ಅದು ಬ್ರಹ್ಮಚರ್ಯವೇ. ಬ್ರಹ್ಮಚರ್ಯದಿಂದಲೇ ಅಲ್ಲವೆ, ಯಾವನು ಜ್ಞಾತೃವೋ ಅವನು ಅದನ್ನು ಪಡೆದುಕೊಳ್ಳುತ್ತಾನೆ? ಇನ್ನು ಯಾವದನ್ನು ಇಷ್ಟವೆನ್ನುವರೋ ಅದು ಬ್ರಹ್ಮಚರ್ಯವೇ. ಬ್ರಹ್ಮಚರ್ಯದಿಂದಲೇ ಇಷ್ಟಿಯನ್ನು ಮಾಡಿಯಲ್ಲವೆ, ಆತ್ಮನನ್ನು ಪಡೆದುಕೊಳ್ಳುತ್ತಾನೆ?

(ದಹರೋಪಾಸಕನಿಗೆ ಬ್ರಹ್ಮಚರ್ಯವು ಅತ್ಯವಶ್ಯಕವಾದ ಸಾಧನವು. ಆದ್ದರಿಂದ ಅದನ್ನು ಯಜ್ಞವೆಂದೂ ಇಷ್ಟವೆಂದೂ ಹೊಗಳಿದೆ. ಮುಂದುವರೆದು ಸತ್ರಾಯಣಮೌನಗಳೆಂದೂ ಅದನ್ನು ಸ್ತುತಿ ಮಾಡಿದೆ. ಆದ್ದರಿಂದ ಬ್ರಹ್ಮವಿದ್ಯೆಯನ್ನು ಬಯಸುವವನೂ ಸಾಧಕನೂ ಬ್ರಹ್ಮಚರ್ಯಸಂಪನ್ನನಾಗಿರಬೇಕೆಂದು ಅಭಿಪ್ರಾಯ.)

## 65. ಬ್ರಹ್ಮಚರ್ಯದ ಮಹಿಮೆ

ಈವರೆಗೆ ದಹರೋಪಾಸನೆಯು ಬ್ರಹ್ಮಚರ್ಯವೆಂಬ ಸಾಧನೆಯಿಂದ ವಶವಾಗುವದೆಂದು ತಿಳಿಸಲಾಗಿದೆ. ಈಗ ಬ್ರಹ್ಮಚರ್ಯವನ್ನು ಕುರಿತು ವರ್ಣಿಸಿ ಅನಂತರ ಅದನ್ನು ಹೊಗಳಲಾಗುವದು. ಹೊಗಳಿಕೆಯೆಂದರೆ ವಸ್ತುನಿಷ್ಠವಾದ ಗುಣಗಳನ್ನೇ ಹೇಳುವದೇ ಹೊರತು ಮೃಷಾಸ್ತುತಿಯಲ್ಲ. ಬ್ರಹ್ಮಚರ್ಯವನ್ನು ಮೊದಲನೆಯ ಆಶ್ರಮಧರ್ಮವಾಗಿ ನಮ್ಮ ಸಂಸ್ಕೃತಿಯಲ್ಲಿ ಅಂಗೀಕರಿಸಿದೆ. ಈ ಅವಧಿಯಲ್ಲಿಯೇ

ಪ್ರತಿಯೊಬ್ಬನೂ ವಿದ್ಯಾಭ್ಯಾಸವನ್ನು ಮಾಡಿ ಪೂರೈಸಬೇಕು. ಅನಂತರ ಮಾಡುವ ಅಭ್ಯಾಸವು ಈ ಅಭ್ಯಾಸದಷ್ಟು ದೃಢವಾಗಿರುವದಿಲ್ಲ. ಹಾಗೆಯೇ ಮಾನವನು ತನ್ನ ಸದ್ಗುಣಗಳನ್ನು ಬೆಳೆಯಿಸಿಕೊಳ್ಳುವದಕ್ಕೂ ಈ ಅವಧಿಯು ಮುಖ್ಯಕಾಲವಾಗಿರುತ್ತದೆ. ವೇದಶಾಸ್ತ್ರಗಳಾಗಲಿ, ಲೌಕಿಕವಿದ್ಯೆಗಳಾಗಲಿ, ಎಲ್ಲವೂ ಬ್ರಹ್ಮಚರ್ಯದಲ್ಲಿಯೇ ಅಭ್ಯಾಸಮಾಡತಕ್ಕದ್ದಾಗಿದೆ. ಆದರೆ ಕಾಮಿಯಾದ ಪುರುಷನು ಅದನ್ನು ತನ್ನ 25ನೇಯ ವಯಸ್ಸಿಗೆ ಪೂರೈಸಿ ಮುಂದೆ ಗೃಹಸ್ಥನಾಗಿ ಕುಟುಂಬಸೌಖ್ಯವನ್ನು ಅನುಭವಿಸಬಹುದೆಂದೂ ಶಾಸ್ತ್ರಗಳು ತಿಳಿಸುವವು. ಮತ್ತು ಅವೇ ಶಾಸ್ತ್ರಗಳು ವಿರಕ್ತನಾಗಿರುವವನಿಗೆ ಬ್ರಹ್ಮಚರ್ಯಾದಿ ಸಾಧನಗಳಿಂದ ಬ್ರಹ್ಮಪ್ರಾಪ್ತಿಯನ್ನು ಹೊಂದಿ ಮುಕ್ತನಾಗಲು ಸಹ ತಿಳಿವಳಿಕೆಯನ್ನು ನೀಡುವವು. ಆದ್ದರಿಂದ ಈಗ ವಿರಕ್ತನಾದ ಸಾಧಕನು ಅನುಷ್ಠಿಸಬೇಕಾಗಿರುವ ಬ್ರಹ್ಮಚರ್ಯವನ್ನು ಉಳಿದವರಿಗೂ ಶ್ರದ್ಧೆಯುಂಟಾಗುವದಕ್ಕಾಗಿ ಹೊಗಳಲಾಗುವದು.

ಮೊದಲನೆಯದಾಗಿ ಬ್ರಹ್ಮಚರ್ಯವನ್ನು ಯಜ್ಞವೆಂದು ಸ್ತುತಿಸಿದೆ. ಯಜ್ಞವು ಅಂತಃಕರಣಶುದ್ಧಿಯ ಮೂಲಕ ಪರಮಪುರುಷಾರ್ಥಕ್ಕೆ ಸಾಧನವೆಂದು ಶಿಷ್ಟರು ತಿಳಿಸುತ್ತಾರೆ. ಯಜ್ಞಮಾಡುವವನು ವೇದಗಳನ್ನು ಅಧ್ಯಯನಮಾಡಿರಬೇಕು. ಅದಕ್ಕಾಗಿ ಆತನು ಗುರುಕುಲವಾಸ, ಗುರುಶುಶ್ರೂಷೆ, ಬ್ರಹ್ಮಚಾರಿಧರ್ಮಗಳನ್ನೆಲ್ಲ ಪರಿಪಾಲಿಸಿರುತ್ತಾನೆ. ಈ ಧರ್ಮಗಳು ಮುಂದೆ ಅವನಿಗೆ ಬ್ರಹ್ಮಪ್ರಾಪ್ತಿಗೆ ಸಹಾಯಕವಾಗುವವು. ಆಶ್ರಮಗಳನ್ನು ಒಂದೊಂದಾಗಿ ದಾಟುವ ಸಾಧಕನು ಗೃಹಸ್ಥನಾಗಿ, ವಾನಪ್ರಸ್ಥನಾಗಿ ಅನಂತರ ಮತ್ತೆ ಸಂನ್ಯಾಸಿಯಾಗಿ ಬ್ರಹ್ಮನಿಷ್ಠನಾಗುವನು. ಪೂರ್ವಪುಣ್ಯವಿಶೇಷದಿಂದಲೂ ಹಿಂದಿನ ಸಂಸ್ಕಾರಗಳಿಂದಲೂ ವಿರಕ್ತಿಯು ಬ್ರಹ್ಮಚಾರಿಯಾಗಿರುವಾಗಲೇ ಉಂಟಾಗಿಬಿಟ್ಟರೆ ಅಂಥ ಸಾಧಕನು ತನ್ನ ಬ್ರಹ್ಮಚರ್ಯವನ್ನೇ ಮುಂದುವರೆಸಿ ಶಮದಮಾದಿಗಳಿಂದಲೂ ಶ್ರವಣಾದಿಗಳ ಮೂಲಕವೂ ಬ್ರಹ್ಮಪ್ರಾಪ್ತಿಗೆ ಪ್ರಯತ್ನಿಸುವನು. ಇಂಥವನು ಮತ್ತೆ ಯಜ್ಞಾದಿಗಳೇನನ್ನೂ ಮಾಡಬೇಕಾಗಿಲ್ಲ. ಇವನ ಬ್ರಹ್ಮಚರ್ಯವೇ ಸಮಸ್ತಯಜ್ಞವೂ ಆಗಿದೆ-ಎಂದು ಹೊಗಳಲಾಗಿದೆ. ಯಜ್ಞವನ್ನು ಮಾಡುವದಾದರೂ ಏಕೆ? ಬ್ರಹ್ಮಪ್ರಾಪ್ತಿಗಾಗಿ ಅಲ್ಲವೆ? ಅದನ್ನು ಬ್ರಹ್ಮಚರ್ಯದಿಂದಲೇ ಸಾಧಿಸುವವನಿಗೆ ಯಜ್ಞದ ಫಲವು ಬಂದಂತೆಯೇ ಆಗಿದ್ದು ಒಂದು ರೀತಿಯಿಂದ ಯಜ್ಞವು ಬ್ರಹ್ಮಚರ್ಯದಲ್ಲೇ ಲೀನವಾಗಿಬಿಡುತ್ತದೆ. ಆದ್ದರಿಂದ ಯಜ್ಞವೂ ಬ್ರಹ್ಮಚರ್ಯವೇ-ಎಂದಾಯಿತು. ಹಾಗೆಯೇ ಇಷ್ಟವೂ ಬ್ರಹ್ಮಚರ್ಯವೇ-ಎಂದೂ ಸ್ತುತಿಸಲಾಗಿದೆ. ಹೇಗೆಂದರೆ: ಬ್ರಹ್ಮಚರ್ಯಸಾಧನ ಸಂಪನ್ನನಾದವನು ಆ ಪರಮೇಶ್ವರನನ್ನು ಇಷ್ಟಿಯಿಂದ ಎಂದರೆ ಆರಾಧನಾಕ್ರಮದಿಂದ

ಪೂಜಿಸಿ ತನ್ನ ಬಯಕೆಯನ್ನು ಆತ್ಮಪ್ರಾಪ್ತಿಯ ಕಡೆಗೆ ತಿರುಗಿಸಿಕೊಂಡವನಾಗಿ ಆ ಆತ್ಮನನ್ನು ಜ್ಞಾನದಿಂದ ಕಂಡುಕೊಳ್ಳುತ್ತಾನೆ. ಆದ್ದರಿಂದ ಇಷ್ಟಿಯೂ ಬ್ರಹ್ಮಚರ್ಯವೆನಿಸಿತು–ಎಂದರ್ಥ. ಕರ್ಮರೂಪವಾದ, ಅಗ್ನಿಯಲ್ಲಿ ಹೋಮಮಾಡುವಂಥ ಇಷ್ಟಿಗಳು ಗೃಹಸ್ಥನಿಗೆ ವಿಹಿತವಾಗಿರುತ್ತವೆ. ಅಂಥ ಇಷ್ಟಿಗಳಿಂದಲೂ ಪರಂಪರೆಯಿಂದ ಬ್ರಹ್ಮಪ್ರಾಪ್ತಿಯು ಆಗುವದು. ಆದರೆ ಬ್ರಹ್ಮಚಾರಿಯಾದ ಸಾಧಕನು ಅದೇ ಇಷ್ಟಿಗಳನ್ನು ಪೂಜಾರ್ಚನಾದಿಗಳ ರೂಪದಿಂದ ಮಾಡಿ ಈಶ್ವರನ ಪ್ರಸಾದ, ತಪಸ್ಸು, ಧ್ಯಾನಾದಿಗಳ ಮೂಲಕ ಬ್ರಹ್ಮವನ್ನು ಪಡೆದುಕೊಳ್ಳುವನು. ಆದ್ದರಿಂದ ಇಷ್ಟವೂ ಬ್ರಹ್ಮಚರ್ಯವೇ ಆಯಿತು. ಹೀಗೆ ಯಜ್ಞ, ಇಷ್ಟಿಗಳ ರೂಪವಾದ ಕರ್ಮಗಳು ಬ್ರಹ್ಮಚರ್ಯಮೂಲವಾಗಿದ್ದು ಭಗವಂತನ ಪ್ರಾಪ್ತಿಗೆ ಸಾಧನವಾಗಿರುವದರಿಂದ ಅವುಗಳು ಬ್ರಹ್ಮಚರ್ಯೆವೆನಿಸಿದವು. ಹಾಗೆಯೇ ಬ್ರಹ್ಮಚರ್ಯವು ಪವಿತ್ರವಾದ ಯಜ್ಞವೇ, ಇಷ್ಟಿಯೇ–ಎಂದೂ ಹೊಗಳಿದಂತಾಗಿದೆ.

ಈಗ ಬ್ರಹ್ಮಚರ್ಯವನ್ನು ಸತ್ರಾಯಣವೆಂದೂ ಮೌನವೆಂದೂ ಸ್ತುತಿಸಲಾಗುತ್ತದೆ. ಸತ್ರಾಯಣವೆಂದರೆ ಬಹುಜನ ಯಜಮಾನರುಗಳು ಕೂಡಿ ಮಾಡುವ ವೈದಿಕಕರ್ಮವು. ಈಗಿನ ಕಾಲಕ್ಕೆ ನಡೆಯುವ ಸಾಮೂಹಿಕ ಅನುಷ್ಠಾನಗಳನ್ನು ಸತ್ರಾಯಣವೆನ್ನಬಹುದು. ವೈದಿಕಕರ್ಮಗಳು ಬಹುದ್ರವ್ಯಸಾಧ್ಯವಾಗಿರುವವು. ಆದ್ದರಿಂದ ಒಬ್ಬ ಯಜಮಾನನೇ ಅವುಗಳನ್ನು ನಿರ್ವಹಿಸಲು ಸಾಧ್ಯವಾಗದೆ ಇರುವಾಗ ಅದೇ ಕರ್ಮವನ್ನು ನಡೆಯಿಸುವ ಇಚ್ಛೆಯುಳ್ಳ ಸಮಾನ ಅಂತಸ್ತಿನ ಕರ್ತೃಗಳನ್ನು ಕೂಡಿಸಿಕೊಂಡು ಕರ್ಮಗಳನ್ನು ನೆರವೇರಿಸಬಹುದು. ಇಂಥ ಪುಣ್ಯಕರ್ಮಗಳನ್ನು ಸಂಯೋಜನಮಾಡುವದೂ ಸುಲಭವೇನಲ್ಲ. ದೈವಾನುಗ್ರಹದಿಂದ ಇಂಥದ್ದೊಂದು ಸತ್ಕರ್ಮವು ನೆರವೇರಿ ಗ್ರಾಮದ ಜನರಿಗೂ ರಾಷ್ಟ್ರದ ಜನರಿಗೂ ಕಲ್ಯಾಣವಾಗಬೇಕಾಗಿರುವದು. ಇದು ಕೂಡ ಬ್ರಹ್ಮಚರ್ಯವೇ–ಎಂದು ಹೊಗಳಿದೆ. ಹೇಗೆಂದರೆ: ಅವಯವಾರ್ಥದಂತೆ ಸತ್ರಾಯಣವೆಂದರೆ ಸದ್ರೂಪನಾದ ಪರಮಾತ್ಮನ ಕಡೆಯಿಂದ ತನ್ನನ್ನು ತ್ರಾಣ–ಎಂದರೆ ರಕ್ಷಣೆಮಾಡಿಕೊಳ್ಳುವಿಕೆಯೇ ಸತ್ರಾಯಣವು. ಆತ್ಮರಕ್ಷಣೆಗಾಗಿ ಬ್ರಹ್ಮಚರ್ಯವನ್ನು ಮಾಡಿಕೊಂಡು ತಪಸ್ಸೇ ಮುಂತಾದ ಸಾಧನಗಳನ್ನು ಕೈಗೊಳ್ಳುವವರೂ ಇರುತ್ತಾರೆ. ಆದ್ದರಿಂದ ಯಾರು ತಮ್ಮ ಪುಣ್ಯಕರ್ಮಾಂಶಗಳಿಂದ ಆತ್ಮೋದ್ಧಾರಮಾಡಿಕೊಳ್ಳುವರೋ ಅವರು ಸತ್ರಾಯಣಪರಾಯಣರೆನಿಸುವರು. ಅವರನ್ನು ಬ್ರಹ್ಮಚರ್ಯಸಂಪನ್ನರೆಂದೂ ಸ್ತುತಿಸಬಹುದಾಗಿದೆ. ಹೀಗೆ ಬ್ರಹ್ಮಚರ್ಯವು ಸತ್ರಾಯಣವೆನಿಸಿರುವದು. ಹಾಗೆಯೇ ಅದು ಮೌನವೆನಿಸಿರುವದೂ ವಿಶೇಷವಾಗಿದೆ. ಮೌನವೆಂದರೆ ಮಾತನಾಡದೆ ಇರುವದೆಂದು ಸಾಮಾನ್ಯಾರ್ಥವು. ಆತ್ಮಸ್ವರೂಪವನ್ನು ಮನನಮಾಡುವದೇ ನಿಜವಾದ ಮೌನವೆಂದು ಪುರಾಣಗಳಲ್ಲಿ ತಿಳಿಸಿದೆ. ಈ ಸಾಧನವು ಏಕಾಕಿಯಾದವನು ಮಾಡತಕ್ಕದ್ದು.

ಇದಕ್ಕೆ ಸತ್ರಾಯಣದಂತೆ ಯಾರ ಸಹಾಯವೂ ಬೇಕಿರುವದಿಲ್ಲ. ಯಾವನು ಮೌನವನ್ನು ಅಭ್ಯಾಸಮಾಡುವನೋ ಅವನು ಬ್ರಹ್ಮಚಾರಿ ಎಂದರೆ ಏಕಾಕಿಯಾಗಿರಬೇಕು. ಆದ್ದರಿಂದ ಬ್ರಹ್ಮಚರ್ಯವನ್ನು ಮೌನವೆಂದೂ ಅದನ್ನು ಅನುಷ್ಠಿಸುವವನನ್ನು ಮೌನಿಯೆಂದೂ ಸ್ತುತಿಸಲಾಗಿದೆ.

ಈಗ ಬ್ರಹ್ಮಚರ್ಯವನ್ನು ಅನಾಶಕಾಯನ, ಅರಣ್ಯಾಯನ–ಗಳೆಂದು ಹೊಗಳಲಾಗುವದು. ಅನಶನ–ವೆಂದರೆ ಉಪವಾಸವು. ಇದನ್ನು ಸಂಕುಚಿತಾರ್ಥದಲ್ಲಿ ಈಗ ಬಳಸಲಾಗುತ್ತಿದೆ. ಬಾಯಿಂದ ಆಹಾರವನ್ನು ತೆಗೆದುಕೊಳ್ಳದಿದ್ದರೆ ಉಪವಾಸವಾಯಿತು–ಎಂದು ಜನರು ತಿಳಿದಿದ್ದಾರೆ. ಆದರೆ ಬಡವರಾದ ಎಷ್ಟೋ ಜನ ಹಸಿದವರಿರಬಹುದು. ಅಂಥವರಿಗೂ ಉಪವಾಸದ ಫಲವು ಬಂದೀತೆ? ಆದ್ದರಿಂದ ಉಪವಾಸವೆಂದರೆ ಬೇರೆಯ ಅರ್ಥವನ್ನೇ ಮಾಡಬೇಕು. ಇದು ಒಂದು ಅಧ್ಯಾತ್ಮಸಾಧನವು. ಯಾವನು ಆಹಾರವನ್ನು ತಿನ್ನುವ ಶಕ್ತಿಸಾಮರ್ಥ್ಯಗಳೂ, ಸಮೃದ್ಧಿಯೂ ಇದ್ದರೂ ನಾಲಗೆಯನ್ನು ಬಿಗಿಹಿಡಿದು ಶರೀರವನ್ನು ದಂಡಿಸುವದಕ್ಕಾಗಿ ನಿರಾಹಾರಿಯಾಗಿದ್ದು ವ್ರತ, ಜಪ, ಪೂಜಾ, ಮನನಾದಿ ಸಾಧನಗಳನ್ನು ಕೈಗೊಳ್ಳುವನೋ ಅವನು 'ಉಪವಾಸಿ'ಯೆನಿಸುವನು. ಹಠದಿಂದ ಅಥವಾ ಲೌಕಿಕ ಪ್ರಯೋಜನಗಳನ್ನು ಬಯಸಿ ಮಾಡುವ ಉಪವಾಸಗಳು ಅಧ್ಯಾತ್ಮಸಾಧನಗಳೆನಿಸುವದಿಲ್ಲ. ಅಲ್ಲದೆ ಉಪ–ಸಮೀಪೇ, ವಾಸಹ–ಉಪವಾಸಃ ಎಂಬ ವ್ಯುತ್ಪತ್ತಿಯಂತೆ ಆಹಾರವನ್ನು ಬಿಟ್ಟಮೇಲೂ ಭಗವಂತನ ಚಿಂತನೆಯನ್ನು ಮಾಡುತ್ತಾ ಆತನಿಗೆ ಹತ್ತಿರವಾಗಿದ್ದರೆ ಮಾತ್ರ ನಿಜವಾದ ಉಪವಾಸವೆನಿಸುವದು. ಇನ್ನೂ ವ್ಯಾಪಕವಾಗಿ ಅರ್ಥಮಾಡಿದರೆ ನಾಲಗೆಯಿಂದ ಆಹಾರವನ್ನು ತ್ಯಜಿಸಿದಂತೆಯೇ ಕಣ್ಣು, ಕಿವಿ, ಮೂಗು–ಮುಂತಾದವುಗಳಿಂದಲೂ ಶಬ್ದ, ರೂಪ, ಗಂಧ–ಮುಂತಾದ ವಿಷಯಸೇವನೆಗಳನ್ನೂ ನಿಯಮನಮಾಡಿದರೆ ಪೂರ್ಣೋಪವಾಸವಾಗುವದು. ಹೇಗೆ ಆಗಲಿ, ಉಪವಾಸವೂ ಕಷ್ಟಕರವಾದ ಸಾಧನವೇ ಸರಿ. ಅದನ್ನು ಮಾಡುವವನು ಕೂಡ ಬ್ರಹ್ಮಚರ್ಯವನ್ನು ಮಾಡಿದವನಾಗುತ್ತಾನೆ. ಏಕೆಂದರೆ ಬ್ರಹ್ಮದಲ್ಲಿಯೆ ಚರಿಸುವಿಕೆ–ಸಂಚರಿಸುವಿಕೆಯೇ ಬ್ರಹ್ಮಚರ್ಯವು. ಅದು ಉಪವಾಸಶಬ್ದದ ಪರ್ಯಾಯವೇ ಆಗಿರುತ್ತದೆ. ಆದ್ದರಿಂದ ಉಪವಾಸ ಅಥವಾ ಅನಾಶಕಾಯನವೆಂಬುದೂ ಬ್ರಹ್ಮಚರ್ಯವೇ–ಎಂದು ಹೊಗಳಿದೆ.

ಈಗ ಅರಣ್ಯಾಯನವೆಂದು ಬ್ರಹ್ಮಚರ್ಯವನ್ನು ಹೊಗಳಿರುವದರ ಅಭಿಪ್ರಾಯವನ್ನು ತಿಳಿಯೋಣ. ಅರ–ಮತ್ತು ಣ್ಯ–ಎಂದು ಪದವಿಭಾಗಮಾಡಿ ಅರವೂ ಣ್ಯವೂ ಆಗಿರುವದು ಬ್ರಹ್ಮಲೋಕವು–ಎಂದು ಶ್ರುತಿಯಲ್ಲಿ ಮುಂದೆ ತಿಳಿಸಿದೆ. ಬ್ರಹ್ಮಲೋಕದಲ್ಲಿ ಅರ ಮತ್ತು ಣ್ಯ ಎಂಬ ಹೆಸರಿನ ಅಮೃತಸರೋವರಗಳಿವೆಯಂತೆ.

ಹಾಗೆಯೇ ಇನ್ನೂ ಕೆಲವು ಉಪಭೋಗ್ಯವಸ್ತುಗಳೂ ಅಲ್ಲಿರುವವು. ಇವೆಲ್ಲವೂ ಮಾನಸಪದಾರ್ಥಗಳು. ಯಾವ ಉಪಾಸಕನು ತನ್ನ ಬ್ರಹ್ಮಚರ್ಯಾದಿಸಾಧನಗಳ ಬಲದಿಂದಲೂ ದಹರಬ್ರಹ್ಮಚಿಂತನೆಯಿಂದಲೂ ಬ್ರಹ್ಮಲೋಕವನ್ನು ಸೇರುವನೋ ಅವನಿಗೆ ಮಾನಸವಾದ ಈ ಅಪ್ರಾಕೃತಭೋಗಗಳೂ ದೊರಕುವವು. ನಿಜವೇನೆಂದರೆ: ಬ್ರಹ್ಮಲೋಕದಲ್ಲಿ ಉಪಾಸಕನು ಬಯಸಿದ ಕಾಮಗಳೆಲ್ಲವೂ ಸಂಕಲ್ಪಮಾತ್ರದಿಂದಲೇ ದೊರಕುವವಾದರೂ ಆ ಪರಿಸ್ಥಿತಿಯಲ್ಲಿ ಮನಸ್ಸಿನಲ್ಲಿ ಕಾಮಗಳೇ ಉಳಿದಿರುವದಿಲ್ಲ. ಇಂಥ ಸತ್ಯಲೋಕವು ಅದಾಗಿರುತ್ತದೆ. ಒಂದು ವೇಳೆ ಉಪಾಸಕನು ಬಯಸಿದರೆ ಮಾತ್ರ ಎಲ್ಲ ಭೋಗಗಳೂ ದೊರಕಿಯೇ ತೀರುತ್ತವೆ. ಇದನ್ನು ಅರ–ಣ್ಯ–ಎಂಬ ಶಬ್ದಗಳಿಂದ ತಿಳಿಸಲಾಗಿದೆ. ಈ ಅರ–ಣ್ಯಗಳನ್ನು ಯಾವ ಅಯನ–ಎಂದರೆ ಮಾರ್ಗದಿಂದ–ಉಪಾಯದಿಂದ ಸಾಧಕನು ಹೊಂದುವನೋ ಅದು ಅರಣ್ಯಾಯನವೆನಿಸುವದು. ಅದೇ ಬ್ರಹ್ಮಚರ್ಯವೆನಿಸುವದು. ಅದೇ ಬ್ರಹ್ಮಚರ್ಯವು ಎಂದು ಸ್ತುತಿಸಲಾಗಿದೆ.

ಹೀಗೆ ದಹರಬ್ರಹ್ಮಪ್ರಾಪ್ತಿಗಾಗಿ ಕೈಗೊಳ್ಳುವ ಉಪಾಸನೆಗೆ ಮುಖ್ಯವಾಗಿ ಬ್ರಹ್ಮಚರ್ಯವು ಸಾಧನವಾಗಿರುತ್ತದೆ. ಆದರೆ ಬ್ರಹ್ಮಚರ್ಯವನ್ನು ಹೊಗಳಿರುವದು ಕೇವಲ ಅದರ ಸ್ತುತಿಗಾಗಿ–ಎಂದು ತಿಳಿಯಬಾರದು. ಮುಖ್ಯತಾತ್ಪರ್ಯವು ಬ್ರಹ್ಮಪ್ರಾಪ್ತಿಫಲದಲ್ಲಿಯೇ ಸಮನ್ವಿತವಾಗಿದೆ. ಆದರೂ ಸ್ತ್ರೀ–ಮುಂತಾದ ಬಾಹ್ಯ ವಿಷಯಗಳಲ್ಲಿ ಆಸಕ್ತಿಯಿರುವವನಿಗೆ ಬ್ರಹ್ಮಲೋಕಪ್ರಾಪ್ತಿಯ ಮಾತು ಕನಸಿನ ಗಂಟೇ ಸರಿ. ಭಗವಂತನು ಸೃಷ್ಟಿಕಾಲಕ್ಕೇ ಇಂದ್ರಿಯಗಳನ್ನು ಹೊರಮುಖವಾಗಿ ಕೊರೆದಿರುವದರಿಂದ ಅವು ಸ್ವಭಾವದಿಂದಲೇ ವಿಷಯಾಭಿಮುಖವಾಗಿರುವವು. ವಿವೇಕಿಯಾದವನು ಇವುಗಳನ್ನು ನಿಗ್ರಹಿಸಬೇಕು. ಪುರಾಣದಲ್ಲಿ ಒಂದು ಕಥೆಯಿದೆ. ಒಮ್ಮೆ ನಾರದರು ದಿಗಂಬರರಾಗಿ ಒಂದು ಕೈಯಲ್ಲಿ ನಾಲಗೆಯನ್ನೂ ಮತ್ತೊಂದು ಕೈಯಲ್ಲಿ ತಮ್ಮ ಶಿಶ್ನವನ್ನೂ ಹಿಡಿದುಕೊಂಡ ಕುಣಿಯುತ್ತಾ ಋಷಿಸಂಘದಲ್ಲಿ ಕಾಣಿಸಿಕೊಂಡರಂತೆ. ಆಗ ಋಷಿಗಳೆಲ್ಲರೂ ತಬ್ಬಿಬ್ಬಾಗಿ ಅವರನ್ನೇ ನೋಡುತ್ತಿರಲು ಆ ಮಹನೀಯರು "ಅಯ್ಯಾ ಸಾಧಕರುಗಳಿರಾ, ಕೇಳಿರಿ. ಯಾವನು ನಾಲಗೆಯನ್ನೂ ಉಪಸ್ಥೇಂದ್ರಿಯವನ್ನೂ ಗೆದ್ದು ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವನೋ ಅವನಿಗೇ ಬ್ರಹ್ಮಲೋಕದಲ್ಲಿ ಸ್ವಾಗತವು ಕಾದಿರುವದು. ಅದನ್ನು ತಿಳಿಸಲು ನಾನು ಹೀಗೆ ಕಾಣಿಸಿಕೊಂಡೆನು" ಎಂದರಂತೆ. ಹೀಗಿರುವದರಿಂದ ಭಗವತ್ಪ್ರಾಪ್ತಿಯನ್ನು ಬಯಸುವ ಸಾಧಕರು ಬ್ರಹ್ಮಚರ್ಯವನ್ನು ಕಾಪಾಡಿಕೊಳ್ಳಬೇಕೆಂಬುದನ್ನು ಹೇಳತಕ್ಕದ್ದೇನಿದೆ?

---

## ಆತ್ಮನ ಲಕ್ಷಣ

ಓಮ್ ॥ ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ॥ 8–7–1

ಭಾವಾರ್ಥ:– ಯಾವ ಆತ್ಮನು ಅಪಹತಪಾಪ್ಮನೂ ವಿಜರನೂ ವಿಮೃತ್ಯುವೂ ವಿಶೋಕನೂ ಹಸಿವಿಲ್ಲದವನೂ ಬಾಯಾರಿಕೆಯಿಲ್ಲದವನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವನೋ ಅವನನ್ನು ಅನ್ವೇಷಣೆಮಾಡಬೇಕು. ಅವನನ್ನೇ ವಿಜಿಜ್ಞಾಸನೆಮಾಡಬೇಕು.

(ಆತ್ಮನೆಂದರೆ ನಮ್ಮ ಸ್ವರೂಪವೇ. ಅದೇ ಬ್ರಹ್ಮವೆಂದು ಉಪನಿಷತ್ತುಗಳ ಹೇಳಿಕೆ. ಬ್ರಹ್ಮದ ಅಸಾಧಾರಣಗುಣಗಳೂ ಲಕ್ಷಣವೂ ಆತ್ಮನವೇ ಆಗಿದೆ. ಆದರೆ ಸಂಸಾರದೆಶೆಯಲ್ಲಿ ವಿಪರೀತವಾಗಿ ಕಂಡುಬರುವ ತಿಳಿವಳಿಕೆಯನ್ನು ಶೋಧಿಸಿ ನಿಜವಾದ ಸ್ವರೂಪಜ್ಞಾನವನ್ನು ಪಡೆದುಕೊಂಡಾಗ ಆತ್ಮನು ಬ್ರಹ್ಮವೇ–ಎಂಬುದು ದೃಢವಾಗುವದು.)

## 66. ಪ್ರಜಾಪತಿಬ್ರಹ್ಮನು ಉಪದೇಶಿಸಿದ ಆತ್ಮವಿದ್ಯೆ

ಈವರೆಗೆ ಛಾಂದೋಗ್ಯೋಪನಿಷತ್ತಿನಲ್ಲಿ ದಹರವಿದ್ಯೆಯನ್ನೂ ಅದಕ್ಕೆ ಬೇಕಾದ ಬ್ರಹ್ಮಚರ್ಯಾದಿಸಾಧನಗಳನ್ನೂ ಕುರಿತು ವರ್ಣಿಸಲಾಯಿತು. ಈಗ ಉಪಸಂಹಾರ ರೂಪದಲ್ಲಿ ಮತ್ತೊಮ್ಮೆ ಆತ್ಮವಿದ್ಯೆಯನ್ನು ತಿಳಿಸಲಾಗುತ್ತದೆ. ಆರನೆಯ ಅಧ್ಯಾಯದಲ್ಲಿ ಸದ್ವಿದ್ಯೆಯೆಂಬ ಹೆಸರಿನಿಂದ ವಿವರಿಸಿದ ತತ್ತ್ವವನ್ನೇ ಈ ಆತ್ಮವಿದ್ಯೆಯೆಂದೂ ಹೆಸರಿಸಲಾಗಿದೆ. ಈ ವಿದ್ಯೆಯು ಯಾವಾಗಲೂ ಆಚಾರ್ಯನ ಮೂಲಕವೇ ಶಿಷ್ಯನಿಗೆ ದೊರಕಬೇಕು. ಕೇವಲ ಗ್ರಂಥಪಠನಪ್ರವಚನಮೇಧಾಶಕ್ತಿಗಳಿಂದಾಗಲಿ ತರ್ಕದಿಂದಾಗಲಿ ದೊರಕಲಾರದು. ಆತ್ಮವಿದ್ಯೆಯನ್ನು ಬಲ್ಲ ಆಚಾರ್ಯನಾದರೊ, ಬ್ರಹ್ಮನಿಷ್ಠನೂ ಶ್ರೋತ್ರಿಯನೂ ಆಗಿರಬೇಕು. ಹಾಗೆಯೇ ಶಿಷ್ಯನಾಗಬಯಸುವವನು ತನ್ನ ಅಧಿಕಾರ, ಅಂತಸ್ತು, ಜಾತಿ, ಸಿರಿತನಗಳೇ ಮುಂತಾದ ಎಲ್ಲಾ ಉಪಾಧಿಗಳನ್ನೂ ಬದಿಗಿಟ್ಟು ಶುಶ್ರೂಷುವಾಗಿ ವಿನಯಸಂಪನ್ನನಾಗಿರಬೇಕು. ಇಷ್ಟೆಲ್ಲಾ ಆದ ಮೇಲೂ ಶಿಷ್ಯನು ಗುರುವನ್ನು ಬಳಿಸಾರಿದಾಗ ಗುರುವು ವಿಧಿಸುವ ಬ್ರಹ್ಮಚರ್ಯಾದಿ ಸಾಧನಗಳನ್ನು ಶ್ರದ್ಧೆಯಿಂದ ಅನುಷ್ಠಾನಮಾಡಿ ಶ್ರವಣಕ್ಕೆ ಸಿದ್ಧನಾಗಬೇಕು. ಹೀಗೆ ಎಲ್ಲಾ ರೀತಿಯ ಸನ್ನಿವೇಶಗಳೂ ಒದಗಿ ಬಂದಾಗ ಆತ್ಮವಿದ್ಯೆಯ ಪ್ರಕಾಶವು ಹೊರತೋರುವದು.

ಪ್ರಕೃತ– ಪ್ರಜಾಪತಿಬ್ರಹ್ಮನೆಂಬ ಆಚಾರ್ಯನು ತನ್ನ ಶಿಷ್ಯರಾದ ಇಂದ್ರವಿರೋಚನರಿಗೆ ಉಪದೇಶಮಾಡಿರುವ 'ಅಕ್ಷಿಪುರುಷ ವಿದ್ಯೆ' ಯೆಂಬ ಹೆಸರಿನ ಬ್ರಹ್ಮತತ್ತ್ವವಿಚಾರವನ್ನು ಈಗ ಪ್ರಸ್ತಾಪಿಸಲಾಗುವದು.

ಇಂದ್ರನೆಂಬುವನು ದೇವರಾಜನು. ವಿರೋಚನನೆಂಬವನು ಅಸುರರಾಜನು. ಇಬ್ಬರೂ ಪ್ರಜಾಪತಿಯ ಮಕ್ಕಳೇ ಆಗಿರುತ್ತಾರೆ. ಒಮ್ಮೆ ಇವರಿಬ್ಬರಿಗೂ ಒಂದು ಸಂದೇಶವು ಕಿವಿಗೆ ಬಿದ್ದಿತು. ಅದು ಪ್ರಜಾಪತಿಯೇ ಹೇಳಿದ್ದುದಾಗಿತ್ತು, ಆದ್ದರಿಂದ ಆ ಉಪದೇಶದ ವಿಷಯಕ್ಕೆ ಇಬ್ಬರಿಗೂ ಕುತೂಹಲವೂ ಶ್ರದ್ಧೆಯೂ ಉಂಟಾಯಿತು. ಮತ್ತು ಸ್ವಭಾವದಿಂದಲೇ ದೇವರಾಜನಿಗೂ ಅಸುರರಾಜನಿಗೂ ದ್ವೇಷವಿದ್ದುದರಿಂದ ತಮ್ಮಲ್ಲಿ ಮೊದಲು ಯಾರು ಈ ಸಂದೇಶವನ್ನು ತಂದೆಯಿಂದ ಪಡೆದುಕೊಂಡು ಅಮೃತರಾಗಬೇಕು? ಎಂಬ ವಿಚಾರಕ್ಕೆ ಆಂತರಿಕವಾಗಿ ಸ್ಪರ್ಧೆಯೂ ಉಂಟಾಯಿತು. ಇದರ ಫಲವಾಗಿ ಇಬ್ಬರೂ ತಂದೆಯಾದ ಪ್ರಜಾಪತಿಯ ಬಳಿಗೆ ಹೋದರು. ಆತನಿಗೆ ತನ್ನ ಮಕ್ಕಳಿಬ್ಬರಲ್ಲಿಯೂ ಸಮಾನವಾದ ಪ್ರೇಮವೂ ಅನುಗ್ರಹಬುದ್ಧಿಯೂ ಇದ್ದುದರಿಂದ ಇಬ್ಬರನ್ನೂ ಆದರದಿಂದ ಬರಮಾಡಿಕೊಂಡನು. ಅನಂತರ ಅವರು ಆತ್ಮವಿದ್ಯೆಯನ್ನು ಬಯಸಿದವರಾಗಿ ಬಂದಿದ್ದಾರೆಂದು ಗೊತ್ತಾಯಿತು. ಏಕೆಂದರೆ ಅವರುಗಳು ಶಿಷ್ಯವೃತ್ತಿಯನ್ನು ಅವಲಂಬಿಸಿದವರಾಗಿ ಸಮಿತ್ತುಗಳನ್ನು ಹಿಡಿದುಕೊಂಡು ಬಂದಿದ್ದರು. ಇದು ಬ್ರಹ್ಮವಿದ್ಯೆಗಾಗಿ ಬಳಿಸಾರುವ ಕ್ರಮವನ್ನು ಸೂಚಿಸುತ್ತದೆ.

ಈಗ ಇಂದ್ರವಿರೋಚನರು ಕೇಳಿದ್ದ ವೃತ್ತಾಂತವೇನೆಂಬುದನ್ನು ವಿಚಾರಮಾಡೋಣ. "ಆತ್ಮನನ್ನು ಕುರಿತು ವಿಚಾರಮಾಡಬೇಕು. ಅವನನ್ನು ಹುಡುಕಿ ಅರಿತುಕೊಳ್ಳಬೇಕು. ಎಂಥ ಆತ್ಮನೆಂದರೆ ಪಾಪಗಳ ಸಂಪರ್ಕವಿಲ್ಲದ, ಮುಪ್ಪಿಲ್ಲದ, ಸಾವಿಲ್ಲದ, ದುಃಖವಿಲ್ಲದ, ಹಸಿವಿಲ್ಲದ, ಬಾಯಾರಿಕೆಯಿಲ್ಲದ, ಸತ್ಯಕಾಮನೂ ಸತ್ಯ ಸಂಕಲ್ಪನೂ ಆದವನನ್ನು ಕಂಡುಕೊಳ್ಳಬೇಕು. ಇಂಥ ಆತ್ಮನನ್ನು ಅರಿತುಕೊಂಡವನು ಎಲ್ಲಾ ಕಾಮಗಳನ್ನೂ ಪಡೆದುಕೊಳ್ಳುವನು. ಎಲ್ಲಾ ಲೋಕಗಳನ್ನೂ ಹೊಂದುವನು"– ಹೀಗೆಂದು ಒಮ್ಮೆ ಯಾವಾಗಲೋ ಪ್ರಜಾಪತಿಯು ಪ್ರಕಟಮಾಡಿದ್ದಾನೆಂದು ಸುದ್ದಿಯು ಹರಡಿತ್ತು, ಈ ವೃತ್ತಾಂತವು ಮೆಲ್ಲಮೆಲ್ಲನೆ ದೇವರಾಜನ ಕಿವಿಗೂ ಅಸುರರಾಜನ ಕಿವಿಗೂ ಬಿದ್ದಿತ್ತು, ಇದೊಂದು ವಿಶೇಷವೇ ಸರಿ. ಏಕೆಂದರೆ ಅಧ್ಯಾತ್ಮವಿಚಾರಗಳು ಸಾಮಾನ್ಯವಾಗಿ ಕಲಿಯುಗದ ಚಕ್ರವರ್ತಿಗಳು, ಮಹಾರಾಜರುಗಳಿಗೆ ತಲುಪುವದು ಅಪರೂಪವೆನ್ನಬೇಕು. ಸದಾ ಭೋಗತತ್ಪರರೂ ಅಧಿಕಾರದರ್ಪದಿಂದ ಉಕ್ಕಿ ಮೆರೆಯುವವರೂ ಉದ್ಧತರೂ ಆದಂಥವರಿಗೆ ಆತ್ಮವಿಚಾರದ ಸಂದೇಶವು ಹೇಗೆ ತಾನೆ ಮುಟ್ಟೀತು? ಮಹಾರಾಜರುಗಳ ಕಾಲವೇನೋ ಮುಗಿದಿದೆಯಾದರೂ ಪ್ರಜಾಪ್ರಭುತ್ವ

ದಲ್ಲಿಯೂ ಇದೇ ಪರಿಸ್ಥಿತಿಯೇ ಇದೆ. ಪ್ರಜೆಗಳಿಗೂ ಪ್ರಭುತ್ವವು ದೊರಕಿದಾಗಿನಿಂದ ಅದರ ದೋಷಗಳೂ ಬಳುವಳಿಯಾಗಿ ಬಂದಿವೆ. ಈಗಿನ ಸಮಾಜದಲ್ಲಿ ವಿಹಾರ, ವಿನೋದಕ್ರೀಡೆಗಳು, ಸ್ಥಳಸಂದರ್ಶನ, ಸಮ್ಮೇಳನಗಳು, ಗೋಷ್ಠಿಗಳು, ಸಂಗೀತ, ಸಿನೆಮ–ಇತ್ಯಾದಿ ಚಟುವಟಿಕೆಗಳ ಗಡಿಬಿಡಿಯಲ್ಲಿ ಆತ್ಮವಿಚಾರಕ್ಕೆ ಜನರಿಗೆ ಬಿಡುವೆಲ್ಲಿದೆ? ಯಾವುದೇ ಆತ್ಮವಿಚಾರಗೋಷ್ಠಿ, ಉಪನ್ಯಾಸಾದಿಗಳಿಗೆ ಜನರು ಸೇರುವದೇ ದುಸ್ತರವಾಗಿದೆ. ಕೆಲವರಂತೂ ನಮ್ಮ ಊರಿಗೆ ಇಂಥ ಕಾರ್ಯಕ್ರಮಗಳೇ ಬೇಡ–ಎಂದೂ ಮೂಗುಮುರಿಯುತ್ತಾರೆ. ಹೀಗಾಗಿ ಶೇಕಡ ತೊಂಭತ್ತಕ್ಕೂ ಹೆಚ್ಚು ಜನರಿಗೆ ಆತ್ಮವಿಚಾರವು ಬೇಡವಾಗಿದೆ. ಉಳಿದ ಎಂಟು ಜನರಿಗೆ ಆಸಕ್ತಿಯಿದ್ದರೂ ಬಿಡುವಿಲ್ಲ, ಇನ್ನಿಬ್ಬರಿಗೆ ಬೇಕು–ಬೇಡ ಎರಡೂ ತಿಳಿಯುವಂತಿಲ್ಲ. ಹೀಗಿದೆಯಾದರೂ ಆತ್ಮವಿದ್ಯೆಯು ಬಡವಾಗಿಯೇನೂ ಇಲ್ಲ. ಅದು ಬೇಕಾದವರು ಎಂಥ ದೊಡ್ಡ ಮನುಷ್ಯರಾಗಿರಲಿ–ಹುಡುಕಿಕೊಂಡು ಬಂದೇ ಬರುವರು. ಇರಲಿ, ಪ್ರಕೃತ–ದೇವತೆಗಳ ರಾಜನೂ ಮಹಾಮಹಿಮನೂ ಅಂತರ್ಧಾನಾದಿಶಕ್ತಿಸಂಪನ್ನನೂ ಸ್ವರ್ಗಸುಖ ಭೋಗಗಳಲ್ಲಿ ಮುಳುಗಿದವನೂ ಆದ ಇಂದ್ರನಿಗೆ ಮತ್ತು ಅವನಿಗೆ ಎಲ್ಲಾ ವಿಧದಲ್ಲಿಯೂ ಸರಿಸಾಟಿಯೆನಿಸಿದ ಅಸುರರಾಜನಾದ ವಿರೋಚನನಿಗೆ–ಈ ಇಬ್ಬರಿಗೂ ಪ್ರಜಾಪತಿಬ್ರಹ್ಮನ ಆತ್ಮಸಂದೇಶವು ಕಾಕತಾಳೀಯವೋ–ಎಂಬಂತೆ ಮುಟ್ಟಿತು. ಅದು ಕೂಡ ಅವರಲ್ಲಿ ಪರಸ್ಪರಸ್ಪರ್ಧೆಗೆ ಕಾರಣವಾಯಿತು. ಇಬ್ಬರಿಗೂ ತಾನು ಬೇಗನೆ ತಿಳಿದುಕೊಂಡು ಎಲ್ಲಾ ಲೋಕಗಳನ್ನೂ ಕಾಮಗಳನ್ನೂ ಗೆದ್ದುಕೊಂಡುಬಿಡಬೇಕೆಂಬ ಆತುರವು ಮೈಗೂಡಿಕೊಂಡಿತು. ಅದರ ಫಲವಾಗಿಯೇ ಅವರುಗಳು ಪ್ರಜಾಪತಿಯ ಬಳಿಗೆ ಬಂದರು.

ಆಗ ಪ್ರಜಾಪತಿಬ್ರಹ್ಮನು ಇವರಿಬ್ಬರನ್ನೂ ಬರಮಾಡಿಕೊಂಡನೇ ಹೊರತು ಏತಕ್ಕಾಗಿ ಬಂದಿರುವಿರಿ? ಎಂದ ಕೂಡಲೆ ವಿಚಾರಿಸಲಿಲ್ಲ. ಸರ್ವಜ್ಞನಾದ ಆತನಿಗೆ ವಿಚಾರವು ತಿಳಿದಿತ್ತಾದರೂ ಅಹಂಕಾರ, ದರ್ಪಗಳನ್ನು ಕಳೆದುಕೊಳ್ಳದೆ ದ್ವೇಷಾಸೂಯೆಗಳನ್ನು ನೀಗಿಕೊಳ್ಳದೆ ಆತ್ಮವಿದ್ಯೆಯು ಕೈವಶವಾಗಲಾರದಾದ್ದರಿಂದ ಇವರನ್ನು ಹಾಗೆಯೇ ಇದ್ದುಕೊಳ್ಳಲೆಂದು ಸುಮ್ಮನಾದನು. ಆಗ ಇಂದ್ರವಿರೋಚನರಿಬ್ಬರೂ ತಮ್ಮ ದೊಡ್ಡಸ್ತಿಕೆಗಳನ್ನು ಬದಿಗಿರಿಸಿ ಮೂವತ್ತೆರಡು ವರ್ಷಗಳ ಕಾಲ ಬ್ರಹ್ಮಚರ್ಯದಿಂದಿದ್ದು ಗುರುಶುಶ್ರೂಷಾ ನಿರತರಾಗಿದ್ದರು. ಅನಂತರ ಒಂದು ದಿನ ಪ್ರಜಾಪತಿಯು "ಅಯ್ಯ ಶಿಷ್ಯರೆ, ನೀವು ನನ್ನಲ್ಲಿ ಏನನ್ನು ಬಯಸಿ ಬ್ರಹ್ಮಚರ್ಯವನ್ನು ಮಾಡುತ್ತಿರುವಿರಿ?" ಎಂದನು. ಆಗ ಅವರಿಬ್ಬರೂ "ಪೂಜ್ಯರೆ, ಅಪಹತಪಾಪ್ಮನಾದ ಆತ್ಮನನ್ನು ಅರಿತುಕೊಂಡವನು ಎಲ್ಲಾ ಲೋಕಗಳನ್ನೂ ಎಲ್ಲಾ ಕಾಮಗಳನ್ನೂ

ಗೆದ್ದುಕೊಳ್ಳುವನೆಂದು ತಾವು ಪ್ರಚಾರಮಾಡಿದ್ದನ್ನು ಕೇಳಿದೆವು, ಅಂಥ ಆತ್ಮನ ಜ್ಞಾನದ ಪ್ರಾಪ್ತಿಗಾಗಿ ಉಪದೇಶವನ್ನು ಹೊಂದಲು ತಮ್ಮಲ್ಲಿಗೆ ಬಂದಿರುತ್ತೇವೆ'' ಎಂದರು. ಪ್ರಜಾಪತಿಯು ಇವರಿಬ್ಬರನ್ನೂ ಈಗ ಶಿಷ್ಯರನ್ನಾಗಿ ಸ್ವೀಕರಿಸಿದನು.

ಇಂದ್ರವಿರೋಚನರಿಬ್ಬರೂ ಪ್ರಜಾಪತಿಯ ಬಳಿಗೆ ಬರುವ ಮುಂಚೆ ಪರಸ್ಪರ ಅಸೂಯಾಪರರಾಗಿದ್ದರೆಂದೂ ಸ್ಪರ್ಧಾಳುಗಳಾಗಿದ್ದರೆಂದೂ ಹೇಳಲಾಗಿತ್ತಷ್ಟೆ? ಅದೇನೋ ನಿಜವೇ. ಆದರೆ ಅವರುಗಳು ಗುರುವಿನ ಬಳಿಗೆ ಬಂದಾಗ ತತ್ಕಾಲಕ್ಕೆ ಆ ದೋಷಗಳನ್ನು ಗೋಪ್ಯವಾಗಿರಿಸಿದ್ದರು. ಏಕೆಂದರೆ ಅವರಿಗೆ ಆತ್ಮವಿದ್ಯೆಯು ಬೇಕಾಗಿತ್ತು, ರಾಗದ್ವೇಷಾದಿಗಳನ್ನು ತೋರಿಸಿಕೊಂಡರೆ ಗುರುವು ಆತ್ಮವಿದ್ಯೆಯನ್ನು ಹೇಳಿಕೊಡಲಾರನೆಂದೂ ತಿಳಿದಿತ್ತು. ಆದ್ದರಿಂದ ವಿದ್ಯಾಪ್ರಾಪ್ತಿಯೆಂಬ ಪ್ರಯೋಜನವನ್ನು ಗುರಿಯಾಗಿಟ್ಟುಕೊಂಡವರಾಗಿ ಅವರು ಒಟ್ಟಿಗೆ ಬ್ರಹ್ಮಚರ್ಯದಿಂದ ಗುರುಕುಲವಾಸವನ್ನು ಮಾಡಿದರು. ಇದರಿಂದ ತಿಳಿದುಬರುವದೇನೆಂದರೆ: ಆತ್ಮವಿದ್ಯೆಯು ಇಂಥ ದೊಡ್ಡ ವಸ್ತುವಾಗಿದೆ; ಅದನ್ನು ಸಾಧಿಸಿಕೊಳ್ಳುವವನು ಪ್ರಾಪಂಚಿಕವಾದ ದೋಷಗಳನ್ನು ತತ್ಕಾಲದಲ್ಲಿಯಾದರೂ ಮೀರಿರಬೇಕು; ಬ್ರಹ್ಮಚರ್ಯ, ಗುರುಕುಲವಾಸಗಳನ್ನು ಮಾಡಬೇಕು; ಗುರುವು ಉಪದೇಶಮಾಡುವವರೆಗೂ ನಿರೀಕ್ಷಿಸಿಕೊಂಡಿರಬೇಕು; ತನ್ನ ಅಂತಸ್ತನ್ನೂ ಯೋಗ್ಯತಾದಿಗಳನ್ನೂ ಪ್ರದರ್ಶಿಸಬಾರದು; ಭೋಗಸಾಮಗ್ರಿಗಳನ್ನು ಬಯಸಬಾರದು; ಇತ್ಯಾದಿಯಾಗಿ ಹೇಳಬಹುದು. ಈಗಲೂ ಈ ನಿಯಮಗಳು ಅನುಷ್ಠೇಯವೇ ಆಗಿರುತ್ತವೆ. ಆತ್ಮವಿದ್ಯೆಯನ್ನು ಬಯಸುವುದೇ ಒಂದು ಪುಣ್ಯವಿಶೇಷವೆನಿಸುತ್ತದೆ. ಅಂಥ ಬಯಕೆಯು ಅಂತಃಕರಣದಲ್ಲಿ ಉಂಟಾದದ್ದೇ ಆದರೆ ಸಾಧಕನು ಕೂಡಲೆ ಬ್ರಹ್ಮಚರ್ಯ, ಗುರುಶುಶ್ರೂಷಾದಿಸಾಧನಗಳನ್ನೂ ಕೂಡಿಸಿಕೊಂಡು ವಿದ್ಯಾಪ್ರಾಪ್ತಿಗಾಗಿ ತಡಮಾಡದೆ ಪ್ರಯತ್ನಿಸಬೇಕು– ಎಂದಭಿಪ್ರಾಯ.

ಈಗ ಪ್ರಜಾಪತಿಬ್ರಹ್ಮನು ಇಂದ್ರವಿರೋಚನರಿಗೆ ಮಾಡಿದ ಮೊಟ್ಟಮೊದಲನೆಯ ಉಪದೇಶವನ್ನು ಕೇಳೋಣ. ತನ್ನ ಶಿಷ್ಯರು ತಪಸ್ವಿಗಳೂ ಶುದ್ಧಕಲ್ಮಷರು ಯೋಗ್ಯರೂ ಆಗಿರುವರೆಂದು ಪ್ರಜಾಪತಿಯು ಭಾವಿಸಿದವನಾಗಿ ಹೀಗೆಂದನು: ''ಇಂದ್ರಿಯಗಳನ್ನು ಒಳಮುಖವಾಗಿ ಮಾಡಿಕೊಂಡು ಶುದ್ಧಾಂತಃಕರಣರಾಗಿರುವ ಯೋಗಿಗಳಿಗೆ ಕಣ್ಣಿನಲ್ಲಿ ದ್ರಷ್ಟೃವಾಗಿ ಯಾವ ಪುರುಷನು ಕಂಡುಬರುವನೋ, ಅವನೇ ಆತ್ಮನು. ಈ ದ್ರಷ್ಟೃಪುರುಷನನ್ನೇ ನಾನು ಅಪಹತಪಾಪ್ಮನೆಂದೂ ಜರಾದಿದೋಷಗಳಿಲ್ಲದವನೆಂದೂ ಈ ಹಿಂದೆ ಹೇಳಿರುತ್ತೇನೆ'' ಎಂದನು. ಈ ಉಪದೇಶವು ಇಂದ್ರವಿರೋಚನರಿಗೆ ಸರಿಯಾಗಿ ಗೊತ್ತಾಗಲಿಲ್ಲ. ಆದರೆ ಹಾಗೆ ತಿಳಿಯಲಿಲ್ಲವೆಂದು ಹೇಳುವದು ಅಪಮಾನವೆಂದು ಭಾವಿಸಿ ಹೀಗೆಂದರು: ''ಪೂಜ್ಯರೆ, ಗೊತ್ತಾಯಿತು. ತಾವು ಹೇಳಿದ ಪುರುಷನು ನೀರಿನಲ್ಲಿ ಹಾಗೂ ಕನ್ನಡಿಯಲ್ಲಿ ತೋರುವವನಲ್ಲವೆ, ಅವನೇ ತಾವು ಉಪದೇಶಿಸಿದ ಅಕ್ಷಿಪುರುಷನೆಂದು

ನಾವು ತಿಳಿದೆವು'' ಎಂದರು. ಆಗ ಪ್ರಜಾಪತಿಯು ''ಹಾಗಲ್ಲ; ಅವನು ನೀರಿನಲ್ಲಿ ಮಾತ್ರವಲ್ಲ; ಎಲ್ಲೆಲ್ಲಿಯೂ ಇದ್ದಾನೆ; ಎಲ್ಲೆಲ್ಲಿಯೂ ಕಂಡುಬರುತ್ತಾನೆ. ಅವನು ಅಮೃತವೂ ಅಭಯವೂ ಆದ ಬ್ರಹ್ಮವು'' ಎಂದು ವಿವರಿಸಿದನು. ಆದರೂ ಶಿಷ್ಯರಿಗೆ ಅದು ತಿಳಿಯಲಿಲ್ಲ.

ಪ್ರಜಾಪತಿಯಂಥ ಸದ್ಗುರುವು ಕೂಡ ಆತ್ಮತತ್ತ್ವವನ್ನು ಉಪದೇಶಮಾಡಿದ ಅನಂತರ ಶಿಷ್ಯರು ಸರಿಯಾಗಿ ಗ್ರಹಣಮಾಡಿಲ್ಲವೆಂಬುದನ್ನು ಅವರು ಕೇಳಿದ ಪ್ರಶ್ನೆಯಿಂದಲೇ ತಿಳಿದುಕೊಂಡಮೇಲೂ ಅವರನ್ನು ಕುರಿತು ''ನೀವು ತಿಳಿದಿರುವದು ಸರಿಯಲ್ಲ'' ಎಂದೇಕೆ ನೇರಾಗಿ ಹೇಳಲಿಲ್ಲ? ಎಂದು ಯಾರಾದರೂ ಕೇಳಬಹುದು. ಇದು ನಿಜ. ಆದರೆ ಇಂದ್ರವಿರೋಚನರಂಥ ದೊಡ್ಡ ಅಂತಸ್ತಿನ ರಾಜರೊಡನೆ ಮಾತನಾಡುವಾಗ ಒಂದೇ ಬಾರಿಗೆ ಅವರನ್ನು 'ನೀವು ಸರಿಯಾಗಿ ತಿಳಿದಿಲ್ಲ; ದಡ್ಡರು' ಎಂದುಬಿಟ್ಟರೆ ಎಲ್ಲಿ ಮನಃಖೇದವಾಗಿ ಅವರಿಗೆ ಮತ್ತೆ ಕೇಳಬೇಕೆಂಬ ಭಾವನೆಯು ಹೋಗಿಬಿಡುವದೋ–ಎಂಬ ಕಾರಣದಿಂದ ಪ್ರಜಾಪತಿಯು ಹಾಗೆಂದಿರುತ್ತಾನೆ. ಯಾರನ್ನೇ ಆಗಲಿ, ''ನೀವು ಮೂಢರು, ನಾನು ಹೇಳಿದ್ದು ನಿಮಗೇನೂ ಹತ್ತಲಿಲ್ಲ'' ಎಂದು ಒಂದೇ ಬಾರಿಗೆ ಗದರಿಸಬಾರದು. ಹೀಗಿರುವಲ್ಲಿ ತಾವು ಪಂಡಿತರೆಂದೂ ಶ್ರೇಷ್ಠರೆಂದೂ ರಾಜರೆಂದೂ ಭಾವಿಸಿಕೊಂಡಿರುವ ಅವರಿಬ್ಬರಿಗೆ ಪ್ರಜಾಪತಿಯು ಮನನೋಯುವಂತೆ ಹೇಳಬಾರದೆಂದು ಭಾವಿಸಿ ಸೂಕ್ಷ್ಮವಾಗಿ ತಿಳಿಸಿದ್ದಾನೆ. ಮತ್ತು ಅವರೇನಾದರೂ ತನ್ನ ಉಪದೇಶವನ್ನು ತಪ್ಪಾಗಿ ಗ್ರಹಿಸಿದ್ದರೆ ಅದನ್ನು ಮೆಲ್ಲಮೆಲ್ಲನೆ ಬೇರೆಯ ದೃಷ್ಟಾಂತವನ್ನು ಕೊಟ್ಟು ತಿದ್ದಿಸರಿಪಡಿಸಿ ಅವರನ್ನು ಪೂರ್ಣವಾಗಿ ಉದ್ಧರಿಸಬೇಕು ಎಂದು ಆಚಾರ್ಯನಾದ ಪ್ರಜಾಪತಿಯು ಉದ್ದೇಶಿಸಿರುತ್ತಾನೆ. ಆದ್ದರಿಂದ ನಾವು ಕೂಡಲೇ ಒಂದೇ ಬಾರಿಗೆ ಪ್ರಜಾಪತಿಯ ಮೇಲೆ ದೋಷಾರೋಪಣೆಯನ್ನು ಮಾಡಬಾರದು ಉದಶರಾವ ದೃಷ್ಟಾಂತದಿಂದ ಆಚಾರ್ಯನು ಶಿಷ್ಯರನ್ನು ಹೇಗೆ ಎಚ್ಚರಿಸಿ ನಿಜವನ್ನು ಬೋಧಿಸುತ್ತಾನೆಂಬುದನ್ನು ನೋಡೋಣ.

---

## ಪ್ರಜಾಪತಿಯು ಆತ್ಮಸ್ವರೂಪವನ್ನು ತಿಳಿಸಿದ್ದು

**ಓಮ್ ॥ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ ಇತಿ ತೌ ಹ ಶಾಂತಹೃದಯೌ ಪ್ರವವ್ರಜತುಃ। 8–8–3**

**ಭಾವಾರ್ಥಃ–** ಇವನೇ ಆತ್ಮನು, ಇದೇ ಅಮೃತವು, ಅಭಯವು, ಇದೇ ಬ್ರಹ್ಮವು–ಎಂದನು. ಅವರಿಬ್ಬರೂ ಶಾಂತಹೃದಯರಾಗಿ ಹೊರಟುಹೋದರು.

(ಪ್ರಜಾಪತಿಬ್ರಹ್ಮನು 'ಅಮೃತಾಭಯಸ್ವರೂಪವಾಗಿರುವ ಬ್ರಹ್ಮವೇ ನಿಮ್ಮಗಳ ಆತ್ಮನು'–ಎಂದು ಮತ್ತೆ ಉಪದೇಶಮಾಡಿದನು. ಇಂದ್ರವಿರೋಚನರಿಬ್ಬರೂ ಪ್ರಜಾಪತಿಯು ಹೇಳಿದ ಅಮೃತಾಭಯಬ್ರಹ್ಮವು ತಮತಮಗೇ ಅಂತರಂಗದಲ್ಲಿ ತಿಳಿಯಿತು–ಎಂದುಕೊಂಡು ಸಮಾಧಾನಪಟ್ಟುಕೊಂಡವರಾಗಿ ತಮ್ಮ ತಮ್ಮ ಸ್ಥಾನಗಳಿಗೆ ಹಿಂದಿರುಗಿದರು–ಎಂದಭಿಪ್ರಾಯ.)

## 67. ಆತ್ಮೋಪದೇಶದ ಬಗ್ಗೆ ಸಂಶಯ–ಪರಿಹಾರಗಳು

ಈವರೆಗೆ ತಿಳಿಸಿರುವಂತೆ ಪ್ರಜಾಪತಿಬ್ರಹ್ಮನಿಂದ ಆತ್ಮೋಪದೇಶವನ್ನು ಹೊಂದಿದ ಇಂದ್ರವಿರೋಚನರ ವೃತ್ತಾಂತವನ್ನು ಈಗ ಮುಂದುವರೆದು ತಿಳಿಯೋಣ. ಅಧಿಕಾರ ಸಂಪತ್ತಿಯು ಸಾಕಷ್ಟಿದ್ದರೂ ಅತಿಸೂಕ್ಷ್ಮವಾದ ತತ್ತ್ವವನ್ನು ತಿಳಿಯುವಾಗ ಎಂಥವನಾದರೂ ಎಡವುವದು ಸಹಜವೇ ಆಗಿದೆ. ಇಲ್ಲಿಯೂ ಹಾಗೇ ಆಯಿತು. ಆತ್ಮತತ್ತ್ವವು ತಿಳಿದೇಬಿಟ್ಟಿತೆಂದು ಇಂದ್ರವಿರೋಚನರಿಬ್ಬರೂ ಭಾವಿಸಿದರು. ಆ ಸಮಯಕ್ಕೆ ಅವರು ಛಾಯಾ ಪುರುಷನನ್ನು ಆತ್ಮನೆಂದು ತಿಳಿದಿದ್ದರೇ ಹೊರತು ದ್ರಷ್ಟೃವನ್ನಲ್ಲ. ಇದರಿಂದ ಗುರುವಾದ ಪ್ರಜಾಪತಿಗೂ ಆತಂಕವಾಗಿಬಿಟ್ಟಿತು. ಕೂಡಲೆ ಆತನು 'ನಿಮ್ಮ ಪ್ರತಿಬಿಂಬವನ್ನು ನೀರಿನ ಪಾತ್ರೆಯಲ್ಲಿ ನೋಡಿಕೊಳ್ಳಿರಿ' ಎಂದನು. ಅವರಿಬ್ಬರೂ ತಮ್ಮ ಪ್ರತಿಬಿಂಬವನ್ನು ನೋಡಿಕೊಂಡರು. ಮತ್ತೆ ಪ್ರಜಾಪತಿಯು 'ನೀವು ಈವರೆಗೆ ಬ್ರಹ್ಮಚರ್ಯದಲ್ಲಿದ್ದುದರಿಂದ ಕ್ಷೌರವಿಲ್ಲದೆ ಗಡ್ಡಮೀಸೆಗಳು ಬೆಳೆದಿವೆ. ಅವುಗಳನ್ನು ವಿಸರ್ಜಿಸಿ ರಾಜಪೋಷಾಕುಗಳನ್ನು ಧರಿಸಿ ಅಲಂಕಾರಮಾಡಿಕೊಂಡು ಮತ್ತೊಮ್ಮೆ ನೋಡಿಕೊಳ್ಳಿರಿ'–ಎಂದನು. ಅವರಿಬ್ಬರೂ ಹಾಗೆಯೇ ಮಾಡಿದರು. 'ಈ ಬಾರಿಗೆ ನಿಮಗೆ ನೀರಿನಲ್ಲಿ ಪ್ರತಿಬಿಂಬವು ಹೇಗೆ ಕಂಡಿತು?' ಎಂದನು. ಅವರಿಬ್ಬರು ಹೀಗೆಂದರು: "ಆಚಾರ್ಯರೆ, ನಾವು ಗಡ್ಡಮೀಸೆಗಳುಳ್ಳವರಾಗಿದ್ದಾಗ ಹಾಗೆಯೇ ಪ್ರತಿಬಿಂಬವು ಕಂಡಿತು. ಈಗ ಅವುಗಳನ್ನು ವಿಸರ್ಜಿಸಿ ಅಲಂಕೃತರಾಗಿ ನೋಡಿಕೊಂಡಾಗ ಸುಂದರವಾಗಿ ನಾವಿರುವಂತೆಯೇ ಕಂಡಿತು"– ಎಂದರು. ಇದರಿಂದ ಪ್ರಜಾಪತಿಯು ಭಾವಿಸಿದ್ದೇನೆಂದರೆ: 'ಈ ಶಿಷ್ಯರಿಗೆ ಅಪಹತಪಾಪ್ಮನೂ ಅಭಯನೂ ಅಮೃತನೂ ಆದ ಬ್ರಹ್ಮವನ್ನು ಆತ್ಮನೆಂದು ತಿಳಿಸಿದ್ದಾಗಿದೆ. ಛಾಯಾಪುರುಷನನ್ನು ತೋರಿಸಿ ಅವನು ವಿಕಾರ ಹೊಂದುತ್ತಿರುವದರಿಂದ ಅವನು ಬ್ರಹ್ಮವಲ್ಲವೆಂಬುದನ್ನೂ ಮನಗಾಣಿಸಿಕೊಟ್ಟಿದ್ದಾಗಿದೆ. ಇನ್ನು ಬುದ್ಧಿಶುದ್ಧಿಯಿಲ್ಲದೆ ಏನಾದರೂ ತಪ್ಪಾಗಿ ಛಾಯಾಪುರುಷನನ್ನೇ ಆತ್ಮನೆಂದು ಇವರು ಭಾವಿಸಿಕೊಂಡಿದ್ದರೆ ಒಂದಲ್ಲ ಒಂದು ದಿನ ಸಂಶಯವು ಪ್ರಬಲವಾಗಿ ಮತ್ತೆ ನನ್ನ ಬಳಿಗೆ ಬಂದೇ ಬರುತ್ತಾರೆ; ಆಗ ಮತ್ತೆ ಉಪದೇಶಮಾಡುವೆನು' ಎಂದುಕೊಂಡು ಸುಮ್ಮನಾದನು. ಆಗ ದೇವಾಸುರ ರಾಜರಿಬ್ಬರೂ ತಮಗೆ ಆತ್ಮತತ್ತ್ವವು ತಿಳಿಯಿತೆಂದುಕೊಂಡು ಶಾಂತಹೃದಯರಾಗಿ

ಊರಿಗೆ ಹೊರಡಲನುವಾದರು. ಆಗಲೂ ಪ್ರಜಾಪತಿಯು ಹೀಗೆಂದನು: "ಕೇಳಿರಿ, ಯಾವನು ಸರಿಯಾಗಿ ಆತ್ಮನನ್ನರಿಯದೆ ಹಿಂತಿರುಗುತ್ತಾನೋ ಅವನು ಸೋತಂತೆಯೇ ಸರಿ'' ಎಂದನು. ಈ ಮಾತುಗಳು ಕೂಡ ಅವರಿಬ್ಬರ ಮೇಲೆ ಏನೂ ಪರಿಣಾಮವನ್ನುಂಟುಮಾಡಲಿಲ್ಲ. ತಾವು ಬಂದಿದ್ದ ಕಾರ್ಯವು ಸಾಧಿತವಾಯಿತೆಂದೇ ಭಾವಿಸಿ ತಮ್ಮ ರಾಜಧಾನಿಗಳಿಗೆ ಹಿಂದಿರುಗಿದರು.

ಈಗ ಅಸುರರಾಜನಾದ ವಿರೋಚನನು ಮುಂದೇನು ಮಾಡಿದನೆಂಬುದನ್ನು ತಿಳಿಯೋಣ. ಆತನು ತನ್ನ ಪಟ್ಟಣವನ್ನು ತಲುಪಿದ ಮೇಲೂ ನೀರಿನಲ್ಲಿ ಕಾಣಿಸಿಕೊಂಡದೇಹದ ಪ್ರತಿಬಿಂಬವನ್ನೇ ಆತ್ಮನೆಂದು ತಿಳಿದವನಾಗಿ ದೇಹಾತ್ಮವಾದವನ್ನೇ ತನ್ನ ಲೋಕದಲ್ಲೆಲ್ಲ ಪ್ರಚಾರಮಾಡಿದನು. ಅವನ ಅಹಂಭಾವಕ್ಕನುಗುಣವಾಗಿ ಆತ್ಮೋಪದೇಶವು 'ದೇಹವೇ ಆತ್ಮನು' ಎಂಬ ತೀರ್ಮಾನದಲ್ಲಿಯೇ ನಿಂತುಬಿಟ್ಟಿತು. ಹೀಗೆಯೇ ಈಗಿನ ಕಾಲಕ್ಕೂ ಅಹಂಕಾರ, ರಾಗದ್ವೇಷಾದಿ ಅಂತಃಕರಣದೋಷವುಳ್ಳವರಿಗೆ ಗುರೂಪದೇಶವು ವಿಪರೀತಕ್ರಮದಿಂದಲೇ ಮನವರಿಕೆಯಾಗಿಬಿಡುವದು. ಒಂದು ವೇಳೆ ಸಂಶಯವುಂಟಾಗಿದ್ದರೂ ವಿರೋಚನನು ಉದ್ಧಾರವಾಗುತ್ತಿದ್ದನು. ಆದರೆ ಹಾಗಾಗಲಿಲ್ಲ, ಇದರಿಂದ ಆತನು ದೇಹಾತ್ಮವಾದವನ್ನೇ ಜನರ ಮುಂದೆ ಇಡುತ್ತಾ 'ದೇಹವನ್ನೇ ಪೋಷಿಸಿರಿ, ಅಲಂಕರಿಸಿರಿ, ಸುಖಪಡಿಸಿರಿ, ಅದನ್ನೇ ಬ್ರಹ್ಮವೆಂದು ತಿಳಿದು ಪೂಜಿಸಿರಿ' ಎಂದು ಹೇಳಿಕೊಟ್ಟನು. ಸಾಮಾನ್ಯಬುದ್ಧಿಯವರಿಗೆಲ್ಲ ಈ ಉಪದೇಶವು ಬಹು ಪ್ರಿಯವಾಗಿಬಿಟ್ಟಿತು. ದೇಹದಂಡನೆಯು ಯಾರಿಗೂ ಇಷ್ಟವಾಗುವದಿಲ್ಲ, ದೇಹಪೋಷಣೆ, ಉಪಚಾರ, ಅಲಂಕಾರಗಳಾದರೂ, ಎಲ್ಲರಿಗೂ ಹಿಡಿಸುತ್ತದೆ. ಇದೇ ಉಪದೇಶವು ಎಲ್ಲೆಲ್ಲಿಯೂ ಪ್ರಬಲವಾಗಿ ಹರಡಿಕೊಂಡಿತು. ಇದರ ಅನುಯಾಯಿಗಳ ಗುಂಪೂ ದೊಡ್ಡದಾಯಿತು. ದೇಹಾತ್ಮವಾದವು ಎಲ್ಲಿಯವರೆಗೆ ಬೆಳೆಯಿತೆಂದರೆ: ಜೀವನು ದೇಹತ್ಯಾಗ ಮಾಡಿದಮೇಲೂ ಈ ದೇಹವನ್ನೇ ಅಲಂಕರಿಸಿ ಪೂಜಿಸಿ ಉತ್ಸವಮಾಡುವವರೆಗೂ ಮುಂದುವರೆಯಿತು. ಇಂಥ ದೇಹಾತ್ಮಬುದ್ಧಿಯನ್ನು 'ಅಸುರರ ಉಪನಿಷತ್ತು' ಎಂದು ಕರೆಯುತ್ತಾರೆ. ಈ ಸಿದ್ಧಾಂತವನ್ನು ನಂಬಿದವರೆಲ್ಲರೂ ಕಡೆಯಲ್ಲಿ ಆತ್ಮಜ್ಞಾನವಿಲ್ಲದೆ ಶೋಕಪಡುತ್ತಾರೆ. ಇದು ಬಂಧಕ್ಕೇ ಕಾರಣವು ಎಂದು ಉಪನಿಷತ್ತಿನಲ್ಲಿ ತಿಳಿಸಿರುತ್ತದೆ.

ಅನಂತರ ದೇವೇಂದ್ರನಿಗೆ ಮಾತ್ರ ನಡುದಾರಿಯಲ್ಲಿಯೇ ಆತ್ಮತತ್ತ್ವದ ವಿಚಾರಕ್ಕೆ ಸಂಶಯವುಂಟಾಯಿತು. ಹೇಗೆಂದರೆ ಇಂದ್ರನು ಹೀಗೆ ಯೋಚಿಸಿದನು: 'ಆತ್ಮನು ಅಮೃತವೂ ಅಭಯವೂ ಆದ ಬ್ರಹ್ಮವು'–ಎಂದು ಪ್ರಜಾಪತಿಯು ತಿಳಿಸಿರುತ್ತಾನೆ. ಈ ಛಾಯಾಪುರುಷನಾದರೊ, ದೇಹವನ್ನನುಸರಿಸಿ ತೋರಿಕೊಳ್ಳುತ್ತಾನೆ. ದೇಹವು

ಅಲಂಕೃತವಾಗಿದ್ದರೆ ತಾನೂ ಅಲಂಕೃತನಾಗಿರುತ್ತಾನೆ. ಹಾಗೆಯೇ ದೇಹದಲ್ಲಿ ಏನಾದರೂ ಕುರುಡು, ಕುಂಟು–ಮೊದಲಾದ ದೋಷಗಳಿದ್ದರೆ ತಾನೂ ಕುರುಡು–ಕುಂಟನಾಗಿಯೇ ತೋರುವನು. ಶರೀರವು ಇಲ್ಲವಾದರೆ ತಾನೂ ಇಲ್ಲವಾಗುವನು. ಹೀಗೆ ಬದಲಾಯಿಸುತ್ತಿರುವ ದೇಹವಾಗಲಿ, ಛಾಯಾತ್ಮನಾಗಲಿ ಬ್ರಹ್ಮವು ಹೇಗಾದೀತು? ಬ್ರಹ್ಮವೆಂಬುದು ನಿತ್ಯವೂ ಅವ್ಯಯವೂ ಆಗಿರಬೇಡವೆ? ಹಾಗಾದರೆ ಪ್ರಜಾಪತಿಯು ಯಾವದನ್ನು ಆತ್ಮನೆಂದು ಉಪದೇಶಿಸಿರಬಹುದು? ಈ ದೇಹವನ್ನಂತೂ ಆಗಿರಲಾರದು. ಆದ್ದರಿಂದ ಮತ್ತೊಮ್ಮೆ ಆತನನ್ನು ಬಳಿಸಾರದವನಾಗಿ ಆತ್ಮನನ್ನು ಸರಿಯಾಗಿ ಅರಿತುಕೊಳ್ಳುವೆನು'' ಎಂದು ಆಲೋಚಿಸುತ್ತಾ ಹಿಂದಿರುಗಿ ಮತ್ತೆ ಪ್ರಜಾಪತಿಯ ಬಳಿಗೇ ಬಂದುಬಿಟ್ಟನು. ಇದು ಇಂದ್ರನ ದೈವೀಸಂಪತ್ತನ್ನು ಎತ್ತಿ ತೋರಿಸುತ್ತದೆ. ಆದ್ದರಿಂದ ದೈವೀಸಂಪತ್ತುಗಳು ಇಲ್ಲದವನು ಎಂದಿಗೂ ಆತ್ಮಜ್ಞಾನಕ್ಕೆ ಯೋಗ್ಯನಾಗಿರಲಾರನು. ಒಂದು ವೇಳೆ ಅಲ್ಪಸ್ವಲ್ಪವಾದ ದೈವೀಸಂಪತ್ತಿನ ಬಂಡವಾಳದಿಂದ ತತ್ತ್ವವಿಚಾರವನ್ನು ಮಾಡಿದರೂ ಅಂತಃಕರಣದಲ್ಲಿನ ಕಲ್ಮಷವು ಪೂರ್ಣವಾಗಿ ತೊಲಗದಹೊರತು ಸರಿಯಾದ ಆತ್ಮಜ್ಞಾನವಾಗುವದಿಲ್ಲ. ಮತ್ತೆ ಅದೇ ದೈವೀಸಂಪತ್ತಿನ ಬಲದಿಂದ ಅಧ್ಯಾತ್ಮಸಾಧನಗಳನ್ನು ಮುಂದುವರೆಯಿಸಿ ಚಿತ್ತಶುದ್ಧಿಯನ್ನು ಸಂಪಾದಿಸಿಕೊಂಡೇ ಜ್ಞಾನವನ್ನು ಪಡೆದುಕೊಳ್ಳಬೇಕಾಗುತ್ತದೆ. ಪ್ರಕೃತ ಇಂದ್ರನು ಹಿಂತಿರುಗಿದವನಾಗಿ ಪ್ರಜಾಪತಿಯನ್ನು ಭೇಟಿ ಮಾಡಿದನು. ಆಗ ಆತನು 'ಎಲೈ ಶಿಷ್ಯನೆ, ಶಾಂತಹೃದಯನಾಗಿ ಹೊರಟುಹೋಗಿದ್ದೆಯಲ್ಲವೆ, ಮತ್ತೇಕೆ ಬಂದೆ?' ಎಂದನು. ಆಗ ಇಂದ್ರನು ''ಪೂಜ್ಯರೆ, ನನಗೆ ಆತ್ಮನ ವಿಷಯದಲ್ಲಿ ಸಂಶಯವುಂಟಾಗಿಬಿಟ್ಟಿತು. ಏನೆಂದರೆ ದೇಹವನ್ನನುಸರಿಸಿ ಛಾಯಾಪುರುಷನೂ ಬದಲಾಯಿಸುತ್ತಾನಲ್ಲವೆ? ಛಾಯಾಪುರುಷನ ಉದಾಹರಣೆಯಿಂದ ದೇಹವನ್ನೇ ಆತ್ಮನೆಂದು ಬಗೆದೆನಾದರೆ ಈ ದೇಹಕ್ಕೇ ಕುಂಟು, ಕುರುಡು–ಮುಂತಾದ ದೋಷಗಳು ಅಂಟಿದ್ದು ಇದು ವಿಕಾರಹೊಂದುತ್ತಿದೆ. ಅನಿತ್ಯವಾಗಿದೆ. ಇದು ಆತ್ಮನೆಂದು ಹೇಗೆ ತಿಳಿಯಲಿ? ನನಗೇನೋ ಇದರಲ್ಲಿ ನಿಜವು ಕಂಡುಬರುತ್ತಿಲ್ಲ; ತಾವು ನಿಜವಾದ ಅಮೃತಾಭಯವಾದ ಬ್ರಹ್ಮವು ಯಾವದು? ಅದು ಆತ್ಮನು ಹೇಗೆ? ಎಂಬುದನ್ನು ತಿಳಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿರಿ'' ಎಂದು ಬೇಡಿಕೊಂಡನು. ಆಗ ಪ್ರಜಾಪತಿಯು ''ಇದು ಹೀಗೆಯೇ ಸರಿ; ದೇಹವು ಆತ್ಮನೆಂದು ನಾನು ಹೇಳಿಯೂ ಇಲ್ಲ, ನಿನ್ನ ಚಿತ್ತದೋಷದಿಂದ ನಾನು ಹೇಳಿದ್ದರ ಅಭಿಪ್ರಾಯವನ್ನು ನೀನು ತಪ್ಪಾಗಿ ಗ್ರಹಿಸಿದ್ದೀಯೆ, ಚಿಂತೆಯಿಲ್ಲ. ಈಗ ಮತ್ತೊಮ್ಮೆ ಅಮೃತಾಭಯನಾದ ಆತ್ಮನನ್ನೇ ತಿಳಿಸಿಕೊಡುತ್ತೇನೆ. ಆದರೆ ಇನ್ನೂ ಚಿತ್ತಶುದ್ಧಿಯು ನಿನಗೆ ಆಗಬೇಕಾಗಿದೆ. ಪುನಃ ಮೂವತ್ತೆರಡು ವರ್ಷಗಳ ಬ್ರಹ್ಮಚರ್ಯವನ್ನು ಮಾಡುವವನಾಗು''–ಎಂದನು. ಆಗ ಇಂದ್ರನು ಎರಡನೆಯ ಬಾರಿಗೆ ಮತ್ತೆ ಬ್ರಹ್ಮಚರ್ಯವನ್ನವಲಂಬಿಸಿ ಗುರುಸನ್ನಿಧಿಯಲ್ಲಿ ನಿಂತನು.

ಇಲ್ಲಿ ಒಂದು ಪ್ರಶ್ನೆಯು ಏಳುತ್ತದೆ. ಏನೆಂದರೆ ಒಬ್ಬನೇ ಗುರುವಿನ ಬಳಿಯಲ್ಲಿ ಆತ್ಮತತ್ತ್ವವನ್ನು ಶ್ರವಣಮಾಡಿದ್ದ ಇಂದ್ರವಿರೋಚನರಿಬ್ಬರಲ್ಲಿ ಇಂದ್ರನಿಗೆ ಮಾತ್ರವೇ ಸಂಶಯವು ಬರಲು ಕಾರಣವೇನು? ವಿರೋಚನನಿಗೇಕೆ ಸಂಶಯವುಂಟಾಗಲಿಲ್ಲ? ಹೀಗೆಂದು ಕೇಳಬಹುದಾಗಿದೆ. ಮತ್ತು ಉದಶರಾವದೃಷ್ಟಾಂತದಿಂದ ಪ್ರಜಾಪತಿಯು ಇಬ್ಬರಿಗೂ ವಿಪರೀತಜ್ಞಾನವನ್ನು ಹೋಗಲಾಡಿಸಲು ಪ್ರಯತ್ನಪಟ್ಟನು. ನೀರಿನ ಪಾತ್ರೆಯಲ್ಲಿ ಪ್ರತಿಬಿಂಬವನ್ನು ಇಬ್ಬರೂ ನೋಡಿಕೊಂಡರು. ಇವರಲ್ಲಿ ಇಂದ್ರನು ಮಾತ್ರ ದೇಹಾತ್ಮವಾದದಲ್ಲಿ ದೋಷವಿದೆಯೆಂದು ಕಂಡುಕೊಂಡನು. ವಿರೋಚನನಿಗೇಕೆ ಇದು ತಿಳಿಯದೆಹೋಯಿತು? ಎಂದೂ ಆಕ್ಷೇಪಿಸಬಹುದಾಗಿದೆ. ಇದಕ್ಕೆ ಉತ್ತರವೇನೆಂದರೆ: ಇಂದ್ರನಿಗೆ ಅಂತಃಕರಣದೋಷವು ಕಡಿಮೆಯಾಗಿತ್ತು, ಆದ್ದರಿಂದ ಛಾಯಾಪುರುಷನ ಉದಾಹರಣೆಯಿಂದ ಅವನು ಮೊದಲಬಾರಿಗೆ ದೇಹವೇ ಆತ್ಮನೆಂದು ಗ್ರಹಿಸಿದರೂ ಅನಂತರ ಸಂಶಯವುಂಟಾಯಿತು. ಆದರೆ ವಿರೋಚನನಿಗೆ ಚಿತ್ತದೋಷವು ಹೆಚ್ಚಾಗಿದ್ದುದರಿಂದ ಅಕ್ಷಿಪುರುಷನನ್ನುಪದೇಶಿಸಿದಾಗಲೂ ಕಣ್ಣಿನೊಳಗೆ ಕಾಣುವ ಪ್ರತಿಬಿಂಬವನ್ನು ಆತ್ಮನೆಂದು ಗ್ರಹಿಸಿದ್ದನು. ಪ್ರಜಾಪತಿಯು ಮತ್ತೆ ನೀರಿನಲ್ಲಿ ಪ್ರತಿಬಿಂಬವನ್ನು ನೋಡಿಕೊಳ್ಳುವಂತೆ ತಿಳಿಸಿದಾಗಲಂತೂ ಛಾಯಾಪುರುಷನನ್ನೇ ಗ್ರಹಿಸಿಬಿಟ್ಟನು. ದ್ರಷ್ಟೃವನ್ನು ಗ್ರಹಿಸಲಿಲ್ಲ. ಇದರಿಂದ ಛಾಯೆಯ ಯಾವ ದೇಹದ್ದೋ ಅದು ಆತ್ಮನೇ–ಎಂಬ ತೀರ್ಮಾನಕ್ಕೆ ಬಂದನು. ಈ ವಿಷಯದಲ್ಲಿ ಅವನಿಗೆ ಸಂಶಯವೂ ಬರಲಿಲ್ಲ. ಇಲ್ಲಿ ವಿರೋಚನನ ತಿಳಿವಳಿಕೆಯ ಬಗ್ಗೆ ಒಂದು ಉದಾಹರಣೆಯನ್ನು ಕೊಡಬಹುದು. ಒಬ್ಬ ಬಟ್ಟೆಯ ವ್ಯಾಪಾರಿಯು ಗ್ರಾಹಕನಿಗೆ ಬಿಳಿದು ಹಾಗೂ ಕಪ್ಪುಬಣ್ಣಗಳ ಎರಡು ಬಟ್ಟೆಗಳನ್ನು ಹೆಗಲಮೇಲೆ ಹೊದಿಸಿ ತನ್ನ ಅಂಗಡಿಯಲ್ಲಿರುವ ನಿಲುವುಗನ್ನಡಿಯಲ್ಲಿ ತೋರಿಸಿ ಇವುಗಳಲ್ಲಿ ಕರಿಯಬಟ್ಟೆಯು ಬಹಳ ಬೆಲೆ ಬಾಳತಕ್ಕದ್ದು–ಎಂದು ಹೇಳಿದರೆ ಗ್ರಾಹಕನು ಹೇಗೆ ಪ್ರತಿಬಿಂಬವನ್ನು ಬಿಟ್ಟು ಬಟ್ಟೆಯನ್ನೇ ಅರ್ಥಮಾಡಿಕೊಳ್ಳುವನೋ ಹಾಗೆ ವಿರೋಚನನು ಕೂಡ ಪ್ರತಿಬಿಂಬವನ್ನು ನೋಡಿ ದೇಹವೇ ಆತ್ಮನೆಂದು ತಿಳಿದುಕೊಂಡನು. ಮುಂದಕ್ಕೆ ಇಂದ್ರನ ಹಾಗೆ ಅವನು ಯೋಚಿಸಲೇ ಇಲ್ಲ. ಇದೇ ಬುದ್ಧಿದೋಷವು. ಇಂದ್ರನಿಗಾದರೊ, ಅಂತಃಕರಣ ದೋಷವು ಅಲ್ಪವಾಗಿದ್ದುದರಿಂದ ವಿನಾಶಿಯಾದ ದೇಹವು ಅಮೃತಾಭಯವಾದ ಬ್ರಹ್ಮವೆಂಬುದು ಹೇಗೆ ಸರಿಯಾದೀತು? ಪ್ರಜಾಪತಿಯ ಉಪದೇಶದ ಅಂತರಂಗಾಭಿಪ್ರಾಯವೇನಿರಬಹುದು? ಮತ್ತೆ ವಿಚಾರಮಾಡೋಣ–ಎಂಬ ಪ್ರವೃತ್ತಿಯುಂಟಾಯಿತು. ಆದ್ದರಿಂದ ಅಧ್ಯಾತ್ಮವಿದ್ಯೆಯನ್ನು ಸರಿಯಾಗಿ ಅಭ್ಯಾಸಮಾಡಿ ಮನಗಾಣಲು ಇಚ್ಛಿಸುವವರು ಉಪದೇಶ ಶ್ರವಣಕ್ಕಿಂತ ಹೆಚ್ಚಾಗಿ ವಿವೇಕವೈರಾಗ್ಯಶಮದಮಾದಿ ಸಾಧನಗಳನ್ನೇ ಅನುಷ್ಠಾನಮಾಡಿ, ಮತ್ತೆಮತ್ತೆ

ಆ ಗುರೂಪದೇಶವನ್ನೇ ಮನನಮಾಡಬೇಕು. ಇಲ್ಲವಾದರೆ ವಿರೋಚನನಂತೆ ಮೋಸಹೋಗುವ ಸಂಭವವಿದೆ.

ಈಗಿನ ಕಾಲದಲ್ಲಿ ಅಧ್ಯಾತ್ಮೋಪನ್ಯಾಸಗಳನ್ನು ಕೇಳುವಂಥ ಮಹನೀಯರುಗಳು ಸಿಗುತ್ತಾರೆ. ಆದರೆ ಅಂಥವರಿಗೂ ದೊಡ್ಡ ದೊಡ್ಡ ಸಂಘಸಂಸ್ಥೆಗಳನ್ನು ಕಟ್ಟುವ ಹಾಗೂ ಬೆಳೆಸುವ ಯೋಜನೆಗಳು ಮುಂದಿದ್ದು ಜನರಿಂದ ಹಣವನ್ನು ಬಯಸುತ್ತಾರೆ. ಒಂದು ರೀತಿಯಲ್ಲಿ ಇದು ಅಧ್ಯಾತ್ಮಜ್ಞಾನಕ್ಕೆ ಅಡಚಣೆಯೇ ಸರಿ. ಅಧ್ಯಾತ್ಮವಿದ್ಯೆಯು ಮನಸ್ಸಿನಲ್ಲಿ ಮೂಡಬೇಕಾದರೆ ಸಾಧಕನು ಪ್ರಾಪಂಚಿಕವಿಷಯಗಳಿಂದ ಹಿಮ್ಮೆಟ್ಟಿದ ಹೊರತು ಸಾಧ್ಯವಾಗಲಾರದೆಂದು ಹೇಳಬೇಕಾದದ್ದೇ ಇಲ್ಲ. ಪ್ರಕೃತ ಪ್ರಜಾಪತಿಯು ಇಂದ್ರನನ್ನು ಹೇಗೆ ಉದ್ಧಾರಮಾಡಿದನೆಂಬುದನ್ನು ಮತ್ತೆ ವಿಚಾರಿಸೋಣ.

---

## ಇಂದ್ರನಿಗೆ ಪ್ರಜಾಪತಿಯ ಉಪದೇಶ

**ಓಮ್ ॥ ತದ್ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತಿ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ॥ 8–11–1**

**ಭಾವಾರ್ಥ:–** 'ಅಲ್ಲಿ ಯಾವಾಗ ಹೀಗೆ ಸುಷುಪ್ತನಾಗಿ ಸಮಸ್ತವಾಗಿ ಸಂಪ್ರಸನ್ನನಾಗಿ ಸ್ವಪ್ನವನ್ನು ಅರಿಯದೆ ಇರುವನೋ (ಆ) ಇವನೇ ಆತ್ಮನು. ಇದೇ ಅಮೃತವು. ಇದೇ ಅಭಯವು. ಇದೇ ಬ್ರಹ್ಮವು'–ಎಂದನು.

(ಮೊದಲನೆಯ ಬಾರಿಗೆ ಇಂದ್ರನು ಪ್ರಜಾಪತಿಯ ಆತ್ಮೋಪದೇಶವನ್ನು ಅರಿತುಕೊಳ್ಳದೆ ಹಿಂತಿರುಗಿದಾಗ ಎರಡನೆಯ ಬಾರಿಗೂ ಮೂರನೆಯ ಬಾರಿಗೂ ಅದೇ ಆತ್ಮೋಪದೇಶವನ್ನೇ ಸ್ವಪ್ನ–ಸುಷುಪ್ತಿಗಳ ಅನುಭವದ ಮೂಲಕ ಪ್ರಜಾಪತಿಯು ವಿವರಿಸಿದನು–ಎಂದಭಿಪ್ರಾಯ.)

## 68. ಪ್ರಜಾಪತಿಯು ಇಂದ್ರನಿಗೆ ಮತ್ತೆ ಬ್ರಹ್ಮವನ್ನು ತಿಳಿಸಿದ್ದು

ಈವರೆಗೆ ತಿಳಿಸಿರುವಂತೆ ಇಂದ್ರನು ಅಮೃತಾಭಯವಾದ ಬ್ರಹ್ಮವೇ ತಾನು–ಎಂಬಿದನ್ನು ಪ್ರಜಾಪತಿಯ ಉಪದೇಶದಿಂದ ಅರಿತುಕೊಳ್ಳಲಾರದೆ ಸಂಶಯಗ್ರಸ್ತನಾಗಿ ಹಿಂದಿರುಗಿ ಗುರುವಿನ ಬಳಿಗೇ ಬಂದನು. ಇದು ಇಂದ್ರನ ದೈವೀಸಂಪತ್ತನ್ನು ತೋರಿಸುತ್ತದೆ. ವಿರೋಚನನಾದರೊ, ತನಗೆ ತತ್ತ್ವವು ತಿಳಿದೇ ಬಿಟ್ಟಿತೆಂಬ ಅಹಂಕಾರದಿಂದ ಹೊರಟೇ ಹೋದನು. ಇದರಿಂದ ಮೋಸಹೋದನು.

ಅವನಿಗೆ ದೇಹವು ಆತ್ಮನಾದರೆ ಅಮೃತ, ಅಭಯ–ಮುಂತಾದ ಗುಣಗಳು ಹೇಗೆ ಹೊಂದಿಯಾವು? ಎಂಬಿದು ಹೊಳೆಯಲೇ ಇಲ್ಲ. ಇಂಥ ವಿರೋಚನಬುದ್ಧಿಯೂ ಬ್ರಹ್ಮನಿರ್ಧಾರಣೆಗೆ ಅಡ್ಡಿಯಾಗಿರುತ್ತದೆ. ಆದ್ದರಿಂದ ಬ್ರಹ್ಮವನ್ನರಿಯಲಿಚ್ಛಿಸುವವನು ಅಂತರ್ಮುಖನಾಗಬೇಕು. ಚಿತ್ತಶುದ್ಧಿಯನ್ನು ಚೆನ್ನಾಗಿ ಅಳವಡಿಸಿಕೊಳ್ಳಬೇಕು. ಮತ್ತು ಬುದ್ಧಿಯನ್ನು ಸೂಕ್ಷ್ಮವಾಗಿಯೂ ಒಳಮುಖವಾಗಿಯೂ ಮಾಡಿಕೊಳ್ಳಲೇಬೇಕು. ಪ್ರಕೃತ–ಇಂದ್ರನು ಹಿಂತಿರುಗಿ ಬಂದಾಗ ಪ್ರಜಾಪತಿಯು "ಅಯ್ಯಾ, ನಿನ್ನ ಅಂತಃಕರಣಕ್ಕೆ ಆತ್ಮತತ್ತ್ವವನ್ನು ನಿರ್ಧರಿಸುವ ಯೋಗ್ಯತೆ ಸಾಲದಾಗಿದೆ. ಅದನ್ನು ಇನ್ನೂ ಹದಗೊಳಿಸಬೇಕಾಗಿದೆ; ಇಲ್ಲವಾದರೆ ಉಪದೇಶವು ನಾಟುವದಿಲ್ಲ. ಈಗ ಮತ್ತೊಮ್ಮೆ ಮೂವತ್ತೆರಡು ವರ್ಷಗಳ ಬ್ರಹ್ಮಚರ್ಯವನ್ನು ಕೈಗೊಳ್ಳುವವನಾಗು; ಅನಂತರ ಅದೇ ಆತ್ಮೋಪದೇಶವನ್ನು ಚೆನ್ನಾಗಿ ತಿಳಿಯ ಹೇಳುವೆನು"–ಎಂದನು. ಆಗ ಇಂದ್ರನು ಬ್ರಹ್ಮಸ್ವರೂಪವನ್ನು ಸರಿಯಾಗಿ ತಿಳಿಯಲೇಬೇಕೆಂಬ ಏಕನಿಷ್ಠೆಯಿಂದ ಗುರುಕುಲವಾಸ ಮಾಡಿದನು.

ಎರಡನೆಯ ಬಾರಿಗೆ ಮೂವತ್ತೆರಡು ವರ್ಷಗಳ ಬ್ರಹ್ಮಚರ್ಯವು ಪೂರೈಸಿದ ಅನಂತರ ಪ್ರಜಾಪತಿಯು ಇಂದ್ರನನ್ನು ಕುರಿತು ಹೀಗೆಂದನು : "ಎಲೈ ಶಿಷ್ಯನೆ, ನಿನ್ನ ಸ್ವರೂಪವೇ ಆಗಿರುವ ಆತ್ಮನು ಅಮೃತಾಭಯಬ್ರಹ್ಮವು. ಅವನು ಸ್ವಪ್ನಕಾಲಕ್ಕೆ ತನ್ನ ಮಹಿಮೆಯಿಂದ ಎಲ್ಲಾ ಪ್ರಪಂಚವನ್ನೂ ಸೃಷ್ಟಿಮಾಡಿಕೊಂಡು ಅಲ್ಲಿರುವ ವಸ್ತುಗಳೊಡನೆ ಕ್ರೀಡಿಸುತ್ತಾ ಸಮಸ್ತವಿಧವಾದ ಭೋಗಭಾಗ್ಯಗಳನ್ನೂ ಅನುಭವಿಸುವನು. ತಾನೇ ಎಲ್ಲವನ್ನೂ ಬೆಳಗುವವನಾಗಿದ್ದುಕೊಂಡಿರುವನು. ಅಲ್ಲಿ ಎಚ್ಚರದ ಯಾವ ದೋಷಗಳೂ ಅವನಿಗೆ ಅಂಟಿರುವದಿಲ್ಲ. ಹೀಗೆ ಅಸಂಗನೂ ಏಕನೂ ಸ್ವಯಂಜ್ಯೋತಿಯೂ ಆಗಿರುವ ಆತ್ಮನೇ ಬ್ರಹ್ಮವು. ಅದೇ ನೀನು"– ಎಂದು ಉಪದೇಶಿಸಿದನು. ಆಗ ದೇವೇಂದ್ರನು "ನಿಜ, ನನಗೆ ಸ್ವಪ್ನಸ್ಥಿತಿಯಲ್ಲಿ ಎಚ್ಚರದ ಯಾವ ದೋಷಗಳೂ ಅಂಟಿರುವದಿಲ್ಲ. ನಾನೊಬ್ಬನೇ ಎಲ್ಲವೂ ಆಗಿ ಮಹಿಮೆಯನ್ನು ಅನುಭವಿಸುತ್ತಿರುವದೂ ಸರಿ, ತಿಳಿಯಿತು"– ಎಂದುಕೊಂಡು ಸಮಾಧಾನವಾದ ಚಿತ್ತದಿಂದ ಹಿಂದಿರುಗಿ ಹೊರಟುಹೋದನು. ಪ್ರಜಾಪತಿಯು ಸಹ ಶಿಷ್ಯನು ಕೃತಕೃತ್ಯನಾದನು– ಎಂದು ಭಾವಿಸಿದನು.

ಆದರೆ ದೇವೇಂದ್ರನಿಗೆ ಇನ್ನೂ ಸ್ಥಳವನ್ನು ತಲುಪುವ ಮುಂಚೆಯೇ ಹಾದಿಯಲ್ಲೇ ಮತ್ತೆ ಯೋಚನೆಗಿಟ್ಟುಕೊಂಡಿತು. ಪ್ರಜಾಪತಿಯು ಹೇಳಿದಂತೆ ಸ್ವಪ್ನಾತ್ಮನು ಎಚ್ಚರದ ಎಲ್ಲಾ ಕಟ್ಟುಪಾಡುಗಳಿಂದಲೂ ಗುಣದೋಷಗಳಿಂದಲೂ ನಿರ್ಮುಕ್ತನಾಗಿರುವದೇನೋ ನಿಜ. ಉದಾಹರಣೆಗೆ ಎಚ್ಚರದ ಶರೀರದಲ್ಲಿ ಕುರುಡನಾಗಿದ್ದರೆ ಅಥವಾ ಕುಂಟನಾಗಿದ್ದರೆ ಕನಸಿನಲ್ಲಿ ಹಾಗೇನೂ ಇರುವದಿಲ್ಲ. ಎಚ್ಚರದಲ್ಲಿ ರೋಗಿಯಾಗಿದ್ದವನು,

ಮುದುಕನಾಗಿದ್ದವನು, ಕನಸಿನಲ್ಲಿ ಆರೋಗ್ಯವಂತನಾಗಿಯೂ, ಯುವಕನಾಗಿಯೂ ಇರಬಹುದು, ಇಲ್ಲಿ ಜವಾನನಾಗಿದ್ದವನು ಅಲ್ಲಿ ರಾಜನಾಗಿರಬಹುದು, ದರಿದ್ರನು ಧನಿಕನಾಗಿರಬಹುದು; ಅವಿದ್ಯಾವಂತನು ವಿದ್ಯಾವಂತನಾಗಿರಬಹುದು–ಇತ್ಯಾದಿ. ಇವೆಲ್ಲ ಸರಿಯೆ; ಆದರೆ ಕನಸಿನಲ್ಲಿಯೂ ಪ್ರಪಂಚವೂ ಶರೀರವೂ ಇರುವದರಿಂದಲೇ ಸುಖ, ದುಃಖ, ಕಾಮ, ಭಯಗಳು ಉಂಟಾಗುತ್ತಲೇ ಇರುವವು. ನಮ್ಮ ಕನಸೇ ಅದು–ಎಂದು ಎಚ್ಚೆತ್ತಮೇಲೆ ಗೊತ್ತಾಗುವದಾದರೂ ಕನಸನ್ನು ಕಾಣುವ ಕಾಲಕ್ಕೆ ನಮ್ಮಂತೆಯೇ ಉಳಿದ ಜನರನ್ನೂ ಪ್ರಪಂಚವನ್ನೂ ಅಲ್ಲಿ ಕಾಣುತ್ತಿರುವದರಿಂದ ಮತ್ತೊಬ್ಬರಿಂದ ನಮಗೆ ದುಃಖ, ಭಯಾದಿವೇದನೆಗಳಾಗುತ್ತಿವೆಯಲ್ಲವೆ? ಎಷ್ಟೋ ಜನರು ಕನಸಿನಲ್ಲಿ ಭಯಂಕರ ದೃಶ್ಯಗಳನ್ನು ಕಂಡು ಹೆದರಿ ಎಚ್ಚೆತ್ತಮೇಲೂ ನಡುಗುವರಲ್ಲವೆ? ನಾನೂ ಹಾಗೆಯೇ ಕನಸು ಕಾಣುವೆನಲ್ಲ? ಆದ್ದರಿಂದ ಸ್ವಪ್ನಾತ್ಮನು ಎಚ್ಚರದಾತ್ಮನಂತೆಯೇ ಸಂಸಾರಿಯೇ ಹೊರತು ಅಮೃತಾಭಯಬ್ರಹ್ಮವಾಗಲಾರನು. ಹೀಗಿರುವಲ್ಲಿ ಪ್ರಜಾಪತಿಯು ಹೇಳಿದ್ದು ಹೇಗೆ ಸರಿ?–ಎಂದು ಯೋಚಿಸುತ್ತಾ ಸಂಶಯಗ್ರಸ್ತನಾಗಿ ಮತ್ತೆ ಹಿಂದಿರುಗಿ ಪ್ರಜಾಪತಿಯ ಬಳಿಗೆ ಬಂದನು.

ಇಲ್ಲಿ ದೇವೇಂದ್ರನ ತಿಳಿವಳಿಕೆಯೇನು? ಪ್ರಜಾಪತಿಯು ಹೇಳಿದ್ದೇನು? ಎಂಬಿದನ್ನು ನೋಡೋಣ. ಇಂದ್ರನಿಗೆ ದೇಹಾತ್ಮಾಭಿಮಾನವು ಪೂರ್ತಿಯಾಗಿ ಹೋಗಿಲ್ಲವಾದ್ದರಿಂದ ಅವಸ್ಥಾಸಾಕ್ಷಿಯೂ ದ್ರಷ್ಟೃವೂ ಆದ ಆತ್ಮನು ತಾನು ಎಂಬಿದು ತಿಳಿದಿಲ್ಲ. ಇದೇನೂ ಆಶ್ಚರ್ಯವಲ್ಲ. ಏಕೆಂದರೆ 'ನಾನು' ಎಂಬ ಅಭಿಮಾನವು ಅಂಥ ಪ್ರಬಲವಾದದ್ದಾಗಿದೆ. ಯಾವನೇ ಆಗಲಿ, ನಾನು ಎಂಬಿದನ್ನು ಮುಂದುಮಾಡಿಕೊಂಡೇ ಬ್ರಹ್ಮಜಿಜ್ಞಾಸೆಗೆ ತೊಡಗುವನೋ ಅಂಥವನಿಗೆ ಅವಸ್ಥಾಬದ್ಧವಾದ ಸ್ವರೂಪಕ್ಕೆ ಬ್ರಹ್ಮವೆಂಬ ಭಾವನೆಯುಂಟಾಗಿಬಿಡುವದು. ಆಗ ಆಯಾ ಅವಸ್ಥಾಂತರ್ಗತವಾದ ಸಂಸಾರಧರ್ಮಗಳು ಸ್ವರೂಪಕ್ಕೆ ಅಂಟಿಕೊಂಡೇ ಇವೆಯೆಂಬ ಭ್ರಾಂತಿಯೇ ಗಟ್ಟಿಯಾಗಿಬಿಡುವದರಿಂದ ಅಮೃತಾಭಯಬ್ರಹ್ಮವೇ ನಾನು–ಎಂಬ ತಿಳಿವಳಿಕೆಯು ನೆಲೆಗೊಳ್ಳುವದಿಲ್ಲ. ಇದೇ ಇಂದ್ರನ ಪರಿಸ್ಥಿತಿಯು. ಪ್ರಜಾಪತಿಯಾದರೊ, ಯಾವಾಗಲೂ ಉಪಾಧಿರಹಿತವಾದ, ಆದರೆ ಉಪಾಧಿಯ ಮೂಲಕವೇ ಕಂಡುಬರುವ ದ್ರಷ್ಟೃವಾದ ಆತ್ಮನನ್ನು ವಿವಕ್ಷೆಮಾಡಿ ಉಪದೇಶಿಸುತ್ತಿದ್ದಾನೆ. ಅವನ ಅಭಿಪ್ರಾಯದಂತೆ ಅಕ್ಷಿಪುರುಷನೇ ಬ್ರಹ್ಮವು ಎಂದರೆ ಅಕ್ಷಿಯೆಂಬ ಉಪಾದಿಯನ್ನು ನೆಪಮಾಡಿಕೊಂಡು ಬೆಳಗುತ್ತಿರುವ ಚೈತನ್ಯರೂಪನು–ಎಂದರ್ಥ. ಹಾಗೆಯೆ ಇಲ್ಲಿಯೂ ಸ್ವಪ್ನವೆಂಬ ಅವಸ್ಥೆಯನ್ನೂ ತದಂತರ್ಗತವಾದ ಭೋಕ್ತೃಭೋಗ್ಯಪ್ರಪಂಚವನ್ನೂ ಬೆಳಗುತ್ತಾ ತಾನೂ ಅಸಂಗನಾಗಿ ಏಕನಾಗಿ ಶುದ್ಧನಾಗಿರುವ ಆತ್ಮನನ್ನು ಅಮೃತಾಭಯಬ್ರಹ್ಮವೆಂದು ತಿಳಿಸಿದ್ದಾನೆ. ಇದು

ಸರಿಯಾಗಿಯೇ ಇದೆ. ಆದರೆ ತಿಳಿದುಕೊಳ್ಳುವವನು ಮತ್ತೆ ತಪ್ಪುಮಾಡಿದ್ದಾನೆಂಬುದನ್ನು ನಾವು ಗುರುತಿಸಬೇಕು. ಆದರೂ ತತ್ತ್ವವನ್ನು ಸಂಪೂರ್ಣವಾಗಿ ತಿಳಿಸುವವರೆಗೂ ಈ ಸಂವಾದವು ಮುಂದುವರೆಯುವದರಿಂದ ಏನೂ ದೋಷವಿಲ್ಲ.

ಈಗ ದೇವೇಂದ್ರನು ಪ್ರಜಾಪತಿಯನ್ನು ಬಳಿಸಾರಿ ಏನು ಮಾಡಿದನೆಂಬುದನ್ನು ತಿಳಿಯೋಣ. ಮೂರನೆಯ ಬಾರಿಗೆ ದೇವೇಂದ್ರನು ಹಿಂತಿರುಗಿದುದನ್ನು ಕಂಡು ಪ್ರಜಾಪತಿಯು 'ಎಲೈ ಇಂದ್ರನೆ, ಶಾಂತಹೃದಯನಾಗಿ ಹೊರಟುಹೋಗಿದ್ದೆಯಲ್ಲವೆ, ಮತ್ತೇಕೆ ಹಿಂದಿರುಗಿ ಬಂದಿರುವೆ?' ಎಂದನು. ಆಗ ಇಂದ್ರನು "ಪೂಜ್ಯರೆ, ತಾವು ಮಾಡಿದ ಆತ್ಮೋಪದೇಶವು ಇನ್ನೂ ನನಗೆ ಮನವರಿಕೆಯಾಗಿಲ್ಲ. ಸ್ವಪ್ನದಲ್ಲಿ ಮಹಿಮಾನ್ವಿತನಾಗಿ ಕಂಡುಬರುವವನೇ ಅಮೃತಾಭಯಬ್ರಹ್ಮವು"– ಎಂದು ಹೇಳಿದ್ದಿರಿ. ಆದರೆ ಎಚ್ಚರದ ಗುಣದೋಷಗಳ ಅಂಟು ಸ್ವಪ್ನಾತ್ಮನಿಗೆ ಇಲ್ಲವೆಂಬುದು ತಿಳಿಯಿತಾದರೂ ಸ್ವಪ್ನಕಾಲದಲ್ಲೇ ಸಂಭವಿಸುವ ಭಯ, ಶೋಕ, ಮೋಹಗಳು ಆತ್ಮನನ್ನು ಆವರಿಸಿರುವವಲ್ಲವೆ? ಹೀಗಿರುವಾಗ ಆ ಆತ್ಮನು ಅಮೃತಾಭಯಬ್ರಹ್ಮವು ಹೇಗಾದೀತು? ಇದು ನನಗೆ ತಿಳಿಯಲಿಲ್ಲ"–ಎಂದನು. ಆಗ ಪ್ರಜಾಪತಿಯು "ಹಾಗಲ್ಲ, ನಾನು ಹೇಳಿದ ಅಮೃತಾಭಯಾತ್ಮನಿಗೆ ಎಲ್ಲಿಯೂ ಚ್ಯುತಿಯೇ ಇಲ್ಲ. ಅವನನ್ನು ಉಪಾಧಿಗಳಿಂದ ವಿಂಗಡಿಸಿ ಅರಿತುಕೊಳ್ಳಲಾರದೆ ನೀನು ಮತ್ತೆ ಸಂಶಯಗ್ರಸ್ತನಾಗಿರುವೆ. ಆತ್ಮೋಪದೇಶವು ಯಾವಾಗಲೂ ಗಹನವಾದುದೇ ಸರಿ. ಇನ್ನೂ ಒಮ್ಮೆ ನಿನಗೆ ಇದೇ ಆತ್ಮನನ್ನೇ ಕುರಿತು ವ್ಯಾಖ್ಯಾನಮಾಡುವೆನು. ಆದರೆ ನೀನು ಮತ್ತೆ ಚಿತ್ತಶುದ್ಧಿಗಾಗಿ ಮೂರನೆಯಬಾರಿಗೆ ಮೂವತ್ತೆರಡು ವರ್ಷಗಳ ಕಾಲ ಬ್ರಹ್ಮಚರ್ಯವನ್ನು ಕೈಗೊಳ್ಳುವವನಾಗು. ಅನಂತರ ಅದೇ ತತ್ತ್ವವನ್ನು ತಿಳಿಯಹೇಳುವೆನು"– ಎಂದನು. ಆಗ ಇಂದ್ರನು ಮತ್ತೆ ಬ್ರಹ್ಮಚರ್ಯನಿಷ್ಠನಾಗಿ ಗುರುಕುಲದಲ್ಲಿ ನಿಂತನು. ಈ ಅವಧಿಯು ಪೂರೈಸುವ ವೇಳೆಗೆ ಒಟ್ಟು ತೊಂಭತ್ತಾರು ವರ್ಷಗಳ ಬ್ರಹ್ಮಚರ್ಯವ್ರತವು ಮುಗಿದಿತ್ತು. ಹೀಗೆ ಬ್ರಹ್ಮವಿದ್ಯೆಯನ್ನು ತಿಳಿಯಬಯಸುವವನು ಗುರುವಿನ ಆಜ್ಞೆಯಂತೆ ಸಾಧನಗಳನ್ನು ಕೈಗೊಳ್ಳುತ್ತಿರಲೇಬೇಕು. ಇಂದ್ರನಂಥ ಬುದ್ಧಿಶಾಲಿಗೂ ಇಷ್ಟೊಂದು ದೀರ್ಘಕಾಲದ ಪೂರ್ವಸಿದ್ಧತೆಯು ಆತ್ಮಜ್ಞಾನಕ್ಕೆ ಅಗತ್ಯವಾಯಿತು–ಎಂದಮೇಲೆ ಉಳಿದ ಸಾಧಕರ ಪಾಡೇನು? ಆದ್ದರಿಂದ ಬ್ರಹ್ಮಜ್ಞಾನವಾಗಲಿಲ್ಲ–ಎಂದು ಯಾರೂ ನಿರಾಶರಾಗದೆ ಸಾಧನಗಳನ್ನು ಮುಂದುವರಿಸುತ್ತಲೇ ಇರಬೇಕು–ಎಂದಭಿಪ್ರಾಯ.

ಹೀಗೆ ಮೂರನೆಯ ಬಾರಿಗೆ ಬ್ರಹ್ಮಚರ್ಯನಿಷ್ಠನಾಗಿ ಅಂತಃಕರಣಶುದ್ಧಿಯನ್ನು ಚೆನ್ನಾಗಿ ಪಡೆದುಕೊಂಡಿದ್ದ ದೇವೇಂದ್ರನಿಗೆ ಪ್ರಜಾಪತಿಯು ಹೀಗೆ ಉಪದೇಶಿಸಿದನು. "ಎಲೈ ಶಿಷ್ಯನೆ, ಅಮೃತಾಭಯನಾದ ಆತ್ಮನಿಗೆ ಎಚ್ಚರ–ಕನಸುಗಳೆಂಬ ಉಪಾಧಿಗಳು

ಯಾವ ವಿಕಾರವನ್ನೂ ಉಂಟುಮಾಡಲಿಲ್ಲವೆಂಬುದು ತಿಳಿಯಿತಷ್ಟೆ. ಆದರೆ ಆಯಾ ಉಪಾಧಿಗಳ ಸಂಪರ್ಕಕಾಲಕ್ಕೆ ಜರಾಮರಣಶೋಕಮೋಹ ಭಯಾದಿಸಂಸಾರ ದೋಷಗಳು ಕಾಣಿಸಿಕೊಂಡದ್ದು ನಿಜ. ಅವುಗಳಿಂದೇನೂ ಆತ್ಮನಿಗೆ ಪರಿಣಾಮವಾಗಲಿಲ್ಲ. ಏಕೆಂದರೆ ಯಾವದೇ ಉಪಾಧಿಯೂ ಆತ್ಮನನ್ನು ಸದ್ವಿತೀಯನನ್ನಾಗಿ ಮಾಡಲಾರದು. ಆದರೂ ಅವುಗಳಾವವೂ ಇಲ್ಲದೆ ಆತ್ಮನೊಬ್ಬನೇ ಇರುವ ಅನುಭವವನ್ನು ತಿಳಿಸುವೆನು. ಅದೇ ಸಂಪ್ರಸಾದವು. ಸಂಪ್ರಸಾದವೆಂದರೆ ಗಾಢನಿದ್ರೆ–ಎಂದರ್ಥ. ಇಂಥ ಸ್ಥಿತಿಯಲ್ಲಿ ಆತ್ಮನು ಸ್ವಚ್ಛವಾಗಿ ಯಾವ ವಿಶೇಷವಿಜ್ಞಾನವಾಗಲಿ ಕರ್ತೃತ್ವಭೋಕ್ತೃತ್ವಗಳಾಗಲಿ, ಶೋಕಮೋಹಾದಿಗಳಾಗಲಿ ಇಲ್ಲದೆ ಪರಮಾನಂದರೂಪನಾಗಿರುವನು. ಈ ಆತ್ಮನನ್ನರಿತುಕೊಳ್ಳುವದೇ ವಿದ್ಯೆಯು. ಇವನೇ ಅಮೃತಾಭಯಬ್ರಹ್ಮವು'' ಎಂದು ಉಪದೇಶಿಸಿದನು. ದೇವೇಂದ್ರನು ತಿಳಿಯಿತು–ಎಂದುಕೊಂಡವನಾಗಿ ಹೊರಟನು. ಆದರೆ ಮಧ್ಯಮಾರ್ಗದಲ್ಲಿಯೇ ಮತ್ತೆ ಅವನಿಗೆ ಸಂಶಯವುಂಟಾಯಿತು. ಅದೇನೆಂದು ತಿಳಿಯೋಣ.

ಇಂದ್ರನು ಹೀಗೆ ಯೋಚಿಸಿದನು: ಈವರೆಗೂ ತಾನು ತಿಳಿದಿದ್ದ ಆತ್ಮನು ಸಂಸಾರಧರ್ಮಗಳನ್ನು ಒಂದಲ್ಲ–ಒಂದು ರೀತಿಯಿಂದ ಹೊಂದಿದ್ದನೆಂದೂ ಮೂರನೆಯ ಪರ್ಯಾಯದಲ್ಲಿ ಪ್ರಜಾಪತಿಯು ತಿಳಿಸಿದಂತೆ ಸುಷುಪ್ತಿಯಲ್ಲಿ ಏಕೀಭೂತನೂ ಪ್ರಜ್ಞಾನಘನನೂ ಆಗಿ ಆತ್ಮನು ಕಂಡುಬರುವನೆಂದೂ ಇದರಿಂದ ತೃಪ್ತಿಯಾಯಿತೆಂದೂ ಭಾವಿಸಿದ್ದನು. ಆದರೆ ಎಚ್ಚರದ ದೃಷ್ಟಿಯಿಂದ ಸುಷುಪ್ತಿಯನ್ನು ವಿಚಾರಮಾಡಿದಾಗ ಮತ್ತೆ ದೋಷಗಳು ಕಂಡುಬಂದವು. ಏಕೆಂದರೆ ಸುಷುಪ್ತನಾದವನು ತನ್ನನ್ನಾಗಲಿ, ಮತ್ತೊಂದನ್ನಾಗಲಿ ಏನೂ ಅರಿಯುವದಿಲ್ಲ. ಅದೊಂದು ತಾಮಸವಾದ ಸ್ಥಿತಿಯಾಗಿದೆ ಹೀಗಿರುವಲ್ಲಿ ಅಮೃತಾಭಯಬ್ರಹ್ಮವು ತಾನು–ಎಂಬ ಜ್ಞಾನವಾದರೂ ಅಲ್ಲಿ ಹೇಗೆ ಉಂಟಾದೀತು? ಅಲ್ಲದೆ 'ನಾನು' ಎಂಬಿದೇ ಸುಷುಪ್ತಿಯಲ್ಲಿ ಇಲ್ಲವಾಗಲಾಗಿ ಆತ್ಮನಾಶವೇ ಆದಂತೆ ಅಲ್ಲವೆ? ಇದೆಂಥ ಮುಕ್ತಿಯು? ಪ್ರಜಾಪತಿಯು ಹೀಗೇಕೆ ಹೇಳಿದನು? ಎಂದು ಸಂಶಯಗೊಂಡನು. ಕೂಡಲೆ ಹಿಂದಿರುಗಿ ಅವನ ಬಳಿಗೆ ಬಂದನು. ಇಲ್ಲಿಯೂ ಇಂದ್ರನು ಅಂತಃಕರಣದೋಷದಿಂದ ಸುಷುಪ್ತ್ಯಾವಸ್ಥಾಸಾಕ್ಷಿಯಾದ ಆತ್ಮನನ್ನರಿಯದೆ ಸುಷುಪ್ತ್ಯವಸ್ಥೆಯಲ್ಲಿ ಆತ್ಮನಲ್ಲಿ ಎಚ್ಚರದ ಜನರು ಆರೋಪಿಸುವ ದೋಷಗಳನ್ನೇ ನಿಜವೆಂದು ನಂಬಿ ಆತ್ಮನು ನಾಶವಾಗಿಬಿಡುವನೆಂದು ಭಯಗ್ರಸ್ತನಾಗಿ ಮತ್ತೆ ಗುರು ಸನ್ನಿಧಿಗೆ ಬಂದಿರುತ್ತಾನೆ. ಕಡೆಯಲ್ಲಿ ಗುರುವು ಶಿಷ್ಯನನ್ನು ಹೇಗೆ ಉದ್ಧರಿಸುವನೆಂಬುದನ್ನು ಮುಂದೆ ವಿಚಾರಮಾಡೋಣ.

---

## ಅಶರೀರಾತ್ಮನ ಹೆಚ್ಚುಗಾರಿಕೆ

ಓಮ್ ॥ ಮಘವನ್ ಮರ್ತ್ಯ೦ ವಾ ಇದಗ್೦ ಶರೀರಮಾತ್ತಂ ಮೃತ್ಯುನಾ ತದಸ್ಯ ಅಮೃತಸ್ಯಾಶರೀರಸ್ಯಾತ್ಮನೋಽಧಿಷ್ಠಾನಂ..........ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ ॥ 8–12–1

ಭಾವಾರ್ಥ:– 'ಎಲೈ ಇಂದ್ರನೆ, ಈ ಶರೀರವು ಮರ್ತ್ಯವು. ಮೃತ್ಯುವಿನಿಂದ ಗ್ರಸ್ತವಾಗಿರುತ್ತದೆ. ಇದು ಈ ಅಮೃತನಾದ ಅಶರೀರನಾದ ಆತ್ಮನಿಗೆ ಅಧಿಷ್ಠಾನವು. ಅಶರೀರನೇ ಆಗಿರುವವನನ್ನು ಪ್ರಿಯಾಪ್ರಿಯಗಳು ಸೋಂಕಲಾರವು.'

(ಪ್ರಜಾಪತಿಯು ದೇವೇಂದ್ರನಿಗೆ ಕಡೆಯಬಾರಿಗೆ ಆತ್ಮೋಪದೇಶವನ್ನು ನೀಡುವಾಗ ಶರೀರಕ್ಕಿಂತ ವಿಲಕ್ಷಣನೂ ಶರೀರರಾದಿಗಳಿಲ್ಲದವನೂ–ಆದ್ದರಿಂದಲೇ ಪ್ರಿಯಾಪ್ರಿಯಗಳ ಸೋಂಕು ಮುಟ್ಟದವನೂ ಆಗಿರುವ ಅಮೃತಾತ್ಮನನ್ನು ತೋರಿಸಿಕೊಟ್ಟು ಕೃತಕೃತ್ಯನನ್ನಾಗಿ ಮಾಡಿರುತ್ತಾನೆ. ಈಗ ಇಂದ್ರನು ಸಂಪೂರ್ಣವಾಗಿ ಆತ್ಮಜ್ಞಾನವನ್ನು ಪಡೆದುಉದ್ಧಾರವಾದನು – ಎಂದಭಿಪ್ರಾಯ)

## 69. ಅಶರೀರಾತ್ಮನ ಜ್ಞಾನ

ಈವರೆಗೆ ತಿಳಿಸಿರುವಂತೆ ದೇವೇಂದ್ರನು ಮೂರನೆಯ ಬಾರಿಗೂ ಪ್ರಜಾಪತಿಯ ಉಪದೇಶರಹಸ್ಯವನ್ನರಿಯಲಾರದೆ ಸಂಶಯಗ್ರಸ್ತನಾಗಿ ಹಿಂದಿರುಗಿ ಬಂದಿದ್ದನು. ಆಗ ಪ್ರಜಾಪತಿಯು 'ಎಲೈ ಇಂದ್ರನೆ, ಶಾಂತಹೃದಯನಾಗಿ ಹೊರಟುಹೋಗಿದ್ದವನು ತಿರುಗಿ ಏಕೆ ಬಂದೆ?' ಎಂದು ಮತ್ತೆ ಕೇಳಿದನು. ಇಂದ್ರನು 'ಪೂಜ್ಯರೆ, ತಾವು ಉಪದೇಶಿಸಿದ ಅಮೃತಾಭಯಾತ್ಮನನ್ನು ನಾನು ಸುಷುಪ್ತಿಯಲ್ಲಿಯೂ ವಿಂಗಡವಾಗಿ ಗುರುತಿಸಲಾಗಲಿಲ್ಲ; ಎಂದರೆ ನನಗೆ ಸುಷುಪ್ತಿಯಿಂದ ಎಚ್ಚೆತ್ತಮೇಲೆ ವಿಚಾರಮಾಡಿದ್ದರಲ್ಲಿ– ಆ ಸಂಪ್ರಸಾದದಲ್ಲಿ ನಾನು–ಎಂದಾಗಲಿ, ಈ ಪ್ರಪಂಚವೆಂದಾಗಲಿ ಏನನ್ನೂ ಅರಿಯದೆ ಇದ್ದೆನು. ಮತ್ತು ನಾನೆಂಬಿದರ ಅರಿವು ಕೂಡ ಇಲ್ಲದಿರುವಲ್ಲಿ ತಿಳಿಯತಕ್ಕದ್ದೇನಿದೆ? ಎಲ್ಲವೂ ಶೂನ್ಯವಾಗಿದ್ದು ಈ ಅನುಭವದಲ್ಲಿ ಏನೊಂದು ಸುಖವನ್ನೂ ನಾನು ಕಾಣಲಿಲ್ಲ. ನಾನೇ ಇಲ್ಲವಾಗುವಂಥ ಈ ಅನುಭವವು ಏತಕ್ಕೂ ಬಾರದು. ಹೀಗೆ ನನಗೆ ಮೋಹವೇ ಉಂಟಾಯಿತು. ಆದ್ದರಿಂದ ತಾವು ಅಮೃತಾಭಯಾತ್ಮನನ್ನು ಮತ್ತೊಮ್ಮೆ ತಿಳಿಸಿಕೊಡಬೇಕು' ಎಂದನು. ಆಗ ಪ್ರಜಾಪತಿಯು ''ಹೆದರಬೇಡ, ನಿನಗೆ, ಮತ್ತೊಮ್ಮೆ ಅದೇ ಆತ್ಮೋಪದೇಶವನ್ನು

ಮಾಡುವೆನು. ಈ ಬಾರಿಗೆ ಕೇವಲ ಐದು ವರ್ಷಗಳ ಕಾಲ ಬ್ರಹ್ಮಚರ್ಯದಿಂದಿರು'' ಎಂದು ಅಪ್ಪಣೆಮಾಡಿದನು. ಆಗ ದೇವೇಂದ್ರನು ನಾಲ್ಕನೆಯ ಬಾರಿಗೆ ಮತ್ತೆ ಬ್ರಹ್ಮಚರ್ಯನಿಷ್ಠನಾಗಿ ಐದು ವರ್ಷಗಳ ಕಾಲ ಗುರುಕುಲ ವಾಸಮಾಡಿದನು. ಇಲ್ಲಿಯವರೆಗೆ ಇಂದ್ರನು ಗುರುಸನ್ನಿಧಿಯಲ್ಲಿ ಒಂದು ನೂರ ಒಂದು ವರ್ಷಗಳ ಕಾಲ ಬ್ರಹ್ಮಚರ್ಯವನ್ನು ಆಚರಿಸಿದವನಾಗಿದ್ದನು.

ಬ್ರಹ್ಮವಿದ್ಯೆಯನ್ನು ಬಯಸುವ ಈಗಿನ ಕೆಲವು ಸಾಧಕರು ಕೆಲವೇ ಗ್ರಂಥಗಳ ಪಠನ, ವಿಚಾರ, ಪ್ರವಚನಾದಿಗಳಿಂದ ಅದು ದಕ್ಕಬೇಕೆಂದು ತವಕಪಡುತ್ತಿರುವರು. ಆದರೆ ಚಿತ್ತಶುದ್ಧಿಯೇ ಇಲ್ಲದ ಸ್ಥಿತಿಯಲ್ಲಿ ನಿಜವಾಗಿಯೂ ಬ್ರಹ್ಮವಿದ್ಯೆಯು ತಿಳಿದೀತೆ? ಎಂಬಿದನ್ನು ಯೋಚಿಸಬೇಕಾಗಿದೆ. ಕೆಲವು ಸಾಧಕರು ಬ್ರಹ್ಮಚರ್ಯವನ್ನು ಕೆಲವು ಸಮಯದವರೆಗೆ ಅನುಷ್ಠಾನಮಾಡಿ ಇನ್ನೂ ಬ್ರಹ್ಮಜ್ಞಾನವಾಗಲಿಲ್ಲವಲ್ಲ? ಎಂದು ಪೇಚಾಡುವದುಂಟು. ಮತ್ತೆ ಕೆಲವರು ತಮಗೆ ತಿಳಿದಷ್ಟೇ ಬಹ್ಮವಿದ್ಯೆಯ ಮಜಲೆಂದು ಭಾವಿಸಿ ತಾವು ''ಗುರು'' ಗಳೆಂದೂ ಪ್ರಚಾರ ಮಾಡಿಕೊಳ್ಳುವರು. ಏನೂ ಅರಿಯದವರು ಇಂಥವರ ಶಿಷ್ಯರಾಗಿ ತಾವೂ ಬ್ರಹ್ಮವಿದ್ಯಾಸಾಧಕರೆಂದು ತೃಪ್ತರಾಗುವದುಂಟು. ಈ ಎಲ್ಲ ಸಂದರ್ಭಗಳಲ್ಲಿಯೂ ನಾವು ಇಂದ್ರನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ದೇವೇಂದ್ರನಂಥ ತ್ರೈಲೋಕ್ಯಾಧಿಪತಿಯೂ, ಶಾಪಾನುಗ್ರಹಶಕ್ತನೂ ಅಂತರ್ಧಾನಾದಿಮಹಿಮೆಯುಳ್ಳವನೂ, ದೇವತೆಗಳೆಲ್ಲರಿಗಿಂತ ಶ್ರೇಷ್ಠನೂ ದೈವೀಸಂಪದ್ಯುಕ್ತನೂ ಆದ ಅಧಿಕಾರಿಗೆ ಒಂದು ನೂರ ಒಂದು ವರ್ಷಗಳ ಬ್ರಹ್ಮಚರ್ಯವೂ ಗುರುಶುಶ್ರೂಷೆಯೂ ತತ್ತ್ವಜ್ಞಾನಕ್ಕೆ ಅಗತ್ಯವಾಯಿತು– ಎಂದ ಮೇಲೆ ಉಳಿದ ಸಾಧಕರ ಪಾಡೇನು? ಆದ್ದರಿಂದ ಈಗಿನ ಸಾಧಕರ ಪಟ್ಟಿಯಲ್ಲಿ ದೇವೇಂದ್ರನಂಥ ಅಧಿಕಾರಿಯು ಸಾವಿರಕ್ಕೆ ಒಬ್ಬನೂ ಸಿಗಲಾರನು. ನಮ್ಮಲ್ಲಿ ಬಹುಜನರು ವೇದಾಂತಕ್ಕಾಗಿ ವೇದಾಂತವನ್ನು ಸ್ವೀಕರಿಸಿದವರಲ್ಲ, ವ್ಯಾವಹಾರಿಕವಾದ ಸನ್ನಿವೇಶಗಳಿಗೆ ಒಳಪಟ್ಟು ಲೋಕದಲ್ಲಿರುವ ಉಳಿದ ಎಲ್ಲಾ ಜೀವನವೃತ್ತಿಗಳಂತೆ ವೇದಾಂತವನ್ನೂ ಜೀವನವೃತ್ತಿಯಾಗಿಯೊ, ಅಥವಾ ಕಾಲಕಳೆಯುವ ಸಾಧನವಾಗಿಯೊ, ಸ್ವೀಕರಿಸಿದವರಾಗಿರುತ್ತಾರೆ. ಆದರೂ ಉಳಿದ ಲೌಕಿಕರಿಗಿಂತಲೂ ಪ್ರಾಕೃತರಿಗಿಂತಲೂ ಇವರು ಉತ್ತಮರೆನಿಸಬಹುದಾದರೂ ಇಷ್ಟಕ್ಕೇ ತೃಪ್ತರಾಗದೆ ದೇವೇಂದ್ರನಂಥ ಜಿಜ್ಞಾಸುವನ್ನೂ ಬ್ರಹ್ಮಚರ್ಯಾದಿಸಾಧನಗಳನ್ನೂ ಅಳವಡಿಸಿಕೊಳ್ಳಬೇಕು. ಈಗಿರುವಷ್ಟರಿಂದಲೇ ಅಹಂಕಾರದೂಷಿತರಾಗಬಾರದು. ಇದನ್ನು ತಿಳಿಸುವದಕ್ಕಾಗಿಯೇ ಉಪನಿಷತ್ತಿನಲ್ಲಿ ಈ ಸಂದರ್ಭವನ್ನು ಚಿತ್ರಿಸಲಾಗಿದೆ– ಎಂದು ತಿಳಿಯಬೇಕು.

ಪ್ರಕೃತವಿಚಾರಕ್ಕೆ ಬರೋಣ. ದೇವೇಂದ್ರನ ಒಂದುನೂರ ಒಂದು ವರ್ಷಗಳ ಬ್ರಹ್ಮಚರ್ಯವು ಪೂರ್ಣವಾದನಂತರ ಪ್ರಜಾಪತಿಯು ಹೀಗೆ ಉಪದೇಶಿಸಿದನು: ''ಎಲೈ ಶಿಷ್ಯನೆ, ನೀನು ಈವರೆಗಿನ ನನ್ನ ಉಪದೇಶಗಳಲ್ಲೆಲ್ಲ ಶರೀರವನ್ನು ಪ್ರಧಾನಮಾಡಿಕೊಂಡೇ ಆತ್ಮವಿಚಾರಮಾಡಲುಪಕ್ರಮಿಸಿ ಸಂಶಯಕ್ಕೊಳಗಾಗಿರುವೆ. ನಡುನಡುವೆ ನಾನು ಪ್ರತಿಬಿಂಬದೃಷ್ಟಾಂತ–ಸ್ವಪ್ನದೃಷ್ಟಾಂತಗಳಿಂದ ಶರೀರವ್ಯತಿರಿಕ್ತಾತ್ಮನನ್ನು ತೋರಿಸಿ ಕೊಟ್ಟರೂ ನೀನು ಆತ್ಮನನ್ನು ಗ್ರಹಣಮಾಡದೆ ಉಪಾಧಿಗಳನ್ನೇ ಅವಲಂಬಿಸಿದ ಕಾರಣ ನಿನಗೆ ಪರಿಶುದ್ಧಾತ್ಮನ ಜ್ಞಾನವಾಗದೆ ಇದೆ. ಆದ್ದರಿಂದ ಈಗ ಶರೀರವನ್ನೇ ಉದ್ದೇಶಿಸಿ–ಅದಕ್ಕಿಂತಲೂ ಆತ್ಮನು ವಿಲಕ್ಷಣನೆಂಬುವದನ್ನು ತಿಳಿಸುವೆನು. ಕೇಳು. ಈ ಶರೀರಿವು 'ಅಹಂ' ಎನಿಸಿಕೊಳ್ಳಲಾರದು. ಇದಂ (ಇದು) ಎಂದು ಮಾತ್ರ ಹೇಳಿಸಿಕೊಳ್ಳುತ್ತದೆ. ಈ ಶರೀರದಂತೆಯೇ ಇದಂಶಬ್ದಕ್ಕೆ ವಿಷಯವಾಗಿರುವದೆಲ್ಲವೂ ಅನಾತ್ಮವೇ–ಮರ್ತ್ಯವೇ ಎಂದು ತಿಳಿ. ಇದು ಯಾವಾಗಲೂ ಮೃತ್ಯುಗ್ರಸ್ತವಾಗಿರುವದು. ಮೃತ್ಯವೆಂದರೆ ನಾಶವು. ತಾನಲ್ಲದ್ದು ಯಾವದೂ ಅಮೃತವಲ್ಲ–ವಿನಾಶಿಯೇ–ಎಂದು ತಿಳಿ. ಹೀಗಿರುವದರಿಂದ ಶರೀರವನ್ನು ಅಮೃತಾತ್ಮನೆಂದು ಯಾರು ತಾನೆ ಹೇಳಿಯಾರು? ಆದರೆ ಅಮೃತವಾದ ಆತ್ಮನಿಗೆ ಇದು ಅಧಿಷ್ಠಾನವಾಗಿದೆ–ಎಂಬಿದು ಸರಿ. ಅಧಿಷ್ಠಾನವೆಂದರೆ ಆಶ್ರಯವು. [ಹೇಗೆ ವಿದ್ಯುಚ್ಛಕ್ತಿಯು ಪ್ರಕಟವಾಗಲು ಬಲ್ಬು–ಎಂಬಿದು ಆಶ್ರಯವೋ ಹಾಗೆ ಶರೀರವೂ ಬಲ್ಬಿನ ಸ್ಥಾನದಲ್ಲಿರುವದು. ಒಂದು ವೇಳೆ ಬಲ್ಬು ಒಡೆದುಹೋದರೂ ಬರ್ನ್ ಆದರೂ ವಿದ್ಯುಚ್ಛಕ್ತಿಯೇನೂ ಇಲ್ಲವಾಗುವದಿಲ್ಲ. ಅದು ನಾಶವೂ ಆಗುವದಿಲ್ಲ. ಅಷ್ಟೇ ಅಲ್ಲ, ಮನುಷ್ಯನು ಯಂತ್ರಗಳ ಸಹಾಯದಿಂದ ತನ್ನ ಉಪಯೋಗಕ್ಕಾಗಿ ವಿದ್ಯುತ್ತನ್ನು ಉತ್ಪಾದಿಸುವ ಮುಂಚೆಯೂ ಅದು ಇದ್ದುಕೊಂಡೇ ಇತ್ತಲ್ಲವೆ? ಹಾಗೆಯೇ] ಆತ್ಮನು ಈ ಶರೀರವು ಹುಟ್ಟಲಿ ನಾಶವಾಗಲಿ–ಎಲ್ಲಾ ಕಾಲದಲ್ಲಿಯೂ ಇದ್ದುಕೊಂಡೇ ಇರುವನು. ಅವಿವೇಕಿಗಳು ಶರೀರವು ಹುಟ್ಟಿದರೆ ಆತ್ಮನು ಹುಟ್ಟುತ್ತಾನೆಂದೂ ಶರೀರವು ನಾಶವಾದರೆ ಆತ್ಮನೂ ನಾಶವಾಗುವನೆಂದೂ ಭಾವಿಸುವರು. ಅದು ಸರಿಯಲ್ಲ. ಅಮೃತವಾದ ಆತ್ಮನು ಶರೀರಾದ್ಯುಪಾಧಿಗಳ ಸಂಪರ್ಕವೇ ಇಲ್ಲದೆ ತಾನೇ ತಾನಾಗಿದ್ದುಕೊಂಡಿರುವನು. ಅವನನ್ನು ನೀನು ತಿಳಿಯಬೇಕು. ಇದೇ ಆತ್ಮವಿದ್ಯೆಯು''–ಎಂದು ಉಪದೇಶಿಸಿದನು. ಆಗ ಇಂದ್ರನಿಗೆ ನಿಜವಾದ ಆತ್ಮಜ್ಞಾನವು ಲಭಿಸಿತು.

ಪ್ರಜಾಪತಿಯು ಮುಂದುವರೆದು ಹೀಗೆಂದನು: 'ಎಲೈ ಇಂದ್ರನೆ, ಶರೀರವನ್ನು ಯಾವಾಗಲೂ ನಂಬದಿರು. ಅದು ಹುಟ್ಟುವದೂ ಬೆಳೆಯುವದೂ ಸೊರಗುವದೂ ಇಲ್ಲವಾಗುವದೂ ಪ್ರಸಿದ್ಧವಾಗಿದೆ. ಶರೀರರವು ನಾನು–ಎಂಬಿದೇ ಮಿಥ್ಯಾಜ್ಞಾನವು. ಈ

ನಿಮಿತ್ತದಿಂದಲೇ ನನ್ನದು ಎಂಬಿದೂ ತೋರಿಕೊಳ್ಳುವದು. ಆದರೆ ನಿಜವಾದ ನಾನೆಂಬುದು ಎಂದೆಂದಿಗೂ ಆತ್ಮನಾಗಿಯೇ ಇರುವದು–ಎಂದರೆ ಅದು ದೇಹೇಂದ್ರಿಯಸಂಘಾತಕ್ಕಿಂತ ವ್ಯತಿರಿಕ್ತವೂ ಸ್ವತಂತ್ರವೂ ಆಗಿರುವದು. ಅದರ ಬಲದಿಂದಲೇ ದೇಹಾದಿಗಳೆಲ್ಲವೂ ನಾನು, ಅಥವಾ ನನ್ನದು–ಎನಿಸಿಕೊಳ್ಳುವವು. ಅವಿಚಾರದೆಶೆಯಲ್ಲಿ ವ್ಯವಹಾರಕಾಲಕ್ಕೆ ನಾವು ಒಮ್ಮೆ ದೇಹವನ್ನು ನಾನು–ಎಂದೂ ಮತ್ತೊಮ್ಮೆ ಇಂದ್ರಿಯಗಳನ್ನೂ ಇನ್ನೊಮ್ಮೆ ಮನಸ್ಸನ್ನೂ ನಾನು–ಎಂದು ಕೊಳ್ಳುತ್ತಿರುವೆವು. ಆದರೆ ವಿಚಾರಮಾಡಿದರೆ ಒಂದು ಶರೀರದಲ್ಲಿ ''ಇಷ್ಟು ನಾನು''ಗಳು ಇರುವದಿಲ್ಲ. ನಾನು ಎಂಬಿದು ಒಂದೇ–ಎಂಬ ಅನುಭವವು ಎಲ್ಲರಿಗೂ ಇದೆ. ಅದಕ್ಕೆ ಬಹುವಚನವು ಕೂಡ ಇಲ್ಲ. 'ನಾವು' ಎಂಬಿದು 'ನಾನು' ಎಂಬಿದರ ಬಹುವಚನವಲ್ಲವೆ? ಎಂದರೆ ಅಲ್ಲ–ಎನ್ನಬೇಕಾಗಿದೆ. ಏಕೆಂದರೆ ನಾನು–ನಾನು–ನಾನು–ಎಂದು ಮೂರು ಬಾರಿ ಹೇಳಿದರೂ ''ನಾನು'' ಎಂದೇ ಆಗುತ್ತದೆ. ನಾನು, ನೀನು, ಅವನು ಎಂದು ನಾನಲ್ಲದ ಅನಾತ್ಮಗಳನ್ನು ಬೆರೆಸಿ ಹೇಳಿದರೆ 'ನಾವು' ಎಂದಾಗುತ್ತದೆ. ಇದರಿಂದ ತಿಳಿಯಬರುವದೇನೆಂದರೆ: ನಾನು ಎಂಬಿದು ಒಂದೇ. ಅದು ಎಲ್ಲರಿಗೂ ನಾನೇ ಆಗಿದೆ. ಅದನ್ನೇ ಸಂಸ್ಕೃತಭಾಷೆಯಲ್ಲಿ ಆತ್ಮನೆಂದೂ ಇಂಗ್ಲೀಷ್‌ನಲ್ಲಿ Self ಎಂದೂ ಕರೆಯುತ್ತಾರೆ. ಈ ನಾನೆಂಬುದು ವ್ಯವಹಾರದಲ್ಲಿ ಯಾವಾಗಲೂ ದೇಹಾದ್ಯುಪಾದಿಗಳೊಡನೆ ಕೂಡಿಯೇ ತೋರಿಕೊಳ್ಳುತ್ತದೆ. ದೇಹವು ನಾನಲ್ಲವೆಂದು ವಿಚಾರದಿಂದ ಗೊತ್ತಾದ ಮೇಲೂ ಅದನ್ನು ನಾನು ಎಂದುಕೊಳ್ಳದೆ ವ್ಯವಹಾರವೇ ಸಾಗುವದಿಲ್ಲ. ಆದ್ದರಿಂದಲೇ ವ್ಯವಹಾರವೆಲ್ಲವೂ ಸುಳ್ಳುನಿಜಗಳ ಕಲಬೆರಕೆಯಾಗಿದ್ದು ಅವಿದ್ಯಾಕ್ಷೇತ್ರಕ್ಕೇ ಸೇರಿರುತ್ತದೆ. ವಿವೇಕಿಯಾದವನು 'ನಾನು' ಎಂಬಿದನ್ನು ದೇಹಾದ್ಯುಪಾದಿಗಳಿಂದ ವಿಂಗಡಿಸಿಕೊಳ್ಳಬೇಕು. ಹೀಗೆ ವಿಂಗಡಿಸುವಾಗ ಚೈತನ್ಯಾಂಶವನ್ನೇ ಗ್ರಹಿಸಬೇಕು. ಅಚೇತನವಾದದ್ದೂ ಬೆರೆತಿದ್ದರೆ ಕೈಬಿಡಬೇಕು. ಎಚ್ಚರಕಾಲಕ್ಕೆ ಈ ವಿವೇಕವು ಕಷ್ಟವಾಗಿರಬಹುದು. ಆದರೆ ಕನಸಿನಲ್ಲಿ ನೋಡಿಕೊಳ್ಳುವವನಾಗು. ಅಲ್ಲಿ ಎಚ್ಚರದ ನಾನು–ಇರುವದೇ ಇಲ್ಲ. ಏಕೆಂದರೆ ಎಚ್ಚರದ ದೇಹವಾಗಲಿ, ವಸ್ತುಗಳಾಗಲಿ ಕನಸಿಗೆ ಬರುವಂತೆ ಇಲ್ಲ. ನಾನು ಮಾತ್ರ ಅಲ್ಲಿಯೂ ಬೆಳಗುತ್ತಿದೆ. ಏಕೆಂದರೆ ನಾನೇ ಕನಸುಕಂಡೆನು ಎನ್ನುವೆವು. ಈ ಅನುಭವದಿಂದಲೇ ನಾನು–ಎಂಬಿದು ಸಾಕ್ಷಿಯೆಂದೂ ಅದು ದೇಹಾದ್ಯುಪಾಧಿಗಳಿಗಿಂತ ಹಾಗೂ ಎಚ್ಚರವೇ ಮುಂತಾದ ಅವಸ್ಥೆಗಳಿಗಿಂತ ವಿಲಕ್ಷಣವೆಂದೂ ತಿಳಿಯುತ್ತದೆ. ಆದರೂ ಜನರಿಗೆ ನಾನು ಎಂಬಿದು ದ್ವೈತದ ಹಂಗೇ ಇಲ್ಲದೆ ಎಂದಾದರೂ ಇದ್ದೀತೆ? ಎನಿಸಬಹುದು. ಆಗ ಗಾಢನಿದ್ರೆಯನ್ನು ನೋಡಿಕೊಳ್ಳಬೇಕು–ಎಂದರೆ ಗಾಢನಿದ್ರೆಯಲ್ಲಾಗುವ ಕೇವಲಾತ್ಮಾನುಭವವನ್ನು ಮನನಮಾಡಬೇಕು. ಹೀಗೆ ಅವಸ್ಥಾತ್ರಯಗಳಲ್ಲಿಯೂ ನಾನು–ಎಂಬಿದು ಆತ್ಮನಾಗಿ ಬೆಳಗುತ್ತಿದೆ. ಆಯಾ ಅವಸ್ಥೆಗಳಲ್ಲಿ ಉಪಾಧಿನಿಮಿತ್ತವಾಗಿ

'ನಾನು ಪ್ರಮಾತೃ' ಎನಿಸಿಕೊಂಡಿದೆ. ಗಾಢನಿದ್ರೆಯಲ್ಲಿ ನಾನು ಎಂಬ ವೃತ್ತಿರೂಪವನ್ನೂ ಕಳೆದುಕೊಳ್ಳುವದರಿಂದ ಅಜ್ಞಾನಿಗಳಿಗೆ ತಾನೇ ಇಲ್ಲವಾದೆನಲ್ಲ–ಎಂಬ ಭ್ರಾಂತಿಯನ್ನುಂಟುಮಾಡಿದೆ. ಆದರೆ ಗಾಢನಿದ್ರಾವಸ್ಥೆಗೂ ಸಾಕ್ಷಿಯಾಗಿ ಆತ್ಮನು ಇದ್ದುಕೊಂಡೇ ಇದ್ದಾನೆ. ಅವನೇ ನೀನು. ಆ ಆತ್ಮನನ್ನೇ ಕುರಿತು ನಾನು ನಾಲ್ಕು ಬಾರಿಯೂ ಉಪದೇಶಿಸಿದ್ದೇನೆ. ಇಂಥ ಅಶರೀರನೂ ಅವಸ್ಥಾಸಾಕ್ಷಿಯೂ ಅದ್ವಿತೀಯನೂ ಅಸಂಗನೂ ನಿತ್ಯಶುದ್ಧಬುದ್ಧಮುಕ್ತನೂ ಆದ ಆತ್ಮನೇ ಎಲ್ಲರ ಆತ್ಮನು. ವೇದಾಂತಗಳಲ್ಲಿ ಈ ಸ್ವರೂಪವನ್ನು ಬ್ರಹ್ಮವೆಂದಿದೆ. ಬ್ರಹ್ಮವೇ ಆತ್ಮನು, ಆತ್ಮನೇ ಬ್ರಹ್ಮವು. ಅದೇ ನೀನು'–ಎಂದು ಮನಮುಟ್ಟುವಂತೆ ಉಪದೇಶಿಸಿದನು. ಆಗ ಇಂದ್ರನು ಕೃತಕೃತ್ಯನಾದನು.

ಮಾನವನಿಗೆ ತನ್ನ ದೇಹವನ್ನು ಎಲ್ಲಾ ರೀತಿಯಿಂದಲೂ ಕಾಪಾಡಿಕೊಳ್ಳುವ ಅಭಿಮಾನವಿರುವದು. ಅದೇ ತಾನೆಂಬ ತಪ್ಪುತಿಳಿವಳಿಕೆಯೇ ಈ ಅಭಿಮಾನಕ್ಕೆ ಕಾರಣ. ಎಂಥ ವಿವೇಕಿಗೇ ಆಗಲಿ, ದೇಹವಿಯೋಗವೆಂಬುದು ಸಹಿಸಲಾರದ ದುಃಖವಾಗಿರುವದು. ಹಾಗೆಯೇ ದೇಹವಿರುವಾಗ ರೋಗ, ಮುಪ್ಪು, ಅಪ್ರಿಯವಾದ ಭೋಗಗಳ ಸಂಬಂಧ–ಇವು ಬೇಡವೆಂದೇ ಎನಿಸಿರುತ್ತದೆ. ಆದರೆ ದೇಹವನ್ನು ಉಳಿಸಿಕೊಂಡು ಈ ರೋಗಾದಿಗಳನ್ನೂ ಪ್ರಿಯಾಪ್ರಿಯಗಳನ್ನೂ ದಾಟಲಾಗುವದಿಲ್ಲವೆಂಬ ನಿಜವು ಅವನಿಗೆ ತಿಳಿದಿರುವದಿಲ್ಲ. ಹೆಚ್ಚಿನ ಆಸುರೀ ಸಂಪತ್ತುಳ್ಳವರಿಗಂತೂ ಈ ದೇಹಸಮೇತವಾಗಿಯೇ ಸ್ವರ್ಗಾದಿಗಳಿಗೆ ಹೋಗಬೇಕೆಂಬ ಹಂಬಲವೂ ತನ್ನ ದೇಹವು ಯಾವದೇ ಶಸ್ತ್ರಾಸ್ತ್ರಮಣಿಮಂತ್ರೌಷಧಗಳಿಂದಾಗಲಿ ರೋಗಾದಿ ನಿಮಿತ್ತದಿಂದಾಗಲಿ ನಾಶವಾಗಬಾರದೆಂಬ ಹಠವೂ ಇರುವದು. ಆದರೆ ಇವೆಲ್ಲಾ ಭಾವನೆಗಳೂ ದೇಹಾತ್ಮಜ್ಞಾನದ ಫಲವೆಂದೇ ಹೇಳದೆ ವಿಧಿಯಿಲ್ಲ. ನಿಜವಾಗಿ ನೋಡಿದರೆ ದೇಹದ ಹಂಗೇ ಇಲ್ಲದ ಅಮೃತಾತ್ಮನು ತಾನು–ಎಂಬಿದನ್ನು ತಿಳಿದದ್ದಾದರೆ ಯಾವ ಜನನ ಮರಣಗಳ ಭಯವಾಗಲಿ, ಪ್ರಿಯಾಪ್ರಿಯಗಳ ಸೋಂಕಾಗಲಿ ಇರುವದಿಲ್ಲ. ಆದ್ದರಿಂದ ಅಶರೀರನಾದ ಆತ್ಮನೇ ತಾನು–ನಾನು ಬ್ರಹ್ಮವೇ–ಎಂಬ ಮಂಗಳಕರವಾದ ಜ್ಞಾನದಿಂದ ಮುಕ್ತಿಯಾಗುವದು.

---

## ಅಶರೀರಸ್ವರೂಪಪ್ರಾಪ್ತಿಪ್ರಕಾರ

**ಓಮ್ ॥ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ॥**
**8–12–3**

**ಭಾವಾರ್ಥಃ**– ಈ ಸಂಪ್ರಸಾದನು ಈ ಶರೀರದಿಂದೆದ್ದು ಪರಂಜ್ಯೋತಿಯನ್ನು ಸೇರಿಕೊಂಡು ತನ್ನ ರೂಪದಿಂದ ಸಿದ್ಧನಾಗುತ್ತಾನೆ. ಅವನು ಉತ್ತಮಪುರುಷನು.

(ಸಂಪ್ರಸಾದನೆಂದರೆ ಆತ್ಮನು. ಸುಷುಪ್ತಿಯಲ್ಲಿ ಈ ಆತ್ಮನು ಅಶರೀರನಾಗಿದ್ದುಕೊಂಡು ಸ್ವಭಾವಸಂಪನ್ನನಾಗಿರುವನು. ಇವನೇ ಅವಿದ್ಯಾನಿಮಿತ್ತವಾಗಿ ಎಚ್ಚರಕನಸುಗಳಲ್ಲಿ ಸಶರೀರನಾಗಿ ತೋರುವನು. ಬ್ರಹ್ಮವಿದ್ಯೆಯಿಂದ ಅವಿದ್ಯೆಯು ನಾಶವಾಗಲು ಅವಿದ್ಯಾಕೃತವಾದ ದೇಹಾದಿಗಳನ್ನು ಬಿಟ್ಟು ಮೇಲೆದ್ದವನಾಗಿ ತನ್ನ ಪರಂಜ್ಯೋತಿಸ್ವರೂಪವನ್ನು ಪಡೆದುಕೊಂಡು ಉತ್ತಮಪುರುಷನೆನಿಸಿಕೊಳ್ಳುವನು.)

## 70. ವಿದ್ಯೆಯಿಂದ ಉತ್ತಮಪುರುಷಸ್ವರೂಪಪ್ರಾಪ್ತಿ

ಪ್ರಜಾಪತಿಬ್ರಹ್ಮನು ದೇವೇಂದ್ರನಿಗೆ ದಯಪಾಲಿಸಿದ ಆತ್ಮೋಪದೇಶವನ್ನು ಮತ್ತೂ ಕೆಲವು ಮಂತ್ರಗಳಿಂದ ಉಪನಿಷತ್ತಿನಲ್ಲಿ ಮುಂದುವರೆಸಿ ತಿಳಿಸಿರುತ್ತದೆ. ಅಶರೀರನಾದ ಆತ್ಮನೇ ತಾನು–ಎಂಬಿದು ಇಂದ್ರನಿಗೆ ತಿಳಿಯಬೇಕಾಗಿದ್ದ ವಿಷಯ. ಈ ತಿಳಿವಳಿಕೆಯಿಂದಲೇ ಅವನು ಶೋಕಮೋಹಾದಿಸಂಸಾರಧರ್ಮಗಳನ್ನು ದಾಟಬೇಕಾಗಿದೆ. ಅವಸ್ಥಾತ್ರಯಪರೀಕ್ಷೆಯಿಂದ ಈ ತತ್ತ್ವವನ್ನು ಅವನಿಗೆ ಮನಗಾಣಿಸಿಕೊಟ್ಟಮೇಲೂ ಪ್ರಜಾಪತಿಯು ಮತ್ತೆ ಅದೇ ಸ್ವರೂಪವನ್ನು ಉದಾಹರಣೆಯ ಮೂಲಕ ಈಗ ತಿಳಿಸಲು ಹೊರಟಿರುತ್ತಾನೆ. ಅದೇನೆಂಬುದನ್ನು ಈಗ ವಿಚಾರಮಾಡೋಣ.

ಈಗ ದೃಷ್ಟಾಂತವನ್ನು ವಿಚಾರಿಸೋಣ. ಮಳೆಯ ಗಾಳಿ, ಮಿಂಚು, ಗುಡುಗು–ಮುಂತಾದವು ಮಳೆಗಾಲದಲ್ಲಿ ತೋರಿಕೊಳ್ಳುತ್ತವೆ. ಆದರೆ ಅವುಗಳಿಗೆ ನಮಗಿರುವಂತೆ ಕೈಕಾಲು–ಮುಂತಾಗಿ ವಿಭಕ್ತವಾದ ಶರೀರವಿರುವದಿಲ್ಲ. ಇವೆಲ್ಲವೂ ಬೇಸಿಗೆಯಲ್ಲಿ ಕೇವಲ ಆಕಾಶ ರೂಪದಿಂದಲೇ ಇದ್ದುಕೊಂಡಿರುತ್ತವೆ. ಆಗ ಸೂರ್ಯನ ಶಾಖದಿಂದ ನೀರೆಲ್ಲವೂ ಬಿಸಿಯಾಗಿ ಆವಿಯಾಗಿ ಆಕಾಶವನ್ನು ಸೇರಿ ಗುಪ್ತವಾಗಿದ್ದು ಮಳೆಗಾಲವು ಬರುತ್ತಲೇ ತಮ್ಮ ತಮ್ಮ ರೂಪದಿಂದ ಹೊರತೋರಿಕೊಳ್ಳುವವು.

ಮಳೆಗಾಲವು ಪೂರೈಸಿದ ಅನಂತರ ಮತ್ತೆ ಆಕಾಶವನ್ನೇ ಸೇರಿ ತಮ್ಮ ವಿಶೇಷರೂಪಗಳನ್ನು ಕಳೆದುಕೊಂಡು ಮೊದಲು ಹೇಗೆ ಆಕಾಶರೂಪದಿಂದಿದ್ದವೋ ಹಾಗೇ ಆಗಿಬಿಡುವವು. ಇದು ಪ್ರಕೃತಿನಿಯಮವು. ಈ ಉದಾಹರಣೆಯಲ್ಲಿ ಮಳೆಯ ಗಾಳಿ–ಮುಂತಾದವುಗಳನ್ನು 'ಅಶರೀರ'ಗಳೆಂದು ಕರೆಯಬಹುದಾಗಿದೆಯಷ್ಟೆ! ಹೀಗೆಯೇ ಆತ್ಮನೂ ಯಾವಾಗಲೂ ಅಶರೀರನಾಗಿಯೇ ಇರುವನು. ಇದೇ ಅವನ ಸ್ವಭಾವವು, ಅವಿದ್ಯಾದ್ಯುಪಾಧಿಗಳ ನಿಮಿತ್ತದಿಂದ ಜಗತ್ತಿನಲ್ಲಿ ಜನ್ಮವನ್ನು ಪಡೆದಾಗ ಸಶರೀರನಾಗಿರುವಂತೆ ತೋರುವನು. ಅಥವಾ ವ್ಯಾವಹಾರಿಕದೃಷ್ಟಿಯಿಂದ ಸಶರೀರನಾಗಿರುವನು–ಎಂದೇ ಹೇಳಬಹುದು. ಹೀಗೆ ನಾನಾ ಶರೀರರೂಪಗಳಿಂದ ಒಬ್ಬ ಆತ್ಮನೇ ತೋರಿಕೊಳ್ಳುತ್ತಿರುವನಾದರೂ ಅಜ್ಞಾನಿಗಳು ಶರೀರಭೇದದಿಂದ ಪುರುಷಭೇದಗಳೂ ನಿಜವೆಂದೇ ಎಣಿಸುವರು. ಆದರೆ ಪರಮಾರ್ಥವೇನೆಂದರೆ ಶರೀರಗಳು ತಾತ್ಕಾಲಿಕವಾಗಿ ತೋರಿ ಮರೆಯಾಗುವವೇ ಹೊರತು ಅವು ಆತ್ಮನ ಸ್ವರೂಪಕ್ಕೆ ಸೇರಿಯೇ ಇಲ್ಲ. ಅವು ತೋರಿಕೊಂಡಾಗಲೂ ಆತ್ಮನು ಅಶರೀರನಾಗಿಯೇ ಇದ್ದನು. ಹೇಗೆ ಪ್ರತಿಬಿಂಬಗಳು ತೋರಿಕೊಂಡರೂ ವ್ಯಕ್ತಿಯೊಬ್ಬನೇ ಆಗಿರುವನೋ ಗುಡುಗು, ಮಿಂಚು, ವಾಯುಗಳು ಎದ್ದು ಕಾಣಿಸಿಕೊಂಡರೂ ಆಕಾಶವೊಂದೇ ಆಗಿದ್ದುಕೊಂಡಿರುವದೋ ಹಾಗೆ ಆತ್ಮನು ಸಶರೀರನಾಗಿ ತೋರಿದಾಗಲೂ ಒಬ್ಬನೇ ಆಗಿರುವನು. ಪ್ರತಿದಿನವೂ ಸುಷುಪ್ತಿಯಲ್ಲಿ ನಾವು ಅಶರೀರರಾಗಿದ್ದುಕೊಂಡೇ ಮತ್ತೆ ಮತ್ತೆ ಜಾಗ್ರತ್‌ಸ್ವಪ್ನಗಳಿಗೆ ಎದ್ದು ಬರುತ್ತಿರುವೆವಲ್ಲವೆ? ಈ ಅನುಭವವೇ ನಾವು ಎಂದಿಗೂ ಅಶರೀರರೆಂಬುದಕ್ಕೆ ಪ್ರಮಾಣವಾಗಿರುತ್ತವೆ. ಆಕಾಶವೆಂಬ ಮಹಾಭೂತವೇ ವಾಯು, ತೇಜಸ್ಸು – ಮುಂತಾದ ರೂಪದಿಂದಲೂ ಪ್ರಕಟವಾಗುತ್ತವೆ. ಆದರೆ ಆ ವಾಯು, ತೇಜಸ್ಸು–ಮುಂತಾದವುಗಳು ಲಯವಾಗುವಾಗ ಆಕಾಶದಲ್ಲೇ ಒಂದಾಗಿ ಬಿಡುತ್ತವೆ. ಈ ಅನನ್ಯತ್ವವನ್ನು ಅನುಸಂಧಾನಮಾಡಿದರೂ ಸಾಕು. ಆತ್ಮನು ಅಶರೀರನೆಂಬುದನ್ನು ಅನುಭವಕ್ಕೆ ತಂದುಕೊಳ್ಳಬಹುದು. ಆತ್ಮನು ಎಂದಿಗೂ ಇಲ್ಲವಾಗುವದಿಲ್ಲ, ಅವನು ಸದ್ರೂಪನೇ. ಸೃಷ್ಟಿಕಾಲಕ್ಕೆ ಆತ್ಮನಾಗಿಯೇ ಇದ್ದುಕೊಂಡು ನಾಮರೂಪಗಳಾಗಿಯೂ ತೋರಿಕೊಳ್ಳುವನು. ಸಮುದ್ರವು ತಾನು ಸಮುದ್ರವಾಗಿದ್ದುಕೊಂಡೇ ಅಲೆ, ತೆರೆ, ನೊರೆ, ಗುಳ್ಳೆ–ಎಂದು ವ್ಯವಹರಿಸಲ್ಪಡುವಂತೆಯೇ ಆತ್ಮನೂ ಸೃಷ್ಟಿಕಾಲಕ್ಕೆ ನಾಮರೂಪೋಪಾಧಿಗಳಿಂದ ಶರೀರಿಗಳಾದ ಜೀವರುಗಳಾಗಿಯೂ ಅಚೇತನ ವಸ್ತುಗಳಾಗಿಯೂ ವ್ಯವಹರಿಸಲ್ಪಡುವನು. ಹೀಗೆ ಆತ್ಮನು ಅಶರೀರನೆಂಬುದನ್ನು ಗಟ್ಟಿಗೊಳಿಸಿಕೊಳ್ಳಬೇಕು.

ಈಗ ಆತ್ಮವಿದ್ಯೆಯಿಂದಾಗುವ ಪ್ರಯೋಜವನ್ನು ವಿಚಾರಮಾಡೋಣ. ನಾವು ಚೇತನರೆಂದೂ ಜೀವಾತ್ಮರೆಂದೂ ಕರ್ತೃಭೋಕ್ತೃಗಳೆಂದೂ ನಮಗೆ ತಿಳಿದಿದೆ. ಆದರೆ

ನಾವು ನಿತ್ಯರೆಂದೂ ಅಸಂಸಾರಿಗಳೆಂದೂ ಸಮಷ್ಟಿಯಾಗಿ ಒಬ್ಬರೇ–ಎಂದೂ ತಿಳಿದಿಲ್ಲ. ಈ ಅವಿದ್ಯೆಯನ್ನೇ ನಾವು ಆತ್ಮವಿದ್ಯೆಯಿಂದ ಕಳೆದುಕೊಂಡು 'ಉತ್ತಮ ಪುರುಷ'ರಾಗಬೇಕಾಗಿದೆ. ಈಗಿರುವಂತೆ ನಾವು ಪುರುಷರೂ ಪರಿಚ್ಛಿನ್ನರೂ ಆಗಿದ್ದರೂ ಇಷ್ಟೇ ತಿಳಿವಳಿಕೆಯಿಂದ ಮುಕ್ತರಾಗಲು ಸಾಧ್ಯವಿಲ್ಲ. ವ್ಯವಹಾರಪ್ರಪಂಚದಲ್ಲಿ ಇಷ್ಟೇ ತಿಳಿವಳಿಕೆಯು ಸಾಕಾದ್ದರಿಂದ ದೇಹವಿರುವವರೆಗೆ ಬದುಕನ್ನು ಸಾಗಿಸಬಹುದು. ಆದರೆ ವಿವೇಕಿಯಾದವಿಗೆ ಈ ದೇಹವನ್ನು ಬಿಟ್ಟನಂತರ ನಾನು ಯಾರು? ಇದು ಬರುವ ಮುಂಚೆಯೂ ನಾನೇನಾಗಿದ್ದೆನು? ಎಂಬ ಯೋಚನೆಯೂ ಬರಬಹುದಲ್ಲವೆ? ಇದಕ್ಕೆ ಉತ್ತರವನ್ನು ಅಧ್ಯಾತ್ಮಶಾಸ್ತ್ರದಲ್ಲಿ ಮಾತ್ರವೇ ಕಂಡುಕೊಳ್ಳಬೇಕಾಗಿದೆ. ಆದರೆ ಅದು ಕೇವಲ ನಂಬಿಕೆಯ ಮೇಲೆ ನಿಂತಿರುವ ಶಾಸ್ತ್ರವಲ್ಲ. ಅದು ಅನುಭವಶಾಸ್ತ್ರವು. ಸಾರ್ವತ್ರಿಕವಾಗಿ ಆಗುವ ಮಾನವನ ಪೂರ್ಣಾನುಭವವನ್ನು ವಿಚಾರಮಾಡಿ ನಮ್ಮ ಸ್ವರೂಪರಹಸ್ಯವನ್ನು ಅದು ತಿಳಿಸಿಕೊಡುತ್ತದೆ. ಪ್ರಾಪಂಚಿಕರಿಗೆ ಅದು ಬೇಡವಾಗಿರಬಹುದು. ಆದರೇನು? ವಿವೇಕಿಗಳಿಗೆ ಈ ಶಾಸ್ತ್ರದ ನೆರವು ಬೇಕಾಗಿದೆ. ಅದರ ಬೆಂಬಲದಿಂದಲೇ ನಮ್ಮ ಸ್ವರೂಪವನ್ನೂ ಹಾಗೆಯೇ ನಮಗೆ ಗೋಚರವಾಗುತ್ತಿರುವ ಚೇತನಾಚೇತನರೂಪವಾದ ಇಡಿಯ ಜಗತ್ತಿನ ತತ್ತ್ವವನ್ನೂ ನಿರ್ಧರಿಸಬೇಕಾಗಿದೆ. ಆದ್ದರಿಂದ ಉಪನಿಷತ್ತು ಈಗ ಪ್ರಜಾಪತಿಯ ವಾಕ್ಯದ ನೆಪದಿಂದ 'ಉತ್ತಮಪುರುಷ'ನ ಸ್ವರೂಪವನ್ನೂ ಅವನ ಜ್ಞಾನದಿಂದ ಜೀವನೆಂಬ ಸಾಮಾನ್ಯ ಪುರುಷನು ಪರಂಜ್ಯೋತಿಯಾದ ಉತ್ತಮಪುರುಷನೇ ಆಗಿ ನೆಲೆನಿಲ್ಲುವನೆಂದೂ ಈ ವಿಧವಾದ ಮುಕ್ತಿಯು ಅಪ್ರಾಪ್ತಪ್ರಾಪ್ತಿಯಾಗದೆ ಅಜ್ಞಾನದಿಂದ ಅಪ್ರಾಪ್ತವಾಗಿದ್ದುದು ಜ್ಞಾನದಿಂದ ಪ್ರಾಪ್ತಿಯಾದಂತೆ–ಎಂದೂ ತಿಳಿಸಲಿದೆ.

ದೃಷ್ಟಾಂತದಲ್ಲಿ ತಿಳಿಸಿದ ಮಳೆಯಗಾಳಿಯು ಮುಂದೆ ನೀರಿನ ಹನಿಗಳ ಸಮೂಹವಾದ ಮೋಡಗಳ ರೂಪವನ್ನು ಹೊಂದಿ ಅನಂತರ ಭೂಮಿಯ ಮೇಲೆ ಬಿದ್ದು ಹರಿದು ಮತ್ತೆ ಸಮುದ್ರವನ್ನು ಸೇರುವದು. ಪುನಃ ಆವಿಯಾಗಿ ಮಳೆಯ ಗಾಳಿಯಾಗವುದು. ಹಾಗೆಯೇ ಎಚ್ಚರದಲ್ಲಿರುವ ಜೀವನು ನಾನು ಇಂಥವನು, ಇಂಥವನ ಮಗನು, ಇಂಥ ವರ್ಷದಲ್ಲಿ ಹುಟ್ಟಿದೆನು, ಈಗ ಮುದುಕನಾಗುತ್ತಿದ್ದೇನೆ, ಮುಂದೆ ದೇಹವನ್ನು ಬಿಡುವೆನು–ಎಂದು ಚಿಂತಿಸುತ್ತಾ ಶರೀರವು ಬಿದ್ದುಹೋದ ಅನಂತರ ಮಣ್ಣಾಗಿ ಅಥವಾ ಬೂದಿಯಾಗಿಬಿಡುವನು. ದೇಹವಿಯೋಗದಿಂದ ತಾನು ನಾಶವಾದೆನು–ಎಂದೇ ಭಾವಿಸುವನು. ಆದರೆ ನಿಜವೇನು? ಅವನು ಎಂದಿಗೂ ನಾಶವಾಗದೆ ಅಭಿಮಾನದಿಂದಲೂ ವಿದ್ಯಾಕರ್ಮಪೂರ್ವಪ್ರಜ್ಞೆಗಳೆಂಬ ಗಂಟಿನೊಡನೆಯೂ ಬೇರೊಂದು ದೇಹವನ್ನು ಧರಿಸಿ ಅಲ್ಲಿ ಮತ್ತೆ ತೋರಿಕೊಳ್ಳುವನು. ಪ್ರತಿವರ್ಷವೂ

ಮಳೆಗಾಲವು ಬಂದ ಕೂಡಲೆ ಮೋಡಗಳು ತೋರಿಕೊಳ್ಳುವಂತೆಯೇ ಇವನ ಗತಿಯಾಗಿರುವದು. ಆದರೆ ಈ ಜೀವನಿಗೆ ಇನ್ನೊಂದು ಮಾರ್ಗವೂ ಇದೆ. ಏನೆಂದರೆ ತಾನು ಶರೀರವನ್ನು ಧರಿಸಿದ್ದಾಗಲೇ ತಾನು ಯಾರು? ಎಂಬಿದನ್ನು ವಿಚಾರಮಾಡಿ ಭಗವದನುಗ್ರಹದಿಂದಲೂ ಗುರುಗಳ ಮಾರ್ಗದರ್ಶನದಿಂದಲೂ ಅಧ್ಯಾತ್ಮಶಾಸ್ತ್ರದ ನೆರವಿನಿಂದಲೂ ಸ್ವರೂಪಜ್ಞಾನವನ್ನು ಪಡೆದುಕೊಳ್ಳಬಹುದು. ಇದು ಹುಟ್ಟಿದ ಜೀವರುಗಳಿಗೆಲ್ಲ ಸ್ವಭಾವಸಿದ್ಧವಾದ ಹಕ್ಕಾದರೂ ಉಪಯೋಗಿಸಿಕೊಳ್ಳುವವನು ಕೋಟಿಗೆ ಒಬ್ಬನೂ ಸಿಗಲಾರನು. ಇರಲಿ. ಈ ಸ್ವರೂಪಜ್ಞಾನವು ಬದುಕಿರುವಾಗಲೇ ಲಭ್ಯವಾಗಿಬಿಡುವದರಿಂದ ದೇಹವನ್ನೇನೂ ಲೆಕ್ಕಕ್ಕೇ ತೆಗೆದುಕೊಳ್ಳದೆ ಸ್ವರೂಪನಿಷ್ಪತ್ತಿಯನ್ನು ಸಾಧಿಸಿಕೊಂಡು ಉತ್ತಮಪುರುಷನಾಗಿಬಿಡಬಹುದು. ಆಗಲೇ ಶರೀರವನ್ನು ಬಿಟ್ಟು ಮೇಲೇಳುವ ಯೋಗ್ಯತೆಯುಂಟಾಗಿ ಪ್ರಿಯಾಪ್ರಿಯಗಳ ಸೋಂಕು ಇಲ್ಲದಂತೆ ಆಗಿಬಿಡುವದು. ಈ ರೀತಿಯಾದ ಮೇಲೇಳಿಕೆಯು ಜ್ಞಾನದ ಮೂಲಕವೇ ಹೊರತು ಮತ್ತೇನೂ ಕ್ರಿಯಾರೂಪವಲ್ಲ. ಇದನ್ನೇ ಶ್ರುತಿಯಲ್ಲಿ ಹೀಗೆಂದಿದೆ: ''ಈ ಶರೀರದಿಂದ ಮೇಲಕ್ಕೆದ್ದು ಸ್ವಯಂಜ್ಯೋತಿರೂಪನಾಗಿ ನೆಲೆನಿಂತು ತನ್ನ ಸ್ವಸ್ವರೂಪವನ್ನು ಹೊಂದಿ ಮುಕ್ತನಾಗುವಿಕೆಯೆಂಬ ಪರಮೈಶ್ವರ್ಯವು ಈ ಜೀವನದು. ಇದು ಆತ್ಮಜ್ಞಾನದಿಂದಲೇ ಲಭಿಸತಕ್ಕದ್ದು'' ಎಂಬಿದು ಶ್ರುತಿಯ ಅಭಿಪ್ರಾಯ.

ಈಗ ಉತ್ತಮಪುರುಷನಾಗುವದೆಂದರೇನು? ಉತ್ತಮಪುರುಷನೆಂದರೆ ಯಾರು? ವಿಚಾರಿಸೋಣ. ವ್ಯಾಕರಣಶಾಸ್ತ್ರದಂತೆ ಉತ್ತಮಪುರುಷ (First person) ನು ತಾನೇ ಆಗಿರುವನು. ನಾನಲ್ಲದ್ದು 'ನೀನು' ಎನಿಸಿಕೊಂಡರೆ ಮಧ್ಯಮಪುರುಷನೆಂದೂ 'ಅದು' ಎನಿಸಿಕೊಂಡರೆ ಪ್ರಥಮಪುರುಷವೆಂದೂ ಸಂಜ್ಞೆಮಾಡಿದ್ದಾರೆ. ಅಧ್ಯಾತ್ಮಶಾಸ್ತ್ರದಂತೆಯೂ ಎರಡು ಮೂರನೆಯ (Second & Third person) ಪುರುಷರು ಆತ್ಮರಲ್ಲ. ಏಕೆಂದರೆ ಆತ್ಮನೆಂದರೆ ತಾನು ಎಂದರ್ಥ. ತಾನಲ್ಲದ್ದನ್ನು ಅನಾತ್ಮವೆನ್ನುವರು. ಹೀಗೆ ಬ್ರಹ್ಮಾಂಡವೆಲ್ಲವೂ ತನು ಎನಿಸಿಕೊಳ್ಳದೆ ತನ್ನದು–ಎಂದೋ ಇದು ಎಂದೋ ಕರೆಯಲ್ಪಡುತ್ತದೆ. ಈ ಬ್ರಹ್ಮಾಂಡವೇ ಪ್ರಲಯಕಾಲದಲ್ಲಿ ಆತ್ಮನಲ್ಲಿ ಅಡಗಿಕೊಂಡಿದ್ದು ಸೃಷ್ಟಿಯಕಾಲಕ್ಕೆ ಹೊರಬರಲಿದೆ. ಹೊರಬಂದಾಗ ಇದನ್ನು ವ್ಯಕ್ತ ಅಥವಾ ಕ್ಷರ–ಎನ್ನುವರು. ಅಡಗಿಕೊಂಡು ಬೀಜರೂಪವಾಗಿದ್ದಾಗ ಅಕ್ಷರ–ಎನ್ನುವರು. ಆತ್ಮನು ಇವೆರಡೂ ಅಲ್ಲ–ಎಂದರೆ ಕ್ಷರಕ್ಕಿಂತಲೂ ಅಕ್ಷರಕ್ಕಿಂತಲೂ ವಿಲಕ್ಷಣನಾದವನು. ಆಕಾಶವು ಮಳೆಯಗಾಳಿಗಿಂತಲೂ ಮೋಡಕ್ಕಿಂತಲೂ ವಿಲಕ್ಷಣವು . ಬೇರೆ–ಎಂದರೆ ಹೇಗೋ ಹಾಗೆ ಇಲ್ಲಿಯೂ ತಿಳಿಯಬೇಕು. ಭಗವದ್ಗೀತೆಯಲ್ಲಿ ಈ ಆತ್ಮತತ್ತ್ವವನ್ನು ಪುರುಷೋತ್ತಮನೆಂದೂ ಆ ಪುರುಷೋತ್ತಮನು ನಾನೇ–ಎಂದೂ ಭಗವಂತನೇ

ಹೇಳಿರುತ್ತಾನೆ. ಅವನು ಒಬ್ಬನೇ–ಎಂಬಿದೇ ವೇದಾಂತಸಿದ್ಧಾಂತವು; ಹಾಗೂ ಗುಹ್ಯತಮವಾದ ಶಾಸ್ತ್ರವು. ಪ್ರಜಾಪತಿಬ್ರಹ್ಮನು ದೇವೇಂದ್ರನಿಗೆ ಪ್ರತಿಪರ್ಯಾಯದಲ್ಲಿಯೂ ಈ ಆತ್ಮತತ್ತ್ವವನ್ನೇ ಉಪದೇಶಿಸಿ ಅವನನ್ನು ದೇಹಾಭಿಮಾನದಿಂದ ಬಿಡಿಸಿ ಮೇಲಕ್ಕೆಬ್ಬಿಸಿ ಅಶರೀರಾತ್ಮಸ್ವರೂಪವನ್ನು ತಿಳಿಸಿಕೊಟ್ಟು ಉದ್ಧಾರ ಮಾಡಿರುತ್ತಾನೆ.

ಹೀಗೆ ಮುಕ್ತನಾದವನು ತನ್ನ ಪರಿಚ್ಛಿನ್ನ ಶರೀರಾಭಿಮಾನದಿಂದ ಬಿಡುಗಡೆಯನ್ನು ಹೊಂದಿಬಿಟ್ಟಿರುವದರಿಂದ ಸರ್ವಾತ್ಮಕನಾಗಿ ದೇವೇಂದ್ರಾದಿಗಳಿಗೂ ತಾನೇ ಆತ್ಮನಾಗಿದ್ದು ಕೊಂಡಿರುವದರಿಂದ ಆಯಾ ಶರೀರಿಗಳಿಂದ ಎಲ್ಲಾ ವಿಧವಾದ ಭೋಗಗಳನ್ನೂ ಅನುಭವಿಸುವನು. ಅಣಿಮಾದ್ಯೈಶ್ವರ್ಯಗಳೂ ಸಂಕಲ್ಪಮಾತ್ರದಿಂದಲೇ ಬಂದೊದಗುವ ಸ್ತ್ರೀಯರು, ವಾಹನಗಳು, ಬಂಧುಮಿತ್ರರಾಗಿಯಾಗಿ ಎಲ್ಲ ರೀತಿಯ ಸುಖಗಳಿಂದಲೂ ಸಂಪನ್ನನಾಗುವನು. ದೇಹಪಾತವಾಗುವವರೆಗೂ ಲೌಕಿಕಸುಖಗಳನ್ನೂ ಉನ್ನತವಾಗಿ ಪಡೆಯುವನು. ಆದರೆ ಜ್ಞಾನವುಂಟಾಗುವವೇಳೆಗೆ ಅವನ ಪಾಪಗಳೆಲ್ಲವೂ ಸುಟ್ಟು ಬೂದಿಯಾಗಿ ಬಿಟ್ಟಿರುವದರಿಂದ ದುಃಖಗಳಾವುವೂ ಅವನನ್ನು ಮುಟ್ಟುವದಿಲ್ಲ. ತನ್ನ ದೇಹವನ್ನೇ ಅವನು ಸ್ಮರಿಸುವದಿಲ್ಲವಾದ್ದರಿಂದ ದೇಹಸಂಬಂಧನಿಮಿತ್ತವಾದ ದುಃಖಗಳೂ ಆಗುವಂತಿಲ್ಲ. ನಿಷಿದ್ಧಾಚರಣೆ, ಪಾಪಾಚರಣೆಗಳನ್ನೂ ಜ್ಞಾನಕ್ಕೆ ಮುಂಚೆಯೇ ತ್ಯಜಿಸಿರುವನಾದ್ದರಿಂದ ಜ್ಞಾನವಾದ ಮೇಲೆ ಎಂದಿಗೂ ಅವುಗಳನ್ನು ಕೈಗೊಳ್ಳಲಾರನು. ಅಣಿಮಾದ್ಯೈಶ್ವರ್ಯಗಳು ಜ್ಞಾನಿಗೆ ಸ್ವಾಧೀನದಲ್ಲಿದ್ದರೂ ಅವುಗಳನ್ನು ಅವನು ಉಪಯೋಗಿಸದೆಯೂ ಇರಬಹುದು. ಏಕೆಂದರೆ ಜ್ಞಾನಬಲದಿಂದ ಆಪ್ತಕಾಮನಾದ ಆತನಿಗೆ ಕಾಮಗಳೇ ಇರಲಾರವು. ಇಂಥ ಪರಮಪದೈಶ್ವರ್ಯವು ಆತ್ಮವಿದ್ಯೆಯಿಂದ ದೊರಕುವದು.

---

## ಬ್ರಹ್ಮಲಕ್ಷಣ

**ಓಮ್॥ ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಮ್ ಸ ಆತ್ಮಾ॥ 8–14–1**

**ಭಾವಾರ್ಥ:**– ಆಕಾಶನೆಂಬುವನು ನಾಮರೂಪಗಳ ನಿರ್ವಾಹಕನು. ಅವುಗಳು ಏತರೊಳಗೆ (ಇವೆಯೋ) ಅದು ಬ್ರಹ್ಮವು. ಅದು ಅಮೃತವು. ಅದು ಆತ್ಮನು.

(ಉಪನಿಷತ್ತಿನ ಉಪಸಂಹಾರಭಾಗವಾದ ಈ ಖಂಡದಲ್ಲಿ ಮತ್ತೊಮ್ಮೆ ಬ್ರಹ್ಮಲಕ್ಷಣವನ್ನು ಹೇಳಿದೆ. ನಾಮರೂಪಗಳಿಗೆ ಆಧಾರವೂ ಅವುಗಳಿಗಿಂತ ವಿಲಕ್ಷಣವೂ ಆದ ಆಕಾಶವೆಂಬ ಹೆಸರಿನ ಬ್ರಹ್ಮವು ಅಮೃತವಾಗಿರುವದು. ಅದೇ ಎಲ್ಲದರ ಆತ್ಮನಾಗಿಯೂ ಇರುವದು. ಅದನ್ನು ನಾಮರೂಪಗಳೆಂಬ ಉಪಾಧಿಯ ಮೂಲಕ ಗುರುತಿಸಿ ಅನಂತರ ಅದು ನಾಮರೂಪರಹಿತವಾದ ಪರಿಶುದ್ಧವಾದ ಆತ್ಮನೆಂದರಿತು ಅಮೃತರಾಗಬೇಕು– ಎಂದಭಿಪ್ರಾಯ)

# 71. ಬ್ರಹ್ಮಧ್ಯಾನಕ್ಕಾಗಿ ಲಕ್ಷಣನಿರ್ದೇಶ

ಪ್ರಜಾಪತಿಬ್ರಹ್ಮನು ಇಂದ್ರವಿರೋಚರನರಿಗೆ ಉಪದೇಶಿಸಿದ ಆತ್ಮವಿದ್ಯೆಯು ಈಗ ಪೂರ್ಣವಾಗುತ್ತಿದೆ. ಉಪನಿಷತ್ತು ತಾನು ತಿಳಿಸಬೇಕಾಗಿದ್ದ ಬ್ರಹ್ಮವನ್ನು ಆತ್ಮನೆಂದು ಮತ್ತೊಮ್ಮೆ ನಿರ್ದೇಶಿಸಿ ಈಗ ಉಪಸಂಹಾರಮಾಡುತ್ತಿದೆ. ಗುರುಶಿಷ್ಯ ಸಂವಾದರೂಪದಿಂದ ಈವರೆಗೆ ವಿಸ್ತರಿಸಲ್ಪಟ್ಟ ಬ್ರಹ್ಮವಿದ್ಯೆಯನ್ನು ಇನ್ನು ಮುಂದೆ ಧ್ಯಾನಮಾಡುವವರ ಸಲುವಾಗಿಯೂ ಬೋಧಿಸಲು ಹೊರಟಿದೆ. ಧ್ಯಾನಮಾಡುವವನಿಗೆ ಧ್ಯೇಯದ ಪರಿಚಯವು ಅಗತ್ಯ. ಬ್ರಹ್ಮವನ್ನು ಧ್ಯೇಯವಾಗಿ ಇಟ್ಟುಕೊಂಡು ಈಗ ವರ್ಣಿಸಲಾಗುವದು. ಯಾರಿಗೆ ಬ್ರಹ್ಮವನ್ನು ಇದ್ದದ್ದು ಇದ್ದಂತೆ ತಿಳಿಯಲು ಸಾಧ್ಯವಾಗಲಾರದೋ ಅಂಥವರು ಅದೇ ಬ್ರಹ್ಮವನ್ನು ಧ್ಯಾನಮಾಡಿಯೂ ಉದ್ಧಾರವಾಗಬಹುದಾಹಗಿದೆ. ಜ್ಞಾನಕ್ಕಿಂತ ಧ್ಯಾನವು ಸ್ವಲ್ಪ ಕಡಿಮೆಯೆನಿಸಿದರೂ ಪ್ರಾಪಂಚಿಕರ ದೃಷ್ಟಿಯಿಂದ ಬ್ರಹ್ಮದ ಧ್ಯಾನವು ಅತ್ಯಂತಮಿಗಿಲಾದುದೇ ಸರಿ. ಧ್ಯಾನಕ್ಕಾಗಿ ಬ್ರಹ್ಮವನ್ನರಿಯಲಿಚ್ಛಿಸುವವರಿಗೂ ಅದು ಉಪನಿಷತ್ತಿನ ಮೂಲಕವೇ ತಿಳಿದುಬರಬೇಕು. ಆದ್ದರಿಂದ ಈಗ ಬ್ರಹ್ಮಸ್ವರೂಪವನ್ನು ಉಪಾಸಕರಿಗಾಗಿ ವರ್ಣಿಸಿ ತಿಳಿಸಲಾಗುವದು.

ಶ್ರುತಿಗಳಲ್ಲಿ ಬ್ರಹ್ಮವನ್ನು ಆಕಾಶವೆಂದು ಕರೆಯಲಾಗಿದೆ. ಸಾಮಾನ್ಯವಾಗಿ ಆಕಾಶವೆಂಬುದು ಪಂಚಮಹಾಭೂತಗಳಲ್ಲಿ ಒಂದರ ಹೆಸರು. ಆದರೆ ಅದು ಬ್ರಹ್ಮವನ್ನು ಚೆನ್ನಾಗಿ ಹೋಲುತ್ತದೆಯಾದ್ದರಿಂದ ಅದೇ ಶಬ್ದದಿಂದಲೇ ಬ್ರಹ್ಮವನ್ನು ನಿರ್ದೇಶಿಸುವುದೂ ಉಂಟು. ಪ್ರಕರಣಾನುಗುಣವಾಗಿ ಆಕಾಶ ಶಬ್ದಾರ್ಥವನ್ನು ತಿಳಿಯಲೇಬೇಕು. ಸೈಂಧವಶಬ್ದಕ್ಕೆ ಉಪ್ಪು, ಕುದುರೆ–ಎಂಬೆರಡು ಅರ್ಥಗಳಿದ್ದರೂ ಭೋಜನಸಮಯವಾದರೆ ಉಪ್ಪೆಂಬ ಅರ್ಥವನ್ನೂ ಯುದ್ಧಕಾಲವಾದರೆ ಕುದುರೆಯೆಂಬರ್ಥವನ್ನೂ ಹೇಗೆ ಗ್ರಹಿಸಬೇಕೋ ಹಾಗೆಯೇ ಇಲ್ಲಿ ಆಕಾಶಶಬ್ದಕ್ಕೆ ಪ್ರಕರಣಕ್ಕೆ ಹೊಂದುವಂತೆ ಬ್ರಹ್ಮವೆಂಬರ್ಥವನ್ನು ಗ್ರಹಿಸಬೇಕು. •ಆಕಾಶವು ಅಶರೀರವಾಗಿರುವಂತೆಯೇ, ಸೂಕ್ಷ್ಮವಾಗಿರುವಂತೆಯೇ ಬ್ರಹ್ಮವೂ ಅಶರೀರವೂ

ಸೂಕ್ಷ್ಮವೂ ಆಗಿರುತ್ತದೆ. ಇಂಥ ಆಕಾಶಶಬ್ದವಾಚ್ಯವಾದ ಬ್ರಹ್ಮವು ನಾಮರೂಪಗಳನ್ನು ನಿರ್ವಹಿಸುತ್ತದೆ–ಎಂದು ಶ್ರುತಿಯಲ್ಲಿ ತಿಳಿಸಿದೆ. ನಾಮರೂಪನಿರ್ವಹಣವೆಂದರೆ ಅವುಗಳನ್ನು ವ್ಯಾಕರಣಮಾಡುವದು. ವ್ಯಾಕರಣಮಾಡುವದೆಂದರೆ ಶಬ್ದಪ್ರತ್ಯಯಗಳಿಂದ ವ್ಯವಹಾರ ಯೋಗ್ಯವಾಗುವಂತೆ ಮಾಡುವಿಕೆಯು. ಹೇಗೆ ನೀರು ನೊರೆ, ಗುಳ್ಳೆ, ಅಲೆ–ಎಂದು ಆಯಾ ತೋರಿಕೆಯ ಕಾಲಕ್ಕೆ ವ್ಯವಹರಿಸಲ್ಪಡುವದೋ, ನಿಜವಾಗಿ ಅಲೆ–ಮುಂತಾದವುಗಳೆಲ್ಲವೂ ನೀರೇ ಆಗಿವೆಯೋ ಆದರೂ ನೀರೆಂಬುದ ಅಲೆ, ಗುಳ್ಳೆಗಳಿಗೆ ಆಧಾರವಾಗಿದ್ದು–ಆಯಾ ಹೆಸರಿನಿಂದ ವ್ಯವಹರಿಸುವದಕ್ಕೆ ಕಾರಣವಾಗಿದೆಯೋ ಹಾಗೆಯೇ ಬ್ರಹ್ಮವೂ ವಿವಿಧನಾಮರೂಪಾಕಾರಗಳಿಂದ ಚಿತ್ರವಿಚಿತ್ರವಾಗಿ ಹರಡಿಕೊಂಡು ಮನಮೋಹಕವಾಗಿ ತೋರುತ್ತಿರುವ ಚರಾಚರಪ್ರಪಂಚವೆಲ್ಲಕ್ಕೂ ಆಧಾರವಾಗಿದೆ. ಬ್ರಹ್ಮವಿಲ್ಲವಾದರೆ ನಾಮರೂಪಗಳು ತೋರಿಕೊಳ್ಳಲೇ ಆರವು. ಚಿನ್ನವಿಲ್ಲದೆ ಒಡವೆಯು ಹೇಗೆ ಇರಲಾರದೋ ಅಥವಾ ಹಗ್ಗವಿಲ್ಲದೆ ಹಾವು ತೋರಿಕೊಳ್ಳಲಾರದೋ ಹಾಗೆ ನಾಮರೂಪಕ್ರಿಯಾತ್ಮಕವಾದ ಪ್ರಪಂಚದ ತೋರಿಕೆಯೆಲ್ಲವೂ ಬ್ರಹ್ಮದ ಅಧೀನವಾಗಿರುವದು. ಇದನ್ನೇ ನಾಮರೂಪನಿರ್ವಹಣವೆಂದು ಕರೆಯಲಾಗಿದೆ. ಇದರ ಪ್ರಯೋಜನವೇನೆಂದರೆ ಅಗ್ರಾಹ್ಯವೂ ಅಪ್ರಮೇಯವೂ ವಾಙ್ಮನಸ್ಸುಗಳನ್ನು ಮೀರಿದ್ದೂ ಆಗಿರುವ ಬ್ರಹ್ಮವನ್ನು ಈ ನಾಮರೂಪಗಳ ತೋರಿಕೆಯು ಸ್ಫುಟಗೊಳಿಸುತ್ತದೆ. ಆದ್ದರಿಂದ ಈ ನಾಮರೂಪಗಳನ್ನೆಲ್ಲ ಬ್ರಹ್ಮಕ್ಕೆ ಉಪಾಧಿಯೆನ್ನುವರು. ಉಪಾಧಿಯ ವೈಶಿಷ್ಟ್ಯವೇನೆಂದರೆ ಅದು ಮನುಷ್ಯನನ್ನು ಗುರುತಿಸಲು ಸಹಾಯವಾಗುತ್ತದೆ. ಮನುಷ್ಯನಿಲ್ಲದೆ ನೆರಳಿಲ್ಲ, ನೆರಳಿಲ್ಲವಾದರೂ ನೆರಳು ತೋರುತ್ತಿದ್ದರೂ ಎಲ್ಲಿ ತೋರುತ್ತದೋ ಆ ಮೂಲವಸ್ತುವಿಗೆ ತನ್ನ ಗುಣದೋಷಗಳನ್ನು ಅಂಟಿಸಿರುವದಿಲ್ಲ, ಆದರೆ ಆ ಮೂಲವಸ್ತುವನ್ನು ಗುರುತಿಸಲು ಸಹಾಯಕವಾಗಿರುತ್ತದೆ. ಹೇಗೆಂದರೆ ಮನುಷ್ಯನ ನೆರಳು ತನ್ನ ಉದ್ದ, ಗಾತ್ರ, ಬಣ್ಣಗಳನ್ನು ಮನುಷ್ಯನಿಗೆ ಅಂಟಿಸಿರುವದಿಲ್ಲ, ಆದರೆ ಅದು ಮನುಷ್ಯನನ್ನು ಗುರುತಿಸಲು ಸಹಾಯಕವಾಗುತ್ತದೆ. ಮನುಷ್ಯನಿಲ್ಲದೆ ನೆರಳಿಲ್ಲ, ನೆರಳಿಲ್ಲವಾದರೂ ನೆರಳು ತೋರುತ್ತಿದ್ದರೂ ಮನುಷ್ಯನ ಅಸ್ತಿತ್ವಕ್ಕಾಗಲಿ, ಏಕತ್ವಕ್ಕಾಗಲಿ ಹಾನಿಯಿಲ್ಲ. ಈ ಅಭಿಪ್ರಾಯದಂತೆ ಮನುಷ್ಯನು ನೆರಳಿನ ನಿರ್ವಾಹಕನು–ಎಂದರೆ ಏನರ್ಥವೋ ಬ್ರಹ್ಮವು ನಾಮರೂಪನಿರ್ವಾಹಕವೆಂದರೂ ಅದೇ ಅಭಿಪ್ರಾಯ. ಹೀಗೆ ಬ್ರಹ್ಮವನ್ನು ಚಿಂತಿಸುವವರಿಗೆ ಅದನ್ನು ಪರಿಚಯಿಸುವದಕ್ಕಾಗಿ ನಾಮರೂಪನಿರ್ವೋಢೃವಾದ ಬ್ರಹ್ಮವೆಂಬುದು ಆತ್ಮನೇ–ಎಂದು ತಿಳಿಸಲಾಗಿದೆ.

ಈಗ ಬ್ರಹ್ಮವನ್ನು ಆತ್ಮನೆಂದೇಕೆ ಕರೆದಿದೆ? ಎಂಬಿದನ್ನು ವಿಚಾರಿಸೋಣ. ಆತ್ಮನೆಂದರೆ ಅಪರೋಕ್ಷನೆಂದು ಎಲ್ಲರಿಗೂ ಗೊತ್ತಿದೆ. ಏಕೆಂದರೆ 'ತಾನು' ಎಂಬಿದು

ಯಾರಿಗೂ ಪರೋಕ್ಷವೆನಿಸುವದಿಲ್ಲ. 'ಮತ್ತೊಂದು' ಎಂದರೆ ಪರೋಕ್ಷವೆನಸಿಸುವದು ದಿಟ. ಬ್ರಹ್ಮವೆಂದೂ ತತ್ತ್ವವನ್ನು ನಿರ್ದೇಶಮಾಡಿದಾಗ ಬಹುಜನರಿಗೆ ಅದು ತಾನಲ್ಲ–ಎಂದೇ ಭಾವನೆಯಾಗುತ್ತದೆ. ಹಾಗೆಯೇ ತಾನು–ಎಂದಿಗೂ ಬ್ರಹ್ಮವಾಗಿರಲಾರದು–ಏಕೆಂದರೆ ತಾನು ಸಂಸಾರಿಯೆಂದೂ ಬ್ರಹ್ಮವು ಮುಕ್ತವೆಂದೂ ಭಾವನೆಯಿದೆ. ಆದರೆ ಉಪನಿಷತ್ತುಗಳಲ್ಲಿ ಈ ತಪ್ಪುತಿಳಿವಳಿಕೆಯನ್ನು ತೆಗೆದು ಹಾಕುವದಕ್ಕಾಗಿಯೇ 'ಬ್ರಹ್ಮ' ಎಂದು ತಿಳಿಸಿದ ವಸ್ತುವನ್ನೇ 'ಆತ್ಮ' ನೆಂದು ಮತ್ತೆ ತಿಳಿಸುತ್ತದೆ. ನಮ್ಮೆಲ್ಲರ ಭಾವನೆಯಂತೆ ಆತ್ಮನು ಬ್ರಹ್ಮವಲ್ಲ–ಎಂದು ತಿಳಿಯಲು ಕಾರಣವೇನೆಂದರೆ: ಆತ್ಮನಲ್ಲದ ವಸ್ತುಗಳನ್ನೇ ಎಂದರೆ ಅನಾತ್ಮಗಳನ್ನೇ ಆತ್ಮನೆಂದು ನಾವು ತಿಳಿದಿರುವದು. ಉದಾಹರಣೆಗೆ ಒಬ್ಬನು ತಾನು ಶೀಘ್ರ ಓಟಗಾರನು, ಪದಕಗಳನ್ನು ಪಡೆದಿರುವವನು–ಎಂದು ಭಾವಿಸಿರುತ್ತಾನೆ. ಕಾಲಕ್ರಮದಲ್ಲಿ ವಯಸ್ಸಾದಂತೆ ಓಡಲಾಗದೆ ಹಿಂದೆ ಸರಿಯುತ್ತಾನೆ. ಆದರೂ ಅವನಿಗೆ 'ತಾನು' ಎಂಬುದೇನೂ ಕೊರತೆಯಾಯಿತೆನ್ನಿಸುವದಿಲ್ಲ. ಏಕೆಂದರೆ ಓಡುತ್ತಿದ್ದಾಗ ಉಪಯೋಗಿಸುತ್ತಿದ್ದ ಕಾಲು ಮಾತ್ರವೇ ತಾನಲ್ಲ–ತಾನೆಂಬುದೇ ಬೇರೆ–ಎಂದು ತಿಳಿದಿರುತ್ತದೆ. ಅಲ್ಲವೆ? ಹಾಗಾದರೆ ಕಾಲನ್ನು ಮಾತ್ರವೇ ತಾನೆಂದು ಓಡುವಾಗ ಏಕೆ ತಿಳಿದಿದ್ದನು? ಎಂದರೆ ಆದಕ್ಕೆ ಉತ್ತರವಿಲ್ಲ; ಅಥವಾ ಹಾಗೆ ತಿಳಿದಿದ್ದು ತಪ್ಪೇ ಎಂದು ನಿಶ್ಚಯವಾಗುತ್ತದೆ. ಇದರಂತೆಯೇ ಪ್ರತಿಯೊಬ್ಬನೂ ಆಯಾ ಸಮಯಕ್ಕೆ ತನ್ನ ದೇಹೇಂದ್ರಿಯಾದಿಗಳನ್ನೇ ತಾನೆಂದು ನಂಬಿರುವ ಪರಿಸ್ಥಿತಿಯೇ ಸರಿಯಾದ ಪ್ರತ್ಯಗಾತ್ಮನ ಜ್ಞಾನವಿಲ್ಲದಿರುವದಕ್ಕೆ ಕಾರಣವಾಗಿದೆ. ಪ್ರತ್ಯಕ್ ಎಂದರೆ ದೇಹೇಂದ್ರಿಯಾದಿಗಳಿಗಿಂತ ಅತ್ಯಂತ ಒಳಗಿರುವ ಆತ್ಮನು. ಅವನನ್ನೇ ಬ್ರಹ್ಮವೆಂದು ಶಾಸ್ತ್ರದಲ್ಲಿ ಕರೆದಿದೆ. ಹೀಗೆ ಬ್ರಹ್ಮಾತ್ಮರುಗಳ ಐಕ್ಯವೇ ಪರಮಾರ್ಥವೆಂದು ಉಪನಿಷತ್ತಿನ ಪರಮೋಪದೇಶವಾಗಿದೆ.

ಈ ಬ್ರಹ್ಮವನ್ನು ಸಾಮಾನ್ಯರೂ ಗುರುತಿಸುವಂತೆ ಕೆಲವು ಸೂಚನೆಗಳನ್ನು ಉಪನಿಷತ್ತುಗಳಲ್ಲಿ ಕೊಡಲಾಗಿದೆ. ಬ್ರಹ್ಮವು ಚಿನ್ಮಾತ್ರವಾಗಿದೆ. ಏಕೆಂದರೆ ಜಗತ್ತೆಲ್ಲವೂ ಚೇತನತಾಶಕ್ತಿಯಿಂದ ವ್ಯಾಪ್ತವಾಗಿದೆ. ಪ್ರಾಣಿಗಳು, ಸಸ್ಯಗಳು, ಮನುಷ್ಯರು–ಎಲ್ಲರೂ ಚೇತನರೇ ಆಗಿದ್ದಾರೆ. ಹುಟ್ಟು ಬೆಳವಣಿಗೆ–ಮುಂತಾದ ಮಾರ್ಪಾಡುಗಳಿಂದ ಪ್ರಪಂಚವು ಕ್ರಿಯಾಶೀಲವಾಗಿದ್ದು ಸರಿಯಾಗಿ ನೋಡಿದರೆ ತಾನು ಚಿತ್ತೆಂಬ ತತ್ತ್ವದ ಅಂಶವೇ ಎಂಬಿದನ್ನು ಅದು ನೆನಪಿಗೆ ತಂದುಕೊಡುತ್ತಿದೆ. ಇನ್ನು ಸರ್ವಪ್ರಾಣಿಗಳ ತಿರುಳಾದ ಬ್ರಹ್ಮವು ಎಲ್ಲರಲ್ಲಿಯೂ ಆತ್ಮನಾಗಿ ಸ್ವತಃಸಿದ್ಧವಾಗಿದ್ದು ಅನುಭವಕ್ಕೆ ಬರುತ್ತಿದೆ. ಈ ಬ್ರಹ್ಮಾತ್ಮಜ್ಞಾನವು ಅಮೃತತ್ವಕ್ಕೆ ಕಾರಣವು. ಏಕೆಂದರೆ ನಮ್ಮೆಲ್ಲರ ಆತ್ಮನು ಅಮೃತಾಭಯವಾದ ಬ್ರಹ್ಮವೇ ಆಗಿದ್ದಾನೆ, ಹೀಗೆಂದು ತಿಳಿಯುವವರೆಗೂ ನಾವು ಈ ಬ್ರಹ್ಮಭಾವನೆಯನ್ನು ಎಡೆಬಿಡದೆ ಮಾಡಬೇಕು. ಇದೇ ಧ್ಯಾನವು.

ಬ್ರಹ್ಮದ ಧ್ಯಾನವನ್ನು ಕುರಿತ ಉಪನಿಷತ್ತಿನಲ್ಲಿ ಈಗ ವಿವರಿಸಲಾಗುವದು. ಈವರೆಗೆ ನಿರ್ಗುಣಬ್ರಹ್ಮದ ಲಕ್ಷಣವನ್ನು ಹೇಳಿದ್ದಾಯಿತು. ಅದೇ ಮಂತ್ರದಲ್ಲಿ ಮುಂದುವರೆದು ಸಗುಣಬ್ರಹ್ಮದ ಧ್ಯಾನವನ್ನು ಹೇಳಲಾಗುವದು. ಬ್ರಹ್ಮವು ಒಂದೇ ಆದರೂ ವಿವಕ್ಷಾಭೇದದಿಂದಲೂ ಉಪಾಸಕರು ಹಾಗೂ ಜ್ಞಾನಿಗಳೆಂಬ ಅಧಿಕಾರಿಗಳ ಭೇದದಿಂದಲೂ ಅದನ್ನು ಸಗುಣನಿರ್ಗುಣಗಳೆಂದು ವಿಂಗಡಿಸಲಾಗಿದೆ. ಹೇಗೆ ಭೂಮಿಯೆಲ್ಲ ಒಂದೇ ಆದರೂ ರಾಜ್ಯಗಳೆಂದೂ ರಾಷ್ಟ್ರಗಳೆಂದೂ ಸೌಕರ್ಯಕ್ಕಾಗಿ ವಿಂಗಡಿಸಲಾಗಿದೆಯೋ ಹಾಗೆ ಬ್ರಹ್ಮವನ್ನು ಜಗದ್ವ್ಯಾಪಾರದೃಷ್ಟಿಯಿಂದ ಇಲ್ಲಿ ಪ್ರಜಾಪತಿಯೆಂದು ಕರೆದು ಆತನು ಚತುರ್ಮುಖನೆಂದೂ ಧರ್ಮಜ್ಞಾನವೈರಾಗ್ಯ ಐಶ್ವರ್ಯಗಳೆಂಬ ಗುಣಸಂಪನ್ನನೆಂದೂ ಸತ್ಯಲೋಕಾಧಿಪತಿಯೆಂದೂ ವಿವರಿಸಲಾಗಿದೆ. ಇಂಥ ಪ್ರಜಾಪತಿಯನ್ನು ಉಪಾಸಕನು ಚಿಂತಿಸಬೇಕು. ಸಾತ್ತ್ವಿಕವಾದ ಗತಿಗಳಲ್ಲಿ ಅತ್ಯುತ್ತಮವಾದುದು ಪ್ರಜಾಪತಿಲೋಕವು ಹಾಗೂ ಆತನ ಸಾಯುಜ್ಯಪ್ರಾಪ್ತಿಯು. ಆದ್ದರಿಂದ ಬ್ರಹ್ಮೋಪಾಸಕನು ಮೊದಲು ಪ್ರಜಾಪತಿದೇವತೆಯ ಉಪಾಸಕನಾಗಬೇಕು. ಆ ದೇವತೆಯ ಸಭೆಯನ್ನು ಎಂದರೆ ಆ ಪ್ರಭುವಿನ ಅರಮನೆಯನ್ನು ನಾನು ಹೊಂದುವಂತಾಗಲಿ–ಎಂದು ಚಿಂತಿಸಬೇಕು. ಪ್ರಜಾಪತಿಲೋಕವು ಅಥವಾ ಸತ್ಯಲೋಕವು ಉಳಿದ ಸ್ವರ್ಗಾದಿಲೋಕಗಳಂತೆ ಹಿಂದಿರುಗಿಬರತಕ್ಕದ್ದಲ್ಲ. ಆ ಲೋಕವನ್ನು ಉಪಾಸಕರು ಮಾತ್ರವೇ ಉತ್ತರಾಯಣಮಾರ್ಗದಿಂದ ಹೋಗಿ ಪಡೆಯುವರು. ಅಲ್ಲಿ ಎಲ್ಲಾ ಕಾಮಗಳೂ ಸಂಕಲ್ಪಸಿದ್ಧವಾಗಿರುವವು. ಹಾಗೆಯೇ ಆತ್ಮಾನಾತ್ಮವಿವೇಕಜ್ಞಾನವೂ ನೆರಳು–ಬಿಸಿಲುಗಳಂತೆ ವಿಂಗಡವಾಗಿ ಹೊಳೆಯುವದು. ಆದ್ದರಿಂದ ಆ ಬ್ರಹ್ಮಲೋಕದಲ್ಲಿ ಕಲ್ಪಪರ್ಯಂತಕಾಲವೂ ಭೋಗಗಳನ್ನು ಅನುಭವಿಸಿ ಅನಂತರ ಬ್ರಹ್ಮಜ್ಞಾನವನ್ನು ಸಂಪಾದಿಸಿಕೊಂಡು ಕಲ್ಪಾಧಿಪತಿಯ ಅಧಿಕಾರವು ಪೂರೈಸಿ ಮುಕ್ತನಾಗುವಾಗ ಅವನೊಡನೆ ಉಪಾಸಕನೂ ಮುಕ್ತನಾಗಿ ಬಿಡುವನು. ಪುನಃ ಸಂಸಾರಮಂಡಲಕ್ಕೆ ಹಿಂದಿರುಗುವದಿಲ್ಲ. ಇದನ್ನು ಕ್ರಮಮುಕ್ತಿಯೆನ್ನುವರು. ಪ್ರಜಾಪತಿಬ್ರಹ್ಮನನ್ನು ಉಪಾಸನೆಮಾಡುವವನಿಗೆ ಅವಶ್ಯವಾಗಿ ಈ ಬಗೆಯ ಮುಕ್ತಿಯಾಗುವದು.

ಇನ್ನು ಉಪಾಸಕನು ಚಿಂತಿಸಬೇಕಾದ ಮತ್ತೆ ಕೆಲವು ವಿಚಾರಗಳನ್ನು ಉಪನಿಷತ್ತಿನಲ್ಲಿ ಹೀಗೆ ತಿಳಿಸಿಲಾಗಿದೆ. ''ನಾನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರುಗಳ ಯಶಸ್ಸು ಆಗುವಂತಾಗಲಿ.'' ತ್ರೈವರ್ಣಿಕರಿಗೂ ವಿಶೇಷಾಧಿಕಾರವು ಜ್ಞಾನದಲ್ಲಿಯೂ ಉಪಾಸನೆಯಲ್ಲಿಯೂ ಇರುವದರಿಂದ ಅವರೆಲ್ಲರ ಆತ್ಮನಾಗಿ ನಾನಾಗುವಂತಾಗಲಿ. ಅವರಂತೆಯೇ ನಾನು ಬ್ರಹ್ಮೋಪಾಸಕನಾಗುವಂತೆ ಪ್ರಜಾಪತಿಯು

ಅನುಗ್ರಹಿಸಲಿ–ಎಂದರ್ಥ. ಉಳಿದ ಮನುಷ್ಯರ ಹಾಗೂ ಎಲ್ಲಾ ಪ್ರಾಣಿಗಳ ಆತ್ಮನೂ ಪ್ರಜಾಪತಿಯೇ–ಎಂಬುದರಲ್ಲೇನೂ ಸಂಶಯವಿಲ್ಲ. ಆದರೆ ಉಪಾಸನಾಪ್ರಕರಣದಲ್ಲಿ ಸಾಮಾನ್ಯವಾಗಿ ಬ್ರಹ್ಮದ ಉತ್ಕೃಷ್ಟೋಪಾಧಿಯನ್ನು ಚಿಂತಿಸುವದು ಪದ್ಧತಿಯಾಗಿದೆ. ಹೇಗೆ ಪ್ರಾಣಿಗಳಲ್ಲಿ ಆನೆ, ಕುದುರೆ ಹಸುಗಳನ್ನು ವಿಶೇಷವಾಗಿ ಪೂಜಿಸುವವರೋ ಕತ್ತೆ, ನರಿ, ನಾಯಿಗಳನ್ನು ಪೂಜಿಸುವದಿಲ್ಲವೋ ಹಾಗೆಯೇ ಸೃಷ್ಟಿಯಲ್ಲೆಲ್ಲ ಬ್ರಹ್ಮಚೈತನ್ಯವೇ ತುಂಬಿದ್ದರೂ ಅಲ್ಪಬುದ್ಧಿಯವರಿಗೆ ಬ್ರಹ್ಮಾನುಸಂಧಾನದ ಸಲುವಾಗಿ ಸೂರ್ಯ, ಅಗ್ನಿ, ಬ್ರಾಹ್ಮಣದಿಗಳಲ್ಲಿ ಬ್ರಹ್ಮವನ್ನು ಭಾವಿಸಿ ಚಿಂತಿಸುವಂತೆ ಶಾಸ್ತ್ರಗಳಲ್ಲಿ ತಿಳಿಸಲಾಗಿದೆ. ಅದಕ್ಕನುಗುಣವಾಗಿ ಇಲ್ಲಿಯೂ ಬ್ರಾಹ್ಮಣರ ಯಶಸ್ಸು ನಾನಾಗುವಂತಾಗಲಿ–ಎಂದು ಪ್ರಾರ್ಥಿಸಿದೆ. ಇನ್ನು ಉಪಾಸಕನು ಮತ್ತೊಮ್ಮೆ ಗರ್ಭವಾಸಾದಿದುಃಖಗಳನ್ನು ಹೊಂದದಿರಲಿ–ಎಂಬುದಕ್ಕಾಗಿ 'ನಾನು ಸ್ತ್ರೀಯೋನಿಯಲ್ಲಿ ಮತ್ತೆ ಹೊರಬರದಂತೆ ಪ್ರಜಾಪತಿಯು ಕಾಪಾಡಲಿ' ಎಂದು ಕೇಳಿಕೊಳ್ಳಲಾಗಿದೆ. ನಿಜವಾಗಿಯೂ ಗರ್ಭವಾಸವು ಅತ್ಯಂತಕಷ್ಟವಾದುದು. ಆದರೆ ಮನುಷ್ಯನಿಗೆ ಮತ್ತೆ ಮತ್ತೆ ಸ್ತ್ರೀಸಂಗಾದಿಗಳಲ್ಲಿಯೇ ಮನಸ್ಸು ಓಡುವದು. ಅದನ್ನು ತಡೆಗಟ್ಟಿ ತಾನು ಪ್ರಜಾಪತಿಯ ಚಿಂತಕನಾಗಿ ಹಾಗೆಯೇ ಮೇಲೇರಿ ಜ್ಞಾನಿಯಾಗಿ ಮೋಕ್ಷವನ್ನು ಸಾಧಿಸುವಂತೆ ನನ್ನ ಮನಸ್ಸನ್ನು ಆ ಬ್ರಹ್ಮವು ಪ್ರೇರಿಸಲಿ–ಎಂಬಿದು ಪ್ರಾರ್ಥನೆಯ ಸಾರವಾಗಿದೆ.

---

# ಅಧ್ಯಾತ್ಮಸಾಧನಗಳು

**ಓಮ್ ॥ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ ವಿದಧದಾತ್ಮನಿ ಸರ್ವೇಂದ್ರಿಯಾಣಿ ಸಂಪ್ರತಿಷ್ಠಾಪ್ಯ ಅಹಿಂಸನ್ ಸರ್ವಭೂತಾನ್ಯನ್ಯತ್ರ ತೀರ್ಥೇಭ್ಯಃ ॥** **8–15–1**

**ಭಾವಾರ್ಥ:–** ಶುಚಿಯಾದ ಸ್ಥಳದಲ್ಲಿ ವೇದಾಧ್ಯಯನವನ್ನು ಮಾಡುತ್ತಾ (ಪುತ್ರಾದಿಗಳನ್ನು) ಧಾರ್ಮಿಕರನ್ನಾಗಿ ಮಾಡುತ್ತಾ ತನ್ನಲ್ಲಿಯೇ ಸರ್ವೇಂದ್ರಿಯಗಳನ್ನೂ ಹಿಡಿತದಲ್ಲಿರಿಸಿಕೊಂಡು ತೀರ್ಥಗಳನ್ನು ಹೊರತಾಗಿ ಮಿಕ್ಕೆಡೆಯಲ್ಲಿ ಯಾವ ಭೂತಗಳನ್ನೂ ಹಿಂಸೆಮಾಡದೆ (ಇರುವವನು ಬ್ರಹ್ಮಲೋಕವನ್ನು ಪಡೆದುಕೊಳ್ಳುತ್ತಾನೆ)

(ವೇದಾಧ್ಯಯನ, ಅಧ್ಯಾಪನ, ಸ್ವಧರ್ಮಾಚರಣ, ಇಂದ್ರಿಯನಿಗ್ರಹ, ಅಹಿಂಸೆ– ಇವುಗಳಿಂದ ಸಾಧಕನು ಪರಬ್ರಹ್ಮವನ್ನು ಪಡೆಯುವನು–ಎಂದರ್ಥ)

# 72. ಶಾಸ್ತ್ರೀಯಸಾಧನಗಳು

ಛಾಂದೋಗ್ಯೋಪನಿಷತ್ತು ಈಗ ಪೂರ್ಣಗೊಳ್ಳುತ್ತಿದೆ. ಕಡೆಯಲ್ಲಿ ಗುರುವಂಶ, ಸಾಧನ, ಫಲಗಳನ್ನು ಸಂಕ್ಷೇಪವಾಗಿ ತಿಳಿಸಲಾಗಿದೆ. ಗುರವಂಶವೆಂದರೆ ಬ್ರಹ್ಮವಿದ್ಯೆಯು ಸೃಷ್ಟಿಯ ಆದಿಕಾಲದಿಂದ ಈವರೆಗೆ ಯಾವ ಯಾವ ಗುರುಶಿಷ್ಯರ–ಪರಂಪರೆಯ ಮೂಲಕ ಹೊರಟು ಬಂದಿದೆ–ಎಂಬಿದರ ವಿವರವು. ಇದು ಬಹಳ ದೀರ್ಘವಾದ ಪಟ್ಟಿಯಾಗಬಹುದಾದರೂ ಉಪನಿಷತ್ತಿನಲ್ಲಿ ತೀರ ಸಂಕ್ಷೇಪಿಸಿ ಜಪಾರ್ಥವಾಗಿ ಕೊಡಲಾಗಿದೆ. ಬ್ರಹ್ಮನಿಂದಾರಂಭಿಸಿ ಪ್ರಜಾಪತಿ, ಮನು, ಆತನಿಂದ ಮನುಷ್ಯರಾದ ನಮಗೆಲ್ಲ ಬ್ರಹ್ಮವಿದ್ಯೆಯು ಬಂದಿದೆ–ಎಂದು ತಿಳಿಸಿದೆ. ಆದ್ದರಿಂದ ಮನುಚಕ್ರವರ್ತಿಯು ರಾಜ್ಯಭಾರದ ಜವಾಬ್ದಾರಿಯನ್ನು ವಹಿಸಿದ್ದಂತೆಯೇ ಪ್ರಜೆಗಳ ಅಭ್ಯುದಯ–ನಿಃಶ್ರೇಯಸಗಳ ಜವಾಬ್ದಾರಿಯನ್ನೂ ವಹಿಸಿದ್ದನು–ಎಂದೂ ಗೊತ್ತಾಗುತ್ತದೆ. ಪ್ರಜಾಪರಿಪಾಲನೆಯೆಂದರೆ ಮುಖ್ಯಾರ್ಥದಲ್ಲಿ ಅವರಿಗೆ ಮುಕ್ತಿಯೋಗ್ಯವಾದ ಬ್ರಹ್ಮವಿದ್ಯೆಯನ್ನೂ ಅದಕ್ಕೆ ಸಾಧನವಾದ ಧರ್ಮವನ್ನೂ ತಿಳಿಸುವದು–ಎಂದೇ ನಮ್ಮ ಸನಾತನಭಾರತೀಯರ ಅಭಿಪ್ರಾಯವು. ಆದರೆ ಈಗಿನ ಕಾಲಕ್ಕೆ ಪ್ರಜಾತಂತ್ರವಾದ ಆಡಳಿತ ಸೂತ್ರವನ್ನು ಹಿಡಿದಿರುವವರು ಈ ಬ್ರಹ್ಮವಿದ್ಯೆಯ ಗಂಧವೂ ಇಲ್ಲದವರಾಗಿದ್ದಾರೆ. ಇನ್ನು ವಿಶ್ವಶಾಂತಿಯು ಸಿದ್ಧಿಸುವದಾದರೂ ಹೇಗಾದೀತು? ವಿದೇಶೀಯರನ್ನು ಗಣನೆಗೆ ತಾರದಿದ್ದರೂ ಭಾರತೀಯ ಪ್ರಜಾಸತ್ತಾತ್ಮಕ ಆಡಳಿತವ್ಯವಸ್ಥೆಯಲ್ಲಿ ಅಧ್ಯಾತ್ಮವಿದ್ಯೆಗೆ ಪ್ರಪ್ರಥಮ ಸ್ಥಾನವಿರಬೇಕಾದದ್ದು ಅನಿವಾರ್ಯವಾಗಿತ್ತು. ಇದು ಹಾಗಿರಲಿ. ಪ್ರಕೃತ ಬ್ರಹ್ಮವಿದ್ಯಾಚಾರ್ಯ ಪರಂಪರೆಯಲ್ಲಿ ಮನುವು ಮನುಷ್ಯರಿಗೆಲ್ಲ ಪರಮಪೂಜ್ಯನಾಗಿರುವನು. ಆತನ ಉಪದೇಶಗಳು ಎಂದೆಂದಿಗೂ ಮಾನವರಿಗೆ ರೋಗಪರಿಹಾರಕವಾದ ಔಷಧಗಳಂತೆ ಪಥ್ಯವಾಗಿರುವವು. ಆತನನ್ನೂ ಆತನ ಶಿಷ್ಯಪರಂಪರೆಯನ್ನೂ ನೆನೆಯುವದೇ ಒಂದು ಅಧ್ಯಾತ್ಮಸಾಧನವಾಗಿರುತ್ತದೆ.

ಈಗ ಮುಂದಿನ ಸಾಧನವನ್ನು ವಿಚಾರಮಾಡೋಣ. ಬ್ರಹ್ಮವಿದ್ಯೆಯನ್ನು ಬಯಸುವ ಆದರ್ಶನಾದ ಸಾಧಕನನ್ನು ಇಲ್ಲಿ ಚಿತ್ರಿಸಲಾಗಿದೆ. ಉಳಿದವರು ಯಥಾಯೋಗ್ಯವಾಗಿ ಈತನನ್ನು ಅನುಸರಿಸಬೇಕು. ಸಾಧಕನು ಸಕಾಲದಲ್ಲಿ ಉಪನೀತನಾಗಿ ಗುರುಕುಲವಾಸವನ್ನು ಕೈಗೊಳ್ಳಬೇಕು. ಅಲ್ಲಿ ಬ್ರಹ್ಮಚರ್ಯ, ಗುರುಶುಶ್ರೂಷೆ, ಶ್ರವಣಾದಿಸಾಧನಗಳಿಂದ ವೇದವಿದ್ಯೆಯನ್ನು ವಶಪಡಿಸಿಕೊಳ್ಳಬೇಕು. ಧರ್ಮವು ಯಾವದು? ಅದನ್ನು ಹೇಗೆ ಆಚರಿಸಬೇಕು? ಎಂಬ ವಿಚಾರಕ್ಕೆ ವೇದವೇ ಪ್ರಮಾಣವು. ವೇದಾಧ್ಯಯನವು ಪೂರೈಸಿದ ಅನಂತರ ಗುರುಕುಲವನ್ನು

ಬಿಡುವದರೊಳಗಾಗಿಯೇ ವೇದಾರ್ಥಜಿಜ್ಞಾಸೆಯನ್ನೂ ಮಾಡಿರಬೇಕು. ಇದನ್ನು ಯಜ್ಞಾಧ್ಯಯನವೆನ್ನುವರು. ಇಲ್ಲಿಗೆ ಓದಿದ್ದು (Theory) ಮುಗಿಯುತ್ತದೆ. ಅನಂತರ ಗುರುಗಳು ಹೇಳಬಹುದಾದ ಕೆಲಸಗಳೇನಾದರೂ ಇದ್ದರೆ ಪೂರ್ಣಗೊಳಿಸಿಕೊಟ್ಟು ಅವರನ್ನು ಸಂತೋಷಗೊಳಿಸಿ ಗುರುಕುಲದಿಂದ ಹಿಂದಿರುಗಬೇಕು. ಇದಕ್ಕೆ 'ಸಮಾವರ್ತನ'ವೆನ್ನುವರು. ಅನಂತರ ಕುಟುಂಬಿಯಾಗಬೇಕು. ವೇದೋಕ್ತಕರ್ಮಗಳನ್ನು ಅನುಷ್ಠಾನಮಾಡುವದಕ್ಕೆ ಗೃಹಸ್ಥಧರ್ಮವನ್ನು ಸ್ವೀಕರಿಸುವದೇ ಕುಟುಂಬಿಯಾಗುವಿಕೆಯು. ಅನುರೂಪಳೂ ಕುಲ–ಶೀಲ–ವಿದ್ಯಾ–ವಿನಯಾದಿಸಂಪನ್ನಳೂ ಧರ್ಮಾನುಷ್ಠಾನಕ್ಕೆ ಅನುಕೂಲಳೂ ಆದ ಕನ್ಯೆಯನ್ನು ಸಂಗ್ರಹಮಾಡಿಕೊಂಡು ಗಾರ್ಹಸ್ಥ್ಯಕರ್ಮಗಳನ್ನಾಚರಿಸಬೇಕು. ಆಗಲೂ ಸ್ವಾಧ್ಯಾಯವೂ ಕಡ್ಡಾಯವಾಗಿರುವದು. ಇದನ್ನು ಬ್ರಹ್ಮಯಜ್ಞವೆನ್ನುವರು. ಹೀಗೆ ತಾನು ಸ್ವಾಧ್ಯಾಯ, ಯಜ್ಞ, ಜಪ, ನಿಯಮ, ವಿಶಿಷ್ಟಾಚಾರಗಳಿಂದ ಕೂಡಿದ್ದು ತನ್ನ ಶಿಷ್ಯರಿಗೂ ಮಕ್ಕಳಿಗೂ ವೇದಶಾಸ್ತ್ರಾಧ್ಯಯನಗಳನ್ನು ಮಾಡಿಸಬೇಕು. ಇದು ಕೂಡ ಅಧ್ಯಾತ್ಮವಿದ್ಯೆಗೆ ಸಾಧನವಾಗಿರುತ್ತದೆ. ಶಿಷ್ಯ–ಪುತ್ರಾದಿಗಳು ಧಾರ್ಮಿಕರಾಗಿಯೂ ನೀತಿವಂತರಾಗಿಯೂ ನಡೆಯುವಂತೆ ಏರ್ಪಡಿಸುವದೂ ಈ ಸಾಧಕನ ಕರ್ತವ್ಯವಾಗಿರುತ್ತದೆ. ಇದರಿಂದ ಬ್ರಹ್ಮವಿದ್ಯೆಯ ಅಭ್ಯಾಸಕ್ಕೆ ಸಹಾಯವಾಗುವದು. ಹೀಗೆ ಆದರ್ಶಸಾಧಕನು ತಾನು ಆಚಾರವಿಚಾರಗಳಿಂದ ಮಾದರಿಯಾಗಿರಬೇಕು. ಇಂಥವನೇ ಬ್ರಹ್ಮವಿದ್ಯಾಧಿಕಾರಿಯೆನಿಸುವನು.

ಇನ್ನು ಸಾಧಕನು ಯಜ್ಞದಾನತಪಸ್ಸುಗಳೆಂಬ ಬಹಿರಂಗಸಾಧನಗಳ ಅನುಷ್ಠಾನದಿಂದ ಸಂಸ್ಕೃತನಾಗಿ ಸಿದ್ಧನಾದ ಮೇಲೆ ಮೆಲ್ಲಮೆಲ್ಲನೆ ಅಂತರಂಗಸಾಧನಗಳ ಕಡೆಗೆ ತಿರುಗಬೇಕು. ಇವುಗಳಲ್ಲಿ ಮೊದಲು ಮಾಡಬೇಕಾದ್ದು ಇಂದ್ರಿಯನಿಗ್ರಹವು. ಗೃಹಸ್ಥನಾದವನಿಗೂ ಇದು ವಿಹಿತವಾಗಿದೆ. ಹೇಗೆಂದರೆ ಕಾಮವನ್ನು ನಿಗ್ರಹಿಸಲು ತನ್ನ ಪತ್ನಿಯನ್ನು ಹೊರತು ಉಳಿದ ಎಲ್ಲಾ ಸ್ತ್ರೀಯರಲ್ಲಿಯೂ ತಾಯಿ ಅಥವಾ ಅಕ್ಕತಂಗಿಯರ ಭಾವನೆಯನ್ನು ತಂದುಕೊಂಡು ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಬೇಕು. ಧರ್ಮಪತ್ನಿಯಲ್ಲಿ ಕೂಡ ಋತುಕಾಲಕ್ಕೆ ನಿಷಿದ್ಧವಲ್ಲದ ದಿನಗಳಲ್ಲಿ ಮಾತ್ರ ಗಮನಮಾಡುವ ಮೂಲಕ ಬ್ರಹ್ಮಚರ್ಯವನ್ನು ಸಂರಕ್ಷಿಸಿಕೊಂಡು ಉಳಿದ ಸಂದರ್ಭದಲ್ಲಿ ಆಕೆಯನ್ನು ಸೇವಕಿ ಅಥವಾ ಸಖಿಯಂತೆ ಕಂಡುಕೊಳ್ಳಬೇಕು. ಹೀಗೆ ಯಾವನು ನಿಯಮಗಳಿಗೆ ಒಳಪಡುವನೋ ಅವನಿಗೆ ಯಮ–ಎಂದರೆ ಇಂದ್ರಿಯಸಂಯಮವೂ ಸಾಧ್ಯವಾಗುವದು. ಸ್ವೇಚ್ಛಾಚಾರರತನಾದರೆ ಅಧ್ಯಾತ್ಮಜ್ಞಾನವು ದೊರಕಲಾರದು. ಅನಂತರ ಇಂದ್ರಿಯ ಸಂಯಮದ ಮಟ್ಟದಿಂದ ಮೇಲೇರಿ ಎಲ್ಲಾ ಇಂದ್ರಿಯಗಳನ್ನೂ

ಅಂತಃಕರಣವನ್ನೂ ಒಳಮುಖವಾಗಿ ಮಾಡಿಕೊಳ್ಳುವದನ್ನು ಕಲಿಯಬೇಕು. ಇದನ್ನು ಯೋಗವೆಂದೂ ಕರೆಯುವರು. ಇದರಲ್ಲಿಯೂ ಹಠಯೋಗವು ಕೂಡದು. ವಿವೇಚನಾಪೂರ್ವಕವಾಗಿಯೇ ಮೆಲ್ಲಮೆಲ್ಲನೆ ತತ್ತ್ವವಿಚಾರಶ್ರವಣದಿಂದ ಅಧ್ಯಾತ್ಮದಲ್ಲಿ ಆಸಕ್ತಿಯನ್ನು ಬೆಳೆಯಿಸಿಕೊಳ್ಳುತ್ತಾ ವೈರಾಗ್ಯದಿಂದ ಇಂದ್ರಿಯಗಳ ಮೇಲಿನ ಹತೋಟಿಯನ್ನು ಸಾಧಿಸಿಕೊಳ್ಳಬೇಕು. ಇದನ್ನು ಅಧ್ಯಾತ್ಮಯೋಗವೆಂದೇ ವಿಶೇಷವಾಗಿ ಕರೆಯುತ್ತಾರೆ.

ಸಾಧಕನು ಕರ್ಮಿಯೂ ಯೋಗಿಯೂ ಆಗಿ ಕೆಲವು ಕಾಲ ಶಾಸ್ತ್ರೀಯ ಸಾಧನಗಳನ್ನು ಅನುಷ್ಠಾನಮಾಡಬೇಕಾಗುವದು. ಕರ್ಮಕಾಲಕ್ಕೆ ಕೆಲವು ರೀತಿಯಾದ ತಪ್ಪುಗಳು ಆಗುವದು ನಿಜ. ಏಕೆಂದರೆ ಶಾಸ್ತ್ರೀಯ ಕರ್ಮಗಳನ್ನು ಶ್ರುತಿಯಲ್ಲಿ ಹೇಗೆ ಹೇಳಿದೆಯೋ ಹಾಗೆಯೇ ಮಾಡಬೇಕಾಗುತ್ತದೆ. ಹಾಗೆ ಮಾಡುವಾಗ ಚಿತ್ತಸಂಸ್ಕಾರವಾಗಿ ಮತ್ತೆ ಯಾವ ಕರ್ಮಸಂಬದ್ಧವಾದ ಪಾಪಪುಣ್ಯಗಳೂ ಅಂಟದಿರಬೇಕಾದರೆ ಭಗವದ್ಗೀತೆಯಲ್ಲಿ ಹೇಳಿರುವಂತೆ ಕರ್ಮದಲ್ಲಿ ಸಂಗ-ಫಲಗಳನ್ನೂ ಬಿಟ್ಟು ನಿರಹಂಕಾರಭಾವದಿಂದ ಮಾಡಬೇಕಾಗುತ್ತದೆ. ಈ ಪರಿಸ್ಥಿತಿಯನ್ನು ಕರ್ಮಯೋಗವೆನ್ನುವರು. ಇದು ಹೇಳಲು ಸುಲಭ. ಆದರೆ ಮಾಡುವದು ಅಷ್ಟೇ ಕಷ್ಟವಾಗಿರುವದು. ಕರ್ಮಯೋಗಾನುಷ್ಠಾನಕಾಲಕ್ಕೂ ಕೆಲವು ಸಂಶಯಗಳು ಬರಬಹುದು. ಉದಾಹರಣೆಗೆ ವೈದಿಕಯಜ್ಞದಲ್ಲಿ ಪಶುಹಿಂಸೆಯನ್ನು ಹೇಳಿದೆ. ಅದರಿಂದ ಅಹಿಂಸೆ-ಎಂಬ ಸಾಧನಕ್ಕೆ ಕಳಂಕವುಂಟಾಗುವದಿಲ್ಲವೆ? ಎಂದು ಕೇಳಬಹುದು. ಈ ಸಂಶಯವ ಪರಿಹಾರಕ್ಕಗಿಯೇ ಶ್ರುತಿಯಲ್ಲಿ 'ಅನ್ಯತ್ರ ತೀರ್ಥೇಭ್ಯಃ'' ಎಂದು ತಿಳಿಸಿದೆ. ತೀರ್ಥವೆಂದರೆ ಯಜ್ಞದಂಥ ಪವಿತ್ರಕರ್ಮವು. ಅದಕ್ಕಾಗಿ ಹಿಂಸೆಯು ಅನಿವಾರ್ಯವಾದರೆ ಅದು ಹಿಂಸೆಯೆನಿಸುವದಿಲ್ಲ. ಹಿಂಸೆಯ ನಿಮಿತ್ತವಾದ ಪಾಪವೂ ಬರುವದಿಲ್ಲ-ಎಂದಭಿಪ್ರಾಯ. ಲೌಕಿಕೋದಾಹರಣೆಯಿಂದಲೂ ಇದನ್ನು ಸಮರ್ಥಿಸಬಹುದು. ಒಬ್ಬ ಡಾಕ್ಟರ್ ರೋಗಿಗೆ ಅನಿವಾರ್ಯಸಂದರ್ಭದಲ್ಲಿ ಆಪರೇಷನ್ ಮಾಡಬೇಕಾಗಿ ಬಂದರೆ ಶರೀರಾವಯವಗಳನ್ನು ಕತ್ತರಿಸಬೇಕಾಗಬಹುದು. ಅದು ರೋಗಿಗೆ ಹಿಂಸೆಯೂ ಆಗಿರಬಹುದು. ಆದರೂ ಅಪರಾಧವೆನಿಸುವದಿಲ್ಲ. ಇದಕ್ಕೆ ಕಾರಣವೇನೆಂದರೆ ಡಾಕ್ಟರಾದವನ ಸದುದ್ದೇಶ ಹಾಗೂ ಅವನ ವೃತ್ತಿಧರ್ಮ-ಅಲ್ಲವೆ? ಅದರಂತೆಯೇ ಯಜ್ಞಸಂದರ್ಭಕ್ಕೂ ತಿಳಿಯಬೇಕು. ಇಲ್ಲವಾಗಿದ್ದರೆ ಅತ್ಯಂತಭಯಂಕರವಾದ ಯುದ್ಧವನ್ನು ಮಾಡೆಂದು ಭಗವಂತನು ಅರ್ಜುನನಿಗೆ ಹೇಳುತ್ತಿದ್ದನೆ? ತಾನೇ ಪ್ರೇರಕನಾಗಿ ಸಹಾಯಕನಾಗಿ ನಿಂತು ಯುದ್ಧಮಾಡಿಸುತ್ತಿದ್ದನೆ? ಹಾಗಾದರೆ ಭಗವಂತನೇನು ಕ್ರೂರಿಯೆ? ಎಂದಿಗೂ ಅಲ್ಲ. ಧರ್ಮಸೂಕ್ಷ್ಮವನ್ನೂ ಅದರ ಪರಿಣಾಮವನ್ನೂ ಯೋಚಿಸಿದಾಗ

ಸಾಮಾನ್ಯ ಬುದ್ಧಿಗೆ ತಪ್ಪಾಗಿ ಕಂಡುಬಂದುದು ಶಾಸ್ತ್ರೀಯ ದೃಷ್ಟಿಯಿಂದ ಸರಿಯಾಗಿಯೇ ಇರುತ್ತದೆ. ಆದ್ದರಿಂದಲೇ ಸಾಧಕನು ಶಾಸ್ತ್ರೀಯಕರ್ಮಗಳನ್ನು ಮಾತ್ರವೇ ಯೋಗಬುದ್ಧಿಯುಕ್ತನಾಗಿ ತನ್ನ ತನ್ನ ಅಂತಸ್ತಿಗೆ ತಕ್ಕಂತೆ ಮಾಡಬೇಕಾಗುತ್ತದೆ. ಇದರಿಂದ ಚಿತ್ತಶುದ್ಧಿಯಾಗಿ ಜ್ಞಾನಿಷ್ಠೆಗೆ ಯೋಗ್ಯತೆಯುಂಟಗುವದೇ ಹೊರತು ವಿಪರೀತ ಫಲವು ಎಂದಿಗೂ ಆಗಲಾರದು. ಹೀಗೆ ಅಂತಃಕರಣಶುದ್ಧಿಯು ಕೈಗೂಡಿದಾಗ ಸಾಧಕನು ಮೆಲ್ಲನೆ ಕರ್ಮಯೋಗದಿಂದ ಮೇಲೇರಿ ಕರ್ಮಸಂನ್ಯಾಸವನ್ನು ಮಾಡಿ ಅಂತರಂಗಸಾಧನಗಳಾದ ಶಮದಮಾದಿಗಳನ್ನೂ ಧ್ಯಾನ-ಮನನಾದಿಗಳನ್ನೂ ಮಾಡಬೇಕು. ಇದು ಸಾಧನಸೋಪಾನ ಕ್ರಮವಾಗಿದೆ.

ಈಗ ಅಂತರಂಗಸಾಧನಗಳನ್ನೇ ಕುರಿತು ವಿಚಾರಮಾಡೋಣ. ವೇದಾಂತ ಜ್ಞಾನಕ್ಕೆ ನೇರಾಗಿ ಉಪನಿಷತ್ ಶ್ರವಣಾದಿಗಳೇ ಸಾಧನವು. ಶ್ರವಣವು ದಕ್ಕುವದಕ್ಕಾಗಿಯೇ ಶಮದಮಾದಿಗಳನ್ನು ಹೇಳಿದೆ. ಚಿತ್ತಚಾಂಚಲ್ಯವಿರುವವನಿಗೆ ಶ್ರವಣವು ವ್ಯರ್ಥವಾಗುತ್ತದೆ. ಆದ್ದರಿಂದ ಮುಮುಕ್ಷುವೂ ಅಧಿಕಾರಿಯೂ ಶಮಾದಿಸಂಪನ್ನನೂ ಆದ ಸಾಧಕನು ಗುರುವಿನ ಬಳಿಯಲ್ಲಿ ವೇದಾಂತವಾಕ್ಯ ಶ್ರವಣಮಾಡಬೇಕು. ಅನಂತರ ವಾಕ್ಯಾರ್ಥಜ್ಞಾನವು ಅನುಭವಾರೂಢವಾಗುವದಕ್ಕಾಗಿ ಮತ್ತೆ ಮನನಮಾಡಬೇಕು. ಮುಂದೆ ಆ ತತ್ತ್ವವನ್ನೇ ನಿದಿಧ್ಯಾಸನಮಾಡಬೇಕು. ಇದನ್ನು ಒಂದು ರೀತಿಯಲ್ಲಿ ಧ್ಯಾನವೆಂದೂ ಕರೆಯಬಹುದು. ಧ್ಯಾನದಲ್ಲಿ ಯಾವದಾದರೂ ವಸ್ತುವಿನ ಚಿಂತೆಯಿರುತ್ತದೆ. ನಿದಿಧ್ಯಾಸನದಲ್ಲಿ ಏನನ್ನೂ ಚಿಂತಿಸದಿರುವದೇ ನೆಲೆಯಾಗಿರುತ್ತದೆ. ಯಾವಾಗ ಆತ್ಮಸತ್ಯಾನುಬೋಧದಿಂದ ಮನಸ್ಸು ನೆಲೆಗೊಂಡು ಏನೊಂದೂ ದ್ವೈತವನ್ನು ವಿಕಲ್ಪಿಸದೆ ಹೋಗುವದೋ ಅಂಥ ಸ್ಥಿತಿಯನ್ನು ಅಮನಸ್ತೆಯೆನ್ನುವರು. ಇದೇ ನಿದಿಧ್ಯಾಸನದ ಪರಮಾವಧಿಯು. ಮುಂದಿನ ಫಲವೇ ಜ್ಞಾನನಿಷ್ಠೆಯು. ಒಮ್ಮೆ ಜ್ಞಾನನಿಷ್ಠನಾದರೆ ಮತ್ತೆ ಸಾಧನಗಳೇನೂ ಉಳಿದಿರುವದಿಲ್ಲ. ಆದ್ದರಿಂದ ಜ್ಞಾನಿಯು ಸಿದ್ಧನೇ ಹೊರತು ಸಾಧಕನಲ್ಲ. ಸಿದ್ಧಸ್ಥಿತಿಯಲ್ಲಿ ಅವನು ಪಡೆದುಕೊಂಡಿರುವ ಜ್ಞಾನದ ಸ್ವರೂಪವನ್ನೇ ಈವರೆಗೂ ನಾನಾ ಬಗೆಯಿಂದ ಉಪನಿಷತ್ತಿನಲ್ಲಿ ಹೇಳಲಾಯಿತು. ಹಾಗೂ ದೃಷ್ಟಾಂತಗಳಿಂದಲೂ ಕಥೆಗಳಿಂದಲೂ ವಿವರಿಸಲಾಯಿತು. ಇಂಥ ಜ್ಞಾನವನ್ನು ಪಡೆದವರೆಲ್ಲರೂ ಕೃತಕೃತ್ಯರಾದರು-ಎಂದು ಮತ್ತೆ ಹೇಳತಕ್ಕದ್ದೇನಿದೆ? ಹೀಗೆ ಅಧ್ಯಾತ್ಮಸಾಧನಭಾಗವು ಪೂರೈಸಿರುತ್ತದೆ.

ಈಗ ಉಪನಿಷತ್ತಿನಲ್ಲಿ ಜ್ಞಾನಫಲವನ್ನು ಸಂಕೀರ್ತನೆಮಾಡಲಿದ್ದಾರೆ. ಯಾವನು ಇಂಥ ಬ್ರಹ್ಮಜ್ಞಾನವನ್ನು ಪಡೆದುಕೊಳ್ಳುವನೋ ಅವನು ದೇಹತ್ಯಾಗಾನಂತರ ಬ್ರಹ್ಮಲೋಕವನ್ನು ಸೇರುವನು. ಬ್ರಹ್ಮಲೋಕಪ್ರಾಪ್ತಿಯೆಂದರೆ ಸ್ವರ್ಗಪ್ರಾಪ್ತಿಯಂತಲ್ಲ.

ಅಖಂಡವಾದ ಬ್ರಹ್ಮದಲ್ಲಿ ಒಂದಾಗಿಬಿಡುವದು. ಫುಟ್‌ಬಾಲ್‌ನಲ್ಲಿರುವ ಗಾಳಿಯನ್ನು ಹೊರತೆಗೆದಾಗ ಅದು ಮಹಾವಾಯುವಿನಲ್ಲಿ ಒಂದಾಗುವಂತೆ ಅನಂತವಾದ ಪರಬ್ರಹ್ಮದಲ್ಲಿ ಸೇರಿಬಿಡುವದೇ ಬ್ರಹ್ಮಪ್ರಾಪ್ತಿಯೆನಿಸುವದು. ಇನ್ನು ಸಂಸಾರಕ್ಕೆ ಹಿಂದಿರುಗುವ ಭಯವಿಲ್ಲ. ಸಮುದ್ರದಲ್ಲಿ ಒಂದಾದ ನದಿಯಾಗಲಿ, ನದಿಯಲ್ಲಿ ಒಂದಾದ ತಂಬಿಗೆಯ ನೀರಾಗಲಿ–ಹೇಗೆ ಮತ್ತೆ ಹೊರಬರಲಾರದೋ ಹಾಗೆ ಬ್ರಹ್ಮವಿದನು ಪುನರಾವೃತ್ತಿರಹಿತವಾದ ಮೋಕ್ಷವನ್ನೇ ಪಡೆಯುವನು. ಇದನ್ನೇ ಶ್ರುತಿಯಲ್ಲಿ 'ನ ಚ ಪುನರಾವರ್ತತೇ' ಎಂದು ಹೇಳಿದೆ. ಹೇಗೆ ಕೃಷ್ಣನ ಬಳಿಗೆ ಕಂಸನು ಕಳುಹಿಸಿದ ರಾಕ್ಷಸರಾರೂ ಹಿಂದಿರುಗಲಿಲ್ಲವೋ ಕೃಷ್ಣಸಾಯುಜ್ಯವನ್ನೇ ಹೊಂದಿದರೋ ಹಾಗೆ ಜ್ಞಾನಿಯೂ ಪರಬ್ರಹ್ಮದಲ್ಲಿ ಸೇರಿ ಒಂದಾಗಿಬಿಡುವನು. ಇದೇ ಪರಮಪದವಿಯು. ಮುಕ್ತಿಯು–ಎಂದು ತಿಳಿಸಿ ಉಪನಿಷತ್ತು ಪೂರ್ಯೆಸಿರುತ್ತದೆ.

****

7. ತೈತ್ತಿರೀಯೋಪನ್ಯಾಸಮಂಜರಿ: 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ 1999ನೆಯ ಸೆಪ್ಟೆಂಬರ್‌ನಿಂದ 2000ನೇ ಮೇ ಪೂರ, ಧಾರವಾಹಿಯಾಗಿ ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಪುಟ 1 ರಿಂದ 28ರವರೆಗೆ ಶ್ರೀಶ್ರೀಗಳವರೇ ಬರೆದಿಟ್ಟಿದ್ದ ಕೈ ಬರಹದ ಕರಡುಪ್ರತಿಯನ್ನು ಯಥಾವತ್ತಾಗಿ ಅಳವಡಿಸಿ ಅಲ್ಲಿಂದ ಮುಂದಕ್ಕೆ ಲೇಖಕರೇ ವಿವರಣೆಯನ್ನು ಬರೆದಿರುತ್ತಾರೆ. **(ಪ್ರಥಮ ಮುದ್ರಣ: 2000, ಪು. ಡೆಮ್ಮಿ 84)**

8. ಐತರೇಯೋಪನ್ಯಾಸಮಂಜರಿ: 'ಅಧ್ಯಾತ್ಮ ಪ್ರಕಾಶ' ಮಾಸಪತ್ರಿಕೆಯಲ್ಲಿ 2000ನೇ ಜೂನ್‌ನಿಂದ ಆಗಸ್ಟ್ ಪೂರ ಸಂಪಾದಕರು ಧಾರವಾಹಿಯಾಗಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಕೊನೆಯದಾಗಿ ಇದನ್ನು ಪ್ರಕಟಿಸಲಾಗಿದೆ. ವಿಷಯಗಳೆಲ್ಲವೂ ಶ್ರೀ ಶಾಂಕರಭಾಷ್ಯಾನುಗುಣವಾಗಿವೆ. ಜಿಜ್ಞಾಸುಗಳ ಅನುಕೂಲಕ್ಕಾಗಿ ಮಂತ್ರಗಳನ್ನೆಲ್ಲ ಒಟ್ಟುಗೂಡಿಸಿ ಗ್ರಂಥದ ಪ್ರಾರಂಭದಲ್ಲೆ ಮುದ್ರಿಸಲಾಗಿದೆ. ಜಿಜ್ಞಾಸುಗಳು ಅನುಸಂಧಾನ ಮಾಡಬೇಕಾದ ಗ್ರಂಥವಿದು. **(ಪ್ರಥಮ ಮುದ್ರಣ: 2000, ಪು. ಡೆಮ್ಮಿ 36)**

9. ಬೃಹದಾರಣ್ಯಕೋಪನ್ಯಾಸಮಂಜರಿ: 1975ನೇ ಸೆಪ್ಟೆಂಬರ್‌ನಿಂದ 1981ನೇ ಆಗಸ್ಟ್ ಪೂರಾ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥರೂಪವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಉಪನಿಷತ್ತುಗಳಲ್ಲೆಲ್ಲ ದೊಡ್ಡದಾದ ಬೃಹದಾರಣ್ಯಕದ ಶಾಂಕರಭಾಷ್ಯವೂ ವಿಸ್ತಾರವಾಗಿಯೇ ಇದೆ. ಅದರ ಸಾರಸಂಗ್ರಹವೇ ಈ ಗ್ರಂಥವಾಗಿದೆ. ಜಿಜ್ಞಾಸುಗಳು ಅತ್ಯವಶ್ಯವಾಗಿ ಅಧ್ಯಯನ ಮಾಡಿ ಅನುಸಂಧಾನಮಾಡಬೇಕಾದ ಗ್ರಂಥವಿದು. **(ದ್ವಿತೀಯ ಮುದ್ರಣ: 2009, ಪು. ಡೆಮ್ಮಿ 360)**

10. ಛಾಂದೋಗ್ಯೋಪನ್ಯಾಸಮಂಜರಿ: 1981ನೇ ಸೆಪ್ಟೆಂಬರ್‌ನಿಂದ 1987ನೇ ಆಗಸ್ಟ್ ಪೂರಾ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಂದುಗೂಡಿಸಿ ಗ್ರಂಥರೂಪವಾಗಿ ಮಾರ್ಪಡಿಸಿ ಮಂಜರಿಗಳ ಮಾಲೆಯಲ್ಲಿ ಪ್ರಕಟಿಸಲಾಗಿದೆ. ವಿಷಯಗಳೆಲ್ಲವೂ ಶ್ರೀಶಾಂಕರಭಾಷ್ಯಾನುಗುಣವಾಗಿವೆ. ಪ್ರತಿಪಾದನ ಸರಣಿಯು ಸರಳವಾಗಿದ್ದು ವೇದಾಂತಸಿದ್ಧಾಂತದಲ್ಲಿನ ಉಪಾಸನೆ ಹಾಗೂ ತತ್ತ್ವಜ್ಞಾನಗಳ ತಿರುಳನ್ನು ಒಳಗೊಂಡಿದೆ. ಜಿಜ್ಞಾಸುಗಳು ಈ ಗ್ರಂಥವನ್ನು ಪಠನಮಾಡುವುದರಿಂದ ಛಾಂದೋಗ್ಯೋಪನಿಷತ್ತಿನ ಸಾರವನ್ನು ಅನುಸಂಧಾನ ಮಾಡಿ ಕೃತಾರ್ಥರಾಗಬಹುದಾಗಿದೆ. **ಈಗ ಇದು ನಿಮ್ಮ ಕೈಯಲ್ಲಿದೆ.**

**(ಎರಡನೆಯ ಮುದ್ರಣ: 2010, ಪು. ಡೆಮ್ಮಿ 348)**

11. ಶ್ವೇತಾಶ್ವತರೋಪನ್ಯಾಸಮಂಜರಿ: 1981ನೇ ಸೆಪ್ಟೆಂಬರ್‌ನಿಂದ 1987ನೇ ಮಾರ್ಚ್ ಪೂರಾ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥರೂಪವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಶ್ರೀಶಂಕರಾಚಾರ್ಯರು ದಶೋಪನಿಷತ್ತುಗಳಿಗೆ ಭಾಷ್ಯಗಳನ್ನು ರಚಿಸಿದಂತೆ ಶ್ವೇತಾಶ್ವತರೋಪನಿಷತ್ತಿಗೆ ಭಾಷ್ಯ ರಚಿಸದಿದ್ದರೂ ಈ ಉಪನಿಷತ್ತಿನ ಅನೇಕ ಮಂತ್ರಗಳನ್ನು ತಮ್ಮ ಗ್ರಂಥಗಳಲ್ಲಿ ಪ್ರಮಾಣವಚನಗಳಾಗಿ ಉದಾಹರಿಸಿರುತ್ತಾರೆ. ಜಿಜ್ಞಾಸುಗಳು ಅತ್ಯವಶ್ಯಕವಾಗಿ ಅಧ್ಯಯನ ಮಾಡಿ ಅನುಸಂಧಾನಮಾಡಬೇಕಾದ ಗ್ರಂಥವಿದು.

**(ಪ್ರಥಮ ಮುದ್ರಣ: 1997, ಪು. ಡೆಮ್ಮಿ 354)**



## ವೇ|| ಬ್ರ|| ಶ್ರೀ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು (1928 - 2007)

ಅಧ್ಯಾತ್ಮ ವಿದ್ಯಾಪ್ರವೀಣ ವೇ|| ಬ್ರ|| ಶ್ರೀ ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿಗಳು ತಾ|| 2-6-1928ರಂದು ನರಸಿಂಹರಾಜಪುರದಲ್ಲಿ ಜನಿಸಿದರು. ಇವರ ಪೂಜ್ಯ ತಂದೆಯವರು ಶೃಂಗೇರಿಯ ಕೃಷ್ಣಯಜುರ್ವೇದ ಸಲಕ್ಷಣ ಘನಾಂತ ಸ್ಮಾರ್ತಪ್ರಯೋಗ ವಿದ್ವಾಂಸರಾಗಿದ್ದ ವೇ|| ಶ್ರೀಕಂಠ ಘನಪಾಠಿಗಳು ಮತ್ತು ತಾಯಿಯವರು ಸೌ|| ಕಮಲಮ್ಮನವರು. ಶ್ರೀ ಮೂರ್ತಿಯವರು ಒಂಬತ್ತನೆಯ ವಯಸ್ಸಿನಲ್ಲಿಯೇ ಬ್ರಹ್ಮಚರ್ಯಾಶ್ರಮವನ್ನು ಸ್ವೀಕರಿಸಿ ತಂದೆಯವರಲ್ಲಿಯೇ ಉಪಯುಕ್ತವಾದ ವೇದಭಾಗವನ್ನು ಅಭ್ಯಾಸ ಮಾಡಿದರು. ಆದರೆ ತಮ್ಮ 14ನೇ ವಯಸ್ಸಿನಲ್ಲಿ ಪಿತೃವಿಯೋಗವಾದ್ದರಿಂದ ಮುಂದೆ ಬೇಲೂರಿನ ಸಂಸ್ಕೃತ ಪಾಠಶಾಲೆಯಲ್ಲಿ 4 ವರ್ಷ ವ್ಯಾಸಂಗ ಮಾಡಿ, ಚಂಪೂ ನಾಟಕ (ಸಾಹಿತ್ಯ) ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ನಂತರ 1947ರಲ್ಲಿ ಹೊಳೆನರಸೀಪುರದಲ್ಲಿ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳಿಂದ ಸ್ಥಾಪಿತವಾಗಿದ್ದ ''ಅಧ್ಯಾತ್ಮ ವಿದ್ಯಾನಿಲಯ''ದಲ್ಲಿ ಶ್ರೀಗಳಿಂದಲೇ 5 ವರ್ಷ ಕಾಲ ಶಾಂಕರಭಾಷ್ಯ ಪ್ರಸ್ಥಾನಗಳನ್ನು ಅಧ್ಯಯನ ಮಾಡಿ 1952ರಲ್ಲಿ ''ಅಧ್ಯಾತ್ಮ ವಿದ್ಯಾಪ್ರವೀಣ'' ಎಂಬ ಪ್ರಶಸ್ತಿಯನ್ನು ಪಡೆದರು. ನಂತರ ಕಾರ್ಯಾಲಯದಲ್ಲೇ ಪಂಡಿತರಾಗಿ ನೇಮಕಗೊಂಡು ಪಾಠ, ಪ್ರವಚನ, ವೇದಾಂತಪ್ರಚಾರ, ಗ್ರಂಥಪ್ರಕಾಶನ, ಗ್ರಂಥರಚನೆ ಮುಂತಾದ ಹಲವಾರು ಕಾರ್ಯಗಳನ್ನು ನಡೆಸಿಕೊಡುತ್ತಾ ಜಯಪ್ರಿಯರಾಗಿ ಶ್ರೀ ಶ್ರೀಗಳವರ ಶಿಷ್ಯರಲ್ಲಿ ಗಣ್ಯರಾಗಿದ್ದು ಕಾರ್ಯಾಲಯದ ಪುರೋಭಿವೃದ್ಧಿಗೆ ಬಹುಮುಖವಾಗಿ ಕಾರಣರಾದರು.

ಶ್ರೀ ಶ್ರೀಗಳು 1975ರಲ್ಲಿ ಬ್ರಹ್ಮೀಭೂತರಾದ ಮೇಲೆ ಶ್ರೀ ಮೂರ್ತಿಗಳೇ ಅಧ್ಯಾತ್ಮ ಪ್ರಕಾಶ ಮಾಸ ಪತ್ರಿಕೆಯ ಸಂಪಾದಕರಾದರು. 1997-98 ಮತ್ತು 2001-02 ಈ ಅವಧಿಯಲ್ಲಿ ಇವರು ನಡೆಸಿಕೊಟ್ಟ ಶಾಂಕರಭಾಷ್ಯಾನುಸಾರ ''ಬ್ರಹ್ಮಸೂತ್ರಭಾಷ್ಯ'' ಮತ್ತು ''ಭಗವದ್ಗೀತಾ ಭಾಷ್ಯ''ಗಳ ವೇದಾಂತ ಶಿಬಿರಗಳು ಚಿರಸ್ಮರಣೀಯವಾಗಿವೆ. ಈ ಶಿಬಿರಗಳಲ್ಲಿನ ಪ್ರವಚನಗಳು ಸಿ.ಡಿ. (MP3) ರೂಪದಲ್ಲಿ ಈಗಲೂ ಕಾರ್ಯಾಲಯದಲ್ಲಿ ಲಭ್ಯವಿದೆ. ಇಷ್ಟಲ್ಲದೆ ಶ್ರೀ ಮೂರ್ತಿಗಳು ವೇದ, ವೇದಾಂತ, ಸಂಪ್ರದಾಯ, ಸ್ತೋತ್ರ ಇತ್ಯಾದಿ ವಿಷಯಗಳ ಸುಮಾರು 29 ಗ್ರಂಥಗಳನ್ನೂ ರಚಿಸಿರುತ್ತಾರೆ. ಈ ಗ್ರಂಥಗಳೆಲ್ಲವೂ ಕಾರ್ಯಾಲಯದಲ್ಲಿ ದೊರೆಯುತ್ತವೆ.

ಇಂತಹ ಪುಣ್ಯಜೀವಿಗಳು ತೀವ್ರ ಅನಾರೋಗ್ಯ ನಿಮಿತ್ತ ತಾ|| 4-2-2007ರಂದು ತಮ್ಮ 79ನೇ ವಯಸ್ಸಿನಲ್ಲಿ ಹೊಳೆನರಸೀಪುರದಲ್ಲಿ ಕೀರ್ತಿಶೇಷರಾದರು. ಪೂಜ್ಯರ ಸುಮಾರು 55 ವರ್ಷಗಳ ಕಾಲದ ನಿಃಸ್ವಾರ್ಥಸೇವೆಯನ್ನು ಕಾರ್ಯಾಲಯವು ಸದಾ ಕಾಲವೂ ಅತ್ಯಂತ ಭಕ್ತಿಯಿಂದ ಸ್ಮರಿಸುತ್ತದೆ.

* * * * *